

ಶ್ರೀ ಲಕ್ಷ್ಮೀನಾರಾಯಣರ ರಾಮಾವತಾರ ಸಂಕಲ್ಪ.

(ಮುಖಪತ್ರ,ದೆದುರಿಗೆ

# ತುಲಸಿದಾಸರಾಮಾಯಣ

# TULASI DASA RAMAYANA

**ಸೋಪಾನ ೧— ಬಾಲಕಾಂಡ**

(ಸಚಿತ್ರ ಹಿಂದೀ ಮೂಲಸಹಿತ)

ಕರ್ಣಾಟಕ ಟೀಕೆ, ಟಿಪ್ಪಣಿ, ಗೂಢಾರ್ಥಕೋಶ, ರಾಮಶಲಾಕ ಪ್ರಶ್ನೆ

ಶ್ರೀಮದ್ಗೋಸ್ವಾಮಿ ತುಳಸೀದಾಸರ ಜೀವನಚರಿತಾಮೃತ ಸಹಿತ

---

ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್ ।

ಏಕೈಕಮಕ್ಷರಂ ಪ್ರೋಕ್ತಂ ಮಹಾಪಾತಕ ನಾಶನಮ್ ॥

---


ಮುನ್ನುಡಿಯ ಲೇಖಕರು

ಆನರೆಬಲ್ ಮಿ॥ **ಎ. ರಂಗನಾಥಂ, ಬಿ. ಎ., ಎಂ. ಎಲ್. ಸಿ.,**

ಮದರಾಸು ಸರ್ಕಾರದ ಡೆವಲಪ್‌ಮೆಂಟ್ ಖಾತೆಯ ಮಂತ್ರಿಗಳು, ಮದರಾಸು

ಅನುವಾದಕ

**ದತ್ತಾತ್ರೇಯ ಕೃಷ್ಣ ಭಾರದ್ವಾಜ,**

ಸಂಪಾದಕ, ರಂಗಭೂಮಿ ಮತ್ತು ಮಕ್ಕಳ ಪುಸ್ತಕ,

ಬೆಂಗಳೂರು ಸಿಟಿ





ಫೀನಿಕ್ಸ್ ಪ್ರಿಂಟಿಂಗ್ ಹೌಸ್, ಬಸವನಗುಡಿ,

ಬೆಂಗಳೂರು

# ಸಮರ್ಪಣೆ

ಬಳ್ಳಾರಿಯ ಸುಪ್ರಸಿದ್ಧ ವಕೀಲರೂ ಕರ್ಣಾಟಕಾಂಧ್ರ ನಟಶ್ರೇಷ್ಠರೂ

ಪಬ್ಲಿಕ್ ಪ್ರಾಸಿಕ್ಯೂಟರರೂ ಆದ

**ಶ್ರೀ ತಾಡಪತ್ರಿ ರಾಘವಾಚಾರ್ಯ,** ಬಿ. ಎ., ಬಿ. ಎಲ್.,

ಅವರ ಪೂಜ್ಯಮಾತೋಶ್ರೀಯವರೂ ವಿದುಷಿಯರೂ

ಆದ

ಶ್ರೀ ಶೇಷಮ್ಮನವರ

ಕರಕಮಲಗಳಿಗೆ

**ಈ ಬಾಲಕಾಂಡವು**

ಅನುವಾದಕನಿಂದ ಭಕ್ತಿಪೂರ್ವಕವಾಗಿ

ಸಮರ್ಪಿತವಾಗಿದೆ.

---

SHREE//SHESHAMMANAVAR



ಬಾಲಕಾಂಡದ ಪ್ರಧಾನ ಪ್ರೇಕ್ಷಕಿಯರಾದ

**ಶ್ರೀ|| ಶೇಷಮ್ಮನವರು.**

# ವಿಷಯಾನುಕ್ರಮಣಿಕೆ

# ಚಿತ್ರಸೂಚಿಕೆ

---

# FOREWORD

IT is an obvious truism that the roots of a country's culture derive their nourishment from the traditions of its past and no traditions are so familiar and sacred to us—Hindus as those embodied in the two great epics of the Ramayana and the Mahabbharata. They are, as it were, the very food of our national being, embodying in themselves the ideals set before us by our ancestors, illustrated in actual life. Of the two, the Ramayana has achieved almost a household familiarity, especially in North chiefly on account of the wonderful work of Tulsi Das in Hindi. One should have thought that what Tulsi Das did for the North would have been long ago undertaken for the various vernaculars of the South as well. But our most obvious needs often go unprovided for; and it has been thus in this case. The Kanarese public cannot, therefore, be too thankful to Mr D. K Bhardvaj for his enterprise in publishing a translation of Tulsi Das into the vernacular, the first volume of which is now before them. Time alone can show whether his work is destined to rank in the forefront of Kanarese literature, and become one of those immortal pieces of man's handiwork which live, please and intruct for ever Nor am I qualified to express an opinion upon the literary merits of the production But this I might perhaps be allowed to say, that if one of the qualities we look for in such a book is easy and fluent style, not too deep for the simple, and not too plain for the sophisticated, we shall not look for in vain. Mr. Bhardvaj has given his best to the public; it now rests with the latter to appraise his work at its true value

ADYAR
6-3-1928.

A. RANGANATHAM.

# ಮುನ್ನುಡಿ

---

ಪ್ರತಿಯೊಂದು ದೇಶದ ಸಂಸ್ಕೃತಿಯೂ ಅದರ ಹಿಂದಣಕಾಲದ ಪರಂಪರಾಗತವಾದ ಐತಿಹ್ಯಗಳಿಂದಲೇ ಪೋಷಣೆಯನ್ನು ಹೊಂದುವುದೆಂದು ದೃಷ್ಟಾರ್ಥದ ನಾಣ್ನುಡಿಯಾಗಿದೆ ಹಿಂದೂಗಳಾದ ನಮಗೆ ರಾಮಾಯಣ ಮತ್ತು ಮಹಾಭಾರತಗಳೆಂಬ ಎರಡು ದೊಡ್ಡ ಇತಿಹಾಸಗಳಿಗಿಂತ ಪವಿತ್ರತಮವೂ ವಿಶೇಷ ಪರಿಚಯವಾದುದೂ ಆದ ಐತಿಹ್ಯಗ್ರಂಥಗಳು ಬೇರೆಯಿಲ್ಲ. ಅವುಗಳೇ ನಮ್ಮ ಜನಾಂಗಜೀವನದ ಜೀವಾಳದಂತಿರುವವು. ನಮ್ಮ ಪೂರ್ವಜರು ತಮ್ಮ ನಿತ್ಯಾನುಷ್ಠಾನದಿಂದ ತೋರಿರುವ ಜೀವನಕ್ರಮಗಳೆಲ್ಲವೂ ಅವುಗಳಲ್ಲಿ ಅಡಕವಾಗಿವೆ. ಇವೆರಡರಲ್ಲಿ ರಾಮಾಯಣವು-ಅದರಲ್ಲಿಯೂ ಹಿಂದೀಭಾಷೆಯಲ್ಲಿ ರಚಿಸಲ್ಪಟ್ಟು ಉತ್ತರ ಹಿಂದೂಸ್ಥಾನದಲ್ಲಿ ಪ್ರಾಮುಖ್ಯತೆಯನ್ನು ಪಡೆದಿರುವ ಶ್ರೀ ತುಳಸೀದಾಸ ರಾಮಾಯಣವು—ಸರ್ವಸಾಮಾನ್ಯರಿಗೂ ಪರಿಚಯವಿರುವ ಗ್ರಂಥವಾಗಿದೆ. ಉತ್ತರ ಹಿಂದೂಸ್ಥಾನದಲ್ಲಿ ಶ್ರೀ ತುಳಸೀದಾಸರು ಮಾಡಿದಂತಹ ಕೆಲಸವನ್ನು ದಕ್ಷಿಣ ಹಿಂದೂಸ್ಥಾನದಲ್ಲಿ ಈಗ್ಗೆ ಬಹುಕಾಲಕ್ಕೆ ಹಿಂದೆಯೆ ದೇಶೀಯ ಭಾಷೆಯಲ್ಲಿ ಯಾರಾದರೂ ಮಾಡಿರಬಹುದಾಗಿತ್ತೆಂದು ಹೇಳಬಹುದು ಆದರೆ ಅನೇಕ ಸಂದರ್ಭಗಳಲ್ಲಿ ನಮ್ಮ ಅವಶ್ಯಕತೆಗಳೆಲ್ಲ ನೆರವೇರುವುದು ಕಷ್ಟ; ಈ ವಿಚಾರದಲ್ಲಿಯೂ ಅದೇ ತೊಂದರೆಯಾಗಿತ್ತು ಆದುದರಿಂದ ಶ್ರೀ ತುಳಸೀದಾಸರ ಗ್ರಂಥವನ್ನು ಕನ್ನಡಿಸಿ ಕನ್ನಡಿಗರ ಮುಂದಿಟ್ಟಿರುವ ಮೊದಲನೆಯ ಭಾಗವಾದ ಈ ಗ್ರಂಥಕ್ಕಾಗಿ ಕನ್ನಡಿಗರೆಲ್ಲರೂ ಶ್ರೀಯುತ ಡಿ. ಕೆ ಭಾರದ್ವಾಜರಿಗೆ ಎಷ್ಟು ಕೃತಜ್ಞರಾಗಿದ್ದರೂ ಕಡಿಮೆಯೇ! ಅವರ ಈ ಗ್ರಂಥವು ಕರ್ಣಾಟಕ ಸಾಹಿತ್ಯದಲ್ಲಿ ಅಗ್ರಸ್ಥಾನವನ್ನು ಹೊಂದಿ, ಮಾನವನ ಕೈವಾಡಗಳಾಗಿದ್ದರೂ ಅಮರವಾಗಿರುವ ಹಲವು ಗ್ರಂಥಗಳಂತೆ-ಯಾವಾಗಲೂ ಮನೋರಂಜನೆಯನ್ನೂ ಬೋಧನೆಯನ್ನೂ ಕೊಡುತ್ತ ಅಮರವಾಗಿ ಬಾಳುವುದೋ ಎಂಬುದನ್ನು ಭವಿಷ್ಯವೇ ನಿರ್ಣಯಿಸಬೇಕಾಗಿದೆ ಈ ಗ್ರಂಥದಲ್ಲಿರುವ ಸಾಹಿತ್ಯದ ಸೈಪಿನ ವಿಚಾರದಲ್ಲಿ ಅಭಿಪ್ರಾಯವನ್ನು ತಿಳಿಸಲು ನಾನು ಅರ್ಹನಾಗಿಲ್ಲ. ಆದರೆ, ವಿಕೃತಮನಸ್ಕರಿಗೆ ಅತಿಸರಳವಾಗದಂತೆಯೂ ಸಾಮಾನ್ಯರಿಗೆ ಅತಿಗಹನವಾಗದಂತೆಯೂ ಇರತಕ್ಕ ಸುಲಭ ಮತ್ತು ಸರಳಶೈಲಿಯ ಗ್ರಂಥವು ಬೇಕಾದಲ್ಲಿ ಅಂತಹ ಗುಣಗಳೆಲ್ಲವೂ ಈ ಪುಸ್ತಕದಲ್ಲಿ ಸಿಕ್ಕುವವು ಎಂದು ನಾನು ಹೇಳಲು ಹಿಂಜರಿಯುವುದಿಲ್ಲ ಶ್ರೀ ಭಾರದ್ವಾಜರು ಕನ್ನಡಿಗರಿಗೆ ಸ್ವಶಕ್ತಿಯ ಉತ್ತಮ ಭಾಗವನ್ನು ಸಮರ್ಪಿಸಿರುವರು. ಅದಕ್ಕೆ ಯೋಗ್ಯ ಬೆಲೆಯನ್ನು ಕಟ್ಟಿ, ಕೀರ್ತಿಯನ್ನು ತರುವುದು ವಾಚಕರಿಗೆ ಸೇರಿದ ಕರ್ತವ್ಯವಾಗಿದೆ.

ಅಡಯಾರು<br>
೬—೩—೧೯೩೮

ಎ. ರಂಗನಾಥಂ.

---

# ಪ್ರಸ್ತಾವನೆ

ಶ್ರೀಮದ್ಗೋಸ್ವಾಮಿ ತುಳಸೀದಾಸರ ಜೀವನಚರಿತಾಮೃತದಿಂದ ಅವರಿಂದ ರಚಿತವಾದ ಈ ಪವಿತ್ರ ಗ್ರಂಥದ ಮಹತ್ವವೂ ವಾಚಕರಿಗೆ ತಿಳಿಯುವುದು. ಅದನ್ನು ಕನ್ನಡಿಸಿ ವಾಚಕರ ಮುಂದಿರಿಸಬೇಕೆಂದು ಸ ೧೯೩೧ ರಲ್ಲಿ ನಾನು ಶ್ರೀಕೃಷ್ಣಜನ್ಮಸ್ಥಾನದಲ್ಲಿದ್ದಾಗ ಮನಸ್ಸಿನಲ್ಲಿ ಹೊಳೆಯಿತು. ಆಗ ಅದೇ ಸ್ಥಳದಲ್ಲಿ ನನ್ನ ಸಹೋದ್ಯೋಗಿಗಳಾಗಿದ್ದ ದಿವಂಗತ ಪಂಡಿತ ಪ್ರತಾಪನಾರಾಯಣ ವಾಜಪೇಯರೊಂದಿಗೆ ಅದನ್ನೋದಲಾರಂಭಿಸಿದೆನು. ಅನಂತರ ಅದನ್ನು ಬರೆದು ಮರುವರುಷದಲ್ಲಿ ಮುದ್ರಣಕ್ಕೆ ಕೊಡಬೇಕೆಂದು ನಿಶ್ಚಯಿಸಿದೆನು. ಆದರೆ ಅದಕ್ಕೆ ಮುಂದೆ ೨ ವರುಷಗಳವರೆಗೆ ಅನುಕೂಲವಾಗಲಿಲ್ಲ. ಸ ೧೯೩೪ ರಲ್ಲಿ ಇದನ್ನು ಮಾಸಿಕ ಸಂಚಿಕೆಯಾಗಿ ಹೊರಡಿಸಿ ೧೨ ಸಂಚಿಕೆಗಳಲ್ಲಿ ಮುಗಿಸಬೇಕೆಂದು ಆಲೋಚಿಸಿ, ೨ ಸಂಚಿಕೆಗಳನ್ನು ಹೊರಗೆಡಹಿದೆನು. ಆದರೆ ಅದಕ್ಕೆ ಸಾಕಾದಷ್ಟು ಚಂದಾದಾರರೊದಗಲಿಲ್ಲವಾದುದರಿಂದಲೂ ಹಲವರು ಪೂರ್ಣಕಾಂಡವನ್ನೆ ಕೊಡಬೇಕೆಂದಪೇಕ್ಷಿಸಿದುದರಿಂದಲೂ ಆ ಪ್ರಯತ್ನವನ್ನು ನಿಲ್ಲಿಸಿ ಕಾಂಡಗಳ ರೂಪದಲ್ಲಿ ಪುಸ್ತಕವನ್ನು ವಾಚಕರಿಗೆ ಸಮರ್ಪಿಸಬೇಕೆಂದು ಆಶಿಸಿದೆನು. ಆಗ ಭಿಕ್ಷಾಪಾತ್ರೆಯನ್ನು ಹಿಡಿದು ಪೂಜ್ಯರಾದ ತಾರಾನಾಥರನ್ನು ಸಮೀಪಿಸಿದೆನು. ಅವರು ನನ್ನನ್ನು ನೆಪಮಾತ್ರಕ್ಕೆ ಮುಂದಿಟ್ಟುಕೊಂಡು ನಾನು ಮಾಡಬೇಕೆಂದಿದ್ದ ಭಿಕ್ಷೆಯನ್ನು ಅವರ ಮಿತ್ರರೂ ದಾತರೂ ತಾವಾಗಿ ನನಗೆ ನೀಡುವಂತೆ ಪ್ರೇರಿಸಿದರು. ಆದರಿಂದ ಈ ಪುಸ್ತಕಕ್ಕೆ ಈಗಿನ ಸುಲಭ ಬೆಲೆಯನ್ನು ಮಾಡುವುದಕ್ಕೂ ಸಹಾಯವಾಯಿತು. ಶ್ರೀರಾಮಚಂದ್ರನ ಅನುಗ್ರಹದಿಂದಲೂ ಮಿತ್ರರ ಮತ್ತು ದಾತರ ಉದಾರ ಸಹಾಯದಿಂದಲೂ ಈದಿನ ನನ್ನ ಪ್ರಯತ್ನವು ಈ ಪುಸ್ತಕರೂಪದಿಂದ ವಾಚಕರಿಗೆ ಸಮರ್ಪಿತವಾಗಿದೆ.

ಹಿಂದೀಭಾಷೆಯಲ್ಲಿ ಮುದ್ರಣಾಲಯಗಳೆಷ್ಟಿರುವವೋ ಅಷ್ಟುವಿಧವಾದ ಶ್ರೀರಾಮಚರಿತಮಾನಸ ಗ್ರಂಥಗಳು ಅಚ್ಚಾಗಿವೆ. ಅವುಗಳಲ್ಲಿ ಅಲಹಾಬಾದಿನ (ಪ್ರಯಾಗದ) ರಾಮ್ ನಾರಾಯಣ್ ಲಾಲ್ ಅವರಿಂದ ಪ್ರಕಟಿಸಲ್ಪಟ್ಟ ಗ್ರಂಥವೂ, ಮುಂಬೈ ನಿರ್ಣಯಸಾಗರ ಪ್ರೆಸ್ಸಿನವರಿಂದ ಅಗ್ರಾನಿವಾಸಿ ಪಂಡಿತ ರಾಮೇಶ್ವರಭಟ್ಟರ “ಪೀಯೂಷಧಾರಾ” ಎಂಬ ಟೀಕೆಯೊಂದಿಗೆ ಪ್ರಕಾಶಿತವಾದ ಗ್ರಂಥವೂ, ಪ್ರಯಾಗದ “ಬೆಲವೇಡಿಯರ್ ಪ್ರೆಸ್” ನವರಿಂದ ಜ್ಞಾನಪುರನಿವಾಸಿ ಪಂಡಿತ ಮಹಾವೀರಪ್ರಸಾದ ಮಾಲವೀಯ ವೈದ್ಯರ ಟೀಕೆಯೊಂದಿಗೆ ಪ್ರಕಾಶಿಸಲ್ಪಟ್ಟಿರುವ ಗ್ರಂಥವೂ, ಕಲಕತ್ತೆಯ “ಹಿಂದೀಪುಸ್ತಕ್ ಏಜನ್ಸಿ”ಯವರಿಂದ ಪಂಡಿತ ಬಾಬೂರಾಮ್ ಮಿಶ್ರ ವಿಶಾರದರವರ ಟೀಕೆಯೊಂದಿಗೆ ಪ್ರಕಾಶಿತವಾದ ಪುಸ್ತಕವೂ, ಅದೇ ಕಂಪೆನಿಯವರಿಂದ ರಾಮದಾಸ್ ಗೌರ್ ಅವರ ಸಂಪಾದಕತ್ವದಲ್ಲಿ ನಂದ ಗ್ರಂಥಮಾಲೆಯ ೨ನೆಯ ಪುಷ್ಪವಾಗಿ ಪ್ರಕಟಿಸಲ್ಪಟ್ಟಿರುವ ಪುಸ್ತಕವೂ, ಕಾಶೀ ನಾಗರೀಪ್ರಚಾರಿಣೀ ಸಭೆಯ ಪಂಚಸದಸ್ಯರ ಮೇಲ್ವಿಚಾರಣೆಯಲ್ಲಿ ಬಹುಪ್ರಾಚೀನ ಹಸ್ತಲಿಖಿತ ಪ್ರತಿಗಳ ಶೋಧನೆಯನ್ನು ಮಾಡಿ ತಮ್ಮ ಟೀಕೆಸಹಿತವಾಗಿ ಅದನ್ನು ಪ್ರಯಾಗದ “ಇಂಡಿಯನ್ ಪ್ರೆಸ್” ನಲ್ಲಿ ಮುದ್ರಿಸಿದ ನಾಗರೀಪ್ರಚಾರಿಣೀ ಸಭೆಯ ಸಭಾಪತಿಗಳಾದ ಪಂಡಿತ ಶ್ಯಾಮಸುಂದರ ದಾಸ್, ಬಿ ಎ., ಅವರ ಗ್ರಂಥವೂ ಮುಖ್ಯವಾಗಿವೆ. ನನ್ನ ಭಾಷಾಂತರಕ್ಕೆ ಈ ಗ್ರಂಥಗಳೇ ಆಧಾರವಾಗಿವೆ. ಮತ್ತು ನಾನು ಅಲ್ಲಲ್ಲಿ ದೋಹಾ ಮತ್ತು ಸೋರಟಾಗಳ ಸಂಖ್ಯೆಯನ್ನು ಕೊಡುವಾಗ ಶ್ಯಾಮಸುಂದರದಾಸರ ಗ್ರಂಥದಲ್ಲಿರುವ ಕ್ರಮ

ವನ್ನೆ ಅನುಸರಿಸಿರುವೆನು. ಅನುವಾದದ ಕೊನೆಗೆ ಕೊಟ್ಟಿರುವ ಹಿಂದೀವಿಭಾಗವೂ ಅದೇ ಕ್ರಮವನ್ನನುಸರಿಸಿ ಮುದ್ರಿತವಾಗಿದೆ.

ನಾನು ಅನುವಾದವನ್ನು ಮಾಡುವಾಗ ಸಣ್ಣ ಅಕ್ಷರಗಳಲ್ಲಿ ಅಲ್ಲಲ್ಲಿ ಟಿಪ್ಪಣಿಗಳನ್ನು ಕೊಟ್ಟು ಇದನ್ನು ಒಂದು ಬಗೆಯ ಧಾರ್ಮಿಕ ವಿಶ್ವಕೋಶವಾಗಿ ಮಾಡಬೇಕೆಂಬ ಉದ್ದೇಶದಿಂದ ಟಿಪ್ಪಣಿಗಳನ್ನು ಬರೆಯಲಾರಂಭಿಸಿದುದರಿಂದಲೂ, ಹಿಂದೀ ಮೂಲವನ್ನು ಓದಿಕೊಳ್ಳುವವರಿಗೆ ಅನುಕೂಲವಾಗಿರುವಂತೆ ಹಿಂದೀ ಮೂಲವನ್ನೂ ಕೊಡಬೇಕೆಂದು ಹಲವು ಮಿತ್ರರ ಕೋರಿಕೆಯಂತೆ ಅದನ್ನು ಮುದ್ರಿಸಿದುದರಿಂದಲೂ ಗ್ರಂಥವು ಮೊದಲು ಆಲೋಚಿಸಿದ್ದಕ್ಕಿಂತಲೂ ಇಮ್ಮಡಿಯಾಗಿ ಬೆಳೆದಿದೆ. ಆದಾಗ್ಯೂ ಒಟ್ಟು ನಾಲ್ಕು ಭಾಗಗಳಲ್ಲಿ ಎಂದರೆ ಮೊದಲನೆಯ ಭಾಗದಲ್ಲಿ ಬಾಲಕಾಂಡವನ್ನೂ ಎರಡನೆಯ ಭಾಗದಲ್ಲಿ ಅಯೋಧ್ಯಾಕಾಂಡವನ್ನೂ ಮೂರನೆಯ ಭಾಗದಲ್ಲಿ ಅರಣ್ಯಕಾಂಡ ಕಿಷ್ಕಿಂಧಾಕಾಂಡ, ಸುಂದರಕಾಂಡ, ಲಂಕಾಕಾಂಡಗಳನ್ನೂ ನಾಲ್ಕನೆಯ ಭಾಗದಲ್ಲಿ ಉತ್ತರಕಾಂಡವನ್ನೂ ಪ್ರಕಟಿಸಬೇಕೆಂದಿರುವೆನು ಅದಲ್ಲದೆ ಪ್ರತಿಯೊಂದು ಕಾಂಡದಲ್ಲಿಯೂ ಶ್ರೀತುಳಸೀದಾಸರ ಇತರ ಗ್ರಂಥವಿಮರ್ಶೆ, ಧಾರ್ಮಿಕವಿಚಾರ, ರಾಮಚರಿತಮಾನಸವಿಮರ್ಶೆ ವಿಚಾರ ಇವುಗಳನ್ನು ವಿಸ್ತಾರವಾಗಿ ಪ್ರಕಟಿಸಲಾಗುವುದು.

ಮೊದಲನೆಯ ಎರಡು ಮಾಸಿಕ ಸಂಚಿಕೆಗಳು ಹೊರಬೀಳಲು ಮೊದಲು ನನಗೆ ಪ್ರೋತ್ಸಾಹವನ್ನಿತ್ತ ಮಂಜೇಶ್ವರದ ದಿವಂಗತ ಶ್ರೀ ನರಸಯ್ಯ ಶಾನುಭಾಗರಿಗೂ ಕರ್ನಾಟಕ ಧುರೀಣರಲ್ಲೊಬ್ಬರಾದ ಬಿಜಾಪುರದ ಶ್ರೀ। ಶ್ರೀನಿವಾಸರಾವ ಕೌಜಲಗಿ ಅವರಿಗೂ ರಾಜಸಭಾ ಭೂಷಣ ಕರ್ಪೂರ ಶ್ರೀನಿವಾಸರಾಯರಿಗೂ ನನ್ನ ಪ್ರಥಮ ವಂದನೆಗಳು. ಮೊದಲನೆಯ ಎರಡು ಸಂಚಿಕೆಗಳನ್ನು ತಮ್ಮತಮ್ಮ ಪತ್ರಿಕೆಗಳಲ್ಲಿ ವಿಶೇಷ ಪ್ರೀತಿಯಿಂದ ವಿಮರ್ಶಿಸಿದ ಪತ್ರಿಕಾಕರ್ತರಿಗೂ ನಾನು ಚಿರಋಣಿಯಾಗಿರುವೆನು. ಮೊದಲನೆಯ ಎರಡು ಸಂಚಿಕೆಗಳು ಹೊರಬಿದ್ದ ನಂತರ ೧೮ ತಿಂಗಳಾದಮೇಲೆ ಬಾಲಕಾಂಡದ ಉಳಿದ ಭಾಗವು ಈ ಪುಸ್ತಕರೂಪವನ್ನು ತಳೆಯಲು ಕನ್ನಡ ಭಾಷೆಯ ಮೇಲಣ ಮತ್ತು ಶ್ರೀಮದ್ಗೋಸ್ವಾಮಿ ತುಳಸೀದಾಸರ ಗ್ರಂಥದ ಮೇಲಣ ಪ್ರೀತ್ಯಾಭಿಮಾನದಿಂದ ಬೇಕಾದ ಸಹಾಯವನ್ನು ಮಾಡಿಸಿದ ಪೂಜ್ಯರೂ ಪ್ರೇಮಪತ್ರಿಕೆಯ ಸಂಪಾದಕರೂ ಆದ ಪಂಡಿತ ತಾರಾನಾಥಜೀ ಅವರಿಗೂ, ಉದಾರಹೃದಯದಿಂದ ದ್ರವ್ಯಸಹಾಯ ಮಾಡಿದ ಬಳ್ಳಾರಿಯ ಪ್ರಸಿದ್ಧ ವಕೀಲರೂ ಆಂಧ್ರವಿಶ್ವವಿದ್ಯಾಲಯದ ಲಲಿತಕಲಾಶಾಲೆಯ ಮುಖ್ಯ ಸದಸ್ಯರೂ ಆದ ಶ್ರೀ ತಾಡಪತ್ರಿ ರಾಘವಾಚಾರ್ಯರ ಮಾತೋಶ್ರೀಯವರಾದ ಶ್ರೀ ಶೇಷಮ್ಮನವರಿಗೂ, ನಿಜಾಮರಾಜ್ಯದ ಮಹಬೂಬ್‌ನಗರ ಜಿಲ್ಲೆಯ ಇಂಜನಿಯರಾದ ಶ್ರೀ ವಿ. ಸಿ. ಮುತ್ತಣ್ಣಮೊದಲಿಯಾರ್ರಿಗೂ, ಬರ್ಮಾ ದೇಶದ ಪ್ರಸಿದ್ಧ ವಕೀಲರಾಗಿದ್ದು ಈಗ ಬೆಂಗಳೂರು ದಂಡಿನಲ್ಲಿ ವಾಸಿಸುತ್ತಿರುವ ಬ್ಯಾರಿಸ್ಟರ್ ಶ್ರೀರಾಮಗೋಪಾಲರವರಿಗೂ ವಿದ್ಯುಚ್ಛಕ್ತಿಯ ಇಲಾಖೆಯ ಸೂಪರಿಂಟೆಂಡೆಂಟರಾದ ಶ್ರೀಮಾನ್ ಎಸ್. ಬಿ. ಐಯ್ಯಂಗಾರ್ಯರವರ ಪತ್ನಿ ಶ್ರೀಮತಿ ಪಂಕಜಮ್ಮನವರಿಗೂ, ಇಂಟರ್ ನ್ಯಾಷನಲ್ ಜನರಲ್ ಎಲೆಕ್ಟ್ರಿಕ್ ಕಂಪೆನಿಯ ಪ್ರತಿನಿಧಿಗಳಾದ ಶ್ರೀ ಡಿ. ವಿ ಅಯ್ಯನಪರಿಗೂ, ನಾನು ವಿಶೇಷ ಕೃತಜ್ಞನಾಗಿರುವೆನು. ಕರ್ನಾಟಕದಲ್ಲಿರುವ ಶ್ರೀಮಂತರು ಉದಾರಹೃದಯದಿಂದ ಈ ಮಹನೀಯರಂತೆಯೆ ಉಳಿದ ಭಾಗಗಳಿಗೆ ಸಹಾಯವನ್ನು ಮಾಡಿದರೆ ಇನ್ನು ಒಂದು ವರ್ಷದೊಳಗಾಗಿ ಉಳಿದ ಭಾಗಗಳನ್ನು ಪ್ರಕಟಿಸಬಹುದು.

ಈಗ ಮದರಾಸು ಸರ್ಕಾರದ "ಡೆವಲಪ್‌ಮೆಂಟ್" ಶಾಖೆಯ ಮಂತ್ರಿಗಳಾಗಿರುವ ಮಾನನೀಯ ಶ್ರೀ ಎ. ರಂಗನಾಥಂ, ಬಿ.ಎ., ಎಂ.ಎಲ್‌.ಸಿ ಅವರು, ಮುಂಚೆ ಮದರಾಸಿನ ನ್ಯಾಷನಲ್ ಕಾಲೇಜ್ ಆಫ್ ಕಾಮರ್ಸ್‌ನಲ್ಲಿ ನನ್ನ ಗುರುಗಳಾಗಿದ್ದಾಗಣ ಅಭಿಮಾನವನ್ನೆ ಇಟ್ಟುಕೊಂಡು, ಈಗ ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಬೇಕೆಂದು ಕೇಳಿದಾಕ್ಷಣವೇ ನನ್ನ ಕೋರಿಕೆಯನ್ನು ನೆರವೇರಿಸಿದುದಕ್ಕಾಗಿ ಅವರಿಗೆ ನನ್ನ ವಂದನೆಗಳನ್ನರ್ಪಿಸುವೆನು ಈ ಪುಸ್ತಕವನ್ನು ಈಗಿರುವ ಸುಲಭ ಬೆಲೆಗೆ ಕೊಡಲು ಈ ಮಹನೀಯರೆಲ್ಲರ ಸಹಾಯವು ಕಾರಣವಾಗಿರುವುದರಿಂದ ನಾನು ಮಾತ್ರವಲ್ಲದೇ ಕನ್ನಡಿಗರೆಲ್ಲರೂ ಅವರಿಗೆ ಕೃತಜ್ಞರಾಗಿರಬೇಕಾಗಿದೆ.

ಈ ಗ್ರಂಥವನ್ನು ಸಾಧ್ಯವಾದ ಮಟ್ಟಿಗೆ ಮನೋಹರವಾಗಿ ಮಾಡಲೆತ್ನಿಸಿರುವೆನು. ಆದಾಗ್ಯೂ ಅಲ್ಲಲ್ಲಿ ಮುದ್ರಾರಾಕ್ಷಸನ ಕಾಟವು ತಪ್ಪಲಿಲ್ಲ ಈಗಣ ಕರ್ನಾಟಕದ ಜಾಗ್ರತಿಯಿಂದ ಮುಂದಿನ ಮುದ್ರಣಕ್ಕೆ ಅವಕಾಶವಾದರೆ ಆಗ ಅವುಗಳನ್ನು ಸರಿಪಡಿಸಲೆತ್ನಿಸುವೆನು. ಈಗ ದೊಡ್ಡ ಮುದ್ರಣಗಳೆರಡನ್ನೆ ಶುದ್ಧಾಶುದ್ಧ ಪತ್ರಿಕೆಯಲ್ಲಿ ತಿದ್ದಿರುವೆನು. ಇಲ್ಲಿ ನನ್ನ ಅಲ್ಪ ಮತಿಗೆ ತಿಳಿದಂತೆ ಸಾಮಾನ್ಯರೆಲ್ಲರೂ ಸುಲಭವಾಗಿ ತಿಳಿಯುವಂತಹ ಶೈಲಿಯನ್ನು ಅನುಸರಿಸಿರುವೆನು. ಇದರಲ್ಲಿ ಮೂಲಗ್ರಂಥಕಾರರ ಅಭಿಪ್ರಾಯವು ಸರಿಯಾಗಿ ಬಿಂಬಿತವಾಗದಿದ್ದರೆ ಅದು ಕೇವಲ ನನ್ನ ಅಲ್ಪಮತಿಯ ದೋಷವೆಂದೂ, ಎಲ್ಲೆಲ್ಲಿ ವಾಚಕರೂ ತಲ್ಲೀನ ಭಾವವನ್ನು ಹೊಂದುವರೊ ಅದೆಲ್ಲಕ್ಕೂ ಶ್ರೀ ತುಳಸೀದಾಸರ ಮತ್ತು ಅವರ ರಾಮನ ಭಕ್ತಿಯೇ ಕಾರಣವೆಂದೂ ತಿಳಿಯಬೇಕು.

ಈ ಗ್ರಂಥದ ಕನ್ನಡ ವಿಭಾಗವನ್ನು ಅಂದವಾಗಿ ಮುದ್ರಿಸಿಕೊಟ್ಟ ಬಸವನಗುಡಿ 'ಫೀನಿಕ್ಸ್ ಪ್ರಿಂಟಿಂಗ್ ಹೌಸ್' ಮಾಲೀಕರಾದ ಶ್ರೀ ಸಿ ಕೃಷ್ಣರಾವ್, ಬಿ.ಎ., ಅವರಿಗೂ ಹಿಂದೀ ವಿಭಾಗವನ್ನು ಶೀಘ್ರದಲ್ಲಿ ಮುದ್ರಿಸಿದ ಮದರಾಸಿನ ಹಿಂದೀಪ್ರಚಾರ ಪ್ರೆಸ್ಸಿನ ಕಾರ್ಯದರ್ಶಿಗಳಾದ ಪಂಡಿತ ಹರಿಹರಶರ್ಮಾ ವಿಶಾರದರವರಿಗೂ ನನ್ನ ಅನೇಕ ವಂದನೆಗಳು.

ಉತ್ತರ ಹಿಂದೂಸ್ಥಾನದಂತೆ ಕರ್ನಾಟಕದಲ್ಲಿಯೂ ಶ್ರೀಮದ್ಗೋಸ್ವಾಮಿ ತುಳಸೀದಾಸರ ರಾಮಚರಿತಮಾನಸ ಗ್ರಂಥದ ಮತ್ತು ರಾಮಾಯಣ ಮಹತ್ವದ ಪ್ರಚಾರವಾಗಿ ಅದರಿಂದ ನಮ್ಮ ಸಮಾಜದ ಮೇಲ್ಮೆಗೆ ಸಹಾಯವಾದರೆ ನನ್ನೀ ಪ್ರಯತ್ನವು ಸಾರ್ಥಕವಾಯಿತೆಂದು ಭಾವಿಸುವೆನು

ಬೆಂಗಳೂರು ನಗರ }

ಕನ್ನಡಿಗರ ಅಡಿಯಾಳು
ದ. ಕೃ. ಭಾರದ್ವಾಜ.

ಮಹಾಪೋಷಕರು

ಮಾತೋಶ್ರೀ ತಾಡಪತ್ರಿ ಶೇಷಮ್ಮನವರು

---

ಪೋಷಕರು

,, ವಿ. ಸಿ. ಮುತ್ತಣ್ಣನವರು, ನಗರಕರ್ನೂಲು, ಹೈದರಾಬಾದು

ಶ್ರೀಯುತ ರಾಮಗೋಪಾಲ್, ಬಾರ್-ಅಟ್-ಲಾ, ಬೆಂಗಳೂರು

ಶ್ರೀಮತಿ ಎಸ್. ಬಿ ಪಂಕಜಮ್ಮನವರು, ಬೆಂಗಳೂರು

,, ಡಿ. ವಿ. ಅಯ್ಯನವರು, ಬೆಂಗಳೂರು

---

ಆಶ್ರಯದಾತರು

ದಿವಂಗತ ಶ್ರೀ॥ ನಪಸಯ್ಯ ಶಾನುಭಾಗರು, ಮಂಜೇಶ್ವರ, ದ ಕನ್ನಡ

ಕರ್ಣಾಟಕ ಭೂಷಣ ಶ್ರೀ॥ ಶ್ರೀನಿವಾಸರಾವ್ ಕೌಜಲಗಿ

ಬಿ.ಎ. ಎಲ್‌ಎಲ್. ಬಿ., ವಿಜಾಪುರ

ರಾಜಸಭಾ ಭೂಷಣ, ಶ್ರೀ॥ ಕರ್ಪೂರ ಶ್ರೀನಿವಾಸರಾವ್,

ಬಿ. ಎಸ್. ಸಿ., ಎಲ್. ಸಿ. ಇ., ವಿದ್ಯಾಭೂಷಣ, ಬೆಂಗಳೂರು

ಶ್ರೀಯುತ ಎ. ಎಸ್. ಸುಬ್ಬರಾವ್, ಎಮ್. ಎ., ಬಾರ್-ಅಟ್-ಲಾ,

ಮೈಸೂರು

## ತಪ್ಪು ಒಪ್ಪೋಲೆ

| ಪುಟ | ಪಙ್ಕ್ತಿ | ತಪ್ಪು | ಒಪ್ಪು. |
|---|---|---|---|
| ೩ | ೧೮ | ವಾಚಾಳನು ಎಂದರೆ ವಿಶೇಷ ಮಾತನಾಡುವ ಶಕ್ತಿಯುಳ್ಳವನು ಮೂಕನಾಗುವನೊ | ಮೂಕನು ವಾಚಾಳ ಎಂದರೆ ವಿಶೇಷ ಮಾತನಾಡುವ ಶಕ್ತಿಯುಳ್ಳವನಾಗುವನೋ |
| ೫೧ | ೧೪ | ಅನಂತ, ಅನಂತ | ಅದಲ್ಲ, ಅದಲ್ಲ |



ಶ್ರೀಮದ್ಗೋಸ್ವಾಮಿ ತುಳಸೀದಾಸರು.

SWAMI TULASIDASARA JEEVANA CHARAMRUT

|| ಶ್ರೀ ||

# ಶ್ರೀಮದ್ಗೋಸ್ವಾಮಿ ತುಳಸೀದಾಸರ ಜೀವನ ಚರಿತಾಮೃತ

ಶ್ರೀ ಗೋಸ್ವಾಮಿ ತುಳಸೀದಾಸರ 'ರಾಮಚರಿತ ಮಾನಸ' ವೆಂಬೀ ರಾಮಾಯಣ ವನ್ನು ಉತ್ತರಹಿಂದೂಸ್ಥಾನದಲ್ಲಿ ಚಿಕ್ಕವರಿಂದ ಮೊದಲ್ಗೊಂಡು ದೊಡ್ಡವರ ವರೆಗೆ, ಸಾಮಾನ್ಯ ಅಕ್ಷರಸ್ಥರಿಂದ ಮೊದಲ್ಗೊಂಡು ಅಗಾಧ ವಿದ್ವಾಂಸರ ವರೆಗೆ ಎಲ್ಲರೂ ಕಳೆದ ೩೫೦ ವರ್ಷಗಳಿಂದ ನಿತ್ಯ ಪಾರಾಯಣ ಗ್ರಂಥವಾಗಿ ಸ್ವೀಕರಿಸಿರುವರು ಇದಕ್ಕೆ ನೂರಾರು ಜನ ಟೀಕಾಕಾರರು ಟೀಕೆಗಳನ್ನು ಬರೆದರು ಅವುಗಳಲ್ಲಿ ಕೆಲವು ಮುದ್ರಿತವಾದವು, ಮತ್ತೆ ಕೆಲವು ಪ್ರಕಾಶಕ್ಕೆ ಬರದೆ ಬಡ ಟೀಕಾಕಾರರ ಪರ್ಣಕುಟೀರಗಳ ಕತ್ತಲೆಯ ಮೂಲೆ ಯಲ್ಲಿಯೆ ಉಳಿದವು. ಹಿಂದೀ ಭಾಷೆಯಲ್ಲಿ "ಸೂರಸಾಗರ, ಸುಖಸಾಗರ, ವ್ರಜವಿಲಾಸ, ರಾಮರಸಾಯನ, ರಾಮಚಂದ್ರಿಕಾ, ಕವಿತ್ತ ರಾಮಾಯಣ" ಇವೇ ಮೊದಲಾದ ಹೆಸರಿನ ಅನೇಕ ಗ್ರಂಥಗಳು ರಚಿಸಲ್ಪಟ್ಟಿರುವವು। ಆದರೆ ಶ್ರೀಮದ್ಭಾಗವತಾದಿ ಪುರಾಣಗಳನ್ನೂ ರಾಮಾಯಣ ಮಹಾ ಭಾರತಾದಿ ಇತಿಹಾಸ ಗ್ರಂಥಗಳನ್ನೂ ವಾಲ್ಮೀಕಿ ವ್ಯಾಸಾದಿಗಳಂತಹ ಪವಿತ್ರಾತ್ಮರು ರಚಿಸಿ ಶ್ರದ್ಧಾಳುಗಳಾದ ಶ್ರೋತೃಗಳಿಗೆ ಹೇಳಿ ಅವರಿಗೆ ಪುಣ್ಯಲೋಕ ಮಾರ್ಗ ವನ್ನು ಸುಗಮವಾಗಿ ಮಾಡಿರುವಂತೆ ಶ್ರೀಮದ್ಗೋಸ್ವಾಮಿ ತುಳಸೀದಾಸರ ರಾಮಚರಿತ ಮಾನಸವು ಭಕ್ತ ಜನರಿಗೆ ಪುಣ್ಯಮಾರ್ಗ ಪ್ರದರ್ಶಕ ಧಾರ್ಮಿಕ ಗ್ರಂಥವಾಗಿ ಗಣಿಸಲ್ಪಟ್ಟಿದೆ ಧರ್ಮಗ್ರಂಥದ ಪದವಿಯು ಸಂಸ್ಕೃತದಲ್ಲಿಲ್ಲದ ಮತ್ತಾವ ಗ್ರಂಥಕ್ಕೂ ಸಾಮಾನ್ಯವಾಗಿ ಲಭಿಸಿರಲಿಲ್ಲ. ಇದರಲ್ಲಿ ಕಾವ್ಯದ ಸಾರಳ್ಯ, ಶಬ್ದಗಳ ಮಾಧುರ್ಯ, ಅಪೂರ್ವ ವರ್ಣ ನೆ, ಪವಿತ್ರ ಪ್ರೇಮ ಮತ್ತು ಶೃಂಗಾರ, ಅನುಪಮವಾದ ವೀರತ್ವ, ಕರುಣಾರಸದ ನಿರ ರ್ಗಳ ಪ್ರವಾಹ, ಭಕ್ತಿ ವಾತ್ಸಲ್ಯ ಮತ್ತು ಶಾಂತಿಯ ಅವಿರಳ ಸಂಯೋಗ, ಅಲಂಕಾರ ಪ್ರಯೋಗಗಳ ಚಮತ್ಕಾರ, ಭಾವವರ್ಣನೆಯಿಂದುಂಟಾಗುವ ಆನಂದ—ಇವುಗಳು ಓದು ವವರ ಮತ್ತು ಕೇಳುವವರ ಮನಸ್ಸನ್ನು, ಅವರು ಸಾಂಪ್ರಾದಾಯಿಕ ಜನಗಳಿಗಾಗಿ ತಮ್ಮ ದೇಹವನ್ನು ಕೊಡುವವರಾಗಿರಲಿ, ಅಥವಾ ಮಾನಸ ಸರೋವರದ ಸೌಂದರ್ಯದ ಭಾಷೆಯು ಸಂಸ್ಕೃತವಾಗಿಲ್ಲವೆಂದು ವಿರೋಧಿಗಳಾಗಿರಲಿ, ಅಂಥವರ ಮನಸ್ಸನ್ನೂ ಆಕ ರ್ಷಿಸಿ, ಮುಗ್ಧಮಾಡಿ ಅವರು ರಾಮಚರಿತಾಮೃತವನ್ನು ಪಾನಮಾಡುವಂತೆ ಮಾಡಿರುವವು

ಪ್ರಯಾಗ (ಅಲಹಾಬಾದ) ದಲ್ಲಿ ತ್ರಿವೇಣೀ ಸಂಗಮದಲ್ಲಿ ೩೦೦–೪೦೦ ಗಜಗಳಷ್ಟು ಉದ್ದವಿರುವ ಕೇವಲ ತುಳಸೀದಾಸ ರಾಮಾಯಣದ ಅಂಗಡಿಗಳನ್ನು ನಾನು ನೋಡಿರುವೆನು. ಯಾತ್ರಾರ್ಥಿಯಾಗಿ ಬರುವ ಉತ್ತರದೇಶದ ಹಿಂದೂವಾದವನಾವನೂ ಹಿಂದಿರುಗುವಾಗ ರಾಮಚರಿತಮಾನಸವೆಂಬೀ ಗ್ರಂಥವನ್ನು ಕೊಂಡುಕೊಳ್ಳದೆ ಹೋಗುವುದೇ ಇಲ್ಲ. ದಕ್ಷಿಣ ಹಿಂದೂದೇಶದಲ್ಲಿ ಶ್ರೀಮದ್ಭಗವದ್ಗೀತೆ, ಮತ್ತು ಕ್ರೈಸ್ತರಲ್ಲಿ ಬೈಬಲ್ ಗ್ರಂಥಗಳಿರು

ವುದಕ್ಕಿಂತಲೂ ಹೆಚ್ಚಾದ ಆದರವೂ ಪೂಜ್ಯಭಾವವೂ ಉತ್ತರದೇಶದಲ್ಲಿ ಈ ರಾಮಾಯಣಕ್ಕಿರುವುದು. ಹಿಂದುವಾದವನಾವನ ಮನೆಯಲ್ಲಿಯೂ ಈ ಗ್ರಂಥವಿಲ್ಲದೇ ಇರುವುದಿಲ್ಲ. ಅಷ್ಟೇಕೆ—ಈ ಕಾವ್ಯದಿಂದ ಕ್ರೈಸ್ತಧರ್ಮದವರೂ ಇಸ್ಲಾಂಧರ್ಮದವರೂ ಆಕರ್ಷಿತರಾಗಿರುವರು. ಇದರ ಮಾಧುರ್ಯವನ್ನು ಸವಿದು ಪಾಶ್ಚಾತ್ಯವಿದ್ವಾಂಸರಾದ ಮಾನಿಯರ್ ವಿಲಿಯಮ್ಸ್, ಗ್ರೀಯರ್ಸನ್, ಎಫ್ ಡಬ್ಲ್ಯು. ಫ್ರೇಜರ್, ರೆವರೆಂಡ್ ಮೆಕೆ, ರೆವರೆಂಡ್ ಗ್ರೌಜ್ ಮೊದಲಾದವರು ತಲೆದೂಗಿ, ಇದನ್ನು ಹೊಗಳಿರುವರು. ರೆವರೆಂಡ್ ಗ್ರೌಜ್ ಸಾಹೇಬರಂತೂ ಇದನ್ನು ಇಂಗ್ಲೀಷು ಭಾಷೆಗೆ ಪರಿವರ್ತಿಸಿರುವರು ಈ ಕಾವ್ಯಗ್ರಂಥವು ಇತ್ತೀಚೆಗೆ ಬಂಗಾಳಿ,ಮರಾಠಿ, ಆಂಧ್ರಭಾಷೆಗಳಲ್ಲಿಯೂ ಪರಿವರ್ತಿತವಾಗಿರುವುದು. ಹಿಂದೀ ಭಾಷೆಯಲ್ಲಂತೂ ಎಷ್ಟು ಮುದ್ರಣಾಲಯಗಳಿರುವವೊ ಅಷ್ಟು ಈ ಪುಸ್ತಕದ ಆವರ್ತಿಗಳಾಗಿರುವವು ಅಂದಮೇಲೆ ಈ ಗ್ರಂಥದ ಮಹಿಮೆಯನ್ನು ಪ್ರತ್ಯೇಕವಾಗಿ ವರ್ಣಿಸಬೇಕಾಗಿಲ್ಲ.

ಸಂಸ್ಕೃತದಲ್ಲಿರುವ ರಾಮಾಯಣದ ಸಾರವನ್ನು ಸಾಮಾನ್ಯ ಜನರು ಸವಿಯಲಾರದಿದ್ದುದರಿಂದ ವಾಲ್ಮೀಕಿಯೆ ಶ್ರೀ ತುಳಸೀದಾಸನಾಗಿ ಜನಿಸಿ, ಭಕ್ತಿಪ್ರಾಧಾನ್ಯವಿರುವ ಈ ಕಲಿಕಾಲದ ಸಾಮಾನ್ಯ ರಾಮಭಕ್ತರಿಗೆ ತಕ್ಕಂತೆ ಈ ರಾಮಾಯಣವನ್ನು ರಚಿಸಿದನೆಂದು ಉತ್ತರದೇಶದವರ ಹೇಳಿಕೆಯಾಗಿದೆ. ಆದುದರಿಂದ ಪ್ರಕೃತ ಗ್ರಂಥವರ್ಣನೆಯನ್ನು ಮುಂದುವರಿಸದೇ, ಗ್ರಂಥಕರ್ತರಾದ ಶ್ರೀಮದ್ಗೋಸ್ವಾಮಿ ತುಳಸೀದಾಸರ ಜೀವನ ಚರಿತ್ರೆಯನ್ನು ಸಂಕ್ಷಿಪ್ತವಾಗಿ ಇಲ್ಲಿ ಬರೆಯುವೆನು.

## ತುಳಸೀದಾಸರ ಜನನ ಕಾಲದ ಪರಿಸ್ಥಿತಿ.

ನಮ್ಮ ಭಾರತ ವರ್ಷದ ಭಾಗ್ಯವಿಶೇಷದಿಂದ ಭಾರತಧರ್ಮಗ್ಲಾನಿಯಾಗುವ ಸಮಯ ಬಂದಾಗಲೆಲ್ಲ, ಅಲ್ಲಲ್ಲಿ ದೈವಾಂಶ ಸಂಭೂತರಾದ ಮಹಾತ್ಮರು ಹುಟ್ಟಿ, ಕಾಲ ಪರಿಸ್ಥಿತಿಗೆ ತಕ್ಕಂತೆ ಧರ್ಮದ ಸ್ವರೂಪವನ್ನು ಬದಲಾಯಿಸಿ, ಜನರ ಸಂಕುಚಿತ ದೃಷ್ಟಿಯನ್ನು ವಿಕಾಸಗೊಳಿಸಿರುವುದರಿಂದ ಭಾರತಧರ್ಮವು ಚಿರಜೀವಿಯಾಗಿರುವುದು ಇದಕ್ಕೆ ವಂಗದೇಶದಲ್ಲಿ, ಕ್ರೈಸ್ತಧರ್ಮ ಪ್ರಭೆಗೆ ಮರುಳಾಗಿ ಸುಶಿಕ್ಷಿತ ವಂಗೀಯರೆಲ್ಲರ ದೃಷ್ಟಿಯು ಅತ್ತ ತಿರುಗಿದಾಗ ಆ ದೇಶದಲ್ಲಿ, ರಾಜಾ ರಾಮ ಮೋಹನರಾಯ್, ಶ್ರೀರಾಮಕೃಷ್ಣ ಪರಮಹಂಸ, ಪಶ್ಚಿಮದ ಕಡೆ ಸ್ವಾಮಿ ದಯಾನಂದ ಸರಸ್ವತಿ, ಮಹಾರಾಷ್ಟ್ರದೇಶದಲ್ಲಿ ಶ್ರೀ ಸಮರ್ಥ ರಾಮದಾಸ ಇವರ ಅವತಾರಗಳೇ ಸಾಕಾದಷ್ಟು ನಿದರ್ಶನಗಳಾಗಿವೆ.

ಗೋಸ್ವಾಮಿ ತುಳಸೀದಾಸರ ಕಾಲದಲ್ಲಿ ದಿಲ್ಲಿಯ ಸಿಂಹಾಸನದ ಮೇಲೆ ಹುಮಾಯೂನನು ಕುಳಿತು ರಾಜ್ಯವನ್ನಾಳಲಾರಂಭಿಸಿದ್ದನು. ಆದರೆ ಅವನ ಹಣೆಯಲ್ಲಿ ಶಾಂತಿಯಿಂದ ರಾಜ್ಯೋಪಭೋಗಮಾಡುವುದು ಬರೆದಿರಲಿಲ್ಲ. ಅವನು ವಂಗದೇಶದ ಪಠಾನರೊಂದಿಗೆ ಯುದ್ಧಮಾಡುವುದರಲ್ಲಿ ಹತ್ತುವರ್ಷ ಕಳೆದನು ಕೊನೆಗೆ ಪಠಾನರ ಮುಖಂಡನಾದ ಷೇರ್ ಖಾನನು ದಿಲ್ಲಿಯ ಸಿಂಹಾಸನವನ್ನು ಹತ್ತಿದನು. ಆ ಕಾಲದಲ್ಲಿ ಈಗಣ ಸಂಯುಕ್ತ

ಪ್ರಾಂತ್ಯವು ಮೊಗಲ ಮತ್ತು ಪಠಾನರ ಪರಸ್ಪರ ಸಮರದ ರಂಗಭೂಮಿಯಾಗಿದ್ದಿತು. ಆಗ ದೇಶದ ಪರಿಸ್ಥಿತಿಯು ಕ್ಷೇಮಕರವಾಗಿರಲಿಲ್ಲ ನವೀನ ಧರ್ಮಾನುಯಾಯಿಗಳು ಅಂಧ ಶ್ರದ್ಧೆಯಿಂದ ಅತ್ಯಾಚಾರಗಳನ್ನೆಸಗಲಾರಂಭಿಸಿದ್ದರು. ಮುಸಲ್ಮಾನರು ಈ ದೇಶಕ್ಕೆ ಬಂದು ಆಗ್ಗೆ ಸುಮಾರು ಮುನ್ನೂರು ವರುಷಗಳಾಗಿದ್ದವು. ಅಕಬರನಂತಹ ಉದಾರ ಮತ್ತು ಉದಾತ್ತ ವಿಚಾರದ ಶಾಸಕನು ಹುಟ್ಟಿರಲಿಲ್ಲ. ಮುಸಲೀಮ ಧರ್ಮಪ್ರಚಾರದೊಂದಿಗೆ ಅದರ ಸಂಸ್ಕೃತಿಯ ಮತ್ತು ಫಾರಸೀ, ಅರಬೀ ತುರ್ಕೀ ಭಾಷೆಗಳ ಸಂಮಿಶ್ರಣವೂ ಅಭಿವೃದ್ಧಿಸ್ತೈದುತ್ತಿದ್ದಿತು ಮಾತು ಮತ್ತು ವೇಷಗಳಲ್ಲಿಯೂ ಆಂದೋಲನವುಂಟಾಗಿ ದ್ದಿತು. ಒಂದೆಡೆಯಲ್ಲಿ ಆರ್ಯಧರ್ಮೀಯರು ಮುಸಲೀಮರಾಗುತ್ತಿದ್ದರು, ಮತ್ತೊಂದೆಡೆ ಯಲ್ಲಿ ಅರಬೀ ಫಾರಸೀ ತುರ್ಕೀ ಶಬ್ದಗಳು ಶುದ್ಧಿಯನ್ನೈದಿ ಆರ್ಯವೇಷವನ್ನು ತಳೆದು ಆಗ ಪ್ರಬಲವಾಗಿದ್ದ ಭಾರತೀಯ ಪ್ರಾಕೃತ ಭಾಷೆಯಲ್ಲಿ ಸಮಾವೇಶವಾಗುತ್ತಿದ್ದವು ಆಗ ಮುಸಲ್ಮಾನರು ವಿಧರ್ಮಿಗಳೂ ವಿದೇಶಿಗಳೂ ಆಗಿದ್ದರಲ್ಲದೆ ಅವರ ಶಾಸನವೂ ಹಿಂಸಾ ಪೂರ್ಣವಾಗಿದ್ದಿತು ಅವರು ಗೋಬ್ರಾಹ್ಮಣದ್ರೋಹಿಗಳೆಂದೂ ಅಸ್ಪೃಶ್ಯರೆಂದೂ ಪರಿಗಣಿ ಸಲ್ಪಟ್ಟಿದ್ದರು. ಅವರೊಂದಿಗೆ ಸಂಸರ್ಗವನ್ನಿಟ್ಟಿದ್ದವರು ಜನರ ತಿರಸ್ಕಾರಕ್ಕೆ ಪಾತ್ರರಾ ಗುತ್ತಿದ್ದರು ಆದುದರಿಂದ ವಿದ್ಯಾಪ್ರೇಮಿಗಳಾದ ಮುಸಲಿಮರು ಹಿಂದೂಗಳಾಗಿ ಅನಂತರ ಸಂಸ್ಕೃತ ಭಾಷೆಯನ್ನು ಕಲಿಯಬೇಕಾಗಿದ್ದಿತು. ಆಗ ವಿದ್ಯಾಪ್ರೇಮಿಗಳಾದ ಮುಸಲೀ ಮರು ವಿದೇಶೀಯರಾಗಿದ್ದರೂ ಭಾರತವಾಸಿಗಳಾಗಬೇಕಾದುದರಿಂದ ನಿರ್ವಾಹವಿಲ್ಲದೆ ಆರ್ಯಸಂಸ್ಕೃತಿಯ ವಿಶೇಷಾಂಶಗಳನ್ನು ಸ್ವೀಕರಿಸಿದರು ಇದಕ್ಕೆ ಅಮೀರಖುಸರೂ ಎಂಬುವನೇ ಮೊದಲನೆಯ ಉದಾಹರಣೆಯಾಗಿರುವನು. ಮಲಿಕ್ ಮಹಮ್ಮದ್ ಜಾಯಸಿ ಎಂಬ ಪ್ರಖ್ಯಾತ ಕವಿಯು ಈ ಎರಡು ಸಂಸ್ಕೃತಿಗಳನ್ನೂ ತನ್ನ ಭಾಷೆಯಿಂದ ಬೆಸೆದು ಷೇರಷಾಹನಕಾಲದಲ್ಲಿ ಪ್ರಸಿದ್ಧಿಯಾದನು. ಅನಂತರ ಬಾಳಿದ ಅಬ್ದುರಹೀಮ್, ಖಾನ್ ಖಾನಾ ಮತ್ತು ರಸ್‌ಖಾನ್ ಮೊದಲಾದವರು ಮುಸಲೀಮರಾಗಿದ್ದರೂ ಅವರು ಕವಿತ್ವದಲ್ಲಿ ಶುದ್ಧ ಹಿಂದೂಭಾವವನ್ನೆ ಅವಲಂಬಿಸಿದರು

ಆಗ ಎಲ್ಲಿ ಮುಸಲ್ಮಾನರು ತಮ್ಮ ಧರ್ಮ ಪ್ರಚಾರದಲ್ಲಿ ಸಾಮದಾನಭೇದದಂಡ ಗಳೆಂಬ ನಾಲ್ಕು ಬಗೆಯಿಂದಲೂ ಕೆಲಸವನ್ನು ನಡೆಯಿಸುತ್ತಿದ್ದರೊ ಅಲ್ಲಿ ಹಿಂದೂಗಳು ಮುಸಲ್ಮಾನರಾಗಿ ಮತ್ತೆ ಹಿಂದೂಧರ್ಮಕ್ಕೆ ಬರದಿದ್ದಲ್ಲಿ ಅದರಿಂದ ತಮ್ಮ ಸಮಾಜಕ್ಕೇ ಹಾನಿಯಾಗುವುದೆಂದರಿತು ಅಂತಹರನ್ನು ಶುದ್ಧಿಯ ಮೂಲಕ ಹಿಂದಕ್ಕೆ ತೆಗೆದುಕೊಳ್ಳುವ ಪತಿತೋದ್ಧಾರ ಕಾರ್ಯದಲ್ಲಿ ಹಿಂದೂಗಳು ಮುಂದಾಗಿ ಬಂದಿದ್ದರು. ಆಚಾರ ಮಾರ್ಗದ ಪರಮಪ್ರಸಿದ್ಧರಾದ ಶ್ರೀ ರಾಮಾನುಜಾಚಾರ್ಯ ಸ್ವಾಮಿಗಳು ದಕ್ಷಿಣದಲ್ಲಿ ಅಸ್ಪೃಶ್ಯ ವರ್ಗ ದವರನ್ನು ಉದ್ಧರಿಸಲಾರಂಭಿಸಿದ್ದರು ವಂಗದೇಶದಲ್ಲಿ ಶ್ರೀ ಗೌರಾಂಗ ಮಹಾಪ್ರಭುವು ಮುಸ ಲ್ಮಾನರನ್ನು ವೈಷ್ಣವರಾಗಿಮಾಡಲಾರಂಭಿಸಿದ್ದರು. ಅಯೋಧ್ಯೆಯಲ್ಲಿ ಸ್ವಾಮಿರಾಮಾನಂದ, ಭಕ್ತಪೀಪಾ, ಕಬೀರಾದಿ ಮಹಾತ್ಮರು ಅಸ್ಪೃಶ್ಯರನ್ನೂ ಉದ್ಧರಿಸುತ್ತಿದ್ದರಲ್ಲದೆ ಮುಸ ಲ್ಮಾನರಲ್ಲಿ ಜ್ಞಾನಪ್ರಸಾರಣೆಯಿಂದ ಅಂಧಶ್ರದ್ಧೆಯೆಂಬ ತಮಸ್ಸನ್ನು ನಿವಾರಿಸಲಾರಂಭಿ

ಸಿದ್ಧರು ಕಬೀರದಾಸನೂ ಅವನ ಮಗನಾದ ಕಮಾಲನೂ ಮುಸಲ್ಮಾನರನ್ನು ಹಿಂದೂ ಮಹಾತ್ಮರಾಗಿ ಮಾಡಿ ಆಶ್ಚರ್ಯವನ್ನುಂಟು ಮಾಡುತ್ತಿದ್ದರು. ಎಂದರೆ ಒಟ್ಟಿನಲ್ಲಿ ಎಲ್ಲೆಲ್ಲಿ ಆರ್ಯಧರ್ಮೀಯರು ಪತಿತರಾಗುತ್ತಿದ್ದರೊ ಅಲ್ಲಲ್ಲಿ ಸಾಧುಗಳ ಮತ್ತು ಮಹಾತ್ಮರ ಕೃಪೆಯಿಂದ ಪತಿತೋದ್ಧಾರ ಕಾರ್ಯವು ನಡೆಯಲಾರಂಭಿಸಿತ್ತು. ಕೇವಲ ವೈದಿಕ ಧರ್ಮ ಪರಾಯಣರಾದ ಸಾನಾತನಿಕ ವಿದ್ವಾಂಸರು ಈ ಸಂತ ಮಹಾತ್ಮರ ಚಳವಳವನ್ನು ಸರಿಯಾದ ದೃಷ್ಟಿಯಿಂದ ನೋಡದಿದ್ದರೂ, ಈ ಪಂಥಗಳಲ್ಲಿ ಲೋಕಪ್ರಿಯತೆಯೂ ಆದರವೂ ಹೆಚ್ಚಿದ್ದಿತು. ಹಿಂದೂಗಳಲ್ಲಿ ಸಾಂಪ್ರದಾಯಿಕ ಭೇದಗಳು ವಿಶೇಷ ಪ್ರಬಲವಾಗಿದ್ದವು ವೈಷ್ಣವರೂ ಶೈವರೂ ಪರಸ್ಪರ ಕಾದಾಡುತ್ತಿದ್ದರು ಇವರು ತಂತಮ್ಮ ಇಷ್ಟದೇವತೆಯೆ ಒಳ್ಳೆಯದೆಂಬ ವಾಗ್ಯುದ್ಧದಲ್ಲಿ ಮಗ್ನರಾಗಿದ್ದರು. ‘ ರಾಮಚರಿತಮಾನಸ ’ ಗ್ರಂಥದಲ್ಲಿ ಭುಶುಂಡಿಯ ಕಟುತರವಾದ ಶಿವಭಕ್ತಿಯು ಒಂದು ಬಗೆಯದಾಗಿರುವುದು. ಸಾಂಪ್ರದಾಯ ಭೇದಗಳೂ ಜಾತಿಭೇದಗಳೂ ಮತ್ತು ಭೇದ ಪ್ರಭೇದಜನಿತಕಲಹಗಳೂ ಸಮಗ್ರ ಆರ್ಯ ಜಾತಿಯನ್ನು ಜರ್ಜರ ಮಾಡಿಬಿಟ್ಟದ್ದವು. ಈ ದೌರ್ಬಲ್ಯದ ಮುಖ್ಯಕಾರಣದಿಂದಲೇ ವಿದೇಶಿಗಳೂ ವಿಧರ್ಮಿಗಳೂ ಈ ದೇಶಕ್ಕೆ ನುಗ್ಗಿ ಆರ್ಯಜಾತಿಯವರನ್ನಾಳಲಾರಂಭಿಸಿದರು

ಶಾಸಕವರ್ಗದವರೆಲ್ಲರೂ ಯಾವಾಗಲೂ ಕೇವಲ ಭೇದನ್ಯಾಯ ಬಲದಿಂದಲೇ ಆಳುತ್ತ ಬಂದಿರುವರು ಆ ಸಮಯದಲ್ಲಿ ಚತುರರಾದ ಶಾಸಕರೂ ಈ ನೀತಿಯನ್ನೇ ಅನುಸರಿಸುವುದವಶ್ಯಕವಾಗಿದ್ದಿತು. ಏಕೆಂದರೆ ಆಗ ಬ್ರಾಹ್ಮಣ ಬ್ರಾಹ್ಮಣೇತರರ ಜಗಳಗಳೂ ಪ್ರಬಲಗೊಂಡಿದ್ದವು ಬ್ರಾಹ್ಮಣರಲ್ಲಿ ಸ್ವಾರ್ಥಬುದ್ಧಿಯು ಹೆಚ್ಚಿದ್ದಿತ್ತು ಮತ್ತೆ ಬ್ರಾಹ್ಮಣೇತರರಲ್ಲಿ ಶ್ರದ್ಧೆಯು ಮಾಯವಾಗಿ ಬ್ರಾಹ್ಮಣರ ಕೆಲಸವನ್ನು ತಾವೇ ಮಾಡುವುದಕ್ಕೂ ಸಿದ್ಧರಾಗಿದ್ದರು ವರ್ಣಾಶ್ರಮದ ಈಗಣ ಅವನತ ಸ್ಥಿತಿಯೇ ಆಗಲೂ ಕಂಡು ಬರುತ್ತಿತ್ತು ಆದರೆ ಈ ಕಾಲದಲ್ಲಿ ಉದ್ಯೋಗಗಳೆಲ್ಲವೂ ಲುಪ್ತವಾಗಿರುವವು, ಆಗಿನ ಕಾಲದಲ್ಲಿ ಹಾಗಿರಲಿಲ್ಲವೆಂಬುದಿಷ್ಟೇ ವ್ಯತ್ಯಾಸವಾಗಿದೆ ಆಗ ಹಿಂದೂಗಳ ಉದ್ಯೋಗ ವೃತ್ತಿಗಳನ್ನು ಮುಸಲ್ಮಾನರು ಆಕ್ರಮಿಸಿದ್ದರೂ, ಅವರು ಈ ದೇಶದಲ್ಲಿಯೆ ಇರುತ್ತಿದ್ದರು. ಇದರಿಂದ ಹಿಂದೂ ಸಮಾಜದ ಹಾನಿಯು ಸ್ವಲ್ಪ ಮಟ್ಟಿಗೆ ಆಗುತ್ತಿದ್ದರೂ, ದೇಶದ ಆರ್ಥಿಕ ಹಾನಿಯು ಸ್ವಲ್ಪವೂ ಆಗುತ್ತಿರಲಿಲ್ಲ ಆದಾಗ್ಗೂ ವರ್ಣಾಶ್ರಮಧರ್ಮ ಮತ್ತು ಆಶ್ರಮಧರ್ಮಗಳಲ್ಲಿ ಅತ್ಯಂತ ಶಿಥಿಲತೆಯುಂಟಾಗಿದ್ದಿತು ಈ ಶೈಥಿಲ್ಯವು ಕೇವಲ ಒಂದೆರಡು ನೂರು ವರ್ಷಗಳಿಂದ ಬಾರದೆ ಬಹು ಹಿಂದಿನಕಾಲದಿಂದ ಬಂದಿರುವುದಾಗಿದೆಯೆಂದು ಮಾತ್ರ ಇಲ್ಲಿ ಹೇಳಬಹುದು

## ಜನ್ಮಸ್ಥಾನವೂ ಬಾಲ್ಯಕಾಲವೂ

ಭಾರತ ವರ್ಷದ ಸಾಹಿತ್ಯಾಕಾಶದ ಉಜ್ವಲಚಂದ್ರಮನೆನಿಸಿದ, ಭಕ್ತರ ಮತ್ತು ಸಾಹಿತ್ಯ ರಸಿಕರ ಹೃದಯವನ್ನು ತನ್ನ ನಿರ್ಮಲ ಕವಿತಾಜ್ಯೋತ್ಸ್ನದಿಂದ ಸುಶೀತಲವಾಗಿ ಮಾಡಿದ, ಹಿಂದೀವಾಙ್ಮಯದ ವಿಸ್ತೀರ್ಣ ಕ್ಷೇತ್ರದಲ್ಲಿ ಸುಧೆಯನ್ನು ವರ್ಷಿಸಿದ ಪ್ರಾತಃಸ್ಮರಣೀಯ

ರಾದ ಶ್ರೀ ಗೋಸ್ವಾಮಿ ತುಳಸೀದಾಸರು ಮೇಲೆ ಹೇಳಿದ ಪರಿಸ್ಥಿತಿಯ ಸಮಯದಲ್ಲಿ ಹುಟ್ಟಿದರು. ಆಗ ಹುಮಾಯೂನನ ಅಶಾಂತ ರಾಜತ್ವಕಾಲವಾಗಿದ್ದಿತು ಕೆಲವು ವಿದ್ವಾಂಸರ ಅಭಿಪ್ರಾಯಾನುಸಾರವಾಗಿ ಅವರು ಜನಿಸಿದುದು ವಿಕ್ರಮಶಕ೧೫೮೯ನೆಯ ಸಂವತ್ಸರವಾಗಿದ್ದಿತು. ಇದರ ವಿಚಾರದಲ್ಲಿ ಇನ್ನೂ ಚರ್ಚೆಯು ನಡೆಯುತ್ತಲಿದೆ ಆದರೆ ಗೋಸ್ವಾಮಿಯವರು ಹಿಂದೀಸಾಹಿತ್ಯದಲ್ಲಿ ಒಂದು ನವೀನ ಶಕೆವನ್ನು ನಿರ್ಮಿಸಿದ ಮಹಾತ್ಮರು ಅವರ ಜನ್ಮದಂತಹ ಮಹತ್ವವು ಯಾವ ಸಂವತ್ಸರದಲ್ಲಿ ಅಥವಾ ಸಾಲಿನಲ್ಲಿ ಆಯಿತೆಂಬುವುದಕ್ಕೆ ಪ್ರಮಾಣಗಳು ಅಷ್ಟು ಆವಶ್ಯಕವಾಗಿಲ್ಲ. ಆದರಿಂದ ನಮ್ಮ ಉದ್ದೇಶ್ಯಕ್ಕೆ ವಿಶೇಷ ಪ್ರಯೋಜನವೂ ಇಲ್ಲ ಅವರ ಜನ್ಮಸ್ಥಾನ ವಿಚಾರದಲ್ಲಿ ವಿವಾದವಿರುವುದು ಸ್ವಾಭಾವಿಕವಾಗಿದೆ. ಹೋಮರನ ಜನ್ಮಸ್ಥಾನವು ತಮ್ಮ ಊರೆಂದು ಹೇಳಿಕೊಳ್ಳಲು ಯುನಾನಿಗಳ ಸಪ್ತನಾಗರಿಕರು ಹೂಡಿದ ಕದನವು ಇತಿಹಾಸ ಪ್ರಸಿದ್ಧವಾಗಿದೆ ಕಾಳಿದಾಸನನ್ನು ತಮ್ಮವನೆಂದು ಹೇಳಿಕೊಳ್ಳಲು ಕಾಶ್ಮೀರ, ಪಂಜಾಬಿ, ಬಂಗಾಳ, ಆಂಧ್ರ, ಗುಜರಾತ ಮೊದಲಾದ ಪ್ರಾಂತ್ಯದವರು ಪ್ರಮಾಣಗಳನ್ನು ತೋರಿಸಲು ಸಿದ್ಧರಾಗಿಲ್ಲವೆ ? ಇನ್ನು ಗೋಸ್ವಾಮಿಗಾಗಿ ಜಗಳವಾಡಿದರೆ ಆಶ್ಚರ್ಯವೇನು ?

ಇವರ ಜನ್ಮಸ್ಥಾನವು ತಾರೀ ಎಂಬ ಸ್ಥಳವೆಂದು ಕೆಲವರೂ, ಹಸ್ತಿನಾಪುರವೆಂದು ಕೆಲವರೂ, ಚಿತ್ರಕೂಟದ ಸಮೀಪದಲ್ಲಿರುವ ಹಾಜೀಪುರವೆಂದು ಕೆಲವರೂ, ಬಾಂದಾ ಜಿಲ್ಲೆಯಲ್ಲಿರುವ ರಾಜಾಪುರವೆಂದು ಕೆಲವರೂ ಹೇಳಿರುವರು ಆದರೆ ಹಲವು ಜನ ವಿದ್ವಾಂಸರ ಅಭಿಪ್ರಾಯಾನುಸಾರವಾಗಿ ಇವರ ಜನ್ಮಸ್ಥಾನವು 'ರಾಜಾಪುರ' ವೆಂಬ ಊರೆಂದು ನಿಶ್ಚಯಿಸಲ್ಪಟ್ಟಿರುವುದು ಅದಕ್ಕೆ ಪ್ರಮಾಣವಾಗಿ ರಾಜಾಪುರದಲ್ಲಿ ಇವರ ಕುಟೀರವೊಂದಿರುವುದು

ಇವರ ಜಾತಿಯ ವಿಚಾರವಾಗಿಯೂ ವಿವಾದಗಳಿವೆ ಇವರು ಕಾನ್ಯಕುಬ್ಜ ಬ್ರಾಹ್ಮಣರಾಗಿದ್ದರೆಂದು ಕೆಲವರೂ, ಪರಾಶರಗೋತ್ರದ ಸರಯೂಪಾರೀ ಬ್ರಾಹ್ಮಣರಾಗಿದ್ದರೆಂದು ಕೆಲವರೂ ಹೇಳಿರುವರು. ಆದರೆ ಮಹಾತ್ಮರಿಗೆ ಜಾತಿಭೇದಗಳಿಲ್ಲವೆಂದು ವ್ಯಾಧಕುಲದ ವಾಲ್ಮೀಕಿಯನ್ನೂ ಕ್ಷತ್ರಿಯನಾದ ವಿಶ್ವಾಮಿತ್ರನನ್ನೂ, ದಾಸೀಪುತ್ರನೆನಿಸಿದ ವಸಿಷ್ಠನನ್ನೂ, ಬೆಸ್ತಕನ್ನೆಯ ಪುತ್ರನಾದ ವ್ಯಾಸನನ್ನೂ ದೇವಾಂಶಸಂಭೂತರೆಂದು ಪೂಜಿಸುತ್ತಿರುವ ವಿಕಾಸಿತ ದೃಷ್ಟಿಯನ್ನೂ ವಿಶಾಲಹೃದಯವನ್ನೂ ಉಳ್ಳ ಆರ್ಯಜಾತಿಯವರು ಬಲ್ಲರು. ಇವರ ಗುಣಶೀಲ ವಿಚಾರಗಳು ಮುಖ್ಯವೇ ವಿನಾ ಜಾತಿ ವಿಚಾರಗಳು ಆವಶ್ಯಕವಾಗಿಲ್ಲವೆಂಬುದಕ್ಕೆ ನಮ್ಮಲ್ಲಿ ಪ್ರಚಾರಕ್ಕೆ ಬಂದಿರುವ ಹಲವು ಮಹಾ ಪುರುಷರ ಜಯಂತಿಗಳೇ ನಿದರ್ಶನವಾಗಿವೆ

ತುಳಸೀದಾಸರ ಗ್ರಂಥಗಳಾವುದರಲ್ಲಿಯೂ ಇವರ ಮಾತಾಪಿತೃಗಳ ಹೆಸರನ್ನು ಸ್ಪಷ್ಟವಾಗಿ ಹೇಳಿಲ್ಲ. ಇವರ ತಂದೆಯ ಹೆಸರು ಆತ್ಮಾರಾಮ 'ದುಬೆ' ಮತ್ತು ತಾಯಿಯ ಹೆಸರು 'ಹುಲಸಿ' ಎಂದಿದ್ದವೆಂದು ಜನರ ಹೇಳಿಕೆ. 'ತುಳಸೀಚರಿತ' ಕಾರನು ತನ್ನ ಗ್ರಂಥದ ಪ್ರಾರಂಭದಲ್ಲಿ ಬರೆದಿರುವ ದೋಹಾಗಳಿಂದ ತಿಳಿದುಬರುವುದೇನಂದರೆ:—

ತುಳಸೀದಾಸರ ಪ್ರಪಿತಾಮಹನ ಹೆಸರು ಪರಶುರಾಮಮಿಶ್ರ, ಆತನ ಪುತ್ರನು ಶಂಕರಮಿಶ್ರ ಆತನಿಗೆ ಸಂತಮಿಶ್ರ ಮತ್ತು ರುದ್ರನಾಥಮಿಶ್ರರೆಂಬ ಇಬ್ಬರು ಮಕ್ಕಳು ಹುಟ್ಟಿದರು. ರುದ್ರನಾಥ ಮಿಶ್ರನಿಗೆ ನಾಲ್ವರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳೂ ಹುಟ್ಟಿದರು ಪುತ್ರರ ಹೆಸರುಗಳು ಅನುಕ್ರಮವಾಗಿ ಗಣಪತಿ, ಮಹೇಶ, ತುಲಾರಾಮ ಮತ್ತು ಮಂಗಳ ಎಂಬುದಾಗಿಯೂ ಪುತ್ರಿಯರ ಹೆಸರುಗಳು ವಾಣೀ ಮತ್ತು ವಿದ್ಯಾ ಎಂದೂ ಇದ್ದವು ಮೂರನೆಯ ಮಗನಾದ ತುಲಾರಾಮನೇ ನಮ್ಮ ಚರಿತ್ರನಾಯಕರಾದ ಗೋಸ್ವಾಮಿ ತುಳಸೀದಾಸರು ಇವರ ಕುಲಗುರುವು ಇವರ ಹೆಸರನ್ನು ತುಲಸೀರಾಮನೆಂದು ಬದಲಾಯಿಸಿದನು ಅನಂತರ ವಿನಯಶೀಲರಾದಿವರು ತಮ್ಮ ದೈನ್ಯವನ್ನು ತೋರ್ಪಡಿಸಲು ತುಳಸೀದಾಸರೆಂದು ಹೆಸರು ಬದಲಾಯಿಸಿಕೊಂಡರೆಂದು ತಿಳಿದು ಬರುವುದು.

ಪೂರ್ವಜನ್ಮ ಸಂಚಿತ ಕರ್ಮಬಲದಿಂದ ಇವರಿಗೆ ತಕ್ಕ ವಿದ್ಯಾಭ್ಯಾಸವನ್ನು ಮಾಡಿಸಲು ಯೋಗ್ಯತೆಯಿಲ್ಲದೆಯೊ ಅಥವಾ ಮತ್ತಾವ ದೈವಿಕ ಕಾರಣದಿಂದಲೋ ಏನೋ ಇವರು ಚಿಕ್ಕವರಾಗಿದ್ದಾಗಲೇ ಇವರ ತಂದೆತಾಯಿಯವರು ಇವರನ್ನು ಒಬ್ಬ ಗುರುವಿನ ಸನ್ನಿಧಿಯಲ್ಲಿ ಬಿಟ್ಟು ಹೊರಟುಹೋದರು. ಮುಂದೆ ಅವರ ಹೆಸರನ್ನೇ ಇವರು ಕೇಳದಂತಾದರು ಆದುದರಿಂದ ಬಾಲ್ಯಾವಸ್ಥೆಯಲ್ಲಿಯೆ ಇವರ ಮಾತಾಪಿತೃಗಳು ಮೃತಿಯನ್ನೈದಿದರೆಂದು ಊಹಿಸಲಾಗಿದೆ

## ಗುರುಸನ್ನಿಧಿಯಲ್ಲಿ ವಿದ್ಯಾಭ್ಯಾಸ.

ತುಳಸೀದಾಸರನ್ನು ಅವರ ಮಾತಾಪಿತೃಗಳು ಒಬ್ಬ ಸಚ್ಚರಿತ್ರನೂ ರಾಮಭಕ್ತನೂ ಸಾಧುವೂ ಆದ ಬ್ರಾಹ್ಮಣನೊಬ್ಬನ ಬಳಿಯಲ್ಲಿ ಬಿಟ್ಟಿದ್ದರು ಅವನು ಇವರನ್ನು ಪಾಲಿಸಿ, ಪೋಷಿಸಿ, ಇವರು ದೊಡ್ಡವರಾದ ಮೇಲೆ ಇವರ ಜನ್ಮವೃತ್ತಾಂತವನ್ನು ಇವರಿಗೆ ಹೇಳಿದನು. „ಗುರು ಪಿತು ಮಾತು ಮಹೇಸ ಭವಾನೀ " ಎಂಬ ವಂದನೆಯಲ್ಲಿ ಇವರು ತಮ್ಮ ಮಾತಾಪಿತೃಗಳ ಸ್ಮರಣೆಯ ಪ್ರಮಾಣವನ್ನು ತೋರಿಲ್ಲ ಸಮಗ್ರಜಗತ್ತಿಗೆ ಪ್ರಣಾಮಮಾಡಿರುವವರು, ಮಾತಾಪಿತೃಗಳನ್ನು ಮರೆಯುವುದು ಆಶ್ಚರ್ಯವೇ ಸರಿ ! ಇದರಿಂದ ಅವರಿಗೆ ತಮ್ಮ ಮಾತಾಪಿತೃಗಳ ಪರಿಚಯವಿರಲಿಲ್ಲವೆಂದು ಸ್ಪಷ್ಟವಾಗುವುದು. ಇವರು ತಮ್ಮ ಗ್ರಂಥದ ಹಲವೆಡೆಗಳಲ್ಲಿ ಗುರುಸ್ಮರಣೆಯನ್ನು ಮಾಡಿರುವುದರಿಂದ ಇವರ ಬಾಲ್ಯಾವಸ್ಥೆಯೆಲ್ಲವೂ ಗುರುಸಾನ್ನಿಧ್ಯದಲ್ಲಿಯೆ ಕಳೆಯಿತೆಂದು ತಿಳಿಯುವುದು. ಆತನೇ ಇವರಿಗೆ ರಾಮಚರಿತವನ್ನು ಬೋಧಿಸಿ ಇವರಲ್ಲಿ ರಾಮಭಕ್ತಿಯನ್ನುಂಟುಮಾಡಿದನೆಂದು

„ಬಂದಉಂ ಗುರು ಪದ ಕಂಜ ಕೃಪಾ ಸಾಧು ನರ ರೂಪ ಹರಿ |
ಮಹಾಮೋಹ ತಮ ಪುಂಜ ಜಾಸು ವಚನ ರಬಿಕರ ನಿಕರ || ''

ಎಂಬ ಪದ್ಯದಿಂದ ಗೊತ್ತಾಗುವುದು ಸದಾಚಾರ ಭಕ್ತಿ ಜ್ಞಾನ ವೈರಾಗ್ಯಗಳು ಬಾಲಕನಾದ ತುಳಸೀದಾಸನಲ್ಲಿ ಬಹು ಚಿಕ್ಕವಯಸ್ಸಿನಲ್ಲಿಯೆ ಗುರುಕೃಪೆಯಿಂದ ಅಂಕುರಿಸಿದವು. ಗುರುವು ಇವರಿಗೆ ಕಾವ್ಯ, ವ್ಯಾಕರಣ, ಜ್ಯೋತಿಷ, ಧರ್ಮಶಾಸ್ತ್ರ, ಮತ್ತು

ವೇದಾಂತದ ಶಿಕ್ಷಣವನ್ನು ಕೊಟ್ಟನು. ಆತನೂ ಅಗಾಧ ಜ್ಞಾನಿಯೂ ವಿದ್ವಾಂಸನೂ ಆಗಿದ್ದನೆಂದು ಮೇಲಿನ ಪದ್ಯದಿಂದಲೇ ಗೊತ್ತಾಗುವುದು. ಇವರ ಶಿಕ್ಷಣವು ಮುಗಿದ ಸ್ವಲ್ಪ ಕಾಲದಲ್ಲಿಯೆ ಗುರುವು ಮೃತನಾದುದರಿಂದ ಇವರು ಯಾತ್ರಿಕರಾಗಿ ಹೊರಟರು.

ತುಳಸೀದಾಸರ ಯಾತ್ರಾಪ್ರವಾಸದಲ್ಲಿ ಇವರು ಭೃಗು ಆಶ್ರಮ, ಹಂಸನಗರ, ಪರಸಿಯಾ ಎಂಬ ಸ್ಥಳಗಳನ್ನು ಸಂದರ್ಶಿಸಿದರು. ಅಲ್ಲಿ « ಗಾಯಘಾಟ " ನ ರಾಜನಾದ ಗಂಭೀರದೇವನ ಆತಿಥ್ಯಸತ್ಕಾರವನ್ನು ಹೊಂದಿದರು ಅನಂತರ ಬ್ರಹ್ಮೇಶ್ವರನಾಥಕ್ಕೆ ಹೋಗಿ ಅಲ್ಲಿ ಮಹಾದೇವನ ದರ್ಶನವನ್ನು ಮಾಡಿ (ಬಲಿಯಾ ಜಿಲ್ಲೆಯಲ್ಲಿರುವ) ಕಾಂತ ಎಂಬ ಗ್ರಾಮಕ್ಕೆ ಬಂದರು ಅಲ್ಲಿ ಅವರಿಗೆ ಭೋಜನ ಪದಾರ್ಥವಾವುದೂ ಸಿಕ್ಕಲಿಲ್ಲ ಮತ್ತು ಅಲ್ಲಿಯ ಜನರ ರಾಕ್ಷಸೀ ಭಾವವನ್ನು ನೋಡಿ, ಮುಂದಕ್ಕೆ ಪ್ರಯಾಣ ಬೆಳಸಿದರು ದಾರಿಯಲ್ಲಿ ಸಾಂವರೂ ಎಂಬ ಗೊಲ್ಲನ ಮಗನಾದ ಮಂಗರೂ ಗೊಲ್ಲನನ್ನು ಕಂಡರು ಅವನು ತನ್ನ ಗ್ರಾಮದಲ್ಲಿ ಒಂದು ಗೋಶಾಲೆಯನ್ನು ಸ್ಥಾಪಿಸಿ, ಅಲ್ಲಿ ಸಾಧುಸಂತರಿಗೂ ಮಹಾಪುರುಷರಿಗೂ ಆತಿಥ್ಯಸತ್ಕಾರವೀಯುತ್ತಿದ್ದನು. ಗೊಲ್ಲನು ವಿಶೇಷ ಆದರದಿಂದ ಗೋಸ್ವಾಮಿಗಳನ್ನು ಕರೆದುಕೊಂಡು ಹೋಗಿ ಅವರಿಗೆ ಹಾಲನ್ನು ಕೊಟ್ಟನು. ಅವರು ಹಾಲಿನಿಂದ ‘ ಖೋವಾ ’ ಮಾಡಿ ಭಕ್ಷಿಸಿದರು ಅದರಿಂದ ಅವರು ತೃಪ್ತರಾಗಿ « ನಿನಗೇನು ಬೇಕು ? ಕೇಳಿಕೊ ! " ಎಂದರು ಅದಕ್ಕೆ ಗೊಲ್ಲನು « ಮಹಾಸ್ವಾಮಿ, ದೇವರ ಅಡಿದಾವರೆಗಳಲ್ಲಿ ನನ್ನ ವಿಶ್ವಾಸವು ಅಚಲವಾಗಿರುವಂತೆಯೂ ನನ್ನ ವಂಶಾಭಿವೃದ್ಧಿಯಾಗುವಂತೆಯೂ ವರವನ್ನೀಯಬೇಕು '' ಎಂದು ಪ್ರಾರ್ಥಿಸಿದನು. ಆಗ ಗೋಸ್ವಾಮಿಗಳು « ನೀನೂ ನಿನ್ನ ವಂಶಜರೂ ಕಳ್ಳತನ ಮಾಡದೇ ಯಾರನ್ನೂ ಪೀಡಿಸದೇ ಇದ್ದರೆ ಹಾಗೆಯೇ ಆಗುವುದು '' ಎಂದರು ಈ ಆಶೀರ್ವಾದವು ಫಲಿಸಿತು ಈಗಲೂ ಬಲಿಯಾ ಮತ್ತು ಶಾಹಬಾದ್ ಜಿಲ್ಲೆಯಲ್ಲಿ ಆ ವಂಶದವರ ಆತಿಥ್ಯಸತ್ಕಾರಗಳು ಪ್ರಖ್ಯಾತಿಗೊಂಡಿರುವವಲ್ಲದೆ, ಆ ಪ್ರಾಂತದಲ್ಲಿ ಚೋರರೆಂದು ಪ್ರಸಿದ್ಧರಾಗಿದ್ದ ಗೊಲ್ಲರು ತಮ್ಮಾ ಹೇಯವೃತ್ತಿಯನ್ನು ಬಿಟ್ಟು ಸತ್ಕಾರ್ಯನಿರತರಾಗಿರುವರು.

ಅಲ್ಲಿಂದ ಗೋಸ್ವಾಮಿಗಳು ಖೇಲಪತೌತವೆಂಬ ಸ್ಥಳಕ್ಕೆ ಹೋದರು. ಅಲ್ಲಿ ಗೋವಿಂದ ಮಿಶ್ರನೆಂಬ ಶಾಕದ್ವೀಪ ಬ್ರಾಹ್ಮಣನೂ ರಘುನಾಥಸಿಂಹನೆಂಬ ಕ್ಷತ್ರಿಯನೂ ಇವರನ್ನು ವಿಶೇಷವಾಗಿ ಆದರಿಸಿದರು ಕ್ಷತ್ರಿಯನ ಆದರದಿಂದವರು ತೃಪ್ತರಾಗಿ ಆ ಸ್ಥಳದ ಹೆಸರನ್ನು ಬದಲಾಯಿಸಿ ಅದಕ್ಕೆ ರಘುನಾಥಪುರವೆಂಬ ನಾಮಕರಣಮಾಡಿದರು ಇದರಿಂದ ಆ ಕ್ಷತ್ರಿಯನ ಸ್ಮಾರಕವಾದುದಲ್ಲದೆ ಲಕ್ಷಾಂತರ ಜನಗಳು ಭಗವಂತನ ನಾಮಸ್ಮರಣೆಯನ್ನು ಮಾಡುವಂತಾಯಿತು. ಆ ಊರು ಬ್ರಹ್ಮಪುರದಿಂದ ಒಂದು ಕೋಶದೂರದಲ್ಲಿ ಈಗಲೂ ಪ್ರಸಿದ್ಧವಾಗಿರುವುದು.

## ವಿವಾಹ, ಸಂತಾನ ಮತ್ತು ವೈರಾಗ್ಯ.

ಗುರುವು ತುಳಸೀದಾಸರ ಯುವಾವಸ್ಥೆಯಲ್ಲಿಯೇ ಮೃತಿಯನ್ನೈದಿದುದರಿಂದ ಇವರ ವಿದ್ಯಾಭ್ಯಾಸಂಗವು ಅಲ್ಲಿಗೆ ನಿಂತಿತು. ಮುಂದೆ ಆ ಅವಸ್ಥೆಗನುಸಾರವಾಗಿ ಇವರು ವಿವಾಹ

ವನ್ನು ಮಾಡಿಕೊಂಡರು. ಇವರ ಮೊದಲನೆಯ ವಿವಾಹವು ದೀನಬಂಧು ಪಾಠಕನೆಂಬಾತನ ಮಗಳಾದ ರತ್ನಾವಳಿಯೆಂಬವಳೊಂದಿಗೆ ಆಗಿದ್ದಿತು. ತುಳಸೀದಾಸರಿಂದ ಆಕೆಗೆ ಒಂದು ಗಂಡು ಮಗುವು ಹುಟ್ಟಿದ್ದಿತು ಆ ಮಗುವು ಶೈಶವಾವಸ್ಥೆಯಲ್ಲಿಯೆ ಸತ್ತುಹೋಯಿತು ಮುಂದೆ ಸ್ವಲ್ಪ ಕಾಲದಲ್ಲಿ ರತ್ನಾವಳಿಯು ಮೃತಳಾದಳು. ಮುಂದೆ ಇವರು ಎರಡು ವಿವಾಹಗಳನ್ನು ಮಾಡಿಕೊಂಡರೆಂದು „ತುಳಸೀಚರಿತ" ದಲ್ಲಿ ಬರೆದಿರುವರು. ಮೂರನೆಯ ವಿವಾಹವು ಕಾಂಚನಪುರದ ಲಕ್ಷ್ಮಣ ಉಪಾಧ್ಯಾಯನೆಂಬವನ ಮಗಳಾದ ಬುದ್ಧಿಮತಿ ಯೆಂಬಾಕೆಯೊಂದಿಗೆ ಆಗಿದ್ದಿತು. ಇವಳ ತಂದೆಯು ಆಕೆಗೆ ಚಿಕ್ಕಂದಿನಲ್ಲಿಯೆ ರಾಮಾಯಣ, ಮಹಾಭಾರತ, ಪುರಾಣ, ಧರ್ಮಶಾಸ್ತ್ರ, ವೇದಾಂತಾದಿ ಅನೇಕ ವಿಚಾರಗಳನ್ನು ಮನನ ಮಾಡಿಸಿದ್ದನು. ಆ ಸಂಸ್ಕಾರ ಬಲದಿಂದ ಈಕೆಯೇ ಗೋಸ್ವಾಮಿ ತುಳಸೀದಾಸರಿಗೆ ವೈರಾಗ್ಯ ವನ್ನು ಬೋಧಿಸಿ ಗುರು ಸಮಾನಳಾದುದರಲ್ಲಿ ಆಶ್ಚರ್ಯವೇನೂ ಇಲ್ಲ ವೈರಾಗ್ಯ ಪ್ರಾಪ್ತಿ ಯಾಗುವ ಮೊದಲು ಗೋಸ್ವಾಮಿಯು ಈಕೆಯಲ್ಲಿ ಬಹು ಆಸಕ್ತಿಯನ್ನಿಟ್ಟಿದ್ದರು ಒಂದು ದಿನ ತುಳಸೀದಾಸರು ಮನೆಯಲ್ಲಿಲ್ಲದಿರುವಾಗ ಯಾವುದೊ ಅಗತ್ಯ ನಿಮಿತ್ತದಿಂದ ಈಕೆಯು ತನ್ನ ಪತಿಗೆ ತಿಳಿಸಲವಕಾಶವಿಲ್ಲದೆ ತೌರುಮನೆಗೆ ಹೋಗಬೇಕಾದ ಸಂದರ್ಭವೊದಗಿತು ತುಳಸೀ ದಾಸರು ಮನೆಗೆ ಬಂದು ನೋಡಿದಾಗ ಹೆಂಡತಿಯಿರಲಿಲ್ಲ ಆಗ ಅವರಿಗೆ ಪತ್ನಿವಿಯೋಗವು ಸಹನೆಯಾಗಲಿಲ್ಲ ಕೂಡಲೆ ಹೆಂಡತಿ ಇದ್ದ ಊರಿಗೆ ಹೊರಟು ಅರ್ಧರಾತ್ರಿಯ ಸಮಯದಲ್ಲಿ ಹೆಂಡತಿಯ ಊರನ್ನು ತಲುಪಿದರು. ಪತ್ನಿಯು ಇವರನ್ನು ನೋಡಿ ಲಜ್ಜಿತಳಾಗಿ—„ನಾಥಾ, ನಾನು ಬಂದ ಕೂಡಲೆ ನನ್ನ ಹಿಂದೆಯೆ ಬರಲು ನಿಮಗೆ ನಾಚಿಕೆಯುಂಟಾಗಲಿಲ್ಲವೆ ? ಈ ಬಗೆಯ ಹುಚ್ಚಿಗೆ ಧಿಕ್ಕಾರವಿರಲಿ! ನಾನು ಏನು ಹೇಳಲಿ, ನಾಥ, ಈ ಅಸ್ಥಿಚರ್ಮಮಯ ವಾದ ದೇಹದ ಮೇಲಿಟ್ಟಿರುವಷ್ಟು ಮಮತೆಯನ್ನು ನೀವು ಶ್ರೀರಾಮನಲ್ಲಿಟ್ಟಿದ್ದರೆ ನೀವು ಈ ಸಂಸಾರ ದುಃಖದಿಂದ ಮುಕ್ತರಾಗುತ್ತಿದ್ದಿರಲ್ಲ" ಎಂದಳು ಇವರಲ್ಲಿ ವೈರಾಗ್ಯವನ್ನು ಹುಟ್ಟಿಸಬೇಕೆಂಬ ಭಾವನೆಯು ಆಕೆಯಲ್ಲಿರಲಿಲ್ಲ ಮಾತುಗಳು ಮನಸ್ಸಿಗೆ ತೋರಿದಂತೆ ಬಾಯಲ್ಲಿ ಹೊರಟವು ಗುರುವಿನ ಸದುಪದೇಶದಿಂದ ಅತ್ಯಂತ ಭಾವುಕ ಮತ್ತು ಗ್ರಹಣ ಶೀಲರಾಗಿದ್ದ ತುಳಸೀದಾಸರ ಮರ್ಮಸ್ಥಳವನ್ನು ಈ ವಾಗ್ಬಾಣವು ಭೇದಿಸಿತು ಸುಪ್ತಾವಸ್ಥೆ ಯಲ್ಲಿದ್ದ ವೈರಾಗ್ಯವು ಜಾಗೃತಿಗೊಂಡಿತು ಕೂಡಲೆ ಕಾಮ ಕ್ರೋಧ ಲೋಭದ ಮಾಯಾ ಜಾಲವು ಹರಿಯಿತು. ಯೋಗಿಗೆ ತನ್ನ ಪೂರ್ವಾವಸ್ಥೆಯ ಸ್ಮರಣೆಯುಂಟಾಯಿತು. ಅಂತ ರಾತ್ಮನಿಂದ ಭಯಂಕರ ಭರ್ತ್ಸನೆಯುಂಟಾಯಿತು ಮೋಹವು ಮಾಯವಾಯಿತು ಸಹ ಧರ್ಮಿಣಿಯ ಉಪದೇಶದಿಂದುಂಟಾದ ಜಾಗೃತಿಯಿಂದ ವೈರಾಗ್ಯವನ್ನು ಹೊಂದಿ ತಕ್ಷಣವೇ ಅತ್ತೆಯ ಮನೆಯಿಂದ ಹೊರಬಿದ್ದರು ಪತ್ನಿಯು ಭೋಜನ ಮಾಡಿಕೊಂಡು ಹೋಗಬೇ ಕೆಂದು ಎಷ್ಟೋ ಬೇಡಿಕೊಂಡಳು ಯಾವುದಕ್ಕೂ ಕಿವಿಗೊಡದೇ ತುಳಸೀದಾಸರು ಕಾಶಿಯ ದಾರಿಯನ್ನು ಹಿಡಿದರು ಅನಂತರ ತೀರ್ಥಾಟನೆಯನ್ನು ಮಾಡುತ್ತ ಭಗವದ್ಭಜನೆಯಲ್ಲಿ ಆಯುಸ್ಸನ್ನು ಸವೆಯಿಸಲಾರಂಭಿಸಿದರು. ತೀರ್ಥಾಟನೆಯಲ್ಲಿ ಮಥುರಾ, ಬೃಂದಾವನ, ಕುರುಕ್ಷೇತ್ರ, ಪ್ರಯಾಗ, ಚಿತ್ರಕೂಟ, ಜಗನ್ನಾಥ ಮೊದಲಾದ ಸ್ಥಳಗಳನ್ನು ಸಂದರ್ಶಿಸಿದರು.

ಇವರು ವೈರಾಗ್ಯವನ್ನು ತಳೆದಾಗ ಇವರ ವಯಸ್ಸು ೩೦ ವರ್ಷವಾಗಿತ್ತೆಂದು ಇವರ ಗ್ರಂಥಾವಲೋಕನದಿಂದ ಊಹಿಸಬಹುದಾಗಿದೆ ಇವರು ವಿಕ್ರಮ ಶಕೆ ೧೫೫೪ ರಲ್ಲಿ ಹುಟ್ಟಿದ್ದರೆ ವೈರಾಗ್ಯವನ್ನು ತಳೆದಾಗ ೧೬೧೮ ನೆಯ ಸಂವತ್ಸರವಾಗಿರಬಹುದು.

" ಗೋಸ್ವಾಮಿ '' ಎಂಬ ಉಪಾಧಿಯು ಇವರ ವ್ಯಕ್ತಿತ್ವ ವಿಚಾರದಲ್ಲಿ ಒಂದು ಸಂದೇಹವನ್ನುಂಟುಮಾಡುವುದು. ಗೋಸ್ವಾಮಿ ಎಂಬ ಪದದಿಂದಲೂ ನನ್ದದಾಸನ ಸೋದರನೊಬ್ಬನು ತುಳಸೀದಾಸನೆಂಬ ಹೆಸರುಳ್ಳವನಾಗಿದ್ದುದರಿಂದಲೂ ಇವರು ವಲ್ಲಭ ಸಂಪ್ರದಾಯದ ವೈಷ್ಣವರೆಂದು ಕೆಲವರು ಅನುಮಾನಿಸಿರುವರು ಆದರೆ ಗೋಸ್ವಾಮಿಯವರ ಸಮಗ್ರ ಗ್ರಂಥಗಳಿಂದ ಅವರು ಯಾವ ಸಂಪ್ರದಾಯಕ್ಕೂ ಸೇರಿದವರಲ್ಲವೆಂದು ಸ್ಪಷ್ಟವಾಗುವುದು. ಅವರು ಕೇವಲ ರಾಮೋಪಾಸಕರಾಗಿದ್ದುದರಿಂದ ವಲ್ಲಭ ಕುಲದವರಾಗುವ ಸಂಭವವಿಲ್ಲ ಮತ್ತು ಅವರು ತಮ್ಮ ಗ್ರಂಥಗಳೆಲ್ಲದರಲ್ಲಿಯೂ ಕೇವಲ ರಾಮೋಪಾಸನೆಯನ್ನು ಮಾತ್ರ ಪ್ರತಿಪಾದಿಸಿರುವರೇ ಹೊರತು ,ಯಾವ ಸಂಪ್ರದಾಯದ ಹೆಸರನ್ನು ಕೂಡ ಎತ್ತಿಲ್ಲ ಇದರಿಂದ ಅವರ ಗುರುದೇವನೂ ಆವ ಸಂಪ್ರದಾಯಕ್ಕೂ ಸೇರಿದವನಲ್ಲವೆಂದು ಸ್ಪಷ್ಟವಾಗುವುದು ಮತ್ತು " ಜಲಪಹಿ ಕಲಪಿತ ಪಂಥ ಅನೇಕ | '' ಎಂಬವರ ವಾಕ್ಯದಿಂದ ಅವರು ಸಾಂಪ್ರದಾಯಿಕತ್ವಕ್ಕೆ ಕೇವಲ ವಿರೋಧಿಗಳಾಗಿದ್ದರೆಂದು ತಿಳಿದು ಬರುವುದು ಯಾರು ಸಾಮಾನ್ಯವಾಗಿ ಯಾವ ಸಂಪ್ರದಾಯಕ್ಕೂ ಸೇರಿಲ್ಲವೊ ಅಂಥವರನ್ನು ಉತ್ತರ ಹಿಂದುಸ್ಥಾನದಲ್ಲಿ ಸ್ಮಾರ್ತರೆಂದು ಕರೆಯುವರು ಈ ಸ್ಮಾರ್ತರಲ್ಲಿ ಯಾರು ಯಾವ ಭಾವದಿಂದ ಭಗವಂತನನ್ನು ಉಪಾಸನೆ ಮಾಡುವರೊ ಅವರು ಅವರ ಇಷ್ಟದೇವತೆಗನುಸಾರವಾದ ಹೆಸರನ್ನು ಹೊಂದುವುದು ಸಹಜವಾಗಿದೆ ಆ ನಿಯಮಾನುಸಾರವಾಗಿ ಇವರು ಸ್ಮಾರ್ತವೈಷ್ಣವರಾಗಿದ್ದರೆಂದು ಹೇಳುವರು ಅಲ್ಲದೇ ಗೋಸ್ವಾಮಿ ಎಂಬ ಹೆಸರು ಆ ಸಾಧುಗಳಿಗೆ ಅನ್ವರ್ಥಕವಾಗಿರುವುದು ಗೋಸ್ವಾಮಿಯೆಂಬುದರ ಅರ್ಥವು ಇಂದ್ರಿಯಗಳನ್ನು ಸ್ವಾಧೀನ ಪಡಿಸಿಕೊಂಡಿರುವವನು ಎಂದಾಗುವುದು

## ವೈರಾಗ್ಯ ಜೀವನಾರಂಭ

ಗೋಸ್ವಾಮಿಗಳು ಅತ್ತೆ ಮನೆಯಿಂದ ಹೊರಟವರು ಮನೆಗೆ ಹೋಗಲಿಲ್ಲ. ಅಲ್ಲಿಂದ ನೇರವಾಗಿ ಅವರು ರಾಮನಾಮವನ್ನು ಸತತವಾಗಿ ಉಪದೇಶಮಾಡುವ ಭಗವಾನ್ ವಿಶ್ವೇಶ್ವರನ ನಗರವಾದ ಕಾಶಿಗೆ ಬಂದರು ಮೊದಲು ಇವರು ಅಲ್ಲಿ ಸ್ಥಿರ ನಿವಾಸಿಗಳಾಗಿರಲಿಲ್ಲ. ಅಲ್ಲಿಂದ ಅಯೋಧ್ಯೆಗೂ ಅಲ್ಲಿಂದ ಚಿತ್ರಕೂಟಕ್ಕೂ ಹೋದರು ಮೊದಲನೆಯ ೧೨-೧೪ ವರ್ಷಗಳನ್ನು ವಿಶೇಷವಾಗಿ ಚಿತ್ರಕೂಟ ಮತ್ತು ಅಯೋಧ್ಯೆಯಲ್ಲಿ ಕಳೆದರು. ಕಾಶಿಗೆ ಬಂದಾಗಲೆಲ್ಲ ಪ್ರಹ್ಲಾದ ಘಾಟಿನಲ್ಲಿ ಪಂಡಿತ ಗಂಗಾರಾಮ ಜೋಶಿ ಎಂಬಾತನ ಮನೆಯಲ್ಲಿ ಇಳಿದುಕೊಳ್ಳುತ್ತಿದ್ದರು

ಮೊದಲು ಪ್ರಹ್ಲಾದ ಘಾಟಿನಲ್ಲಿ ಇದ್ದಾಗ ಇವರು ಪ್ರತಿನಿತ್ಯವೂ ಶೌಚವಿಧಿಗಾಗಿ ಗಂಗೆಯನ್ನು ದಾಟಿ ಹೋಗುತ್ತಿದ್ದರು. ಹಿಂದಿರುಗಿ ಬರುವಾಗ ಉಳಿದಿದ್ದ ನೀರನ್ನು ಒಂದು

ಮಾವಿನ ಮರದ ಪಾತಿಯಲ್ಲಿ ಹಾಕುತಿದ್ದರು. ಆ ಮರದಲ್ಲಿ ಒಂದು ಭೂತವು ವಾಸವಾಗಿದ್ದಿತು. ಇವರು ಸುರಿಯುತ್ತಿದ್ದ ನೀರಿನಿಂದ ಅದಕ್ಕೆ ತೃಪ್ತಿಯುಂಟಾಗಿ ಒಂದು ದಿನ ಅದು ಇವರನ್ನು ಕುರಿತು, « ನಾನು ನಿನ್ನ ಸೇವೆಯಿಂದ ತೃಪ್ತನಾಗಿರುವೆನು. ನಿನಗೇನು ಬೇಕು ? ಕೇಳಿಕೊ " ಎಂದಿತು.

ಇದನ್ನು ಕೇಳಿ ಗೋಸ್ವಾಮಿಯವರಿಗೆ ಆಶ್ಚರ್ಯವಾಯಿತು ಆದರೆ ಎಲ್ಲ ಇಚ್ಛೆಗಳನ್ನೂ ತ್ಯಾಗಮಾಡಿದ್ದವರಿಗೆ ಯಾವ ಆಸೆಯಿರಬೇಕು ? ಅವರು « ನಿನ್ನ ಕೈಲಾಗುವುದಾದರೆ ನನಗೆ ಭಗವಾನ್ ರಾಮಚಂದ್ರನ ದರ್ಶನವನ್ನು ಮಾಡಿಸು '' ಎಂದರು

ಅದಕ್ಕೆ ಭೂತವು « ಇದು ನನ್ನ ಕೈಲಾಗದ ಕೆಲಸ ಆದರೆ ಯಾರಿಂದ ಈ ಕೆಲಸವಾಗಬಹುದೊ ಅವರ ಪರಿಚಯವನ್ನು ಹೇಳುವೆನು « ಕಾಶಿಯಲ್ಲಿ ಇಂಥಾ ಸ್ಥಳದಲ್ಲಿ ರಾಮಾಯಣ ಕಥಾ ಶ್ರವಣವಾಗುತ್ತಿರುವಾಗ ಕುಷ್ಟರೋಗಿಯ ವೇಷವನ್ನು ಹಾಕಿಕೊಂಡು ಹನುಮಂತನು ಬರುತ್ತಿರುವನು. ಆತನನ್ನು ಹಿಡಿ ಆತನು ಅವಶ್ಯವಾಗಿ ದರ್ಶನ ಮಾಡಿಸುವನು " ಎಂದಿತು.

ಗೋಸ್ವಾಮಿಯವರು ಆ ಸ್ಥಳಕ್ಕೆ ಬಂದರು. ಕಥಾಶ್ರವಣವು ಮುಗಿದ ನಂತರ ಕೊನೆಗೆ ಒಬ್ಬ ಕುಷ್ಠರೋಗಿ ಯೆದ್ದನು. ಗೋಸ್ವಾಮಿಯು ಆತನ ಚರಣಗಳಿಗೆರಗಿದರು ಆತನು ಇವರಿಂದ ತಪ್ಪಿಸಿಕೊಂಡು ಹೋಗಲು ಎಷ್ಟು ಪ್ರಯತ್ನಿಸಿದರೂ ಸಾಧ್ಯವಾಗಲಿಲ್ಲ. ಕೊನೆಗೆ ಆತನು « ಬಂಧುವೇ ! ನನ್ನನ್ನೇಕೆ ಅಡ್ಡಗಟ್ಟಿರುವೆ ? ನನಗೆ ದಾರಿ ಬಿಡು '' ಎಂದನು. ಆಗ ಗೋಸ್ವಾಮಿಯು ತಮ್ಮ ಮನೋರಥವನ್ನು ಆತನಿಗೆ ತಿಳಿಸಿ, ಹಠ ಹಿಡಿದು ಕುಳಿತರು ಕೊನೆಗೆ ವೇಷಧಾರಿಯಾದ ಆಂಜನೇಯನು « ಒಳ್ಳೆಯದು, ಹೋಗು, ಚಿತ್ರಕೂಟದಲ್ಲಿ ದರ್ಶನವಾಗುವುದು '' ಎಂದನು. ಗೋಸ್ವಾಮಿಯು ಅಲ್ಲಿಂದ ಚಿತ್ರಕೂಟಕ್ಕೆ ತೆರಳಿದರು ಅಲ್ಲಿ ಭಗವನ್ಮಂದಿರದ ಸಮೀಪದಲ್ಲಿಯೇ ವಾಸಿಸುತ್ತ ನಿತ್ಯವೂ ಮಂದಿರದಲ್ಲಿದ್ದ ಮೂರ್ತಿದರ್ಶನವನ್ನು ಪಡೆಯುತ್ತಿದ್ದರು ಆದರೆ ಕೆಲಕಾಲದ ವರೆಗೆ ಸಾಕ್ಷಾತ್ಕಾರವಾಗಲಿಲ್ಲ ಒಂದು ದಿನ ಇವರು ಅಲ್ಲಿರುವ ವನದಲ್ಲಿ ಸಂಚರಿಸುತ್ತಿರುವಾಗ ಎರಡು ಕುದುರೆಗಳ ಮೇಲೆ ಕುಳಿತು ಧನುರ್ಬಾಣಗಳನ್ನು ಧರಿಸಿ ಬೇಟೆಯಾಡುತ್ತಿದ್ದ ಇಬ್ಬರು ರಾಜಕುವರರನ್ನು ನೋಡಿದರು. ಒಬ್ಬನು ಕಪ್ಪಾಗಿಯೂ ಮತ್ತೊಬ್ಬನು ಗೌರಾಂಗನಾಗಿಯೂ, ಇಬ್ಬರೂ ಸುಂದರರಾಗಿಯೂ ಇದ್ದರು ಅವರನ್ನು ನೋಡಿ ಮೋಹಿತರಾಗಿದ್ದರೂ, ಈತನೇ ಭಗವಂತನೆಂದು ತಿಳಿಯಲಿಲ್ಲ ಅಂದು ರಾತ್ರಿ ಸ್ವಪ್ನದಲ್ಲಿ ವಾಯುಸುತನು ಬ್ರಾಹ್ಮಣ ವೇಷದಲ್ಲಿ ದರ್ಶನವಿತ್ತು « ಏನು ಸ್ವಾಮಿ ! ದರ್ಶನವಾಯಿತಲ್ಲವೆ ? " ಎಂದು ಕೇಳಲು, ಇವರು « ಎಲ್ಲಾಯಿತು ? ಇನ್ನೂ ನನ್ನ ಭಾಗ್ಯೋದಯವಾಗಲಿಲ್ಲ ! " ಎಂದರು. ಆಗ ಮಾರುತಿಯು « ಏನು ! ನೀವು ಧನುರ್ಧಾರಿಗಳನ್ನು ನೋಡಲಿಲ್ಲವೆ?" ಎನ್ನಲು « ಹೌದು, ನೋಡಿದೆ ! ಒಂದು ಮೃಗದ ಹಿಂದೆ ಇಬ್ಬರು ರಾಜಕುವರರು ಕುದುರೆಗಳನ್ನೋಡಿಸುತ್ತ ಹೋಗುತ್ತಿದ್ದರು " ಎಂದರು. ಆಗ ಬ್ರಾಹ್ಮಣನು « ಅಯ್ಯೋ, ಅವರೇ

ಸ್ವಯಂ ರಾಮಲಕ್ಷ್ಮಣರು !" ಎಂದನು. ಗೋಸ್ವಾಮಿಗೆ ಪಶ್ಚಾತ್ತಾಪವಾಗಿ "ಏನು ? ಇದರಂತೆ ಇನ್ನು ದರ್ಶನವಾಗುವ ಸಂಭವವಿಲ್ಲವೆ ?" ಎಂದು ಕೇಳಲು, ವಾತಾತ್ಮಜನು "ಹೇ ಭಾಗ್ಯವಾನ್, ಕಲಿಯುಗದಲ್ಲಿ ಇಷ್ಟಾದರೂ ಯಾರ ಭಾಗ್ಯದಲ್ಲಿದೆ ?" ಎಂದು ಮಾಯವಾದನು ಗೋಸ್ವಾಮಿಯು ಆ ನೋಟವನ್ನೇ ಹೃದಯದಲ್ಲಿ ಧರಿಸಿ, ಚಿತ್ರಕೂಟಕ್ಕೆ ಪ್ರದಕ್ಷಿಣೆಯನ್ನು ಮಾಡಿ ಅಲ್ಲಿಯೆ ಇರಲಾರಂಭಿಸಿದರು ಕೆಲಕಾಲವಾದ ಮೇಲೆ ಅಲ್ಲಿಂದ ಅಯೋಧ್ಯೆಗೆ ಹೋಗಿ, ಅಲ್ಲಿಂದ ಮತ್ತೆ ಕಾಶಿಗೆ ಬಂದರು

ಇವರು ಪ್ರಹ್ಲಾದ ಘಾಟಿನಲ್ಲಿ ಗಂಗಾರಾಮ ಜೋಶಿಯ ಮನೆಯಲ್ಲಿರುವಾಗ ಒಂದು ದಿನ ಕಳ್ಳರು ಆ ಮನೆಯಲ್ಲಿ ಕದಿಯಬೇಕೆಂದು ಬಂದಾಗ ಬಾಗಿಲಿನಲ್ಲಿ ಇಬ್ಬರು ಪಹರೆಯವರಿದ್ದುದನ್ನು ಕಂಡು ಹಿಂದಿರುಗಬೇಕಾಯಿತು ವಾಚಕರಿಗೆ ಪಹರೆಯವರ್ಯಾರೆಂದು ಹೇಳಬೇಕಾಗಿಲ್ಲ ಎರಡನೆಯ ದಿನ ಅದೇ ಚೋರರೇ ಬರಲು, ಬಾಗಿಲಿನಲ್ಲಿ ಶ್ಯಾಮವರ್ಣನಾದ ಬಾಲಕನೊಬ್ಬನು ಧನುರ್ಬಾಣಗಳನ್ನು ಧರಿಸಿ ಕಾವಲು ನಿಂತಿದ್ದನು ಕಳ್ಳರು ಹಿಂದಿರುಗಿದರು ಮರುದಿನ ಬೆಳಿಗ್ಗೆ ಕಳ್ಳರಲ್ಲೊಬ್ಬನು ವೇಷವನ್ನು ಮಾರ್ಪಡಿಸಿ, ಗೋಸ್ವಾಮಿಯವರ ಬಳಿಗೆ ಹೋಗಿ ಹಿಂದಿನ ರಾತ್ರಿಯ ಕಾವಲುಗಾರನ ಸಂಗತಿಯನ್ನು ತಿಳಿಸಿದನು. ಅದನ್ನು ಕೇಳಿ ಗೋಸ್ವಾಮಿಯವರಿಗೆ ವಿಶೇಷ ಪಶ್ಚಾತ್ತಾಪವುಂಟಾಗಿ "ಪ್ರಭುವು ನನಗೋಸ್ಕರ ಇಷ್ಟು ಶ್ರಮವನ್ನು ವಹಿಸಬೇಕಾಯಿತಲ್ಲ" ಎಂದು ನೊಂದುಕೊಂಡು, ತನ್ನ ಹತ್ತಿರವಿದ್ದ ವಸ್ತುಗಳನ್ನೆಲ್ಲ ಬೇರೆಯವರಿಗೆ ಹಂಚಿಬಿಟ್ಟರು. ಆ ಕಳ್ಳರು ಗೋಸ್ವಾಮಿಯ ಶಿಷ್ಯರಾದರು, ಅನಂತರ ಗೋಸ್ವಾಮಿಯು ಪರ್ಯಟನಕ್ಕೆ ಹೊರಟರು

## ಶ್ರೀರಾಮಚರಿತಮಾನಸದ ಅವತಾರ

ಗೋಸ್ವಾಮಿಯವರು ಕಾಶಿಯನ್ನು ಬಿಟ್ಟು ನೇರವಾಗಿ ಅಯೋಧ್ಯೆಗೆ ಹೋದರು ಅಲ್ಲಿ ಬಹುಕಾಲವಿದ್ದರು. ವಿಕ್ರಮ ಶಕೆ ೧೬೩೧ ನೆಯ ರಾಮನವಮಿಯ ದಿನ ಶ್ರೀರಾಮಚರಿತಮಾನಸದ ರಚನೆಗಾರಂಭವಾಯಿತು ಆಗ ಅವರ ವಯಸ್ಸು ೪೩ ಆಗಿದ್ದಿರಬಹುದೆಂದು ಊಹಿಸಲಾಗಿದೆ ಅವರಾ ಕವಿತ್ವ ಪ್ರೌಢಿಮೆಯನ್ನು ನೋಡಿದರೆ ಸಾಮಾನ್ಯವಾಗಿ ಅದು ನಲವತ್ತು ವರ್ಷ ವಯಸ್ಸಿನ ನಂತರ ಬರೆದುದೆಂದು ತಿಳಿದುಬರುವುದು ಅವರು ಅರಣ್ಯಕಾಂಡದ ವರೆಗಣ ಭಾಗಗಳನ್ನು ಅಯೋಧ್ಯಾ ನಗರದಲ್ಲಿಯೆ ಬರೆದಿರಬಹುದೆಂದು ಊಹಿಸಲಾಗಿದೆ ಅನಂತರ ಅವರು ಕಾಶಿಗೆ ಬಂದು ಪ್ರಹ್ಲಾದ ಘಾಟಿನಲ್ಲಿ ಸ್ಥಿರವಾಗಿ ನೆಲಸಿದರು ಕಿಷ್ಕಿಂಧಾ ಕಾಂಡದಿಂದ ಮುಂದಣ ಭಾಗಗಳನ್ನು ಅಲ್ಲಿಯೆ ರಚಿಸಿದರು. ಅವರು ಸಂವತ್ ೧೬೩೧ ರಲ್ಲಿ ರಾಮಚರಿತ ಮಾನಸವನ್ನು ರಚಿಸಲಾರಂಭಿಸಿದ್ದರೂ ಅದರ ಸಂಬಂಧವಾದ ವಿಚಾರಗಳು ಬಾಲ್ಯಾವಸ್ಥೆಯಲ್ಲಿಯೇ ಇವರ ಮನಸ್ಸಿನಲ್ಲಿ ನೆಲಗೊಂಡಿದ್ದವು ಅವರ "ಹನುಮಾನ ಚಾಲೀಸ್" ಎಂಬ ಗ್ರಂಥವನ್ನು ಯುವಾವಸ್ಥೆಯಲ್ಲಿಯೆ ರಚಿಸಿದ್ದರು. ಕೆಲವು ಜನ ಪಂಡಿತರ ಅಭಿಪ್ರಾಯದಂತೆ ಗೋಸ್ವಾಮಿಯವರು ರಾಮಚರಿತಮಾನಸದ ಹಲವು ಭಾಗಗಳನ್ನು ಮುಂಚಿಯೆ ರಚಿಸಿದ್ದಿರಬೇಕೆಂದೂ, ಅದನ್ನು ಅವರು ಸಂವತ್ ೧೬೩೧ ರಲ್ಲಿ

ರಾಮನವಮಿಯ ದಿನ ನಿಯಮಪೂರ್ವಕವಾಗಿ ರಚಿಸಲಾರಂಭಿಸಿದರೆಂದೂ ಶ್ರೀರಾಮಚರಿತ ಮಾನಸದಲ್ಲಿರುವ ಮುಂದಿನ ಶ್ಲೋಕದಿಂದ ವ್ಯಕ್ತವಾಗುವುದು.

„ ಸಂವತ್ ಸೋರಹ ಸೈ ಇಕತೀಸಾ
ಕರಉಂ ಕಥಾ ಹರಿಪದ ಧರಿ ಸೀಸಾ |
ನವಮೀ ಭೌಮವಾರ್ ಮಧುಮಾಸಾ
ಅವಧಪುರೀ ಯಹ ಚರಿತ ಪ್ರಕಾಸಾ || ”

ಒಟ್ಟಿನಲ್ಲಿ ಅವರು ಶ್ರೀರಾಮಚರಿತ ಮಾನಸವನ್ನು ಬರೆದ ನಂತರವೇ ಶ್ರೀವಾಲ್ಮೀಕಿ ರಾಮಾಯಣವನ್ನು ನಕಲು ಮಾಡಿರುವರೆಂದು ಮುಂದಿನ ಸಂಗತಿಗಳಿಂದ ಸ್ಪಷ್ಟವಾಗುವುದು. ಬಿಜಾಪುರದ ಅದಿಲ್‌ಶಾಹ ಬಾದ್‌ಶಾಹನ ದಾನಾಧ್ಯಕ್ಷನಾದ ಶ್ರೀ ದತ್ತಾತ್ರೇಯ ನೆಂಬ ರಾಮೋಪಾಸಕನು ಕಾಶಿಯಲ್ಲಿ ವಾಸಿಸುತ್ತಿದ್ದನು ಗೋಸ್ವಾಮಿಯವರಿಗೂ ಈತನಿಗೂ ಮೈತ್ರಿಯುಂಟಾಗಿ, ಈತನು ಅವರಿಂದ ವಾಲ್ಮೀಕಿಯ ರಾಮಾಯಣದ ಒಂದು ನಕಲನ್ನು ಬರೆಯಿಸಿದನು ಆ ನಕಲನ್ನು ವಿಕ್ರಮ ಸಂವತ್ ೧೬೪೧ ರಲ್ಲಿ ಬರೆದು ಮುಗಿಸಿದರೆಂದು ಈ ಕಾಶೀನಗರದ ಸರಕಾರಿ ಪುಸ್ತಕ ಭಂಡಾರದಲ್ಲಿರುವ ವಾಲ್ಮೀಕಿಯ ರಾಮಾಯಣದ ಉತ್ತರ ಕಾಂಡದ ನಕಲಿನ ಭಾಗದಿಂದ ಸ್ಪಷ್ಟವಾಗುವುದು (ಶ್ರೀತುಳಸೀದಾಸರ ಹಸ್ತಾಕ್ಷರದ ಚಿತ್ರವನ್ನು ನೋಡಿರಿ )

ರಾಮಚರಿತಮಾನಸವನ್ನು ಬರೆದ ಸ್ವಲ್ಪ ಕಾಲದೊಳಗಾಗಿ ಅದರ ಕೀರ್ತಿಯು ಎಲ್ಲ ಕಡೆಗಳಲ್ಲಿಯೂ ಪಸರಿಸಿತು. ಆಗ ಕಾಶೀನಗರವು ಶೈವ ಮತ್ತು ವೈಷ್ಣವರ ಸಮರಕೇಂದ್ರವಾಗಿದ್ದಿತು ಈ ಬಗೆಯ ಸಾಂಪ್ರದಾಯಿಕ ಜಗಳವು ಹಿಂದೂ ಸಮಾಜವನ್ನು ಜರ್ಜರಿತವಾಗಿ ಮಾಡಿದ್ದಿತು ಕಬೀರಪಂಥ, ನಾನಕಪಂಥ, ದಾದೂಪಂಥ ಎಂಬಿವೇ ಮೊದಲಾದ ಹಲವು ಪಂಗಡದವರು ತಮ್ಮ ತಮ್ಮ ಪಂಥಗಳ ಶ್ರೇಷ್ಠತ್ವವನ್ನೇ ಹೊಗಳಿಕೊಳ್ಳುತ್ತಿದ್ದರು. ಬ್ರಾಹ್ಮಣ ಬ್ರಾಹ್ಮಣೇತರರ ಜಗಳಗಳೂ ವಿಶೇಷ ಪ್ರಬಲಗೊಂಡಿದ್ದವು ಬ್ರಾಹ್ಮಣರು ತಮ್ಮ ವಿದ್ಯೆಯನ್ನು „ ತುಚ್ಛ ” (ದೇಶೀಯ) ಭಾಷೆಯಲ್ಲಿ ಪ್ರಚುರ ಪಡಿಸಲು ಹಿಂದೆಗೆಯುತ್ತಿದ್ದರು। ಮತ್ತೆ ಅನ್ಯ ವರ್ಣ ಮತ್ತು ಜಾತಿಯವರ ಮೇಲೆ ತಮ್ಮ ಮಹತ್ವದ ಅಧಿಕಾರವನ್ನು ಶಾಶ್ವತ ಪಡಿಸಲೆತ್ನಿಸುತ್ತಿದ್ದರು। ಇಂಥಾ ಸಮಯದಲ್ಲಿ ತುಳಸೀದಾಸರು ಶಾಂತಹೃದಯರಾಗಿ ಎಲ್ಲರಲ್ಲಿಯೂ ಒಕ್ಕಟ್ಟನ್ನುಂಟುಮಾಡಲು ಉತ್ಸುಕರಾಗಿದ್ದರು ಅವರು ಬರೆದಿರುವ ಹಲವು ಗ್ರಂಥಗಳು ಇದಕ್ಕೆ ಪ್ರಮಾಣವಾಗಿವ ತಮ್ಮೊಳಗಣ ಅಂತಃಕಲಹದಿಂದ ಹಿಂದುಗಳು ಮಾತ್ರ ವಿಧರ್ಮಿಯರು ಹರಡುತ್ತಿದ್ದ ಬಲೆಯಲ್ಲಿ ಸಿಕ್ಕಿಕೊಳ್ಳುತ್ತಿದ್ದುದನ್ನು ನೋಡಿ, ಅವರು ಎಲ್ಲ ಸಾಂಪ್ರದಾಯಿಕರಲ್ಲಿ ಏಕೀಕರಣ ಭಾವನೆಯನ್ನುಂಟುಮಾಡಲು ಮೊದಲು ಕಾಶಿಯಲ್ಲಿ ಪ್ರಯತ್ನಿಸಿದರು. ಅದರ ಅಸಫಲತೆಯ ಚಿನ್ಹೆಯು ಕಂಡಾಗಲಿಲ್ಲ ಅವರು ಕಾಶಿಯನ್ನು ಬಿಟ್ಟು ಪರ್ಯಟನೆಗೆ ಹೊರಡುತ್ತಿದ್ದರು ಕಾಶಿಯಲ್ಲಿ ಸದ್ಭಕ್ತರಾದ ವಿದ್ವಾಂಸರನೇಕರು ತುಳಸೀದಾಸರ ಸ್ನೇಹಿತರಾಗಿದ್ದರು ಅಕ್ಬರನ ಕಾಲದಲ್ಲಿ ಪ್ರಸಿದ್ಧನಾದ ತೋಡರ

ಮಲ್ಲನೂ ಇವರ ಪರಮ ಭಕ್ತನಾಗಿದ್ದನು ಅವನ ಮರಣಾನಂತರ ಅವನ ಪುತ್ರ ಪೌತ್ರರಲ್ಲಿ ಆಸ್ತಿಯ ವಿಚಾರವಾಗಿ ಜಗಳವುಂಟಾದಾಗ, ತುಳಸೀದಾಸರೇ ಅದನ್ನು ಇತ್ಯರ್ಥಿಸಿದರು. ಅದನ್ನು ಈಗಲೂ "ಪಂಚನಾಮೆ"ಯಲ್ಲಿ ನೋಡಬಹುದು ಗೋಸ್ವಾಮಿಯವರು ನರಕಾವ್ಯವನ್ನೆಂದಿಗೂ ರಚಿಸಲಿಲ್ಲ ಆದರೆ ತೋಡರಮಲ್ಲನ ಮೇಲೆ ಚರಮ ಶ್ಲೋಕಗಳನ್ನು ರಚಿಸಿರುವುದನ್ನು ನೋಡಿದರೆ ಅವನು ರಾಮಭಕ್ತನೂ ರಾಮೋಪಾಸಕನೂ ಆಗಿದ್ದನೆಂದು ತಿಳಿಯುವುದು.

## ರಾಮಚರಿತಮಾನಸದ ಮಹಿಮೆ

ಶ್ರೀಮದ್ಗೋಸ್ವಾಮಿ ತುಳಸೀದಾಸರು ಕಾಶಿಯಲ್ಲಿದ್ದು "ಶ್ರೀರಾಮಚರಿತಮಾನಸ"ವನ್ನು ಮುಗಿಯಿಸಿದಾಗ ಅಲ್ಲಿ ಸ್ವಾಮಿ ಶ್ರೀಮಧುಸೂದನ ಸರಸ್ವತಿ ಎಂಬ ಶಂಕರ ಮತಾನುಯಾಯಿಗಳಾದ ಬಹು ದೊಡ್ಡ ವಿದ್ವಾಂಸರೊಬ್ಬರು ಇದ್ದರು ಅವರೊಂದಿಗೆ ತುಳಸೀದಾಸರ ಶಾಸ್ತ್ರಾರ್ಥವಾಯಿತು. ಅದಕ್ಕೆ ಮುಂಚೆ ಮಧುಸೂಧನ ಸ್ವಾಮಿಯು ತುಳಸೀದಾಸರಲ್ಲಿ ವಿರೋಧ ಭಾವವನ್ನಿಟ್ಟಿದ್ದರು ಆದರೆ ಈ ಶಾಸ್ತ್ರಾರ್ಥದಿಂದ ಅವರಿಗೆ ತುಳಸೀದಾಸರಲ್ಲಿ ವಿಶೇಷ ಆದರ ಭಾವವುಂಟಾಗಿ, ಅವರು ನಮ್ಮ ಕಥಾನಾಯಕರನ್ನು ಪ್ರಶಂಸಿಸಿ,

"ಆನಂದ ಕಾನನೇಹ್ಯಸ್ಮಿನ್ ಜಂಗಮಸ್ತುಲಸೀ ತರುಃ |
ಕವಿತಾಮಂಜರೀ ಯಸ್ಯ ರಾಮಭ್ರಮರ ಭೂಷಿತಾ ||"

ಎಂಬ ಶ್ಲೋಕವನ್ನು ರಚಿಸಿರುವರು ಇದಕ್ಕೆ ಮುಂಚೆ 'ರಾಮಚರಿತಮಾನಸ'ವನ್ನು ಹಿಂದೀ ಭಾಷೆಯಲ್ಲಿ ಬರೆದಿರುವುದರಿಂದ ಸಂಸ್ಕೃತ ಪಂಡಿತರು ಅದನ್ನು ತಾವು ಮನ್ನಿಸಲಾರೆವೆಂದೂ ಮಧುಸೂದನ ಸರಸ್ವತಿಯವರು ಅದಕ್ಕೆ ಒಪ್ಪಿದರೆ ಮನ್ನಣೆಕೊಡುವೆವೆಂದೂ ಹೇಳುತ್ತಿದ್ದರು ಆದರೆ ಈ ಶಾಸ್ತ್ರಾರ್ಥವಾದ ಮೇಲೆ ಪಂಡಿತವರ್ಗದಲ್ಲಿಯೂ ಅದಕ್ಕೆ ಮನ್ನಣೆಯುಂಟಾಯಿತು

ರಾಮಚರಿತಮಾನಸ ವಿಚಾರದಲ್ಲಿ ಮತ್ತೊಂದು ಪ್ರತೀತಿಯುಂಟು ತುಳಸೀದಾಸರು ಮೊದಲಿನಿಂದ ಮಾರುತಿಯ ಉಪಾಸಕರಾಗಿದ್ದರು. ಅವರು ರಾಮಾಯಣವನ್ನು ಬರೆಯುತ್ತ ಬರೆಯುತ್ತ ಬಾಲಕಾಂಡದ ೨೪೪ ನೆಯ ಸೊರಠಾದ ವರೆಗೆ ಬಂದು, ಅಲ್ಲಿ "ಬೂಡ ಸೋ ಸಕಲ ಸಮಾಜ" ಎಂದು ಬರೆಯಲು ಅಲ್ಲಿಗೇ ಅವರ ಲೇಖನಿಯು ನಿಂತುಹೋಯಿತು. ಸಮಾಜದಲ್ಲಿ ವಿಶ್ವಾಮಿತ್ರ, ರಾಮ, ಲಕ್ಷ್ಮಣಾದಿಗಳಿದ್ದರು ಅವರೂ ಮುಳುಗಿದರಲ್ಲ! ಎಂತಹ ಅನರ್ಥವಾಯಿತು! ಎಂದು ಲೇಖನಿಯು ಮುಂದುವರಿಯಲಿಲ್ಲ ಆಗ ಹನುಮಂತನು ಆಕಾಶವಾಣಿಯಲ್ಲಿ "ನಿಲ್ಲಬೇಡ, 'ಚಢೆ ಜೋ ಪ್ರಥಮಹಿ ಮೋಹಬಸ' ಎಂದು ಬರೆ" ಎಂದು ನುಡಿದನಂತೆ! ಮತ್ತೊಂದು ಕಥೆಯು ಪ್ರಸಿದ್ಧವಾಗಿರುವುದು ಯುದ್ಧದಲ್ಲಿ ಲಕ್ಷ್ಮಣ ಶಕ್ತಿಯ ಪ್ರಸಂಗ ಬಂದಾಗ ಶ್ರೀರಾಮನು ತನ್ನ ಅಂತರಂಗ ಭಕ್ತನಾದ ಹನುಮಂತನನ್ನು ಕುರಿತು, "ನಾನು ವಾಲ್ಮೀಕಿಯು ಬರೆದಿರುವಂತೆ ಆಚರಿಸುವೆನು" ಎಂದು ಹೇಳಿದನು; ಅದನ್ನು ಕೇಳಿ ಹನುಮಂತನು ತನ್ನ ಉಗುರಿಂದ ಶಿಲೆಯ ಮೇಲೆ ರಾಮಾಯಣವೊಂದನ್ನು

ಬರೆದು ಶ್ರೀರಾಮನ ಮುಂದಿಟ್ಟನು. ಆಗ ಶ್ರೀರಾಮನು " ಈ ಗ್ರಂಥವು ಚೆನ್ನಾಗಿದೆ. ಆದರೆ ನಾನು ವಾಲ್ಮೀಕಿ ರಾಮಾಯಣದಲ್ಲಿ ನನ್ನ ಹೆಸರನ್ನು (ಸಹಿ) ಬರೆದಿರುವೆನು. ಇದಕ್ಕೆ ನೀನು ವಾಲ್ಮೀಕಿಯಿಂದ ಹೆಸರು ಬರೆಯಿಸು " ಎಂದನು ಹನುಮಂತನು ಅದನ್ನು ವಾಲ್ಮೀಕಿಗೆ ತೋರಿಸಿದನು ವಾಲ್ಮೀಕಿಯು ಅದನ್ನು ನೋಡಿ ಅದರ ಶ್ರೇಷ್ಠತ್ವವನ್ನು ತಿಳಿದು, ಅದರ ಪ್ರಚಾರದಿಂದ ತಾನು ರಚಿಸಿದ ರಾಮಾಯಣವು ನಷ್ಟವಾಗುವುದೆಂದು ಭಾವಿಸಿ, ಮಾರುತಿಯನ್ನು ಸ್ತುತಿಸಲಾರಂಭಿಸಿದನು ಅದರಿಂದ ಹನುಮಂತನು ಪ್ರಸನ್ನನಾಗಿ " ವರವನ್ನು ಬೇಡು '' ಎಂದನು ಆಗ ವಾಲ್ಮೀಕಿಯು " ನಿನ್ನ ರಾಮಾಯಣವನ್ನು ಸಮುದ್ರದಲ್ಲಿ ಮುಳುಗಿಸಿಬಿಡು '' ಎಂದು ಕೇಳಿಕೊಂಡನು. ಆಗ ಹನುಮಂತನು " ಇದನ್ನು ನಾನು ಸಮುದ್ರದಲ್ಲಿ ಹಾಕುವೆನು ಆದರೆ ಕಲಿಯುಗದಲ್ಲಿ ತುಳಸೀದಾಸನೆಂಬ ಬ್ರಾಹ್ಮಣನ ನಾಲಿಗೆಯ ಮೇಲೆ ಕುಳಿತು ಹಿಂದೀ ಭಾಷೆಯ ರಾಮಾಯಣವನ್ನು ಹೇಳುವೆನು ಅದರ ಪ್ರಚಾರದಿಂದ ನಿನ್ನ ರಾಮಾಯಣವು ನಷ್ಟಪ್ರಾಯವಾಗುವುದು '' ಎಂದು ಹೇಳಿದನಂತೆ!

## ಯೌಗಿಕ ಶಕ್ತಿ ಮತ್ತು ಚಮತ್ಕಾರಗಳು

ಮನುಷ್ಯನು ತನ್ನ ಪ್ರತಿಯೊಂದು ಕರ್ಮವನ್ನು ಚಿತ್ತೈಕಾಗ್ರತೆಯಿಂದಲೂ ಕುಶಲತೆಯಿಂದಲೂ ಮಾಡಬೇಕಾದರೆ ಅದಕ್ಕೆ ಯೋಗಬಲವಿದ್ದೇ ಇರಬೇಕು. ಕೇವಲ ಮೂಗು ಹಿಡಿದು ಪ್ರಾಣಾಯಾಮ ಮಂತ್ರವನ್ನುಚ್ಚರಿಸುವುದು ಯೋಗವೆನಿಸಲಾರದು ಯೋಗವೆಂದರೆ " ಯೋಗಃ ಕರ್ಮಸು ಕೌಶಲಮ್, " ಎಂದು ಶ್ರೀಕೃಷ್ಣನು ಸಾರಿರುವಂತೆ, ತಾನು ಮಾಡುವ ಕರ್ಮದಲ್ಲಿ ಕುಶಲತೆಯನ್ನು ತೋರುವುದಾಗಿರುವುದು. ಈ ಕರ್ಮ ಕೌಶಲ್ಯವೊಂದು ಬಂದರೆ ಅದರೊಂದಿಗೆ ಅನೇಕ ಯೌಗಿಕಶಕ್ತಿಗಳು ತಾವಾಗಿಯೇ ಲಭಿಸುವವು ಅವುಗಳಿಗಾಗಿ ಹುಡುಕಿಕೊಂಡು ಹೋಗಬೇಕಾಗಿಲ್ಲ ಆದರೆ ಆ ಶಕ್ತಿಯನ್ನು ಲೋಕಸಂಗ್ರಹಾರ್ಥವಾಗಿ ಉಪಯೋಗಿಸುವವನೇ ಮಹಾತ್ಮನೆನಿಸುವನು

ಮಹಾತ್ಮಾ ತುಳಸೀದಾಸರು ಶ್ರೀರಾಮದರ್ಶನ ಕಾರ್ಯದಲ್ಲಿ ಅನೇಕ ಸಂಕಷ್ಟಗಳನ್ನನುಭವಿಸಿ, ತಮ್ಮ ಯೋಗ ಬಲವನ್ನು ಹೆಚ್ಚಿಸಿಕೊಂಡಿದ್ದರು. ಇದರಿಂದ ಅವರಿಗೆ ತಿಳಿಯದಂತೆ ಅನೇಕ ಯೌಗಿಕ ಶಕ್ತಿಗಳು ಅವರಲ್ಲಿ ನೆಲೆಗೊಂಡಿದ್ದವು

ಒಂದು ದಿನ ಕಾಶಿಯಲ್ಲಿ ಅವರು ರಾತ್ರಿ ಮನೆಗೆ ಹಿಂದಿರುಗಿ ಬರುತ್ತಿರುವಾಗ ದಾರಿಯಲ್ಲಿ ಕೆಲವರು ಕಳ್ಳರು ಬಂದು ಮುತ್ತಿದರು ಭಗವಚ್ಚಿಂತಾ ಮಗ್ನರಾಗಿದ್ದ ಅವರು ಕೂಡಲೆ ಮಾರುತಿಯನ್ನು ಸ್ತುತಿಸಲು, ತಕ್ಷಣವೇ ಮಾರುತಿಯು ಅಲ್ಲಿ ಪ್ರಕಟನಾದನು. ಆತನ ಭೀಮಸ್ವರೂಪವನ್ನು ನೋಡಿ ಕಳ್ಳರು ಓಡಿಹೋದರು.

ಮತ್ತೊಂದು ದಿನ, ಇವರ ಬಳಿಗೆ ಅನೇಕ ರಾಜರು ಬರುತ್ತಿರುವುದರಿಂದ ಇವರಲ್ಲಿ ವಿಶೇಷ ಧನವಿರಬಹುದೆಂದು ಭಾವಿಸಿ, ಅರ್ಧರಾತ್ರಿ ಸಮಯದಲ್ಲಿ ಕೆಲವು ಜನ ಕಳ್ಳರು ಬಂದರು. ಆಗ ಇವರ ಮಂದಿರದ ಮುಂದೆ ಶ್ಯಾಮಗೌರಾಂಗ ಕಾಯದ ಇಬ್ಬರು ವ್ಯಕ್ತಿಗಳು ಕಾವಲಾಗಿದ್ದುದನ್ನು ನೋಡಿ ಅವರು ಹಿಂದಿರುಗಬೇಕಾಯಿತು. ಮರುದಿನ ಆ ಕಳ್ಳರು

ಶ್ರೀ ತುಳಸೀದಾಸ ರಾಮಾಯಣ:—



ಶ್ರೀ ವಾಲ್ಮೀಕಿ ಮಹಾಮುನಿಯು ರಾಮಾಯಣವನ್ನು ರಚಿಸುತ್ತಿರುವರು.

ಸಾಧುವೇಷದಲ್ಲಿ ಬಂದು ಇವರನ್ನು ಕುರಿತು "ಸ್ವಾಮಿ ತಮ್ಮ ಮನೆಯ ಮುಂದೆ ರಾತ್ರಿ ಇಬ್ಬರು ಶ್ಯಾಮಗೌರಾಂಗರು ಕಾವಲಿರುತ್ತಾರಲ್ಲ, ಅವರು ಯಾರು ?" ಎಂದು ಕೇಳಿದರು. ಅದನ್ನು ಕೇಳಿ ತುಳಸೀದಾಸರು ಆಶ್ಚರ್ಯಪಟ್ಟು ಆನಂದಾಶ್ರುಗಳನ್ನು ಸುರಿಸುತ್ತ "ನನಗೋಸ್ಕರ ಪ್ರಭುವು ಇಷ್ಟು ತೊಂದರೆ ತೆಗೆದುಕೊಳ್ಳಬೇಕಾಯಿತೆ?" ಎಂದು ಹೇಳಿ ತಮ್ಮಲ್ಲಿದ್ದುದನ್ನೆಲ್ಲ ಆ ಸಾಧುರೂಪದಲ್ಲಿದ್ದ ಕಳ್ಳರ ಮುಂದಿಟ್ಟರು. ಈ ಘಟನೆಯಿಂದ ಆಶ್ಚರ್ಯ ಹೊಂದಿ ಸಾಧುವೇಷದಲ್ಲಿದ್ದವರು ತುಳಸೀದಾಸರ ಶಿಷ್ಯರಾಗಿ ಮುಂದೆ ನಿಜವಾದ ಸಾಧುಗಳಾದರು

ಮತ್ತೊಂದು ಸಮಯದಲ್ಲಿ ಕಾಶಿಯಲ್ಲಿರುವಾಗ ಒಬ್ಬ ಬ್ರಾಹ್ಮಣನು ಸತ್ತು ಹೋದನು. ಆಗ ಅವನ ಪತ್ನಿಯು ಅಲಂಕಾರಗಳನ್ನು ಧರಿಸಿ ಪತಿಯೊಂದಿಗೆ "ಸತಿ" ಯಾಗಿ ಹೋಗಲು ಹೊರಟಿದ್ದಳು ಮಾರ್ಗ ಮಧ್ಯದಲ್ಲಿ ತುಳಸೀದಾಸರು ಬರುತ್ತಿರಲು, ಆ ಸ್ತ್ರೀಯು ಅವರ ಅಡಿಗಳಿಗೆರಗಿದಳು ತುಳಸೀದಾಸರು "ಸೌಭಾಗ್ಯವತಿಯಾಗಿರು" ಎಂದು ಆಶೀರ್ವದಿಸಿದರು! ಆಗ ಆ ಸ್ತ್ರೀಯು "ಭಗವಾನ್, ನಾನು ಅಭಾಗ್ಯಳು ತಮ್ಮ ಆಶೀರ್ವಾದವು ಸಫಲವಾಗಿ, ನನಗೆ ಪತಿಯು ದೊರೆಯುವಂತೆ ಅನುಗ್ರಹಿಸಿರಿ ನಾನು "ಸತಿ" ಹೋಗಲು ಸಿದ್ಧಳಾಗಿರುವೆನು ನನ್ನ ನಾಥನು ಆಗಲೇ ಪರಾಂಧಾಮವನ್ನೈದಿದರು" ಎಂದಳು ಆಗ ತುಳಸೀದಾಸರು ಎಲ್ಲ ಸಮಾಚಾರವನ್ನು ತಿಳಿದು, "ಅಮ್ಮಾ, ನನಗೆ ತಿಳಿಯದಂತೆ ಶ್ರೀರಾಮನೇ ಈ ಮಾತುಗಳನ್ನಾಡಿಸಿದನು. ಇನ್ನು ನೀನು ರಾಮಭಜನೆಯನ್ನು ಮಾಡುತ್ತ ಉಳಿದ ಆಯುಷ್ಯವನ್ನು ಕಳೆ ಸತೀತ್ವದಿಂದಲೇ ಸ್ವರ್ಗವು ಸಿಕ್ಕುವುದು ಸ್ವರ್ಗದ ಆಸೆಯನ್ನು ಮಾಡಬೇಡ ಸ್ವರ್ಗವೇ ಈ ಮರ್ತ್ಯಲೋಕಕ್ಕೆ ಇಳಿದು ಬರಬೇಕಾಗುವುದು," ಎಂದರು ಅದಕ್ಕೆ ಆ ಪತಿವ್ರತೆಯು "ಭಗವನ್, ನನಗೆ ಸ್ವರ್ಗಬೇಡ, ನನಗೆ ಪತಿಯೇ ಬೇಕು ನಾನು ಸತೀ ಹೋಗುವುದರಿಂದ ಪತಿಯ ಸನ್ನಿಧಿಯನ್ನೈದುವೆನು," ಎಂದಳು. ಆಗ ತುಳಸೀದಾಸರು "ರಾಮನಾಮ ಜಪದಿಂದ ನಿನ್ನ ಸ್ವಾಮಿಯೂ, ಸ್ವಾಮಿಯ ಸ್ವಾಮಿಯಾದ ಶ್ರೀರಾಮನೂ ಸಿಕ್ಕುವರು ನೀನು ರಾಮನಾಮವನ್ನು ಜಪಿಸುತ್ತ ಜೀವನ ಮಾಡು 'ಸತೀ' ಹೋಗಬೇಡ ರಾಮನು ಒಳ್ಳೆಯದನ್ನು ಮಾಡುವನು," ಎಂದು ಹೇಳಿ ತಾವೂ ಸ್ಮಶಾನಕ್ಕೆ ಹೋಗುತ್ತಿದ್ದವರ ಜತೆಯಲ್ಲಿ ಗಂಗಾತೀರಕ್ಕೆ ಹೊರಟರು. ಶವವನ್ನು ಹೊತ್ತಿದ್ದವರು ಆಗಲೇ ಸ್ಮಶಾನವನ್ನು ಸೇರಿದ್ದರು. ಅಲ್ಲಿ ಮೃತನಾಗಿದ್ದ ಬ್ರಾಹ್ಮಣನು ಎದ್ದು ಕುಳಿತಿದ್ದನು. ಜನರು ಅವನ ಬಂಧನವನ್ನೆಲ್ಲ ಕಿತ್ತಿಹಾಕಿದ್ದರು ಈ ಘಟನೆಯಿಂದ ರಾಮನಾಮದ ಮೇಲೆ ಎಲ್ಲರಿಗೂ ವಿಶ್ವಾಸವುಂಟಾಯಿತು ಮತ್ತೆ ಅಂದಿನಿಂದ ಈಗಲೂ ಕಾಶಿಯಲ್ಲಿ ಹಿಂದೂಗಳು ಶವವನ್ನು ಹೊತ್ತುಕೊಂಡು ಹೋಗುವಾಗ "ರಾಮನಾಮ ಸತ್ಯ ಹೈ" ಎಂದು ಹೇಳುತ್ತ ಹೋಗುವುದು ವಾಡಿಕೆಯಾಗಿದೆ. ಆದಿನ ಸ್ಮಶಾನದಲ್ಲಿದ್ದವರೆಲ್ಲರೂ ತುಳಸೀದಾಸರ ಶಿಷ್ಯರಾದರು

ಈ ಚಮತ್ಕಾರಗಳಿಂದಲೂ ಭಕ್ತಿಯಿಂದಲೂ ಮತ್ತು ಸತ್ಸಂಗಕ್ಕೋಸ್ಕರವೂ ಜನರು ಇವರನ್ನು ಮುತ್ತಲಾರಂಭಿಸಿದರು. ಈ ಗಲಭೆಯನ್ನು ಸೈರಿಸಲಾರದೇ ಅವರು ಪ್ರಹ್ಲಾದ ಘಾಟನ್ನು ಬಿಟ್ಟು ಚಿತ್ರಕೂಟ ಯಾತ್ರೆಗೆ ತೆರಳಿದರು. ಇದಕ್ಕೆ ಮುಂಚೆ ಒಂದುದಿನ ಒಬ್ಬ ಭಂಗಿಯು ಅಯೋಧ್ಯಾ, ಸರಯೂ ಮತ್ತು ರಾಮನಾಮವನ್ನು ಜಪಿಸುತ್ತಿರುವುದನ್ನು

ಇವರು ಕೇಳಿದರು. ಆಗ ರಾಮನಾಮದ ಪತಿತ ಪಾವನತ್ವದಲ್ಲಿ ದೃಢವಿಶ್ವಾಸವುಳ್ಳ ಅವರು ಅವನನ್ನು ಅಪ್ಪಿಕೊಂಡು, ಅವನಿಗೆ ಪ್ರಸಾದವನ್ನು ಕೊಟ್ಟರು. ತುಳಸೀದಾಸರ ಈ ಆಚರಣೆಯನ್ನು ನೋಡಿ ಬ್ರಾಹ್ಮಣರೆನಿಸಿಕೊಂಡವರನೇಕರು ಸಹಿಸಲಾರದೇ ಹೋದರು. ಆ ಸಮಯದಲ್ಲಿ ವಿರೋಧಿಗಳನ್ನು ಉಪೇಕ್ಷಿಸಿ ತುಳಸೀದಾಸರು ಈ ಕವಿತ್ವವನ್ನು ಹೇಳಿರುವರು

" ಮೇರೇ ಪಾಂತಿನ ಚಹೌ ಕಾಹೂಕೀ ಜಾತಿಪಾಂತಿ ಮೇರೇ ಕೋಊ ಕಾಮಕೊ ನಹೌಂ ಕಾಹೂ ಕೇ ಕಾಮಕೇ| ಲೋಕ ಪರಲೋಕ ರಘುನಾಥಹೀಂಕೆ ಹಾಥ ಸಬ್ ಭಾರೀ ಹೈ ಭರೋಸೋ ತುಲಸೀಕೆ ಏಕ್ ನಾಮಕೋ|| ಅತಿಹೀಂ ಅಯಾನೆ ಉಪಖಾನೋ ನಹಿಂ ಬೂಝೌ ಲೋಗ ಸಾಹಬಕೋ ಗೋಂಗೋತ್ರ ಹೋತ ಹೈ ಗುಲಾಮಕೋ| ಸಾಧುಕೈ ಅಸಾಧುಕೈ ಭಲೀಕೈ ಪೋಚ ಸೋಚ ಕಹಾ ಕಾಹೂ ಕೇ ಹೌಂ ದ್ವಾರ ಪರೌ ಜೋ ಹೌಂ ಸೋ ಹೌಂ ರಾಮಕೋ|| ಕೋಊ ಕಹೈ ಕರತ ಕುಸಾಜ ದಗಾಬಾಜ್ ಬಡೋ ಕೋಊ ಕಹೈ ರಾಮಕೋ ಗುಲಾಮ ಖರೋ ಖೂಬ್ ಹೈ| ಸಾಧುಜಾನೈ ಮಹಾಸಾಧು ಖಲ ಜಾನೈ ಮಹಾಖಲಬಾನೀ ಝೂಟೀಸಾಂಚೀ ಕೋಟಿ ಉಠತ ಹಬೂಬ್ ಹೈ| ಚಹ- ನ ಕಾಹುಸೊಂ ಕಹತ ನಾ ಕಾಹುಕೋ ಕಛು ಸಬಕೀ ಸಹತ ಉರ ಅಂತರ ನ ಊಬ್ ಹೈ| ತುಲಸೀಕೋ ಭಲೋ ಪೋಚ್ ಹಾಥ್ ರಘುನಾಥ ಹೀಕೇ ರಾಮಕೀ ಭಗತಿ ಭೂಮಿ ಮೇರೀ ಮತಿ ದೂಬ ಹೈ " ಯಾರ ಪಂಕ್ತಿಯನ್ನೂ ಅಪೇಕ್ಷಿಸೆನು ಎಲ್ಲಿಯ ಜಾತಿಯೊ? ಎಲ್ಲಿಯ ಪಂಕ್ತಿಯೊ? ನನ್ನ ಕೆಲಸಕ್ಕೆ ಆವುದೂ ಬಾರದು, ನಾನೂ ಯಾವ ಕೆಲಸಕ್ಕೂ ಬಾರದವನು, (ನನ್ನ) ಇಹ ಲೋಕವೂ ಪರಲೋಕವೂ ರಘುನಾಥನ ಕೈಯಲ್ಲಿರುವುದು. ತುಳಸೀದಾಸನಿಗೆ ರಾಮನ ನಾಮದಲ್ಲಿ ತುಂಬಾ ಭರವಸೆಯಿದೆ|| ಅತಿ ಅಜ್ಞಾನಿಗಳಾದರು ಏನೇನೋ ಮಾತನಾಡುವರು, ಜನರು ಪ್ರಭುವನ್ನು ತಿಳಿದುಕೊಳ್ಳುವುದಿಲ್ಲ (ಶ್ರೀರಾಮನ) ದಾಸನಾದವನಿಗೆ ಜಾತಿ ಕುಲ (ಗೋತ್ರ) ಗಳು ಮುಳುಗಿ ಹೋಗಿರುವವು| ಸಾಧುಗಳೇ ಆಗಿರಲಿ ದುಷ್ಟರೇ ಆಗಿರಲಿ, ಒಳ್ಳೆಯವರೇ ಆಗಿರಲಿ ನೀಚರೇ ಆಗಿರಲಿ, ನಾವೆಂಥವರೇ ಆಗಲಿ, ಶ್ರೀರಾಮಚಂದ್ರನ ಮನೆಯ ಬಾಗಿಲಲ್ಲಿ ಬಿದ್ದಿರುವವರು ಅವರು ಕೆಟ್ಟ ಕೆಲಸ ಮಾಡುವವರು, ಇವರು ಮೋಸ ಮಾಡುವವರು, ಇವರು ದೊಡ್ಡವರು ಎಂದು ಯಾರು ಏನು ಹೇಳಿದರೂ ರಾಮನ ದಾಸನಾದವನಿಗೆ ಸರ್ವವೂ ಶುಭವಾಗಿರುವುದು ಸಾಧುವಾದವರು ಮಹಾಸಾಧುವನ್ನು ಗುರುತಿಸುವರು ಖಲರು ಮಹಾ ಖಲರನ್ನು ಗುರುತಿಸುವರು ಸತ್ಯಮಿಥ್ಯ ಮಿಶ್ರಿತವಾದ ನೂರಾರು ನಿಂದೆಗಳು ಹುಟ್ಟುವವು, ಆದರೆ ಅದೇ ಸತ್ಯವಲ್ಲ| ನಾನು ಏನನ್ನೂ ಅಪೇಕ್ಷಿಸುವುದಿಲ್ಲ ಏನನ್ನೂ ಹೇಳುವುದಿಲ್ಲ, ಎಲ್ಲವನ್ನೂ ಹೃದಯದಲ್ಲಿ ಸಹಿಸುವೆನು ಯಾವುದರಿಂದಲೂ ನಾನು ಉದ್ವಿಗ್ನನಾಗುವುದಿಲ್ಲ, ತುಲಸೀದಾಸನ ಕಲ್ಯಾಣವೂ ಅಕಲ್ಯಾಣವೂ ರಘುನಾಥನಿಗೆ ಸೇರಿದುದು ನನ್ನ ಮತಿಯು ದುರ್ಬಲವಾಗಿದೆ, ಶ್ರೀರಾಮ ಭಕ್ತಿಯೇ ನನ್ನ ಕ್ಷೇತ್ರವಾಗಿರುವುದು||" ಇದರಿಂದ ಇವರ ಹೃದಯದ ವಿಶಾಲತ್ವವೂ ದೃಢಭಕ್ತಿಯೂ ವ್ಯಕ್ತವಾಗುವುದು

ಇವರು ಚಿತ್ರಕೂಟದ ಯಾತ್ರೆ ಮಾಡುತ್ತಿದ್ದಾಗ ಚುನಾರ ಎಂಬ ವಿಂಧ್ಯಪ್ರಾಂತ್ಯದ ರಾಜನು, ಗೋಸ್ವಾಮಿಯವರನ್ನು ವಿಶೇಷ ಆದರದಿಂದ ತನ್ನ ರಾಜಧಾನಿಗೆ ಕರೆದುಕೊಂಡು ಹೋದನು ತುಳಸೀದಾಸರು ಅಲ್ಲಿಯೇ ಕೆಲವು ದಿನಗಳಿದ್ದರು ಅದೇ ಸಮಯದಲ್ಲಿ ಯಾವುದೊ ಅಪವಾದದ ನಿಮಿತ್ತದಿಂದ ದಿಲ್ಲಿಯ ಸಮ್ರಾಟನು ಆ ರಾಜನನ್ನು ಸೆರೆಯಾಳಾಗಿ ಕರೆಯಿಸಿ

ಶ್ರೀ ತುಳಸೀದಾಸ ರಾಮಾಯಣ:—



ಶ್ರೀ ತುಳಸೀದಾಸರಿಗೆ ಶ್ರೀರಾಮನು ಭೇಟಿಯಾಗಿ ತಾನೆ ತಿಲಕವನ್ನಿಟ್ಟುಕೊಳ್ಳುತ್ತಿರುವುದು.

ಕೊಂಡನು ತುಳಸೀದಾಸರು ಆ ರಾಜನ ಕಲ್ಯಾಣಾರ್ಥವಾಗಿ ರಾಮನಾಮವನ್ನು ಜಪಿಸಲಾರಂಭಿಸಿದರು ಅತ್ತ ಸಮ್ರಾಟನು ಆ ರಾಜನನ್ನು ಕಂಡ ಕೂಡಲೆ ಅವನನ್ನು ಶಿಕ್ಷಿಸುವುದಕ್ಕೆ ಬದುಲಾಗಿ, ವಿಶೇಷವಾಗಿ ಸನ್ಮಾನಿಸಿ, ಅವನ ಅಧಿಕಾರವನ್ನು ಹೆಚ್ಚಿಸಿ, ಹಿಂತಿರುಗಿ ಕಳುಹಿಸಿದನು

ವಿಂಧ್ಯಪ್ರಾಂತ್ಯದಲ್ಲಿ ಮತ್ತಿಬ್ಬರು ರಾಜರಿದ್ದರು. ಇವರಿಬ್ಬರೂ ತಮಗೆ ಗಂಡು ಮತ್ತು ಹೆಣ್ಣು ಮಕ್ಕಳು ಹುಟ್ಟಿದರೆ ಪರಸ್ಪರ ಲಗ್ನಮಾಡಿಕೊಳ್ಳುವಂತೆ ಪ್ರತಿಜ್ಞೆ ಮಾಡಿಕೊಂಡಿದ್ದರು ಆದರೆ ಇಬ್ಬರಿಗೂ ಹೆಣ್ಣು ಮಕ್ಕಳೇ ಹುಟ್ಟಿದರು ಅವರಲ್ಲೊಬ್ಬನು ಲೋಭವಶನಾಗಿ ತನಗೆ ಪುತ್ರೋತ್ಸವಾಯಿತೆಂದು ಸುದ್ದಿಯನ್ನು ಹಬ್ಬಿಸಿದನು ಕೊನೆಗೆ ಈ ಗುಟ್ಟು ರಟ್ಟಾಗಲು ಮೋಸಹೋದ ರಾಜನು ಮೋಸಮಾಡಿದ ರಾಜನ ಮೇಲೆ ಕೋಪದಿಂದ ದಂಡೆತ್ತಿ ಬಂದನು ಕಪಟಿಯಾದ ರಾಜನು ಯುದ್ಧದಲ್ಲಿ ಸೋತು, ತುಳಸೀದಾಸರಿಗೆ ಶರಣಾಗತನಾಗಿ ಬಂದನು ಗೋಸ್ವಾಮಿಗಳು ಪುರುಷ ರೂಪಧಾರಿಯಾದ ರಾಜ ಕನ್ಯೆಗೆ ಭಗವಂತನ ಚರಣಾಮೃತವನ್ನು ಪಾನಮಾಡಿಸಿ, ಪ್ರಸಾದವನ್ನು ತಿನ್ನಿಸಿದರು ಆ ಕನ್ಯೆಯು ಪುರುಷ ರೂಪವನ್ನು ಕಳೆದಳು ಅಷ್ಟರಲ್ಲಿ ಮತ್ತೊಬ್ಬ ರಾಜನು ಸೇನಾಸಮೇತನಾಗಿ ಅಲ್ಲಿಗೆ ಬಂದನು ಈ ಚಮತ್ಕಾರದಿಂದ ಅವರ ಕದನವು ನಿಂತಿತು ಇಬ್ಬರೂ ಸಮಾಧಾನದಿಂದ ಸಂಧಿ ಮಾಡಿಕೊಂಡರು

ವಿಂಧ್ಯಪ್ರಾಂತದಿಂದ ಬೀಳ್ಕೊಂಡು ಗೋಸ್ವಾಮಿ ತುಳಸೀದಾಸರು ಚಿತ್ರಕೂಟಕ್ಕೆ ಹೋಗಿ ಅಲ್ಲಿ ಕೆಲವುಕಾಲ ವಾಸಿಸಿದರು ಇವರು ಅಲ್ಲಿದ್ದಾಗ ಒಂದುದಿನ ಒಬ್ಬ ದರಿದ್ರ ಬ್ರಾಹ್ಮಣನು ಮಂದಾಕಿನಿ ನದಿಯಲ್ಲಿ ಬಿದ್ದು ಆತ್ಮಹತ್ಯೆಯನ್ನು ಮಾಡಿಕೊಳ್ಳಲೆತ್ನಿಸುತ್ತಿದ್ದನು. ಗೋಸ್ವಾಮಿಗಳು ಅದನ್ನು ನೋಡಿ, ಅವನನ್ನು ತಡೆದು ಅವನು ಮಾಡುತ್ತಿದ್ದ ಕಾರ್ಯದ ನಿಃಸಾರತೆಯ ವಿಚಾರವಾಗಿ ಎಷ್ಟೋ ಸಮಾಧಾನವನ್ನು ಹೇಳಿದರು ಅವನು ಕೇಳಲಿಲ್ಲ. ಆಗ ಗೋಸ್ವಾಮಿಗಳು ಸ್ನಾನಮಾಡಿ, ಅಲ್ಲಿಯೇ ಗಂಧವನ್ನು ತೇಯುತ್ತ, ಶ್ರೀರಾಮನನ್ನು ಸ್ತುತಿಸಲಾರಂಭಿಸಿದರು. ಆಗ ಶ್ರೀರಾಮನು ಲಕ್ಷ್ಮಣ ಸಮೇತ ಪ್ರಸನ್ನನಾದನು ಮತ್ತೆ ಅದೇ ಸಮಯದಲ್ಲಿ ಮಂದಾಕಿನಿಯೊಳಗಣಿಂದ ಬಂದು ದೊಡ್ಡ ಶಿಲೆಯು ಮೇಲಕ್ಕೆದ್ದಿತು. ಅದು ಈಗಲೂ « ದಾರಿದ್ರ್ಯಮೋಚನ ಶಿಲೆ » ಯೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ

ಚಿತ್ರಕೂಟದಿಂದ ಗೋಸ್ವಾಮಿಗಳು ಅಯೋಧ್ಯೆಗೆ ತೆರಳಿದರು. ಅಲ್ಲಿ ಭಕ್ತಶ್ರೇಷ್ಠರೂ ಕವಿಗಳೂ ಆದ ಮುಕ್ತಾಮಣಿ ದಾಸರನ್ನು ಕಂಡು ಅವರೊಂದಿಗೆ ಕೆಲವು ದಿನಗಳಿದ್ದರು ಅಲ್ಲಿಂದ ಅವರು ಬೇರೆ ಬೇರೆ ಪುಣ್ಯಸ್ಥಳಗಳನ್ನು ಸಂದರ್ಶಿಸಿ, ಮತ್ತೆ ಕಾಶಿಗೆ ಬಂದರು ಕಾಶಿಯಲ್ಲಿ ಕೆಲವು ದಿನಗಳನ್ನು ಶಾಂತವಾಗಿ ಕಳೆದರು ಆದರೆ ಗೋಸ್ವಾಮಿಗಳು ಹಿಂತಿರುಗಿ ಬಂದರೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಅವರ ದರ್ಶನಕ್ಕೋಸ್ಕರ ಹಳೆಯ ಭಕ್ತರೂ, ಅಭಿಮಾನಿಗಳೂ ಬಂದು ಮುತ್ತಲಾರಂಭಿಸಿದರು ಇವರ ವಿರೋಧಿಗಳು ಮತ್ತು ಈರ್ಷಾಳುಗಳಿಗೆ ಇದರಿಂದ ಶಿರೋವೇದನೆಯುಂಟಾಯಿತು. ಸ್ವಾರ್ಥಸಾಧಕರೂ ಭಕ್ತರಂತೆ ನಟಿಸುತ್ತ ಇವರನ್ನು ಮುತ್ತಿರುತ್ತಿದ್ದರು.

ಕಾಶಿಯಲ್ಲಿ ಒಬ್ಬ ಬ್ರಾಹ್ಮಣ ಸ್ತ್ರೀಯು ಜೀವಿಕಾವಿಹೀನಳಾಗಿ, ವಿಶೇಷ ದುಃಖದಲ್ಲಿದ್ದಳು ಅವಳು ಗೋಸ್ವಾಮಿಯವರ ಬಳಿಗೆ ಆಗಿಂದಾಗ್ಗೆ ಬರುತ್ತಿದ್ದಳು ಗಂಗಾತೀರದಲ್ಲಿ ಅವಳ ಜಮೀನು ಬಹಳ ಚಿಕ್ಕದಾಗಿತ್ತು. ಗೋಸ್ವಾಮಿಯವರು ಅವಳಿಗೋಸ್ಕರ

ಗಂಗಾನದಿಯನ್ನು ಕುರಿತು “ತಾಯಿ, ಗಂಗೆ! ಈ ಬಡಪ್ರಾಣಿಯ ಜಮೀನನ್ನು ನೀನು ಆಕ್ರಮಿಸಿಕೊಂಡಿರುವೆ ಅವಳ ಮೇಲೆ ಕರುಣೆಯಿಟ್ಟು ಅವಳಿಗೆ ಸ್ವಲ್ಪ ಭಾಗವನ್ನಾದರೂ ಬಿಟ್ಟುಕೊಡಬಾರದೆ?” ಎಂದು ಪ್ರಾರ್ಥಿಸಲು, ಗಂಗಾನದಿಯು ಅವಳಿಗೋಸ್ಕರ ವಿಶೇಷ ಜಮೀನನ್ನು ಬಿಟ್ಟು ಕೆಳಕ್ಕೆ ಸರಿಯಿತು!

ಕಾಶಿಯಲ್ಲಿ ಒಬ್ಬ ವೇಶ್ಯೆಯು ಗೋಸ್ವಾಮಿಯವರ ಭಕ್ತೆಯಾಗಿದ್ದಳು ಅವಳಿಗೆ ಅವರು ಉಪದೇಶ ಮಾಡಿದರು ಮುಂದೆ ಅವಳು ತನ್ನ ಉದ್ಯೋಗವನ್ನು ಬಿಟ್ಟು ಭಗವದ್ಭಜನೆಯಲ್ಲಿ ಮಗ್ನಳಾಗಿ ಸಂತಳೆನಿಸಿಕೊಂಡಳು.

ವನಖಂಡೀ ಎಂಬ ಸ್ಥಳದಲ್ಲಿ ಒಂದು ಪ್ರೇತವಿದ್ದಿತು ಗೋಸ್ವಾಮಿಗಳ ದರ್ಶನ ಮತ್ತು ರಾಮನಾಮದ ಉಪದೇಶದಿಂದ ಅದು ಪ್ರೇತಯೋನಿಯಿಂದ ಮುಕ್ತವಾಯಿತು

## ಬಾದಶಹಾನು ಗೋಸ್ವಾಮಿಗಳನ್ನು ಸೆರೆಯಲ್ಲಿಟ್ಟುದು

ಕಾಶಿಯಲ್ಲಿ ಮೃತನಾದವನನ್ನು ಬದುಕಿಸಿದನಂತರ ಆ ಸಮಾಚಾರವು ಡಿಲ್ಲಿಯ ಬಾದಶಾಹನ ಕಿವಿಯವರೆಗೂ ಸೇರಿತು ಅವನು ಗೋಸ್ವಾಮಿಗಳನ್ನು ಕರೆಯಿಸಿ “ಏನಾದರೂ ಚಮತ್ಕಾರಗಳನ್ನು ಮಾಡಿ ತೋರಿಸಬೇಕು” ಎಂದನು ಅದಕ್ಕೆ ಗೋಸ್ವಾಮಿಗಳು “ನನಗೆ ರಾಮನಾಮ ಜಪದ ವಿನಾ ಮತ್ತಾವ ಚಮತ್ಕಾರವೂ ಗೊತ್ತಿಲ್ಲ” ವೆಂದರು ಆಗ ಬಾದಶಾಹನು ಅವರನ್ನು ಸೆರೆಯಲ್ಲಿಡಿಸಿ, “ನೀವು ಚಮತ್ಕಾರಗಳನ್ನು ಮಾಡಿ ತೋರಿಸುವವರೆಗೆ ಬಿಡುಗಡೆ ಹೊಂದಲಾರಿರಿ” ಎಂದು ಹೇಳಿದನು ಅನಂತರ ತುಳಸೀದಾಸರು ಹನುಮತ್ ಸ್ತುತಿಯನ್ನು ಮಾಡಲಾರಂಭಿಸಿದರು ಮುಂದೆ ೬ ಘಂಟೆಗಳೊಳಗಾಗಿ ಹನುಮಂತನೇ ಸೇನಾ ಸಮೇತನಾಗಿ ಬಂದಿರುವನೋ ಎಂಬಂತೆ ಸಾವಿರಾರು ಕೋತಿಗಳು ಎಲ್ಲಿಂದಲೋ ಬಂದು ಕೋಟೆಯಲ್ಲಿ ಹಾವಳಿ ಮಾಡಲಾರಂಭಿಸಿದವು ಆ ಹಾವಳಿಯನ್ನು ತಡೆಯಲಾರದೇ ಬಾದಶಹಾನು ತುಳಸೀದಾಸರ ಬಳಿಗೆ ಬಂದು ಅವರನ್ನು ಬಿಡುಗಡೆಮಾಡಿ “ಸ್ವಾಮಿ ಈ ಕೋತಿಗಳ ಹಾವಳಿಯನ್ನು ಕಡಿಮೆ ಮಾಡಿರಿ” ಎಂದು ಕೇಳಿಕೊಂಡನು ಆಗ ತುಳಸೀದಾಸರು “ಅಯ್ಯಾ, ಈಗ ಇಲ್ಲಿ ಹನುಮಂತನು ಬಂದು ವಾಸಮಾಡಲಾರಂಭಿಸಿದನು ನೀನು ನಿನ್ನ ರಾಜಧಾನಿಯನ್ನು ಬೇರೆ ಸ್ಥಳಕ್ಕೆ ಬದಲಾಯಿಸು” ಎಂದು ಹೇಳಿದರು ಆಗ ಬಾದಶಾಹನು ಅದೇ ಹಳೆಯ ಕೋಟೆಯ ಸಮೀಪದಲ್ಲಿ ಹೊಸಕೋಟೆಯನ್ನು ಕಟ್ಟಿಸಿ ಅಲ್ಲಿ ವಾಸಿಸಲಾರಂಭಿಸಿದನೆಂದು ಹೇಳುತ್ತಾರೆ. ಈಗಲೂ ಅದನ್ನು ನೋಡಬಹುದು

## ಶ್ರೀಕೃಷ್ಣಮೂರ್ತಿಯು ಶ್ರೀರಾಮಮೂರ್ತಿಯಾಗಿ ಮಾರ್ಪಡುವುದು!

ಶ್ರೀ ನಾಭಾಜಿ ಎಂಬ ಮಹಾತ್ಮರು ಬೃಂದಾವನದಲ್ಲಿದ್ದರು ಅವರ ದರ್ಶನ ಪಡೆಯುವುದಕ್ಕಾಗಿ ತುಳಸೀದಾಸರು ಡಿಲ್ಲಿಯಿಂದ ಬೃಂದಾವನಕ್ಕೆ ಹೊರಟರು ಅವರು ಬೃಂದಾವನವನ್ನು ತಲುಪಿದ ದಿನ ನಾಭಾದಾಸರಲ್ಲಿ ಸಾಧುಗಳ ಭೋಜನೋತ್ಸವವು ನಡೆಯುತ್ತಿತ್ತು ಎಲ್ಲರೂ ಪಙ್ಕ್ತಿಯಲ್ಲಿ ಎಲೆಗಳ ಮುಂದೆ ಕುಳಿತಿದ್ದರು ಪ್ರಸಾದವನ್ನು ಎಲೆಗಳ ಮೇಲೆ ಬಡಿಸುತ್ತಿದ್ದರು ಪಙ್ಕ್ತಿಯ ಅಂತ್ಯದಲ್ಲಿ ಕೊನೆಗೆ ಒಂದು ಸ್ಥಳದಲ್ಲಿ ಜೋಡು ಮತ್ತು ಕೆರಾವುಗೆಗಳನ್ನಿಟ್ಟಿದ್ದರು ಬಿಡುವಿದ್ದ ಸ್ಥಳದಲ್ಲಿ ಎಲ್ಲರು ಸಾಲಾಗಿ ಕುಳಿತಿದ್ದುದರಿಂದ, ತುಳಸೀದಾಸರು ಆ ಜೋಡಿನ ರಾಶಿಯ ಪಕ್ಕದಲ್ಲಿ ಕುಳಿತರು ಆಗ ಅವರ ಪಕ್ಕದಲ್ಲಿ ಮತ್ತೊಬ್ಬ ಮಹಾತ್ಮನು ಒಂದು ಖಾಲಿ ಎಲೆಯ ಮೇಲೆ ತನ್ನ ಕಾಲನ್ನು ಇಟ್ಟುಕೊಂಡು

ಕುಳಿತಿದ್ದನು. ತುಳಸೀದಾಸರು ಪಕ್ಕದಲ್ಲಿ ಕುಳಿತುಕೊಂಡ ಕೂಡಲೆ ಆತನು ಮೇಲಕ್ಕೆ ಜರುಗಿಕೊಂಡನು ಆಗ ಆ ಎಲೆಯ ಮುಂದೆ ತುಳಸೀದಾಸರು ಕೂತುಕೊಂಡರು ಅಷ್ಟೊತ್ತಿಗೆ ಪರಿಚಾರಕನು ಪ್ರಸಾದವನ್ನು ನೀಡುತ್ತ ಅಲ್ಲಿಗೆ ಬಂದನು ಆಗ ತುಳಸೀದಾಸರು ಆ ಎಲೆಯ ಮೇಲಿದ್ದ ಪಾದಧೂಳಿಯನ್ನು ಕೊಡಹಿ, ಅದರಲ್ಲಿಯೆ ಪ್ರಸಾದವನ್ನು ಸ್ವೀಕರಿಸಲು ಕೈನೀಡಿದರು ಬಡಿಸುವವನು ' ಆ ಎಲೆ ಕೊಳೆಯಾಗಿದೆ ಬೇರೆ ಎಲೆ ತರುತ್ತೇನೆ ತಡೆಯಿರಿ ' ಎಂದನು ಅದಕ್ಕೆ ತುಳಸೀದಾಸರು " ಯಾರೋ ಒಬ್ಬ ಸಾಧುವಿನ ಚರಣ ಧೂಳಿಯಿಂದ ಇದು ಪವಿತ್ರವಾಗಿರುವುದು ಇದಕ್ಕಿಂ ಲೂ ಅಧಿಕ ಪವಿತ್ರವಾದ ಪಾತ್ರವು ಮತ್ತಾವುದಿರುವುದು ? " ಎಂದರು ಶ್ರೀನಾಭಾದಾಸಜಿಯು ಈ ಮಾತುಗಳನ್ನು ಕೇಳಿ, ಕೂಡಲೆ ಓಡಿಬಂದು, ತುಳಸೀದಾಸರನ್ನು ಗುರುತಿಸಿ, ಬಿಗಿದಪ್ಪಿಕೊಂಡು, " ಗೋಸ್ವಾಮಿಗಳೆ, ಭಕ್ತಮಾಲೆಯ ಸುಮೇರುವು ಇಂದು ನನ್ನ ಸೌಭಾಗ್ಯ ವಿಶೇಷದಿಂದ ಇಲ್ಲಿಯೆ ನನಗೆ ದೊರೆಯಿತು ನಾನು ಅದನ್ನು ಹುಡುಕಿಕೊಂಡು ಕಾಶಿಗೆ ಹೋದಾಗ ಸಿಕ್ಕಲಿಲ್ಲ ! " ಎಂದರು

ತುಳಸೀದಾಸರು ವ್ರಜಮಂಡಲದಲ್ಲಿ ಬಹುವಾಗಿ ಸುತ್ತಿ ಸುತ್ತಿ ಭಗವದ್ದರ್ಶನ ಮಾಡುತ್ತಿದ್ದರು ಒಂದು ದೇವಾಲಯದಲ್ಲಿ ಬಹು ಉಗ್ರಪಕ್ಷದ ಕೃಷ್ಣ ಭಕ್ತರು ಸೇರಿದ್ದರು ಆಗ ಭಗವಂತನ ದರ್ಶನದ ಸಮಯ ! ಬಾಗಿಲಿಗೆ ಕಟ್ಟಿದ ಪರದೆಯನ್ನು ತೆಗೆಯುವ ಸಮಯ ! ಆಗ ಕೆಲವರು ತುಳಸೀದಾಸರನ್ನು ನೋಡಿ, ವ್ಯಂಗ್ಯಭಾವದಿಂದ, ' ಅನನ್ಯ ಭಕ್ತರು ತಮ್ಮ ಇಷ್ಟ ದೇವತೆಯ ರೂಪವನ್ನೇ ಉಪಾಸನೆ ಮಾಡುವರು ' ಎಂದರು ಅದಕ್ಕೆ ತುಳಸೀದಾಸರು " ನಮ್ಮ ಭಗವಂತನಿಗೆ ಎಲ್ಲ ರೂಪಗಳೂ ಇವೆ ನಾನು ಆತನ ರಾಮ ರೂಪದಲ್ಲಿ ಮಗ್ನನಾಗಿರುವೆನು, ಆದುದರಿಂದ ನನಗೆ ಮದನ ಗೋಪಾಲನಲ್ಲಿಯೂ ರಾಮ ರೂಪವೇ ಕಾಣುತ್ತಿರುವುದು " ಎಂದರು ಇಷ್ಟರಲ್ಲಿ ಪರದೆಯನ್ನು ತೆಗೆದರು ಆಗ ಅಲ್ಲಿ ಭಗವಂತನ ಕೈಯಲ್ಲಿ ಧನುರ್ಬಾಣಗಳಿದ್ದುವಲ್ಲದೇ ರಾಮ ರೂಪದ ಶೃಂಗಾರವೂ ಇದ್ದಿತು ಕೂಡಲೆ ಗಟ್ಟಿಯಾಗಿ ಎಲ್ಲರೂ ಜಯಧ್ವನಿಗೈದರು !

ಶ್ರೀರಾಮಚಂದ್ರನ ಒಂದು ಮೂರ್ತಿಯು ದಕ್ಷಿಣ ದೇಶದಲ್ಲಿ ಎಲ್ಲಿಯೊ ಒಬ್ಬ ಸೌಭಾಗ್ಯಶಾಲಿಯಾದ ರಾಮಭಕ್ತನ ಬಳಿ ವಿರಾಜಿಸುತ್ತಿತ್ತು ಭಗವಂತನು ಅವನ ಸ್ವಪ್ನದಲ್ಲಿ ಬಂದು ' ನನ್ನ ಮೂರ್ತಿಯನ್ನು ಅಯೋಧ್ಯೆಗೆ ತೆಗೆದುಕೊಂಡು ಹೋಗು ' ಎಂದು ಹೇಳಿದನು ಆ ಭಕ್ತನು ಸ್ವಾಮಿಯ ಅಜ್ಞಾನುಸಾರವಾಗಿ, ವಿಶೇಷ ಆದರದಿಂದ ಪಲ್ಲಕ್ಕಿಯಲ್ಲಿ ಮೂರ್ತಿಯನ್ನಿಟ್ಟುಕೊಂಡು ಪ್ರಯಾಣ ಬೆಳೆಸಿದನು ದಾರಿಯಲ್ಲಿ ಬೃಂದಾವನದಲ್ಲಿ ವಿಶ್ರಾಂತಿಗಾಗಿ ಇಳಿದನು ಅಲ್ಲಿ ಮತ್ತೊಬ್ಬ ಭಕ್ತನಾದ ಬ್ರಾಹ್ಮಣನು ಆ ಮೂರ್ತಿಯು ಬೃಂದಾವನದಲ್ಲಿಯೆ ಇರಬೇಕೆಂದು ಪ್ರಾರ್ಥಿಸಿದನು ಭಗವಂತನು ತನ್ನ ನಿಷ್ಕಪಟಿಯಾದ ದಾಸನ ಆಸೆಯನ್ನು ನೆರವೇರಿಸದಿರುವನೆ ? ಕೂಡಲೆ ಮೂರ್ತಿಯನ್ನು ತಂದ ಬ್ರಾಹ್ಮಣನಿಗೆ " ಈ ಮೂರ್ತಿಯನ್ನಿಲ್ಲೆ ಇಟ್ಟುಬಿಡು ನಾನಿಲ್ಲಿಯೆ ವಾಸಿಸುವೆನು ' " ಎಂದು ಸ್ವಪ್ನವಾಯಿತು ಆಗ ಶ್ರೀರಾಮಘಾಟಿನಲ್ಲಿ, ಶ್ರೀ ತುಳಸೀದಾಸರ ಅನುಮತಿಯಿಂದ ಆ ಮೂರ್ತಿಯ ಪ್ರತಿಷ್ಠೆಯಾಯಿತು ಅವರು ಆ ಭವ್ಯಮೂರ್ತಿಗೆ " ಕೌಸಲ್ಯಾನಂದನ " ನೆಂಬ ಹೆಸರನ್ನಿಟ್ಟರು ಈಗಲೂ ಆ ಮೂರ್ತಿಯ ಮಂದಿರವು ಬೃಂದಾವನದಲ್ಲಿ ತುಳಸೀದಾಸರ ನಿವಾಸದ ಸ್ಮಾರಕವಾಗಿರುವುದು ಬೃಂದಾವನದಲ್ಲಿದ್ದಾಗ ಶ್ರೀಕೃಷ್ಣ ವಿಷಯಕ ಪದಗಳನ್ನು ರಚಿಸಿದರು ಅದು ಕೃಷ್ಣ ಗೀತಾವಲಿ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವುದು.

## ಕಳ್ಳರನ್ನು ಶಿಷ್ಯರಾಗಿ ಸ್ವೀಕರಿಸುವುದು

ದುಷ್ಟರನ್ನು ಸನ್ಮಾರ್ಗಕ್ಕೆ ತರುವುದು ತನ್ನ ಕರ್ತವ್ಯವೆಂದು ತುಳಸೀದಾಸರು ತಿಳಿದಿದ್ದರು. ಒಂದು ದಿನ, ಅವರು ಕಾಶಿಗೆ ಹಿಂತಿರುಗಿ ಬಂದನಂತರ, ಅರ್ಧರಾತ್ರಿ ಸಮಯದಲ್ಲಿ ತಮ್ಮ ವಾಸಸ್ಥಾನಕ್ಕೆ ಹೋಗುತ್ತಿರುವಾಗ, ಒಂದು ಕಳ್ಳರ ಗುಂಪನ್ನು ಕಂಡರು ಕತ್ತಲಲ್ಲಿ ಇವರು ಬರುತ್ತಿದ್ದುದನ್ನು ನೋಡಿ ಕಳ್ಳರಲ್ಲೊಬ್ಬನು "ನೀನಾರು" ಎಂದನು ಇವರು "ನಿನ್ನಂತೆಯೆ ನಾನೊಬ್ಬನು" ಎಂದರು ಅದಕ್ಕೆ ಕಳ್ಳನು "ನೀನೊಬ್ಬನೇ ಇರುವಂತೆ ಕಾಣುತ್ತದೆ" ಎಂದನು ತುಳಸೀದಾಸರು "ಹೌದು" ಎಂದರು ಆಗ ಚೋರನು "ನೀನೆಲ್ಲೋ ಈಗ ಹೊಸದಾಗಿ ಕೆಲಸ ಮಾಡುವುದಕ್ಕೆ ಹೊರಟಂತೆ ಕಾಣುವುದು ಒಳ್ಳೆಯದು ನಿನ್ನ ಕೆಲಸದಲ್ಲಿ ಲಾಭಸಿಕ್ಕಬೇಕಾಗಿದ್ದರೆ ನಮ್ಮ ಜತೆಯಲ್ಲಿ ಹೊರಡು" ಎಂದನು ತುಳಸೀದಾಸರು ಅವರ ಹಿಂದೆಯೆ ಹೊರಟರು ಕಳ್ಳರು ಒಂದು ಮನೆಗೆ ಕನ್ನವನ್ನು ಹಾಕಿ, ಇವರನ್ನು ಕಾವಲಿಗಿಟ್ಟು ಒಳಗೆ ಹೋದರು ಅವರು ಒಳಗೆ ಹೋದ ಕೂಡಲೆ ಇವರು ತಮ್ಮ ಜೋಳಿಗೆಯಲ್ಲಿದ್ದ ಶಂಖವನ್ನು ತೆಗೆದು ಊದಿದರು ಅದನ್ನು ಕೇಳಿ ಕಳ್ಳರೆಲ್ಲರೂ ಓಡಿದರು ಇವರೂ ಅವರ ಹಿಂದೆಯೆ ಓಡಿದರು ಕಳ್ಳರು ಮತ್ತೊಂದು ಮನೆಯೊಳಗೆ ನುಗ್ಗಿದರು ಅಲ್ಲಿಯೂ ಇವರೇ ಕಾವಲಾಗಿದ್ದುದರಿಂದ ಮತ್ತೊಮ್ಮೆ ಶಂಖವನ್ನು ಊದಿದರು ಇವರು ಶಂಖವೂದುತ್ತಿದ್ದುದನ್ನು ಒಬ್ಬ ಕಳ್ಳನು ನೋಡಿದನು ಕಳ್ಳರೆಲ್ಲರೂ ಕೊನೆಗೆ ಅಲ್ಲಿಂದ ಓಡಿ ಒಂದು ಕಡೆ ಏಕಾಂತದಲ್ಲಿ ಸೇರಲು, ಇವರು ಶಂಖವೂದಿದ್ದನ್ನು ನೋಡಿದ ಕಳ್ಳನು ಇವರ ವಿಚಾರದಲ್ಲಿ ತನ್ನ ಸಂದೇಹವನ್ನು ಸೂಚಿಸಿದನು ತುಳಸೀದಾಸರು "ಹೌದು ನಾನೇ ಶಂಖವನ್ನು ಊದಿದವನು! ನೀವು ನನ್ನನ್ನು ಕಾವಲಿಗಿಟ್ಟು ಬೇರೆ ಯಾರಾದರೂ ನೀವು ಮಾಡುವ ಕೆಲಸವನ್ನು ನೋಡಿದರೆ ನಿಮಗೆ ಕೂಡಲೆ ತಿಳಿಸಬೇಕೆಂದು ಹೇಳಿದ್ದಿರಿ. ನಾನು ಎರಡು ಬಾರಿ ಶಂಖವನ್ನೂದುವಾಗಲೂ, ನೀವು ಕಳ್ಳತನ ಮಾಡುತ್ತಿರುವುದನ್ನು ನೋಡುತ್ತಿದ್ದ ಭಗವಾನ್ ಶ್ರೀರಾಮಚಂದ್ರನನ್ನು ಕಂಡೆನು ಇನ್ನು ನಿಮಗೆ ಖಂಡಿತವಾಗಿ ಶಿಕ್ಷೆಯಾಗುವುದೆಂದರಿತು, ನಿಮ್ಮನ್ನು ಎಚ್ಚರಿಸುವುದಕ್ಕಾಗಿ ನಾನು ಶಂಖವನ್ನೂದಬೇಕಾಯಿತು," ಎಂದರು ಶ್ರೀತುಳಸೀದಾಸರ ಮಾತನ್ನು ಕೇಳಿ ಕಳ್ಳರು ಅವರನ್ನು ಗುರ್ತಿಸಿ, ಅವರ ಚರಣಗಳಿಗೆರಗಿದರು ಅನಂತರ ಆ ಕಳ್ಳರು ತಮ್ಮ ಉದ್ಯೋಗವನ್ನು ಬಿಟ್ಟು ಅವರ ಶಿಷ್ಯರಾದರು

## ಶ್ರೀಮದ್ಗೋಸ್ವಾಮಿ ತುಳಸೀದಾಸರ ಗ್ರಂಥಗಳು

ಸಮಗ್ರ ಜಗತ್ತಿನ ಕವಿಗಳಲ್ಲಿ ಹಲವರ ಪ್ರತಿಭೆಯು ಅವರ ಬಾಲ್ಯಾವಸ್ಥೆಯಲ್ಲಿಯೆ ಪ್ರಕಾಶವಾಗಿರುವುದು ಸಾಧುಗಳ ಸತ್ಸಂಗದಲ್ಲಿ, ರಾಮನಾಮ ಚರ್ಚೆಯಲ್ಲಿ, ಸಚ್ಛಾಸ್ತ್ರದ ಅಧ್ಯಯನದಲ್ಲಿ ಬಾಲ್ಯಕಾಲವನ್ನು ಕಳೆದ ಬಾಲಕನು ಗುರುಸೇವೆಯಲ್ಲಿರುವಾಗಲೆ ಕವಿತಾ ಪ್ರೇಮಿಯಾಗುವುದೇನಾಶ್ಚರ್ಯ! ತುಳಸೀದಾಸರು ಬಾಲ್ಯಾವಸ್ಥೆಯಲ್ಲಿರುವಾಗಲೇ (೧) "ಹನುಮಾನ್ ಚಾಲೀಸ್" ಎಂಬ ಚಿಕ್ಕಸ್ತೋತ್ರವನ್ನು ರಚಿಸಿದರು ಅದರಲ್ಲಿ ಮುಂದಣ ಕವಿಯ ರಚನೆಯ ಮಾಧುರ್ಯವೂ ಶಬ್ದಯೋಜನೆಯೂ ಅಲಂಕಾರವೂ ಕಂಡುಬಂದಿರುವುದು ರಾಮಚರಿತಮಾನಸದ ಅಮೂಲ್ಯವಾದ ಚೌಪಾಯಿ ಪದಗಳ ಪೂರ್ವರೂಪವು ಅದರಲ್ಲಿ ಪ್ರಕಾಶವಾಗಿರುವುದು (೨) "ಸಂಕಟಮೋಚನ" ವೆಂಬುದರ ಮೂಲರೂಪವೂ ಅದೇ ಕಾಲದಲ್ಲಿ ರಚಿಸಲ್ಪಟ್ಟಿರಬೇಕೆಂದು ವಿದ್ವಾಂಸರು ಊಹಿಸುವರು (೩) "ವಿಂಧ್ಯೇಶ್ವರಿಪಟಲ" ವೆಂಬ ಗ್ರಂಥವು ಅವರ ಯೌವನಕಾಲದಲ್ಲಿ ರಚಿಸಲ್ಪಟ್ಟುದೆಂದು ಅದರಲ್ಲಿರುವ ವಿಷಯದಿಂದ ತಿಳಿಯಬರುವುದು

ಗೋಸ್ವಾಮಿಗಳು " ರಾಮಚರಿತಮಾನಸ " ವನ್ನು ರಚಿಸುವುದಕ್ಕೆ ಮುಂಚೆ ಮತ್ತಾವ ಕಾವ್ಯಗ್ರಂಥವನ್ನೂ ರಚಿಸಿಲ್ಲವೆಂದು ವ್ಯಕ್ತವಾಗುವುದು. ಅದಕ್ಕೆ ಮುಂಚೆ ಕೆಲವು ಪದ್ಯಾವಳಿಗಳನ್ನು ರಚಿಸಿರಬಹುದು ಅಥವಾ ಬೇರೆ ಗ್ರಂಥಕಾರರು ಕೆಲವರು ಕೆಲವು ಚಿಕ್ಕಚಿಕ್ಕ ಪುಸ್ತಕಗಳನ್ನು ಇವರ ಹೆಸರಿನಲ್ಲಿ ಬರೆದಿರಬಹುದು. ಇವರು ಬರೆದ ಗ್ರಂಥಗಳಲ್ಲಿ (೪) ರಾಮಚರಿತಮಾನಸ, (೫) ರಾಮಗೀತಾವಲಿ, (೬) ವಿನಯಪತ್ರಿಕಾ, (೭) ಜಾನಕೀಮಂಗಲ, (೮) ಪಾರ್ವತೀಮಂಗಲ ಮತ್ತು (೯) ರಾಮಲಲಾನಹಛೂ"—ಎಂಬೀ ಆರು ಗ್ರಂಥಗಳನ್ನು ಸಮಾವೇಶಗೊಳಿಸಬಹುದು " ರಾಮಗೀತಾವಲಿ "ಯನ್ನು ಭಜನೆಯಲ್ಲಿ ರಾಮಚರಿತೆಯನ್ನು ಗಾನಮಾಡುವುದಕ್ಕೆ ರಚಿಸಿರಬೇಕು " ಜಾನಕೀಮಂಗಲ, ಪಾರ್ವತೀಮಂಗಲ ಮತ್ತು ರಾಮಲಲಾನಹಛೂ—ಇವುಗಳನ್ನು ಕೇವಲ ವಿವಾಹಾದಿ ಉತ್ಸವಸಮಯಗಳಲ್ಲಿ ಹಾಡುವುದಕ್ಕಾಗಿ ರಚಿಸಿರಬೇಕೆಂದು ಪಂಡಿತರ ಮತ ರಾಮಚರಿತಮಾನಸವನ್ನು ಕೇವಲ " ಸ್ವಾನ್ತಃ ಸುಖಾಯ " ರಚಿಸಿದ್ದರೆ, " ವಿನಯಪತ್ರಿಕೆ "ಯ ಉದ್ದೇಶವು ಅದರ ಹೆಸರಿನಿಂದಲೇ ಸ್ಪಷ್ಟವಾಗುವಂತಿದೆ (೧೦) ದೋಹಾವಲಿ, (೧೧) ಸತಸಈ, (೧೨) ಕವಿತ್ತ ರಾಮಾಯಣ, (೧೩) ರಾಮಾಜ್ಞಾ, (೧೪) ವೈರಾಗ್ಯಸಂದೀಪಿನೀ (೧೫) ಕೃಷ್ಣಗೀತಾವಲಿ, (೧ ) ಬರವೈ ರಾಮಾಯಣ. (೧೭) ಹನುಮಾನ ಬಾಹುಕ—ಇವುಗಳು ಭಿನ್ನಭಿನ್ನ ಸಮಯದಲ್ಲಿ ಬರೆದ ಸ್ಫುಟಕವಿತೆಗಳೆಂದು ವಿದ್ವಾಂಸರು ನಿರ್ಣಯಿಸಿರುವರು (೨೦) ರಾಮಶಲಾಕೆ ಪ್ರಶ್ನೆಯು ಯಾವುದೋ ವಿಶೇಷ ಸಂದರ್ಭದಲ್ಲಿ ರಚಿಸಿದ ಪ್ರಶ್ನಶಲಾಕೆವಾಗಿರಬೇಕು ಅದನ್ನು ಗ್ರಂಥಾವಳಿಯಲ್ಲಿ ಸೇರಿಸುವುದು ತಪ್ಪು.

ಮೇಲೆ ಹೇಳಿರುವುದಲ್ಲದೆ ಮುಂದೆ ಹೇಳುವ ಗ್ರಂಥಗಳನ್ನು ತುಳಸೀದಾಸರೇ ಬರೆದಿರುವರೆಂದು ಹೇಳುವರು.

(೧) ಛಂದಾವಲೀ ರಾಮಾಯಣ (೨) ಛಪ್ಪಯ್ ರಾಮಾಯಣ (೩) ಕಡಖಾ ರಾಮಾಯಣ (೪) ರೋಲಾ ರಾಮಾಯಣ (೫) ಝೂಲನಾ ರಾಮಾಯಣ (೬) ಕುಂಡಲಿಯಾ ರಾಮಾಯಣ (೭) ಕಲಿಧರ್ಮನಿರೂಪಣ (೮) ರಾಮಲತಾ (೯) ನಾಮಕಲಾಕೋಷಮಣಿ (೧೦) ಮಂಗಲಾವಲೀ (೧೧) ಮಂಗಲ ರಾಮಾಯಣ (೧೨) ಗೀತಾಭಾಷ್ಯ (೧೩) ಜ್ಞಾನಕೋಶಪರಿಕರಣ (೧೪) ರಾಮಮುಕ್ತಾವಲೀ (೧೫) ಜ್ಞಾನದೀಪಿಕಾ—ಈ ಹದಿನೈದು ಗ್ರಂಥಗಳಲ್ಲಿ ಅನೇಕ ಗ್ರಂಥಗಳು, ತುಲಸೀನಾಮಧಾರಿಯಾದ ಅನ್ಯಕವಿಯದಾಗಿರುವ ಸಂಭವವಿದೆ ಮತ್ತೆ ಕೆಲವು, ತುಲಸೀನಾಮಧಾರಿಗಳಾದ ಇಬ್ಬರು ಅಥವ ಹೆಚ್ಚು ಜನ ಕವಿಗಳ ಗ್ರಂಥಗಳು ಸಂಗ್ರಹಕರ್ತರ ಪ್ರಮಾದದಿಂದ ನಮ್ಮ ಕಥಾನಾಯಕರ ಗ್ರಂಥಗಳಾಗಿ ಪರಿಗಣಿತವಾಗಿರಬಹುದು ಅವರಲ್ಲಿ ಯಾರಾದರೊಬ್ಬ ಗೋಸ್ವಾಮಿಯೂ ಇದ್ದಿರಬಹುದು ತುಲಸೀದಾಸರ ಶಬ್ದ ಮತ್ತು ಭಜನೆ, " ಸುರತ " ಪದ ಮತ್ತು ಯೋಗದ ಕ್ರಿಯೆಗಳ ಸಂಬಂಧದಲ್ಲಿ ರಾಧಾಸ್ವಾಮಿ ಪಂಥದವರು ಹೇಳುವುದೆಲ್ಲವೂ ಪ್ರತ್ಯೇಕವಾಗಿರುವುದು ಅಲ್ಲದೆ ಅವರ ಶೈಲಿಯೂ ವಿಷಯವೂ ಬೇರೆಯಾಗಿರುವುದು ಇವು ಬೇರೊಬ್ಬ ಸಾಧುವಾದ " ತುಲಸಿ "ಯ ರಚನೆಗಳಾಗಿರಬಹುದೆಂದು ಪಂಡಿತರ ಮತವಾಗಿರುವುದು.

## ಸಾಕೇತಲೋಕ ಯಾತ್ರೆ

" ಸಂವತ ಸೋರಹ ಸೈ ಅಸೀ ಅಸೀ ಗಂಗಕೇ ತೀರ್ |
ಸಾವರ್ ಸುಕ್ಲಾ ಸಪ್ತಮಿ ತುಲಸೀ ತಜೇ ಸರೀರ್ || "

ವಿಕ್ರಮಶಕೆ ೧೬೬೨ ರಲ್ಲಿ ಅಕಬರ್‌ಬಾದಶಹನು ಮೃತನಾದನು ಜಹಾಂಗೀರನು ಸಿಂಹಾಸನವನ್ನು ಹತ್ತಿದ್ದನು. ಅವನ ರಾಜ್ಯವು ವಸ್ತುತಃ ಅವನ ಬೇಗಮಳಾದ ನೂರಜ

ಹಾನಳ ರಾಜ್ಯವಾಗಿದ್ದಿತು ಆ ಸಮಯದಲ್ಲಿ ಒಂದುಬಾರಿ ಕಾಶಿಯಲ್ಲಿಯೂ ಹಿಂದುಗಳ ಮೇಲೆ ಮುಸಲ್ಮಾನರು ಅತ್ಯಾಚಾರವನ್ನು ನಡೆಯಿಸಿದರು ಮಾಲೆ, ಜನಿವಾರ ಮತ್ತು ತಿಲಕ ಗಳಿಗೆ ವಿಪತ್ತು ಸಂಭವಿಸಿತು ಗೋಸ್ವಾಮಿಯವರ ಮೇಲೆಯೂ ಅತ್ಯಾಚಾರವನ್ನು ನಡೆಯಿಸಿದರು. ಆದರೆ ಮಹಾತ್ಮರ ತೇಜಸ್ಸು ಮತ್ತು ತಪಶ್ಚರ್ಯೆಯಿಂದ ಎಲ್ಲರಿಗೂ ಜ್ಞಾನೋದಯವಾಯಿತು ಅವರ ಸತ್ಯಾಗ್ರಹ ಮತ್ತು ಸದುಪದೇಶದಿಂದ ಸಮಗ್ರ ನಗರದ ಸಂಕಷ್ಟ ನಿವಾರಣೆಯಾಯಿತು ಶಾಂತಿಯು ನೆಲೆಗೊಂಡಿತು

ಜಹಾಂಗೀರನ ಕಾಲದಲ್ಲಿಯೆ ಉತ್ತರಭಾರತದಲ್ಲಿ ಪ್ಲೇಗ್‌ರೋಗವು ಪ್ರಕೋಪಗೊಂಡಿದ್ದಿತು ಕಾಶಿಯಲ್ಲಿಯೂ ಅದು ತಲೆದೋರಿದ್ದಿತು ಅದರ ಹಾವಳಿಯನ್ನು „ ಹನುಮಾರ್ ಬಾಹುಕ " ಕವಿತೆಯ ವರ್ಣನೆಯಿಂದ ತಿಳಿಯಬಹುದು

ಗೋಸ್ವಾಮಿಗಳು ಅವರ ಜೀವಮಾನದಲ್ಲಿ ರೋಗಗ್ರಸ್ತರಾಗಿ ಮಲಗಿದ ಸಂಗತಿಯು „ ಹನುಮಾರ್ ಬಾಹುಕ " ದಿಂದ ತಿಳಿದುಬರುವುದು. ಮಳೆಗಾಲದಲ್ಲೊಂದುದಿನ ಅವರ ಮೈತುಂಬ ಹುಣ್ಣುಗಳಾದವು ಆಗ ವರ್ಷಋತುವಿನ ವರ್ಣನೆಯನ್ನು ಮಾಡಿರುವರು ಅವರು ಶ್ರಾವಣಮಾಸದಲ್ಲಿ ದೇಹತ್ಯಾಗ ಮಾಡಿದರು ಆದುದರಿಂದ ಇವರು ಆ ಹುಣ್ಣಿನಿಂದಲೇ ದೇಹತ್ಯಾಗ ಮಾಡಿರಬಹುದೆಂದು ಕೆಲವರು ತರ್ಕಿಸುವರು ಆ ಅನುಮಾನವು ಕೇವಲ ಅನುಮಾನವಾಗಿರುವುದು ಅಂತ್ಯಸಮಯದಲ್ಲಿ ಅವರು ರಚಿಸಿರುವ ಕವಿತೆಯಿಂದ ಅವರಿಗೆ ಶಾರೀರಿಕ ವೇದನೆಗಳಾವುವೂ ಇದ್ದಂತೆ ಸ್ಪಷ್ಟವಾಗುವುದಿಲ್ಲ ವೇದನಾವ್ಯಥಿತ ಪ್ರಾಣಿಯಲ್ಲಿಲ್ಲದ ಶಾಂತಿಯು ಅದರಲ್ಲಿದೆ, ಅದರಲ್ಲಿ ಭಕ್ತಿಯಿದೆ, ದೃಢತೆಯಿದೆ ಗೋಸ್ವಾಮಿಗಳು ಶರೀರಾಂತ್ಯಸಮಯದಲ್ಲಿ ೯೦ ಅಥವಾ ಹೆಚ್ಚಿನ ವಯಸ್ಸಿನವರಾಗಿದ್ದರು ಇಂತಹ ವೃದ್ಧರೂ ಸದಾಚಾರಿಗಳೂ ತಪಸ್ವಿಗಳೂ ಸಾಧಕರೂ ಆದವರ ಮೃತ್ಯುವಿಗೆ ಯಾವುದಾದರೂ ಕಾರಣವನ್ನು ತೋರಿಸಬೇಕೆಂದು ಯಾವುದಾದರೊಂದು ಉಗ್ರರೋಗದ ಹೆಸರನ್ನು ಹೇಳಬೇಕಾದವಶ್ಯಕತೆಯಿಲ್ಲ ಅವರು ಶಾಂತಮನಸ್ಸಿನಿಂದ ರಾಮಮಂತ್ರವನ್ನು ಜಪಿಸುತ್ತ ಸಾಕೇತಲೋಕವಾಸಿಗಳಾದರೆಂದೇ ನಮ್ಮ ಅಭಿಪ್ರಾಯ ಅಂತ್ಯಸಮಯದಲ್ಲಿ ಈ ಪದ್ಯವನ್ನು ರಚಿಸಿರುವರು

„ ರಾಮನಾಮ್ ಜಸ ಬರನಿ ಕೈಭಯಉ ಚಹತ ಅಬ್ ಮೌನ್ ।  
ತುಲಸೀಕೆ ಮುಖ ದೀಜಿಏ ಅಬ ಹೀತುಲಸೀ ಸೌನ್ ॥ "

ಅವರ ವಿಚಾರದ ಸುಸಂಗತಿಯನ್ನೂ ಪ್ರಯಾಣಕಾಲದಲ್ಲಿ ಭವಿಷ್ಯಚಿಂತೆಯಿಂದ ಮುಕ್ತತೆಯನ್ನೂ ಅಂತ್ಯಕಾಲದಲ್ಲಿ ತುಳಸಿ ಮತ್ತು ಸುವರ್ಣವನ್ನು ಮುಖದಲ್ಲಿಡುವ ಆಜ್ಞೆಯನ್ನಿತ್ತುದನ್ನೂ ನೋಡಿದರೆ ಅವರಿಗೆ ವ್ಯಥೆಯ ವಿಹ್ವಲತೆಯಿರಲಿಲ್ಲ, ಪೀಡೆಯ ಸಂಕಷ್ಟವಿರಲಿಲ್ಲ, ರೋಗಮುಕ್ತತೆಯಿಂದಾಗುವ ಸುಖದನುಲಕ್ಷಣ ಧ್ಯಾನವೂ ಇರಲಿಲ್ಲವೆಂದು ತಿಳಿಯುವುದು ರೋಗಿಯೂ ದುಃಖಿಯೂ ಆದವನು ಮೃತ್ಯುವಿಗೆ ಹೆದರುವನು. ಇಲ್ಲಿಯಾದರೊ ಅವರು ಗರುಡಪಕ್ಷಿಯ ಶುಭಶಕುನವನ್ನು ನೋಡಿ, ಶಾಂತಚಿತ್ತದಿಂದ ರಾಮನಾಮವನ್ನು ಜಪಿಸುತ್ತಿರುವರು ಶಿಷ್ಯಸೇವಕರೂ ಭಕ್ತರೂ ಸುತ್ತಲೂ ನೆರೆದಿರುವರು ಅಸ್ಸೀಘಾಟಿನ ಹತ್ತಿರ ಗಂಗಾತಟದಲ್ಲಿ ಕಾಶಿಯ ಪವಿತ್ರಭೂಮಿಯ ಮೇಲಣ ಸುಖಶಯ್ಯೆಯಮೇಲೆ ಮಲಗಿ ಮಹಾಭಾಗವತರೂ ಅತ್ಯಂತ ವೃದ್ಧರೂ ಆದ ಸಾಧುವಿನ ಮುಖಾರವಿಂದದಲ್ಲಿ ಹೊರಟ ಮಾತುಗಳಿಂದಲೇ ಶ್ರೀಮದ್ಗೋಸ್ವಾಮಿ ತುಳಸೀದಾಸರು ಶಾಂತಚಿತ್ತದಿಂದ ಸಾಕೇತಲೋಕಕ್ಕೆ ತೆರಳಿದರೆಂದು ಸ್ಪಷ್ಟವಾಗುವುದು



ಶ್ರೀಮದ್ಗೋಸ್ವಾಮಿ

# ತುಲಸೀದಾಸಕೃತ ರಾಮಾಯಣದಲ್ಲಿ

"ಮನೋಹರ"

ವೆಂಬ ಕರ್ಣಾಟಕ ಟೀಕಾಯುಕ್ತವಾದ

(ಪ್ರಥಮ ಸೋಪಾನ)

## ಬಾಲಕಾಂಡವು



ರಾಮ ರಾಮ

## ರಾಮನಾಮ ಮಹಾಮಂತ್ರ

ರಾಮ ರಾಮ ರಾಮ ರಾಮ

### ಶಿವ ಉವಾಚ

ರಾಮ ರಾಮ ರಾಮ ರಾಮ

ರಾಮ **ರಾಮ** ರಾಮ **ರಾಮೇತಿ** ರಾಮ **ರಾಮೇತಿ** ರಾಮರಾಮ

ರಾಮ ರಾಮ ರಾಮ ರಾಮರಾಮ

ರಾಮ **ರಮೇ** ರಾಮ **ರಾಮೇ** ರಾಮರಾಮ **ಮನೋರಮೇ** ರಾಮ

ರಾಮ ರಾಮ ರಾಮರಾಮ ರಾಮ

ರಾಮ ರಾಮ ರಾಮ **ಶ್ರೀ ಸೀತಾರಾಮ** ರಾಮ ರಾಮ ರಾಮ

ರಾಮ ರಾಮ ರಾಮ ರಾಮ ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ ರಾಮ

ರಾಮ **ಸಹಸ್ರನಾಮ** ರಾಮ **ತತ್ತುಲ್ಯಂ** ರಾಮರಾಮರಾಮ

ರಾಮ ರಾಮ ರಾಮರಾಮರಾಮ

ರಾಮ **ರಾಮನಾಮ** ರಾಮ **ವರಾನನೇ ॥ ೧ ॥** ರಾಮ

ರಾಮ ರಾಮ ರಾಮ

ಶ್ರೀಮಹಾದೇವನು ಪಾರ್ವತಿದೇವಿಗೆ "ರಾಮ" ಎಂಬ ಗೌಪ್ಯ ಮಹಾಮಂತ್ರದ ಮಹಾತ್ಮೆಯನ್ನು ವರ್ಣಿಸಿರುವನು. ಇದರ ಫಲವು ವಿಷ್ಣುವಿನ ಸಹಸ್ರನಾಮಕ್ಕೆ ಸಮಾನವಾಗಿದೆ. ಯಾವ ಮನುಷ್ಯನು ಇದರ ಜಪವನ್ನು ಮಾಡುವನೊ ಅವನು ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಗಳನ್ನು ಹೊಂದಿ, ಕ್ರೋಧಾದಿ ಮಹಾ ಬಲಿಷ್ಠ ಶತ್ರುಗಳನ್ನು ಜಯಿಸಿ, ಭವಸಾಗರದಿಂದ ಪಾರಾಗಿ ಪರಮ ಪದವನ್ನೈದುವನು.



॥ ಶ್ರೀ ಗಣೇಶಾಯನಮಃ ॥

॥ ಶ್ರೀ ಜಾನಕೀವಲ್ಲಭೋವಿಜಯತೇ ॥

ಶ್ರೀ ಸೀತಾರಾಮಚಂದ್ರಾಭ್ಯಾಂ ನಮಃ

ಶ್ರೀ ಮದ್ಗೋಸ್ವಾಮಿ

# ತುಲಸೀದಾಸ ರಾಮಾಯಣ

## ಬಾಲಕಾಂಡಸ್ಯಪ್ರಾರಂಭಃ.



ಶ್ರೀ ಗೋಸ್ವಾಮೀ ತುಳಸೀ ದಾಸರವರು ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿ ಗೊಳ್ಳುವುದಕ್ಕೆ ಮಂಗಳಾಚರಣೆಯನ್ನು ಮಾಡುತ್ತಿರುವರು. ಕೇಳಿರಿ !

### ಮಂಗಳಾಚರಣೆ *

ವರ್ಣಾನಾಮರ್ಥಸಂಘಾನಾಂ ರಸಾನಾಂ ಛಂದಸಾಮಪಿ ।
ಮಂಗಲಾನಾಂ ಚ ಕರ್ತಾರೌ ವನ್ದೇವಾಣೀವಿನಾಯಕೌ ॥೧

ಭವಾನೀ ಶಂಕರೌ ವನ್ದೇ ಶ್ರದ್ಧಾವಿಶ್ವಾಸರೂಪಿಣೌ ।
ಯಾಭ್ಯಾಂ ವಿನಾ ನ ಪಶ್ಯನ್ತಿ ಸಿದ್ಧಾಃ ಸ್ವಾಂತಸ್ಥಮೀಶ್ವರಮ್ ॥೨

---

* ಗ್ರಂಥವು ನಿರ್ವಿಘ್ನವಾಗಿ ಸಮಾಪ್ತಿಗೊಳ್ಳುವುದಕ್ಕೋಸುಗವೂ, ಮತ್ತೆ ಇದನ ಓದುವವರಿಗೂ, ಕೇಳುವವರಿಗೂ ಮಂಗಳವಾಗುವುದಕ್ಕೋಸುಗವೂ ಶ್ರೀ ಗೋಸ್ವಾ ತುಳಸೀದಾಸರು ವಿದ್ಯೆಬುದ್ಧಿಗಳ ಅಧಿಷ್ಠಾತ್ರಿಯಾದ ಸರಸ್ವತೀ ದೇವಿಗೂ ಮತ್ತೆ ವಿಘ ನಾಶಕನಾದ ಗಣೇಶನಿಗೂ ವಂದನಾರೂಪವಾದ ಮಂಗಳಾಚರಣೆಯನ್ನು ಮಾಡಿ ವರು. ಏಕೆಂದರೆ ಶಾಸ್ತ್ರವು ಹೇಳುವುದೇನೆಂದರೆ.—

“ ಆದಿಮಧ್ಯಾವಸಾನೇಷು ಯಸ್ಯಗ್ರಂಥಸ್ಯ ಮಙ್ಗಲಂ ।
ತತ್ಪರನ್ ಪಠನಾದ್ವಾಪಿ ದೀರ್ಘಾಯುರ್ಧಾರ್ಮಿಕೋಭವೇತ್. ” ॥

ವನ್ದೇ ಬೋಧಮಯಂ ನಿತ್ಯಂ ಗುರುಂ ಶಂಕರರೂಪಿಣಮ್ ।
ಯಮಾಶ್ರಿತೋ ಹಿ ವಕ್ರೋಽಪಿ ಚನ್ದ್ರಃ ಸರ್ವತ್ರ ವನ್ದ್ಯತೇ ॥೩॥
ಸೀತಾರಾಮಗುಣಗ್ರಾಮಪುಣ್ಯಾರಣ್ಯವಿಹಾರಿಣೌ ।
ವನ್ದೇ ವಿಶುದ್ಧವಿಜ್ಞಾನೌ ಕವೀಶ್ವರಕಪೀಶ್ವರೌ ॥೪॥
ಉದ್ಭವಸ್ಥಿತಿಸಂಹಾರಕಾರಿಣೀಂ ಕ್ಲೇಶಹಾರಿಣೀಮ್ ।
ಸರ್ವಶ್ರೇಯಸ್ಕರೀಂ ಸೀತಾಂ ನತೋಽಹಂ ರಾಮವಲ್ಲಭಾಮ್ ॥೫॥

ಯನ್ಮಾಯಾವಶವರ್ತಿ ವಿಶ್ವಮಖಿಲಂ ಬ್ರಹ್ಮಾದಿ ದೇವಾಸುರಾ
ಯತ್ಸತ್ವಾದಮೃಷೈವ ಭಾತಿ ಸಕಲಂ ರಜ್ಜೌ ಯಥಾಹೇರ್ಭ್ರಮಃ ।
ಯತ್ಪಾದಪ್ಲವಮೇಕಮೇವ ಹಿ ಭವಾಂಭೋಧೇಸ್ತಿತೀರ್ಷಾವತಾಂ
ವನ್ದೇಽಹಂ ತಮಶೇಷಕಾರಣಪರಂ ರಾಮಾಖ್ಯಮೀಶಂ ಹರಿಮ್ ॥೬॥
ನಾನಾಪುರಾಣನಿಗಮಾಗಮಸಮ್ಮತಂ ಯದ್-
ರಾಮಾಯಣೇ ನಿಗದಿತಂ ಕ್ವಚಿದನ್ಯತೋಽಪಿ ।
ಸ್ವಾನ್ತಃ ಸುಖಾಯ ತುಲಸೀ ರಘುನಾಥ ಗಾಥಾ-
ಭಾಷಾನಿಬಂಧಮತಿಮಞ್ಜುಲಮಾತನೋತಿ ॥೭॥

ವರ್ಣ ಎಂದರೆ ಅಕ್ಷರ, ಅರ್ಥಸಮೂಹ, ರಸ ಮತ್ತು ಛಂದಸ್ಸುಗಳ ಅಧಿಷ್ಠಾತ್ರಿಯಾದ ಸರಸ್ವತೀ ದೇವಿಗೂ, ಮಂಗಳಕರನಾದ ವಿನಾಯಕ ಎಂದರೆ ಶ್ರೀ ಗಣೇಶನಿಗೂ ನಮಸ್ಕರಿಸುವೆನು.

ಯಾರ ಕೃಪಾನುಗ್ರಹವಿಲ್ಲದೆ ಸಿದ್ಧ ಪುರುಷರು ಕೂಡ ಅಂತಃಕರಣವಾಸಿಯಾದ ಈಶ್ವರನನ್ನು ನೋಡಲಾರರೋ, ಆ ಶ್ರದ್ಧಾವಿಶ್ವಾಸರೂಪಿಗಳಾದ ಉಮಾಮಹೇಶ್ವರರಿಗೆ ನಮಸ್ಕರಿಸುವೆನು.

ಯಾರ ಆಶ್ರಯವನ್ನು ಹೊಂದಿ ವಕ್ರನಾದ ಚಂದ್ರನೂ ಸರ್ವತ್ರ ವಂದ್ಯನಾಗಿರುವನೊ ಅಂತಹ ಶಂಕರರೂಪಿಯೂ, ಬೋಧಮಯನೂ, ನಿತ್ಯನೂ ಆದ ಗುರುವನ್ನು ವಂದಿಸುವೆನು.

ವಿಶುದ್ಧ ವಿಜ್ಞಾನಯುಕ್ತರೂ, ಸೀತಾರಾಮರ ಗುಣಸಮೂಹರೂಪಿಯಾದ ಪುಣ್ಯಾರಣ್ಯದಲ್ಲಿ ಎಂದರೆ ರಾಮಾಯಣದಲ್ಲಿ ವಿಹರಣಶೀಲರೂ ಆದ, ಕವಿಶ್ರೇಷ್ಠ ಶ್ರೀವಾಲ್ಮೀಕಿ ಮಹಾ ಮುನಿಗೂ, (ಭಕ್ತಾಗ್ರಗಣ್ಯನೆನಿಸಿದ) ಹನುಮಂತನಿಗೂ ನಮಸ್ಕರಿಸುವೆನು.

ಉತ್ಪತ್ತಿ, ಪಾಲನೆ, ಮತ್ತೆ ಪ್ರಳಯಗಳನ್ನು ಮಾಡುವಂತಹಳೂ, ಕ್ಲೇಶಹಾರಿಣಿಯೂ, ಸಮಸ್ತ ಕಲ್ಯಾಣ ಪ್ರದಾಯಿನಿಯೂ ಶ್ರೀರಾಮ ವಲ್ಲಭೆಯೂ ಆದ ಸೀತಾದೇವಿಯ ಅಡಿದಾವರೆಗಳಿಗೆ ನಮಿಸುವೆನು.

ಯಾರ ಮಾಯೆಗೆ ವಶವಾಗಿ ಇಡೀ ವಿಶ್ವವೂ, ಬ್ರಹ್ಮಾದಿ ದೇವತೆಗಳೂ, ಅಸುರರೂ ಪ್ರವರ್ತಿತರಾಗಿರುವರೋ ; ಹಗ್ಗವನ್ನು ನೋಡಿದಾಗ ಸರ್ಪದ ಭ್ರಮೆ ಯಾಗುವಂತೆ ಯಾರ ಶಕ್ತಿಯಿಂದ ಅನಿತ್ಯವಾದ ಜಗತ್ತು ನಿತ್ಯಪ್ರತೀತವಾಗಿರು ವಂತೆ ಕಾಣಿಸುತ್ತಿದೆಯೊ , ಭವಸಾಗರದಿಂದ ಪಾರಾಗಲಿಚ್ಛಿಸುವವರಿಗೆ ಯಾರ ಅಡಿದಾವರೆಗಳು ಏಕಮಾತ್ರ ನೌಕಾರೂಪದಿಂದ ಶೋಭಿಸುತ್ತಲಿವೆಯೊ, ಅಂತಹ ಪೂರ್ಣಕಾರಣ ಶ್ರೇಷ್ಠನಾದ ಶ್ರೀರಾಮನೆಂಬ ಹೆಸರನ್ನು ತಳೆದ, ಈಶನಾದ ಶ್ರೀ ಹರಿಗೆ ಪ್ರಣಾಮಮಾಡುವೆನು

ಅನೇಕ ವೇದ, ಪುರಾಣ, ಆಗಮಶಾಸ್ತ್ರಗಳ ಆಧಾರದಿಂದಲೂ, ಮತ್ತೆ ಬೇರೆ ಗ್ರಂಥಗಳ ಆಧಾರದಿಂದಲೂ ಸಂಗ್ರಹೀತವಾದ ಈ ರಘುನಾಥ ಚರಿತೆ ಯನ್ನು ಶ್ರೀತುಳಸೀದಾಸನು ತನ್ನ ಅಂತಃಕರಣ ಸುಖಕ್ಕೋಸ್ಕರ ಅತಿ ಮನೋಹರ ಹಿಂದೀ ಭಾಷೆಯ ರಚನೆಯಲ್ಲಿ ವಿಸ್ತರಿಸುವನು. (ಅದನ್ನೇ ಇಲ್ಲಿ ಭರದ್ವಾಜ ಗೋತ್ರೋತ್ಪನ್ನನಾದ ದತ್ತಾತ್ರೇಯನು ಮನೋಹರವಾದ ಕರ್ಣಾಟಕ ಭಾಷೆ ಯಲ್ಲಿ ವರ್ಣಿಸುವನು.)

ಯಾವನ ಸ್ಮರಣೆ ಮಾತ್ರದಿಂದಲೆ ಸರ್ವ ಕಾಮಿತಾರ್ಥಗಳೂ ಸಿದ್ಧಿಸುವವೊ, ಅಂತಹ ಬುದ್ಧಿಸಮೂಹಸ್ವರೂಪನೂ, ಗಜವದನನೂ, ಶುಭಾಶುಭಗಳಿಗೆ ಆಗ ರನೂ ಆದ ಶ್ರೀ ಗಣೇಶನು ನನ್ನಮೇಲೆ ಅನುಗ್ರಹವಿಡಲಿ! ಯಾವನ ಪ್ರಸನ್ನತೆ ಯಿಂದ ವಾಚಾಳನು ಎಂದರೆ ವಿಶೇಷಮಾತನಾಡುವ ಶಕ್ತಿಯುಳ್ಳವನು ಮೂಕ ನಾಗುವನೊ, * ಕುಂಟನಾದವನು ಕೂಡ ವಿಶಾಲವೂ ದುರಾರೋಹವೂ ಆದ ಪರ್ವತವನ್ನು ಹತ್ತಬಲ್ಲನೊ, ಮತ್ತೆ ಯಾವನು ಸಂಪೂರ್ಣಕಲಿಮಲ ಸಂಭೂತ ಪಾಪರಾಶಿಯನ್ನು ದಹಿಸಬಲ್ಲನೊ ಅಂತಹ ಮಾಧವನು ನನ್ನಮೇಲೆ ಪ್ರಸನ್ನನಾಗಿರಲಿ. ನೀಲಕಮಲದೋಪಾದಿಯಲ್ಲಿ ಶಾಮವರ್ಣನೂ ಅರಳಿದ ಕಮಲದಳದೋಪಾದಿಯಲ್ಲಿ ನೇತ್ರಗಳುಳ್ಳವನೂ, ಕ್ಷೀರಸಾಗರ ಶಯನನೂ ಆದ ವಿಷ್ಣುವೆ, ನನ್ನ ಮನೋಮಂದಿರದಲ್ಲಿ ವಾಸಿಸು ! ಕುಂದಪುಷ್ಪ ಮತ್ತು ಚಂದ್ರ ರೋಪಾದಿಯಲ್ಲಿ ಶ್ವೇತಶರೀರವುಳ್ಳವನೂ, ಪಾರ್ವತೀದೇವಿಯೊಂದಿಗೆ ವಿಹರಿ ಸುವವನೂ, ಕರುಣಾಕರನೂ, ಭಕ್ತರನ್ನು ಪ್ರೀತಿಸುವವನೂ, ಕಾಮದೇವನನ್ನು ದಹಿಸಿದವನೂ ಆದ ಶಂಕರನೇ, ನನ್ನಮೇಲೆ ಅನುಗ್ರಹವಿಡು ! ದಯಾಸಮು ದ್ರನೂ, ತನ್ನ ಉಪದೇಶ (ವಚನ) ರೂಪೀ ಸೂರ್ಯಕಿರಣಗಳಿಂದ ಅಜ್ಞಾನ ರೂಪಿಯಾದ ಅಂಧಕಾರ ಸಮೂಹವನ್ನು ದೂರೀಕರಿಸುವ ನರರೂಪಹರಿ

---

* ಇಲ್ಲಿ ವ್ಯಾಸಮಹಾಮುನಿಯ ಕೆಳಗಣ ಶ್ಲೋಕದ ಛಾಯೆ ಇರುವುದು:—

ಮೂಕಂಕರೋತಿ ವಾಚಾಲಂ ಪಙ್ಗುಂ ಲಂಘಯತೇಗಿರಿಂ ।
ಯತ್ಕೃಪಾ ತಮಹಂವನ್ದೇ ಪರಮಾನಂದ ಮಾಧವಮ್ ॥

(ಎಂದರೆ ನರರೂಪವನ್ನು ಧರಿಸಿದ ವಿಷ್ಣು ಅಥವಾ ನೃಸಿಂಹ)–ಎಂದರೆ ನರಹರಿ* ಗುರುವಿನ ಚರಣಕಮಲಗಳಿಗೆ ನಮಿಸುವೆನು.

ಶ್ರೀಗುರುಚರಣರಜವು ಸುಂದರವೂ, ಪ್ರಕಾಶಯುಕ್ತವೂ, ಸುಗಂಧಿತವೂ, ರಸಮಯವೂ ಆದುದು ; ಅದು ಭಕ್ತಿಯನ್ನುಂಟುಮಾಡುವುದು, ಆದುದರಿಂದ ಅದಕ್ಕೆ ನಾನು ವಂದಿಸುವೆನು. ಅದೇ ಅಮೃತ ರಸದ ಸಾರವು,ಅದು ಸುಂದರವಾದ ಚೂರ್ಣರೂಪದಲ್ಲಿದ್ದರೂ, ಸಂಸಾರದ ಜನನ ಮರಣಾದಿ ಸರ್ವವಿಧವಾದ ರೋಗಗಳನ್ನೂ ನಾಶಮಾಡುವ ಶಕ್ತಿಯುಳ್ಳದು ಆ ಗುರುಚರಣ ರಜವು ಶಿವನ ಅಂಗಲಿಪ್ತವಾದ ಭಸ್ಮದಂತೆ ಪವಿತ್ರವಾಗಿಯೂ ಸುಂದರವಾಗಿಯೂ, ಆನಂದದಾಯಕವಾಗಿಯೂ ಇದೆ. ಆ ರಜವು ಸಜ್ಜನರ ಚಿತ್ತರೂಪಿಯಾದ ಸುಂದರ ದರ್ಪಣದ ಮಾಲಿನ್ಯವನ್ನು ಹೋಗಲಾಡಿಸುವುದು ಅದನ್ನು ಹಣೆಯಲ್ಲಿ ಧರಿಸುವುದರಿಂದ ಸಂಸಾರದ ಎಲ್ಲ ಗುಣಗಳೂ ನಮ್ಮ ವಶವಾಗುವವು, ಎಂದರೆ ಗುರುಚರಣ ರಜವು ಸರ್ವವಿಘ್ನನಾಶಕವೂ ಸರ್ವಸಿದ್ಧಿದಾಯಕವೂ ಭಾಗ್ಯದಾಯಕವೂ ಆಗಿದೆ.

(ಇನ್ನುಮುಂದೆ, ಚಿತ್ತವು ರೋಗಗ್ರಸ್ತವಾಗಿ ದೃಷ್ಟಿಯು ಮಂದವಾಗುವುದರಿಂದ ಅದರ ಜ್ಯೋತಿಯು ಹೆಚ್ಚಾಗುವುದಕ್ಕಾಗಿ ಗೋಸ್ವಾಮಿಯವರು ಗುರುಚರಣ ನಖಗಳಿಗೆ ನಮಿಸುವರು.)

ಗುರುಚರಣನಖಜ್ಯೋತಿಯು ಮಣಿಗಣಗಳ ಪ್ರಕಾಶದಂತೆ ಕಾಣಿಸುತ್ತಿದೆ. ಅವುಗಳ ಸ್ಮರಣೆಮಾತ್ರದಿಂದಲೇ ಹೃದಯದಲ್ಲಿ ದಿವ್ಯದೃಷ್ಟಿಯು ಉತ್ಪನ್ನವಾಗುವುದು , ಆ ದಿವ್ಯಪ್ರಕಾಶದಿಂದ ಹೃದಯದೊಳಗಣ ಮೋಹಾಂಧಕಾರವು ನಷ್ಟವಾಗುವುದು. ಯಾವನ ಹೃದಯದಲ್ಲಿ ಈ ದಿವ್ಯದೃಷ್ಟಿ ಉತ್ಪನ್ನವಾಗುವುದೋ ಅವನೇ ಭಾಗ್ಯಶಾಲಿ ಎಂದು ಭಾವಿಸಬೇಕು. ಆ ದಿವ್ಯದೃಷ್ಟಿಯು ಹೃದಯದಲ್ಲಿ ಹುಟ್ಟುವುದರಿಂದ ಸಂಸಾರ ರಜನೀ ರೂಪವಾದ ದೋಷವು ಎಂದರೆ ಜನನ ಮರಣಾದಿ ದುಃಖಗಳು ಮಾಯವಾಗುವವು, ಮತ್ತೆ ರಾಮಚರಿತರೂಪಿಯಾದ ಗುಪ್ತಪ್ರಕಟಮಣಿಗಳು ಯಾವಯಾವ ಗಣಿಗಳಲ್ಲಿ ಸಿಕ್ಕುವುದೆಂದು ಗೋಚರವಾಗುವುದು.

* ಇಲ್ಲಿ ಕೆಲವು ಟೀಕಾಕಾರರು 'ನರರೂಪಹರಿ' ಶಬ್ದಕ್ಕೆ 'ನೃಸಿಂಹ' ನೆಂದು ಅರ್ಥ ಮಾಡಿರುವರು. ಮತ್ತೆ ಈ ಆಧಾರದಮೇಲೆ ಶ್ರೀ ಗೋಸ್ವಾಮಿ ತುಳಸೀದಾಸರು 'ನೃಸಿಂಹ' ದೇವರ ಭಕ್ತ ಅಥವಾ ಉಪಾಸಕರಾಗಿದ್ದರೆಂದು ಹೇಳುವರು. ಆದರೆ ಗೋಸ್ವಾಮಿಯವರ ಜೀವನಚರಿತೆಯಿಂದ ತಿಳಿದುಬರುವುದೇನಂದರೆ,—'ನರಹರಿ' ಯೆಂಬ ವಿದ್ವಾಂಸನೊಬ್ಬನು ಅವರ ಗುರುವಾಗಿದ್ದನು ಆದುದರಿಂದ "ನರರೂಪಹರಿ" ಶಬ್ದದಿಂದ ಗೋಸ್ವಾಮಿಯವರು ತನ್ನ ಗುರು "ನರಹರಿ"ಗೆ ನಮಿಸಿರುವರೆಂದು ಇಲ್ಲಿ ಸ್ಪಷ್ಟವಾಗುವುದು.

ದೋ||೬|| ಯಾವ ಸುಂದರವಾದ ಸಿದ್ಧಾಂಜನವನ್ನು ಕಣ್ಣಿಗೆ ಹಚ್ಚಿಕೊಂಡು ಚತುರರು ಸಾಧಕಸಿದ್ಧರಾಗಿ ಆ ಅಂಜನಪ್ರಭಾವದಿಂದ ಪೃಥ್ವೀಮಂಡಲ, ಗಿರಿ, ಕಾನನ, ವನವೇ, ಮೊದಲಾದ ಅನೇಕ ಕೌತುಕಗಳನ್ನು ನೋಡಲು ಶಕ್ತರಾಗು ವರೊ, ಹಾಗೆಯೆ ಗುರುಪದರಜವು ಕೂಡ ಮೃದುವಾಗಿಯೂ ಮಂಜುಳವಾಗಿಯೂ ಇದೆ. ಇದರ ಹೆಸರು ನಯನಾಮೃತ. ನೇತ್ರದ ಯಾವದ್ರೋಗಗಳನ್ನೂ ನಾಶಪಡಿಸುವ ಶಕ್ತಿಯು ಇದಕ್ಕಿದೆ. ಈ ಅಂಜನಪ್ರಭಾವದಿಂದ ನನ್ನ ವಿವೇಕನೇತ್ರಗಳನ್ನು ನಿರ್ಮಲಗೊಳಿಸಿಕೊಂಡು ಸಾಂಸಾರಿಕ ಸಂಕಷ್ಟಗಳನ್ನು ನಿವಾರಿಸುವ ಶ್ರೀ ರಾಮಚರಿತ್ರೆಯನ್ನು ಹೇಳುವೆನು. ಅಜ್ಞಾನಜನಿತವಾದ ಎಲ್ಲ ಸಂಶಯಗಳನ್ನೂ ದೂರೀಕರಿಸುವ ಭೂಸುರರ ಚರಣಗಳಿಗೆ ನಾನು ಮೊದಲು* ನಮಿಸುವೆನು ತದನಂತರ ಸರ್ವಶ್ರೇಷ್ಠಗುಣಗಳ ಸಮೂಹರಾದ ಸಾಧುಸಜ್ಜನ ಸಮಾಜಕ್ಕೆ ಪ್ರೇಮಯುಕ್ತವಾದ ಮಧುರವಾಣಿಯಿಂದ ವಂದಿಸುವೆನು. ಇತರರಿಂದುಂಟಾದ ಕ್ಲೇಶಗಳನ್ನೆಲ್ಲ ಸ್ವಯಂ ಸಹಿಸಿಕೊಂಡು, ಅವರ ಛಿದ್ರಗಳನ್ನು ಹೊರಗೆಡಹದೆ ಜಗತ್ತಿನಲ್ಲಿ ಪ್ರಶಂಸೆಯನ್ನು ಪಡೆದಿರುವ ಸುಂದರವಾದ ಹತ್ತಿಯಂತೆ ಸಾಧುಗಳ ಚರಿತ್ರೆಯು ಶುಭಕರವಾದುದು. ಅವರ ಕಾರ್ಯಗಳು ನೀರಸವೂ, ಉಜ್ವಲವೂ, ಗುಣಮಯವೂ ಆಗಿವೆ (ನೀರಸವೇಕೆಂದರೆ ಸಾಧುಸಂಗವು ವಿಷಯರಸರಹಿತವಾಗಿರುವುದು) ಸಂತಸಮಾಜವು ಆನಂದದಾಯಕವು, ಮಂಗಳಕರವು; ಇದುವೆ ಸಂಸಾರದಲ್ಲಿ ಚಲಿಸುವ ತೀರ್ಥರಾಜ ಪ್ರಯಾಗವೆಂದು ಹೇಳಬಹುದು. ಇದರಲ್ಲಿ ಪ್ರಯಾಗರಾಜನು ಸ್ಥಿರನು, ಸಂತಸಮಾಜವು ಚಲಿಸುವಂಥಾದ್ದೆಂಬುದಿಷ್ಟೇ ಭೇದವು ಸಂತರೂಪಿ ತೀರ್ಥರಾಜಪ್ರಯಾಗದಲ್ಲಿಯೂ ಮೂರು ನದಿಗಳಿವೆ. ರಾಮಭಕ್ತಿಯೇ ಗಂಗಾನದಿಯು, ಬ್ರಹ್ಮವಿಚಾರ ಪ್ರಚಾರವೇ ಸರಸ್ವತೀ ನದಿ; ಕರ್ತವ್ಯಾಕರ್ತವ್ಯಗಳ ಉಪದೇಶ ಮತ್ತೂ ವಿಧಿನಿಷೇಧವುಳ್ಳ ಕಲಿಮಲವನ್ನು ನಿವಾರಿಸುವ ಕರ್ಮಕಥೆಯೆ ಯಮುನಾನದಿ. ಹರಿ (ವಿಷ್ಣು) ಮತ್ತು ಹರ (ಶಂಕರ)ರ ಕಥಾಸಮ್ಮಿಲನ ಮಾಡುವುದೆ ವಿಶೇಷ ಶೋಭಾಸಂಪನ್ನವಾದ ವೇಣಿ ಸಂಗಮವು. ಅದನ್ನು ಕೇಳುವುದೇ ಸಕಲ ಆನಂದ ಮಂಗಳದಾಯಕವಾದುದು. ತನ್ನ ಧರ್ಮದಲ್ಲಿ ಅಚಲ ವಿಶ್ವಾಸವೆ ಅಕ್ಷಯವಟ † ಸತ್ಕಾರ್ಯ

* ಹಿಂದೆ ಅಮರಲೋಕವಾಸಿಗಳಾದ ದೇವತೆಗಳಿಗೂ, ದೇವತಾತುಲ್ಯಗುರುವಿಗೂ ವಂದಿಸಿರುವುದರಿಂದ, ಭೂಲೋಕದಲ್ಲಿ ತಪಸ್ಸು ನಿಸ್ವಾರ್ಥ, ನಿಸ್ಪೃಹತ್ವ, ನಿರಹಂಕಾರ, ಸಾತ್ವಿಕ ಗುಣಗಳಿಗೆ ಆಗರರಾಗಿ ಮನುಷ್ಯರಲ್ಲಿ ಬ್ರಾಹ್ಮಣರು ಪೂಜ್ಯರಾಗಿರುವುದರಿಂದ ಇಲ್ಲಿ "ಮೊದಲು" ಎಂಬ ಶಬ್ದವನ್ನು ಉಪಯೋಗಿಸಿದೆ

† ಈಗಿನ ಅಲಹಾಬಾದಿಗೆ ಮುಂಚೆ ಪ್ರಯಾಗವೆಂದು ಹೆಸರಿದ್ದಿತು. ಈಗಲೂ ಅದು ಮಹಾಕ್ಷೇತ್ರವೆನಿಸಿಕೊಂಡು ಅಲ್ಲಿಯೆ ಗಂಗಾ ಯಮುನಾ ಮತ್ತು ಗುಪ್ತಗಾಮಿನಿಯಾದ ಸರಸ್ವತೀ ನದಿಗಳ ಸಂಗಮವಿರುವುದು ಈಗಿರುವ ಕೋಟೆಯಲ್ಲಿ "ಅಕ್ಷಯವಟ"ವೆಂದು ಪ್ರಸಿದ್ಧನಾಗಿ ಎಂದೆಂದಿಗೂ ಒಣಗದಿರುವ ಆಲದಮರವೊಂದು ಅಲ್ಲಿರುವುದು.

ಕಾಮಿಗಳ ಸಮಾಜವೆ ಪ್ರಯಾಗ ಈ ಸತ್ಸಂಗರೂಪೀಪ್ರಯಾಗವು ಸರ್ವತ್ರ ಸರ್ವರಿಗೆ ಸದಾಸುಲಭಸಾಧ್ಯವಾದುದು. ಸಾದರದಿಂದ ಸೇವೆ ಮಾಡುವವರ ಕ್ಲೇಶಗಳನ್ನು ಅದು ಪರಿಹರಿಸುವುದು. ತತ್‌ಕ್ಷಣದಲ್ಲಿ ಪ್ರಕಟವಾಗಿಯೇ ಫಲವನ್ನೀಯುವ ಪ್ರಭಾವವುಳ್ಳ ಅಪೂರ್ವವಾದಾ ತೀರ್ಥರಾಜ ಮಹಿಮೆಯನ್ನು ವರ್ಣಿಸಲಸಾಧ್ಯವು.

ದೋ॥೨॥ ಯಾವ ಮನುಷ್ಯನು ಪ್ರಸನ್ನಚಿತ್ತದಿಂದ (ಈ ತೀರ್ಥರಾಜರೂಪಿ ಸಂತಸಮಾಜದ) ಉಪದೇಶಗಳನ್ನು ಕೇಳಿ ತಿಳಿದುಕೊಳ್ಳುವನೊ, ಮತ್ತು ಭಕ್ತಿ ಪೂರ್ವಕವಾಗಿ ಅದರಲ್ಲಿ ಸ್ನಾನಮಾಡುವನೊ, ಎಂದರೆ ಅದರಲ್ಲಿಯೆ ಮಗ್ನನಾಗಿ ತನ್ನನ್ನು ಪವಿತ್ರಮಾಡಿಕೊಳ್ಳುವನೊ, ಅವನು ಈ ಶರೀರವಿರುವಾಗಲೆ ಇದೇ ಜನ್ಮ ದಲ್ಲಿಯೆ ಧರ್ಮ, ಅರ್ಥ, ಕಾಮ ಮತ್ತು ಮೋಕ್ಷವೆಂಬೀ ನಾಲ್ಕು ಫಲಗಳನ್ನೂ ಹೊಂದುವನು. ಈ ಸಂತಸಮಾಜರೂಪಿ ಶ್ರೇಷ್ಠತೀರ್ಥದಲ್ಲಿ ಸ್ನಾನಮಾಡುವುದ ರಿಂದ ಹೇಗೆ ತತ್ಕಾಲದಲ್ಲಿಯೆ ಫಲಪ್ರಾಪ್ತಿಯಾಗುವುದೆಂದು ನೋಡಿರಿ! ಕಾಗೆಗಳೂ ಕೋಗಿಲೆಗಳಾಗುವವು, ಬಕಗಳೂ ಹಂಸಗಳಾಗುವವು! ನನ್ನ ಈ ಮಾತುಗಳನ್ನು ಕೇಳಿ ಯಾರೂ ವಿಸ್ಮಿತರಾಗಕೂಡದು ; ಏಕೆಂದರೆ ಸತ್ಸಂಗ ಮಹಿಮೆಯು ಗುಪ್ತವಾ ದುದಲ್ಲ. ವಾಲ್ಮಿಕಿ [1], ನಾರದ [2], ಅಗಸ್ತ್ಯ [3] ಮುನಿಗಳು ತಂತಮ್ಮ ಕಥೆಗಳನ್ನು

1. ವಾಲ್ಮೀಕಿಮುನಿಯು ಶ್ರೀರಾಮನನ್ನು ಕುರಿತು ಹೇಳಿದ್ದೇನೆಂದರೆ—"ನಾನು ಪೂರ್ವಕಾಲದಲ್ಲಿ ಕಿರಾತವೃತ್ತಿಯುಳ್ಳಿದ್ದು, ಕಳ್ಳತನಮಾಡುತ್ತಿದ್ದೆನು. ಹಲವ ರನ್ನು ಕೊಂದು ಸುಲಿಗೆ ಮಾಡುತ್ತಿದ್ದೆನು. ಕೊನೆಗೆ ಒಂದುದಿನ ನನ್ನ ಬೇಟೆಗೆ ಬಲಿಬಿದ್ದ ಋಷಿಗಳು ನನ್ನನ್ನು ಕುರಿತು, " ಈ ಪ್ರಪಂಚದಲ್ಲಿ ಎಲ್ಲರೂ ಸುಖದಿಂದ ಜೀವಿಸಿ ಪುಣ್ಯಭಾಗಿಗಳಾಗಬಲ್ಲರು. ದುಃಖದಲ್ಲಿಯೂ ಪಾಪದಲ್ಲಿಯೂ ಯಾರೂ ಭಾಗಿಗಳಾಗು ವುದಿಲ್ಲ. ಅದುದರಿಂದ ಇನ್ನು ಮೇಲಾದರೂ ನೀನು ಪಾಪಕ್ಕೆ ಪ್ರಾಯಶ್ಚಿತ್ತವಾಗಿ "ಮರಾ" "ಮರಾ" ಎಂಬ ಶಬ್ದವನ್ನು ಜಪಿಸುತ್ತ ಪಶ್ಚಾತ್ತಾಪವನ್ನು ಸೂಚಿಸಿ, ಪುಣ್ಯಭಾಗಿಯಾಗು, ಎಂದು ಉಪದೇಶಿಸಿದರು ಅಂದಿನಿಂದ ನನ್ನಲ್ಲಿ ವೈರಾಗ್ಯವು ಹುಟ್ಟಿ, ಹಿಂದುಮುಂದಾದ ನಿನ್ನ ಹೆಸರನ್ನೆ ಜಪಿಸುತ್ತ ಕುಳಿತೆನು. ಅದರಿಂದ ಇಂದು ನಿನ್ನ ದರ್ಶನವಾಗಿ ನನಗೆ ಈ ಪದವಿಯು ಋಷಿಗಳ ಉಪದೇಶ ಬಲದಿಂದ ಲಭಿಸಿತು."

2. ಒಂದುದಿನ ನಾರದನು ವೇದವ್ಯಾಸನನ್ನು ಕುರಿತು ಹೇಳಿದುದೇನಂದರೆ—" ನಾನು ಪೂರ್ವಜನ್ಮದಲ್ಲಿ ಒಬ್ಬ ದಾಸೀಪುತ್ರನಾಗಿದ್ದೆನು. ನಾನು ಋಷಿಗಳಸೇವೆಯಲ್ಲಿಯೆ ಮಗ್ನನಾಗಿದ್ದು, ಅವರ ಕೃಪೆಯಿಂದ ನನ್ನ ಪಾಪವೆಲ್ಲ ದೂರವಾಯಿತು, ಮತ್ತು ರಜೋಗುಣ ತಮೋಗುಣಗಳನ್ನು ನಾಶಮಾಡುವಂಥಾ ಭಕ್ತಿಯು ನನಗೆ ಲಭಿಸಿತು. ಕಾಲಕ್ರಮೇಣ ನಾನು ಆ ಶರೀರವನ್ನು ಬಿಟ್ಟು, ಈ ಜನ್ಮದಲ್ಲಿ ಭಗವದ್ಭಕ್ತಿಯ ಆನಂದದಲ್ಲಿ ಮಗ್ನನಾಗಿರುವೆನು."

3. ಒಂದು ಸಮಯದಲ್ಲಿ ಅಗಸ್ತ್ಯನು ಮಹಾದೇವನನ್ನು ಕುರಿತು ಹೀಗೆ ಹೇಳಿದನು—" ನನ್ನ ತಂದೆಯಾದ ಮಿತ್ರವರುಣನು ಒಂದು ದಿನ ರಂಭೆಯನ್ನು ಕಂಡು ಮೋಹಪರವಶನಾದನು ಆ ಸಮಯದಲ್ಲಿ ಆತನ ವೀರ್ಯವು ಒಂದು ಘಟದಲ್ಲಿ (ಮಡಕೆಯಲ್ಲಿ) ಬಿದ್ದಿತು. ಅದರಿಂದ ನನ್ನ ಉತ್ಪತ್ತಿಯಾಯಿತು. ಹೀಗೆ ನಾನು ನೀಚಸ್ಥಾನದಿಂದ ಉತ್ಪನ್ನನಾಗಿದ್ದರೂ ಸತ್ಸಂಗತಿಯ ಪ್ರಭಾವದಿಂದ ನನ್ನ ಬುದ್ಧಿಯು ಸನ್ಮಾರ್ಗಾವಲಂಬಿಯಾಗಿ, ನನಗೆ ಉತ್ತಮ ಪದವಿಯು ಲಭಿಸಿತು."

(ಉತ್ಪತ್ತಿ ಚರಿತ್ರೆಯನ್ನು) ಹೇಳಿ ತಂತಮ್ಮ ಮುಖದಿಂದಲೆ ಆ ಮಹಿಮೆಯನ್ನು ವ್ಯಕ್ತಪಡಿಸಿರುವರು. ಈ ಪ್ರಪಂಚದಲ್ಲಿರುವ ಭೂಚರ ಜಲಚರ ಆಕಾಶವಿಹಾರಿಗಳಾದ ಅನೇಕ ಪ್ರಕಾರದ ಜಡ ಮತ್ತು ಚೇತನ ಜೀವಿಗಳು ಬುದ್ಧಿ, ಕೀರ್ತಿ, ಗತಿ, ಐಶ್ವರ್ಯ ಮತ್ತು ಕಲ್ಯಾಣವನ್ನು ಹೊಂದಿರುವುದು ಆ ಸತ್ಸಂಗತಿಯ ಪ್ರಭಾವದಿಂದಲೆ ಎಂದು ಚೆನ್ನಾಗಿ ತಿಳಿದುಕೊಳ್ಳಿರಿ! ಏಕೆಂದರೆ ಇವುಗಳನ್ನು ಹೊಂದುವುದಕ್ಕೆ ಈ ಪ್ರಪಂಚದಲ್ಲಿ ಅಥವಾ ವೇದಗಳಲ್ಲಿ ಬೇರೆ ಉಪಾಯವೇ ಇಲ್ಲ ಸತ್ಸಂಗದ ವಿನಾ ಜ್ಞಾನ ಪ್ರಾಪ್ತಿಯಾಗಲಾರದು. ಶ್ರೀರಾಮಚಂದ್ರನ ಅನುಗ್ರಹದ ವಿನಾ ಆ ಸತ್ಸಂಗವು ಸುಲಭವಾಗಿ ಲಭಿಸಲಾರದು. ಸತ್ಸಂಗತಿಯೆ ಆನಂದ ಮಂಗಳರೂಪಿಯಾದ ವೃಕ್ಷದ ಬೇರಾಗಿದೆ. ಯಜ್ಞತಪಾದಿ ಸಾಧನಗಳೇ ಅದರ ಪುಷ್ಪಗಳು, ಅವುಗಳ ಸಿದ್ಧಿಯೇ ಫಲವು. ಸ್ಪರ್ಶಮಣಿಯ ಸ್ಪರ್ಶವಾದ ಕೂಡಲೆ ಲೋಹವು ಬಂಗಾರವಾಗುವಂತೆ, ಸತ್ಸಂಗವು ಪ್ರಾಪ್ತವಾದ ಕೂಡಲೆ ದುಷ್ಟರು ಶಿಷ್ಟರಾಗುವರು ದೈವಯೋಗದಿಂದ ಸಜ್ಜನರು ದುಷ್ಟ ಸಂಗತಿಯಲ್ಲಿ ಬಿದ್ದರೆ ಸರ್ಪದ ಮಣಿಯಂತೆ ಅವರು ತಮ್ಮ ಸದ್ಗುಣಗಳನ್ನು ಬಿಡುವುದಿಲ್ಲ; ಎಂದರೆ ಸರ್ಪದಮಣಿಯು ಅದರ ವಿಷದಿಂದ ಪ್ರತ್ಯೇಕವಾಗಿರುವಂತೆ ಕುಸಂಗತಿಯ ಪರಿಣಾಮವು ಅವರ ಮೇಲೆ ವ್ಯಾಪಿಸುವುದಿಲ್ಲ. ಬ್ರಹ್ಮ, ವಿಷ್ಣು, ಮಹಾದೇವ, ಕವಿ, ಪಂಡಿತ, ಮತ್ತು ಸರಸ್ವತೀದೇವಿಯೂ ಕೂಡ ಸಾಧುಗಳ ಮಹಿಮೆಯನ್ನು ವರ್ಣಿಸಲು ಸಂಕೋಚಪಡುವರು. ಹೀಗಿರುವಾಗ ನಾನು ಸಂತರ ಮಹಿಮೆಯನ್ನು ಹೇಗೆ ವರ್ಣಿಸಲಿ? ಏಕೆಂದರೆ ಕಾಯಿಪಲ್ಯಗಳನ್ನು ಮಾರುವ ತರಕಾರಿಯವನು ಮಣಿಗಳ ಗುಣಗಳನ್ನು ವರ್ಣಿಸಲು ಶಕ್ತನಾಗಬಲ್ಲನೆ!

ದೋ।೮-೯। ಅಂಜಲಿಯಲ್ಲಿರುವ ಪುಷ್ಪಗಳು ಭೇದವಿಲ್ಲದೆ ಎರಡು ಕೈಗಳನ್ನೂ ಸುಗಂಧಿತಮಾಡುವಂತೆ, ಯಾರು ಸರ್ವತ್ರ ಸಮದರ್ಶಿಗಳಾಗಿಯೂ, ಶತ್ರುಮಿತ್ರ ಭಾವವಿಲ್ಲದೆ ಸರ್ವ ಹಿತವನ್ನು ಕೋರುತ್ತ ಸಮಾನಚಿತ್ತರಾಗಿರುವರೋ ಅಂಥಾ ಸಂತರಿಗೆ ನಾನು ಪ್ರಣಾಮ ಮಾಡುವೆನು. ಸರಳಚಿತ್ತರೂ, ಜಗತ್ತಿನ ಹಿತೇಚ್ಛುಗಳೂ ಆದ ಸನ್ತಜನರೇ! ನನ್ನ ಸ್ವಭಾವ ಭಕ್ತಿಗಳನ್ನು ತಿಳಿದು, ಬಾಲಕನಂತಿರುವ ನನ್ನ ವಿನಂತಿಯನ್ನು ಮನ್ನಿಸಿ, ದಯೆಯಿಟ್ಟು ಶ್ರೀರಾಮಚಂದ್ರನ ಚರಣಗಳಲ್ಲಿ ನನಗೆ ಭಕ್ತಿಯುಂಟಾಗುವಂತೆ ಅನುಗ್ರಹಿಸಿರಿ!

ಇನ್ನು ಈಗ ಯಾರು ಉಪಕಾರಿಗಳಿಗೆ ಅಕಾರಣವಾಗಿ ಅಪಕಾರವನ್ನು ಮಾಡುವರೋ ಯಾರು ಅನ್ಯರ ಹಾನಿಯೆ ತಮಗೆ ಲಾಭವೆಂದು ಭಾವಿಸುವರೊ, ಮತ್ತು ಯಾರು ಪರರ ಮನೆಯು ಹಾಳಾದುದನ್ನು ನೋಡಿ ಆನಂದಪಡುವರೊ, ಮತ್ತೊಬ್ಬರು ಮನೆಕಟ್ಟುವುದನ್ನು ನೋಡಿ ದುಃಖಪಡುವರೊ ಅಂತಹ ದುಷ್ಟರ ಸಮಾಜಕ್ಕೂ ಮನಃಪೂರ್ವಕವಾಗಿ ವಂದಿಸುವೆನು. ಹರಿಹರರ ಕಥಾರೂಪಿ

ಯಾದ ಚಂದ್ರನಿಗೆ ರಾಹುಸ್ವರೂಪರಾಗಿ ಯಾರು ಅನ್ಯರಕಾರ್ಯಗಳಿಗೆ ವಿಘ್ನವ ನ್ನುಂಟುಮಾಡುವುದರಲ್ಲಿ ಸಹಸ್ರ ಬಾಹುಗಳಂತೆ ಯತ್ನಶೀಲರಾಗಿರುವರೊ; ಯಾರು ಅನ್ಯರ ದೋಷಗಳನ್ನು ಸಹಸ್ರ ನೇತ್ರಗಳಿದ್ದವರಂತೆ ಪರೀಕ್ಷಿಸಿ ನೋಡು ವರೊ; ಪರಹಿತಘೃತಕ್ಕೆ ಯಾರಮನಸ್ಸು ನೊಣದಂತಿರುವುದೋ; ಯಾರ ತೇಜಸ್ಸು ಪರಹಿತ (ಕಾರ್ಯ) ವನ್ನು ಅಗ್ನಿಯಂತೆ ದಹಿಸಿ ಬಿಡುವುದೋ; ಯಾರಕೋಪವು ಮಹಿಷಾಸುರನೆಂಬ ರಾಕ್ಷಸನಂತಿರುವುದೊ; ಪಾಪ ಮತ್ತು ದುರ್ಗುಣ ಧನದಿಂದ ಯಾರು ಕುಬೇರನಿಗಿಂತಲೂ ಧನಿಕರಾಗಿರುವರೊ, ಕೇತುವಿನ ಉದಯದಂತೆ ಯಾರ ಉದಯವು ಸರ್ವರಿಗೂ ದುಃಖದಾಯಕವಾಗಿದೆಯೊ, ಯಾರು ಕುಂಭ ಕರ್ಣನಂತೆ (ಪರಹಿತಕ್ಕಾಗಿ) ಸುಖದಿಂದ ನಿದ್ರೆಮಾಡುವರೊ, ಪೈರನ್ನು ನಾಶ ಪಡಿಸಿ, ತಾನೂ ಕರಗಿ ಹೋಗುವ ಹಿಮದಂತೆ, ಅನ್ಯರ ಕಾರ್ಯಹಾನಿ ಮಾಡು ವುದರಲ್ಲಿ ಯಾರು ತಮ್ಮ ಶರೀರಹಾನಿಯನ್ನು ಕೂಡ ಲಕ್ಷಿಸುವುದಿಲ್ಲವೋ, ಯಾರು ಪರರ ದೋಷಗಳನ್ನು ಕ್ರೋಧಿತ ಶೇಷನಂತೆ ಸಹಸ್ರಮುಖದಿಂದ ವರ್ಣನ ಮಾಡುವರೊ ಅಂಥಾ ದುಷ್ಟರಿಗೆ ನಾನು ಪ್ರಣಾಮಮಾಡುವೆನು ಪೃಥುಮಹಾ ರಾಜನು (ವರವನ್ನು ಪಡೆದು ತನ್ನ ಎರಡು ಕಿವಿಗಳಿಂದಲೇ ಸಹಸ್ರಕರ್ಣಗಳಿಂ ದಾಗುವಷ್ಟು) ಹರಿಯ ಯಶೋಗಾನವನ್ನು ಕೇಳುತ್ತಿದ್ದಂತೆ ಸಹಸ್ರಕರ್ಣರಾಗಿ ಪರರ ಪಾಪದೋಷಗಳನ್ನೆ ಯಾರು ಶ್ರವಣಮಾಡುತ್ತಿರುವರೊ ಅಂತಹ ದುಷ್ಟ ಜನರಿಗೆ ನಾನು ನಮಿಸುವೆನು. ಅವರು ಇಂದ್ರನಿಗೆ ಸಮಾನರು, ಏಕೆಂದರೆ ಇಂದ್ರ ನಿಗೆ “ಸುರಾನೀಕ್” (ಸುರ=ದೇವ+ಅನೀಕ್=ಸೇನೆ) ಅರ್ಥಾತ್ ದೇವತೆಗಳ ಸೇನೆಯು ಹಿತಕರವಾಗಿರುವಂತೆ, ದುಷ್ಟರಿಗೆ ಮದಿರೆಯು (ಸುರಾ) ಹಿತಕರ (ನೀಕು) ವೆನಿಸುವುದು. ಇಂದ್ರನಿಗೆ ವಜ್ರವು ಪ್ರಿಯವಾಗಿರುವಂತೆ, ದುಷ್ಟರಿಗೆ ವಚನರೂಪ ವಜ್ರವು (ಎಂದರೆ ಕಠೋರವಚನವು) ಪ್ರಿಯಕರವಾದುದು ತನ್ನ ಸಹಸ್ರನೇತ್ರಗಳಿಂದ ಇಂದ್ರನು ಪರರಗುಣಗಳನ್ನು ನೋಡುವನು; ದುಷ್ಟರು ಪರ ದೋಷಗಳನ್ನೆ ನೋಡುತ್ತಿರುವರು ಆದುದರಿಂದ ಇಂದ್ರಸಮಾನರಾದ ದುರ್ಜನ ರಿಗೆ ಪುನಃ ಪ್ರಣಾಮಮಾಡುವೆನು.

ದೋ।೧೦॥ ಉದಾಸೀನ, ಶತ್ರು ಮತ್ತು ಮಿತ್ರ ಈ ಮೂವರ ಹಿತವನ್ನೂ ಸಮಾನವಾಗಿ ಭಾವಿಸುವ ದುಷ್ಟರಿಗೆ ಅದರ (ಹಿತದ) ಸಮಾಚಾರವನ್ನು ಕೇಳಿದ ಕೂಡಲೆ ಅವರ ಹೊಟ್ಟೆಯಲ್ಲಿ ಕಿಚ್ಚೇಳುವುದು. ಇದನ್ನು ತಿಳಿದು ನಾನು ಪ್ರೀತಿ ಪೂರ್ವಕವಾಗಿ ಕೈಗಳೆರಡನ್ನೂ ಜೋಡಿಸಿ ಅವರಲ್ಲಿ ವಿನಂತಿಯನ್ನು ಮಾಡುವೆನು. ನಾನು ಅವರಿಗೆ ವಿಶೇಷ ವಿನಯವನ್ನು ತೋರಿದ್ದರೂ, ಅವರು ಅದನ್ನು ಮನ್ನಿಸ ಲಾರರು ಎಂದರೆ ಅವರು ತಮ್ಮ ಸ್ವಭಾವಾನುಸಾರವಾಗಿ ನನ್ನೊಂದಿಗೆ ದುಷ್ಟತನ ದಿಂದಲೆ ವರ್ತಿಸುವರು ಏಕೆಂದರೆ ಕಾಗೆಯನ್ನು ಪ್ರೀತಿಯಿಂದ ಸಾಕುತ್ತ, ಅದಕ್ಕೆ ಹೋಳಿಗೆ ಪಾಯಸಾದಿ ಮೃಷ್ಟಾನ್ನವನ್ನು ತಿನ್ನಿಸುತ್ತಿದ್ದರೂ ಅದು ಎಂದಾದರೂ

ಮಾಂಸವನ್ನು ಭುಂಜಿಸದಿರುವುದೆ? ಈಗ ನಾನು ಸಜ್ಜನ ದುರ್ಜನರಿಬ್ಬರ ಚರಣಗಳಿಗೂ ಏಕಸಮಯದಲ್ಲಿ ನಮಿಸುವೆನು. ಏಕೆಂದರೆ ಇಬ್ಬರೂ ದುಃಖ ವನ್ನುಂಟುಮಾಡುವವರು ಒಬ್ಬರು (ಸಜ್ಜನರು) ತಮ್ಮ ವಿಯೋಗದಿಂದ ಮರಣ ದುಃಖವನ್ನುಂಟುಮಾಡುವರು, ಮತ್ತೊಬ್ಬರು (ದುರ್ಜನರು) ತಮ್ಮ ಸಹವಾಸ ದಿಂದ ಪ್ರಾಣವನ್ನಪಹರಿಸುವರು ಎಂದರೆ ಅಷ್ಟು ದಾರುಣದುಃಖವನ್ನುಂಟು ಮಾಡುವರು. ಜಗತ್ತಿನಲ್ಲಿ ಕಮಲವೂ ಜಿಗಳೆಯೂ ಒಂದೆ ಎಡೆಯಲ್ಲಿ ಹುಟ್ಟಿ ಬೆಳೆದಿದ್ದರೂ ಅವುಗಳ ಗುಣಸ್ವಭಾವದಿಂದ ಅವೆರಡೂ ಪ್ರತ್ಯೇಕವಾಗಿರುವವು. ಸಾಧುಗಳು ಅಮೃತಸಮಾನರಾಗಿಯೂ ಅಸಾಧುಗಳು ಮದಿರಾ ಸಮಾನ ರಾಗಿಯೂ ಇರುವರು. ಯದ್ಯಪಿ ಮದಿರ ಮತ್ತು ಅಮೃತಗಳ ಜನಕನು—ಜನ್ಮ ದಾತನು--ಏಕಮಾತ್ರ ಅಗಾಧ ಸಮುದ್ರರಾಜ*ನಾಗಿರುವಂತೆ, ಈ ಜಗತ್ತೀ ಸಾಧು ಮತ್ತು ಅಸಾಧುಜನರ ಜನ್ಮಸ್ಥಾನವು ದುಷ್ಟ ಶಿಷ್ಟರಿಬ್ಬರು ತಂತಮ್ಮ ದುಷ್ಕಾರ್ಯ ಅಥವಾ ಸತ್ಕಾರ್ಯಗಳಿಂದ ಜಗತ್ತಿನಲ್ಲಿ ಪಾಪಪುಣ್ಯಗಳ ಸಂಪ ತ್ತನ್ನು ಸಂಗ್ರಹಿಸುವರು, ಎಂದರೆ ಸಾಧುಜನರು ಪುಣ್ಯವನ್ನು ಪಡೆಯುವರು ಅಸಾಧುಗಳು ಪಾಪವನ್ನು ಹೊಂದುವರು ಸಾಧುಜನರು ಅಮೃತದಂತೆ ಜನರನ್ನು ಅಮರರನ್ನಾಗಿ ಮಾಡುವರು, ಚಂದ್ರನಂತೆ ಮನಸ್ಸನ್ನು ಶೀತಲವಾಗಿಮಾಡುವರು, ಗಂಗಾಜಲದಂತೆ ಪಾಪದಿಂದ ಪಾರುಮಾಡುವರು ದುರ್ಜನರು ವಿಷದಂತೆ ಸಂಹಾರಕರಾಗಿಯೂ, ಅಗ್ನಿಯಂತೆ ದಾಹಕರಾಗಿಯೂ, ಕರ್ಮನಾಶ ನದಿಯಂತೆ ಕರ್ಮ (ಕಾರ್ಯ) ನಾಶಕರಾಗಿಯೂ ಇರುವರು. ಗುಣಾವಗುಣಗಳನ್ನು ಎಲ್ಲರೂ ತಿಳಿದಿರುವರು. ಆದರೆ ಯಾರಿಗೆ ಯಾವುದು ಹಿತಕರವೊ ಅದೇ ಒಳ್ಳೆ ಯದಾಗಿರುವುದು

ದೋ॥೧೧॥ ಅಮೃತವು ಮೃತರನ್ನು ಪುನರ್ಜೀವಿತರನ್ನಾಗಿ ಮಾಡುವುದ ರಿಂದಲೂ ವಿಷವು ಜೀವದಿಂದಿದ್ದವರನ್ನು ಮೃತರನ್ನಾಗಿ ಮಾಡುವುದರಿಂದಲೂ

* ದೇವತೆಗಳೂ ರಾಕ್ಷಸರೂ, ಮಂದರಗಿರಿಯನ್ನು ಕಡೆಗೋಲನ್ನಾಗಿಯೂ, ವಾಸುಕಿ ಯನ್ನು ಹಗ್ಗವನ್ನಾಗಿಯೂ, ನಾರಾಯಣನನ್ನು ಕೂರ್ಮವಾಗಿಯೂ, ಉಪಯೋಗಿಸಿ ಕ್ಷೀರ ಸಾಗರವನ್ನು ಕಡೆಯುವುದಕ್ಕಾರಂಭಿಸಿದರು. ಆಗ ಅವರ ಮಂಥನದಿಂದ ಚಂದ್ರನೂ, ಕಾಮಧೇನುವೂ, ವರುಣೀ (ಸುರಾದೇವತೆ) ಯೂ, ಕಲ್ಪತರುವೂ, ಅಪ್ಸರೆಯರೂ, ಲಕ್ಷ್ಮಿಯೂ, ದೇವತೆಗಳ ವೈದ್ಯನಾದ ಧನ್ವಂತರಿಯೂ ಹುಟ್ಟಿದರು ಆಗ ಧನ್ವಂತರಿಯ ಕೈಯಲ್ಲಿದ್ದ ಅಮೃ ತವನ್ನು ದೇವತೆಗಳು ಪಾನಮಾಡಿದರು ಆ ಮಂಥನದಿಂದಲೆ ಉದ್ಭವಿಸಿದ ಕಾಲಕೂಟ ವಿಷವನ್ನು ಮಹಾದೇವನು ಪಾನಮಾಡಲು ಅದು ಅವನ ದೇಹವನ್ನೆ ದಹಿಸಿಬಿಡುವುದೊ ಎಂಬಂತೆ ಗಂಟಲಿ ನಲ್ಲಿಳಿಯುವಾಗ, ಅವನು ರಾಮಧ್ಯಾನವನ್ನು ಮಾಡಲು ಕೂಡಲೆ ಅದು ಅವನ ಗಂಟಲಿ ನಲ್ಲಿಯೆ ನಿಂತು ಶಾಂತವಾಯಿತು ಅದುಕಾರಣವೆ ಅವನ ಕಂಠವು ಕಪ್ಪಾಗಿ, ಅವನಿಗೆ ನೀಲಕಂಠನೆಂದು ಹೆಸರಾಯಿತು.

ಪ್ರಶಂಸಿತವಾಗಿರುವಂತೆ ಸಜ್ಜನರು ಸತ್ಕಾರ್ಯದಿಂದಲೂ, ದುರ್ಜನರು ದುಷ್ಕಾರ್ಯದಿಂದಲೂ ದೊಡ್ಡವರೆನಿಸಿಕೊಳ್ಳುವರು. ದುರ್ಜನರು ಪಾಪ ಮತ್ತು ಅವಗುಣಗಳನ್ನು ಗ್ರಹಿಸುವರು. ಸಾಧುಗಳು ಗುಣಗ್ರಹಣಮಾಡುವರು. ಅವರಿಬ್ಬರೂ ಅಪಾರವಾದ ಸಮುದ್ರಸಮಾನರು. ಆದುದರಿಂದಲೆ ನಾನು ಅವರಿಬ್ಬರ ಗುಣದೋಷಗಳನ್ನು ವರ್ಣಿಸಿರುವೆನು. ಏಕೆಂದರೆ ಇದರವಿನಾ ಗುಣಗಳನ್ನಾಗಲಿ ಸಾಧುಗಳನ್ನಾಗಲಿ ಗುರ್ತಿಸಿ ಗ್ರಹಣಮಾಡುವುದೂ, ಅವಗುಣಗಳನ್ನಾಗಲಿ, ಅಸಾಧುಗಳನ್ನಾಗಲಿ ತ್ಯಜಿಸುವುದು ಅಸಾಧ್ಯವು. ವಿಧಾತನು ಈ ಸಂಸಾರದಲ್ಲಿ ಒಳ್ಳೆಯದು, ಕೆಟ್ಟದ್ದು ಈ ಎರಡನ್ನೂ ಸೃಷ್ಟಿಸಿರುವನು. ಆದರೆ ವೇದಗಳು ಅವುಗಳನ್ನು ವಿವೇಚಿಸಿ, ಪ್ರತ್ಯೇಕಿಸಿರುವವು. ಈ ಪ್ರಪಂಚದಲ್ಲಿ ಗುಣಾವಗುಣಗಳೆರಡೂ ವ್ಯಾಪ್ತವಾಗಿರುವವೆಂದು ವೇದ, ಇತಿಹಾಸ, ಪುರಾಣಗಳು, ಹೇಳುವವು. ಸುಖದುಃಖಗಳು, ಪಾಪಪುಣ್ಯಗಳು, ದಿನರಾತ್ರಿಗಳು, ಸಾಧು ಅಸಾಧುಗಳು ಸುಜಾತಿ ಕುಜಾತಿಗಳು, ದೇವದಾನವರು, ಉನ್ನತನೀಚಗಳು, ಅಮೃತವಿಷಗಳು, ಸಂಜೀವನ ವಿಷಗಳು, ಮಾಯಾ ಬ್ರಹ್ಮರು, ಜೀವಾತ್ಮ ಪರಮಾತ್ಮರು, ಧನಿಕತ್ವದಾರಿದ್ರ್ಯಗಳು, ಭಿಕ್ಷುಕ ಮತ್ತು ರಾಜರು, ಕಾಶೀ ಮತ್ತು ಮಗಧದೇಶಗಳು, ಗಂಗಾ ಮತ್ತು ಕರ್ಮನಾಶನದಿಗಳು, ಮಾರವಾಡ ಮತ್ತು ಮಾಲವದೇಶಗಳು, ಬ್ರಾಹ್ಮಣ ಮತ್ತು ಕಟುಕರು, ಸ್ವರ್ಗ ಮತ್ತು ನರಕ, ಅನುರಾಗ ಮತ್ತು ವೈರಾಗ್ಯ—ಇವುಗಳೆಲ್ಲವೂ ಈ ಸಂಸಾರದಲ್ಲಿರುವವು ಆದರೆ ವೇದಶಾಸ್ತ್ರಗಳು ಇವೆಲ್ಲವುಗಳ ಗುಣದೋಷಗಳನ್ನು ವಿಭಾಗಿಸಿರುವವು.

ದೋ॥೧೨॥ ವಿಧಾತನು ಎಲ್ಲ ಗುಣಾವಗುಣಗಳಿಂದಲೂ, ಜಡಚೇತನ ವಸ್ತುಗಳಿಂದಲೂ ಈ ವಿಶ್ವವನ್ನು ಪೂರ್ಣಮಾಡಿರುವನು. ಹಂಸರೂಪರಾದ ಸಂತರು ಹಾಲಿನಸ್ವರೂಪವಾದ ಗುಣಗಳನ್ನು ಗ್ರಹಣಮಾಡಿ ಜಲರೂಪಿಯಾದ ದುರ್ಗುಣಗಳನ್ನು ತ್ಯಜಿಸುವರು. ವಿಧಾತನು ಮನುಷ್ಯರಿಗೆ ಈ ರೀತಿಯಾಗಿ ವಿವೇಕವನ್ನು ಕೊಟ್ಟಿರುವಾಗ ಅವರ ಮನಸ್ಸು ದೋಷಗಳನ್ನು ಬಿಟ್ಟು ಗುಣಗಳ ಕಡೆಗೆ ಹೋಗುವುದು. ಆದರೆ ಸಮಯ, ಸ್ವಭಾವ ಮತ್ತು ಕರ್ಮಗಳ ಪ್ರೇರಣೆಯಿಂದ ಸಜ್ಜನರೂ ಮಾಯೆಗೆ ವಶರಾಗಿ ಸತ್ಕಾರ್ಯ ಮಾಡುವುದನ್ನು ಮರೆಯುವರು. ಆದರೆ ಈಶ್ವರಭಕ್ತರು ಆ ದೋಷವನ್ನು ನೇರ್ಪಡಿಸಿಕೊಂಡು, ದುಃಖದೋಷಗಳನ್ನು ನಿವಾರಿಸಿ, ನಿರ್ಮಲವಾದ ಯಶಃಪ್ರದಾನಮಾಡುವರು ; ಅಥವಾ ಭಗವಂತನು ತನ್ನ ಭಕ್ತರನ್ನುದ್ಧರಿಸುವಂತೆಯೆ ದುಷ್ಟರನ್ನೂ ಉದ್ಧರಿಸಿ ಅವರ ದುಃಖದೋಷಗಳನ್ನೂ ನಿವಾರಿಸಿ, ನಿರ್ಮಲವಾದ ಯಶಸ್ಸನ್ನೀಯುವನು. ಹಾಗೆಯೇ ದುರ್ಜನರು ಸುಸಂಗಲಾಭದಿಂದ ಸತ್ಕಾರ್ಯಗಳನ್ನು ಮಾಡಲಾರಂಭಿಸುವರು. ಆದರೆ ಅವರ ಸ್ವಭಾವದ ಮಲಿನತೆಯು ಪೂರ್ಣನಿವಾರಣೆಯಾಗುವುದಿಲ್ಲ. ದುಷ್ಟಜನರು ಸಾಧುಗಳ ವೇಷವನ್ನು ಧರಿಸಿ, ಆ ವೇಷಪ್ರಭಾವದಿಂದ ಪೂಜ್ಯತೆ

ಯನ್ನು ಪಡೆದು, ಸಂಸಾರವನ್ನು ವಂಚಿಸಬಹುದು. ಆದರೆ ಕಾಲನೇಮಿ,* ರಾವಣ† ಮತ್ತು ರಾಹುಗಳ‡ ಕಪಟವೇಷವು ಬಹಿರಂಗವಾದಂತೆ, ಕೊನೆಗೆ ಅವರ ವೇಷವೂ ಭೇದವಾಗುವುದು. ಈ ಪ್ರಪಂಚದಲ್ಲಿ (ಕರಡಿಯ ಗರ್ಭದಲ್ಲುದಯಿಸಿದ) ಜಾಂಬುವಂತನೂ ಕಪಿಯೋನಿಸಂಭೂತ ಹನುಮಂತನೂ ಸನ್ಮಾನ ಪಡೆದಂತೆ ಸಾಧುಗಳು ಹೀನವೇಷಧಾರಿಗಳಾದರೂ ಸನ್ಮಾನಪಡೆವರು ಕುಸಂಗದಿಂದ ಹಾನಿ ತಟ್ಟುವುದು, ಸುಸಂಗದಿಂದ ಲಾಭಪ್ರಾಪ್ತಿಯಾಗುವುದು ಎಂಬೀ ವಿಷಯವು ಸಂಸಾರದಲ್ಲಿಯೂ ವೇದಗಳಲ್ಲಿಯೂ ಪ್ರಕಟವಾಗಿರುವವು ; ಮತ್ತು ಇದೆಲ್ಲರಿಗೂ ತಿಳಿದಿರುವುದು. ವಾಯುವಿನ ಸಂಗದಿಂದ ಪದದಲಿತವಾದ ಧೂಳು ಆಕಾಶಕ್ಕೆ ಹೋಗುವುದು. ಆದರೆ ಅದೇ ಧೂಳು ನೀಚಜಲದ (ಅದನ್ನು ಕೆಳಕ್ಕೆ ತರುವಂತಹ) ಕುಸಂಗದಿಂದ ಕೆಸರಿನಲ್ಲಿ ಸೇರುವುದು. ಸಾಧು ಜನರ ಮನೆಯಲ್ಲಿ ಸಾಕಿದ ಗಿಳಿಯೂ, ಮೈನಾ ಹಕ್ಕಿಯೂ ರಾಮನಾಮವನ್ನು ಜಪಿಸುವವು. ಅಸಾಧುಗಳ ಮನೆಯಲ್ಲಿ ಪಾಲಿತವಾದವು ದುಶ್ಶಬ್ದಗಳನ್ನುಪಯೋಗಿಸಿ ನಿಂದೆಗೆಯ್ಯುವವು. ಕುಸಂಗತಿಯಿಂದ ಧೂಮವು 'ಕರೀ' ಎಂಬ ಹೆಸರನ್ನು ಹೊಂದಿತು ಆದರೆ ಅದೇ ಕರಿಯು (ವಿದ್ಯಾರ್ಥಿ ಮತ್ತು ವಿದ್ವಾಂಸರ) ಸುಸಂಗತಿಯಿಂದ ಮಶಿ (ಶಾಯಿ) ಯಾಗಿ ಪವಿತ್ರ ಪುರಾಣ ಲೇಖನಕಾರ್ಯದಲ್ಲಿ ಉಪಯೋಗಿಸಲ್ಪಡುವುದು ಮತ್ತೆ ಅದೇ ಧೂಮವು ಜಲ, ಅಗ್ನಿ ಮತ್ತು ವಾಯುಗಳ ಸಂಯೋಗದಿಂದ ಮೇಘವಾಗಿ ಇಡೀ ಪ್ರಪಂಚಕ್ಕೆ ಜೀವನವನ್ನು ಎಂದರೆ ಜಲ ಮತ್ತು ಪ್ರಾಣಗಳನ್ನು ಕೊಡುವುದು.

ದೋ।೧೩-೧೪॥ ಇದೇ ಪ್ರಕಾರವಾಗಿ ಗ್ರಹ, ಓಷಧಿ, ಜಲ, ವಾಯು ಮತ್ತು ವಸ್ತ್ರ—ಇವುಗಳೆಲ್ಲ ಕುಸಂಗ ಅಥವಾ ಸುಸಂಗದಿಂದ ಈ ಸಂಸಾರದಲ್ಲಿ ಕುವಸ್ತು ಅಥವಾ ಸುವಸ್ತುಗಳಾಗುವವು. ಇವುಗಳ ಗುಣಾವಗುಣಗಳನ್ನು

* ಕಾಲನೇಮಿಯ ಕಥೆಯು ಇದೇ ಗ್ರಂಥದ ಲಂಕಾ ಕಾಂಡದಲ್ಲಿರುವುದು. ಲಕ್ಷ್ಮಣನು ಮೂರ್ಛಿತನಾಗಿದ್ದಾಗ ಹನುಮಂತನು ಸಂಜೀವನ ಪರ್ವತಕ್ಕೆ ಔಷಧವನ್ನು ತರುವುದಕ್ಕೆ ಹೋಗಿದ್ದಾಗ ರಾವಣನು ಕಾಲನೇಮಿಗೆ ಕಪಟವೇಷವನ್ನು ಹಾಕಿ, ಹನುಮಂತನನ್ನು ಮೋಸಗೊಳಿಸಲು ಕಳುಹಿಸಿದ್ದನು. ಆದರೆ ಕೊನೆಗೆ ಗುಟ್ಟು ರಟ್ಟಾಗಿ, ಕಾಲನೇಮಿಯು ವಧಿಸಲ್ಪಟ್ಟನು.

† ರಾವಣನು ಮೋಸದಿಂದ ಸೀತೆಯನ್ನು ಕೊಂಡೊಯ್ದನು ಆದರೆ ಕೊನೆಗೆ ಅವನೇ ವಧಿಸಲ್ಪಟ್ಟನು.

‡ ಸಮುದ್ರಮಂಥನದಲ್ಲಿ ೧೪ ರತ್ನಗಳು ದೊರೆತವು. ವಿಷ್ಣು ಭಗವಾನನು ದೇವತೆಗಳಿಗೆ ಅಮೃತಪ್ರಾಶನಮಾಡಿಸುತ್ತಿರುವಾಗ, ರಾಹುವು, ರಾಕ್ಷಸನಾಗಿದ್ದರೂ, ಮೋಸದಿಂದ ದೇವತೆಗಳ ಪಙ್ತ್ತಿಯಲ್ಲಿ ಕುಳಿತಿದ್ದನು. ಭಗವಂತನು ಅವನ ಮೋಸವನ್ನರಿತು, ತನ್ನ ಚಕ್ರದಿಂದ ಅವನ ಶಿರಚ್ಛೇದನ ಮಾಡಿದನು.

ಚತುರರು ಕಂಡುಕೊಳ್ಳುವರು. ಶುಕ್ಲಕೃಷ್ಣ ಪಕ್ಷಗಳಲ್ಲಿ ಪ್ರಕಾಶವೂ, ಅಂಧಕಾರವೂ ಸಮಾನವಾಗಿರುವವು. ಆದರೆ ವಿಧಾತನು ಇವುಗಳ ಹೆಸರಿನಲ್ಲಿ ಶುಕ್ಲ ಅಥವಾ ಶುಭ್ರ ಮತ್ತು ಕೃಷ್ಣ ಅಥವಾ ಕಪ್ಪು ಎಂಬ ಭೇದವನ್ನಿಟ್ಟಿರುವನು ಒಂದು ಚಂದ್ರನನ್ನು ವರ್ಧಿಸುವುದು, ಇನ್ನೊಂದು ಅವನನ್ನು ಕ್ಷಯಿಸುವುದೆಂದು ತಿಳಿದು ಜನರು ಒಂದಕ್ಕೆ ಯಶಸ್ಸನ್ನೂ ಇನ್ನೊಂದಕ್ಕೆ ಅಪಯಶಸ್ಸನ್ನೂ ಕೊಟ್ಟಿರುವರು.

ದೋ||೧೫-೧೬|| ಜಗತ್ತಿನಲ್ಲಿರುವ ಎಲ್ಲ ಜಡ ಮತ್ತು ಚೇತನ ಜೀವಿಗಳು ರಾಮಮಯ ಅರ್ಥಾತ್ ರಾಮರೂಪವೆಂದು ಭಾವಿಸಿ ಅವುಗಳ ಚರಣಕಮಲಗಳಿಗೆ ಸದಾ ಕೈಜೋಡಿಸಿ ನಾನು ನಮಿಸುವೆನು. ದೇವತೆಗಳು, ದೈತ್ಯರು, ಮನುಷ್ಯರು, ಸರ್ಪ, ಪಕ್ಷಿ, ಪ್ರೇತ, ಪಿತೃಗಳು, ಗನ್ಧರ್ವ, ಕಿನ್ನರ, ನಿಶಾಚರರೆಲ್ಲರಿಗೂ ನಾನು ಪ್ರಣಾಮಮಾಡುವೆನು. ಈಗ ಎಲ್ಲರೂ ನನ್ನ ಮೇಲೆ ಕೃಪೆಯಿಡಲಿ.

ಎಂಭತ್ತುನಾಲ್ಕು ಲಕ್ಷ ಯೋನಿ ಸಂಭೂತ ಸ್ವೇದ್ವಜ, ಅಂಡಜ, ಉದ್ಭಿಜ, ಜರಾಯುಜವೆಂಬ ನಾಲ್ಕು ಪ್ರಕಾರದ ಜೀವಗಳು ಜಲ, ಸ್ಥಳ, ಮತ್ತು ಆಕಾಶದಲ್ಲಿ ವಾಸಿಸುತ್ತಿರುವವು. ಅವುಗಳೆಲ್ಲವೂ ಎಂಗರೆ ಇಡೀ ಜಗತ್ತು ಸೀತಾರಾಮಮಯ—ಸೀತಾರಾಮರೂಪವೆಂದು ಭಾವಿಸಿ ನಾನು ಎರಡು ಕೈಗಳನ್ನೂ ಜೋಡಿಸಿ, (ಜಗತ್ತಿಗೆ) ಪ್ರಣಾಮವಮಾಡುವೆನು. ವಂಚನೆ ಮತ್ತು ಕೋಪವನ್ನು ಬಿಟ್ಟು, ನಾನೊಬ್ಬ ನಿಮ್ಮ ದಾಸನೆಂದು ಭಾವಿಸಿ, ಎಲ್ಲರೂ ನನ್ನ ಮೇಲೆ ಕೃಪೆ ಇಡಿರಿ ! ಏಕೆಂದರೆ ನನ್ನ ಬುದ್ಧಿ ಬಲದಲ್ಲಿ ನನಗೆ ವಿಶ್ವಾಸವಿಲ್ಲ ಆದುದರಿಂದ ನಿಮ್ಮೆಲ್ಲರ ಬಳಿಯಲ್ಲಿ ನಾನು ವಿನಂತಿಮಾಡಿಕೊಳ್ಳುವೆನು. ನಾನು ಶ್ರೀರಾಮಚಂದ್ರನ ಗುಣಾನುವಾದ ಯುಕ್ತ ಕಥೆಯನ್ನು (ನಿಮಗೆ) ಹೇಳಲಪೇಕ್ಷಿಸಿರುವೆನು ಆದರೆ ನನ್ನ ಬುದ್ಧಿಯು ಲಘುವಾಗಿದೆ. ರಾಮಚರಿತ್ರೆಯು ಅಪಾರವಾಗಿದೆ. (ಈ ಕೆಲಸವನ್ನು ಮಾಡಲು ಕವಿತೆಯ ಅನೇಕ) ಅಂಗಗಳಲ್ಲಿ ನನಗೆ ಒಂದು ಅಂಗವಾಗಲಿ ಉಪಾಯವಾಗಲಿ ಸೂಚಿಸುತ್ತಿಲ್ಲ. ಏಕೆಂದರೆ ನನ್ನ ಬುದ್ಧಿಯು ಕಂಗಾಲವಾಗಿರುವುದು. ಮನೋರಥವಾದರೊ ರಾಜತುಲ್ಯವಾಗಿರುವುದು. ನನ್ನ ಬುದ್ಧಿಯು ಕಡುಕೀಳಾಗಿರುವುದು ; ಇಚ್ಛೆಯಾದರೊ ಬಹು ಉಚ್ಚವಾಗಿರುವುದು. ಮಜ್ಜಿಗೆಯೇ ಸಿಕ್ಕುವಂತಿಲ್ಲ, ಇಂಥಾದ್ದರಲ್ಲಿ ಅಮೃತದ ಮೇಲೆ ಆಸೆಯುಂಟಾಗಿದೆ. ಆದರೂ ಸಜ್ಜನರು ನನ್ನ ಎದೆಗಾರಿಕೆಯನ್ನು ಕ್ಷಮಿಸಿ ಬಾಲಕನಂತಿರುವ ನನ್ನ ವಚನಗಳನ್ನು ಮನಸ್ಸಿಟ್ಟು ಕೇಳುವರು ; ಬಾಲಕನ ತೊದಲ್ನುಡಿಗಳನ್ನು ಮಾತಾಪಿತೃಗಳು ಆನಂದದಿಂದ ಕೇಳುವಂತೆ ಮನಃಪೂರ್ವಕವಾಗಿ ಕೇಳುವರು. ಆದರೆ ಕುಟಿಲರೂ, ಕುವಿಚಾರಿಗಳೂ, ಪರದೂಷಣವೆ ಭೂಷಣವೆಂದು ಭಾವಿಸುವವರೂ ನನ್ನ ಮಾತನ್ನು ಕೇಳದಿರುವರು.

ನನ್ನ ಕವಿತೆಯು ಸರಸವಾದರೂ ಆಗಲಿ, ನೀರಸವಾದರೂ ಆಗಲಿ, ಅದಾರಿಗೂ ರುಚಿಸುವುದಿಲ್ಲವೆ? ಎಲ್ಲರಿಗೂ ರುಚಿಸುವುದು. ಈ ಜಗತ್ತಿನಲ್ಲಿ ಮತ್ತೊಬ್ಬರ ಕವಿತೆಯನ್ನು ಕೇಳಿ ಪ್ರಸನ್ನರಾಗುವ ಶ್ರೇಷ್ಟ ಪುರುಷರು ವಿಶೇಷವಾಗಿಲ್ಲ. ಭ್ರಾತೃಗಳೇ! ಈ ಜಗತ್ತಿನಲ್ಲಿ ಗಂಗಾನದಿಯಂತೆ ಅನ್ಯಜಲ ಪ್ರಾಪ್ತಿಯಾದಾಗ ತನ್ನ ಪಾತ್ರವನ್ನು ಮಹಾ ಪ್ರವಾಹದಿಂದ ತುಂಬಿಸುವಂತಹ ಜನರು ಬಹುಸಂಖ್ಯಾಕರಾಗಿರುವರು. ಆದರೆ ಪೌರ್ಣಿಮೆಯ ಚಂದ್ರನನ್ನು ನೋಡಿ ಸಮುದ್ರದಂತೆ ಉಕ್ಕುವ ಸಜ್ಜನರು ಅತಿವಿರಳರು.

ದೋ॥೧೭॥ ನನ್ನ ಭಾಗ್ಯವು ಅಲ್ಪವಾದುದು, ಅಭಿಲಾಷೆಯು ವಿಶೇಷವಾಗಿದೆ. ಆದರೂ ಇದನ್ನು ಕೇಳಿ ಸಜ್ಜನರು ಸುಖವನ್ನು ಹೊಂದುವರು. ದುರ್ಜನರು ನಗುವರು ಎಂಬ ಭರವಸೆಯು ನನ್ನಲ್ಲಿ ಪೂರ್ಣವಾಗಿರುವುದು ದುಷ್ಟರು ನಗುವುದರಿಂದಲೂ ನನಗೆ ಹಿತವೇ ಆಗುವುದು. ಕಾಗೆಯು ಮಧುರವಾದ ಸುಸ್ವರದ ಕೋಗಿಲೆಯ ಕಂಠವು ಕರ್ಕಶವಾಗಿದೆಯೆಂದು ಹೇಳುವುದು. ಬಕವು ಹಂಸವನ್ನೂ, ಕಪ್ಪೆಯು ಪಪೀಹ (ಪಕ್ಷಿ ವಿಶೇಷ) ವನ್ನೂ ಹಾಸ್ಯಮಾಡುವಂತೆ ಮಲಿನಖಲರು ನಿರ್ಮಲ ವಾಕ್ಯಗಳನ್ನು ಕಂಡು ಹಾಸ್ಯಮಾಡುವರು ಯಾರು ಕವಿತೆಯಲ್ಲಿ ರಸಿಕರಾಗಿದ್ದರೂ ಶ್ರೀರಾಮಚಂದ್ರನ ಚರಣಗಳಲ್ಲಿ ಪ್ರೀತಿಯನ್ನಿಟ್ಟಿಲ್ಲವೊ, ಅಂತಹರಿಗೂ ಕೂಡ ಈ (ನನ್ನ) ಕವಿತೆ ಹಾಸ್ಯರಸವಾಗಿ ಆನಂದವನ್ನು ಕೊಡುವುದು. ಏಕೆಂದರೆ ಈ ಕವಿತೆಯು ನನ್ನ ಭಾಷೆಯ ಕವಿತೆಯು. ನಾನಾದರೂ ಅಲ್ಪಬುದ್ಧಿಯ ಮನುಷ್ಯನು; ಆದುದರಿಂದ ಅವರು ನಗುವುದು ಯೋಗ್ಯವಾಗಿಯೆ ಇರುವುದು. ಅದರಲ್ಲಿ ದೋಷವೇನೂ ಇಲ್ಲ ಯಾರಿಗೆ ಶ್ರೀರಾಮಚಂದ್ರನ ಚರಣಗಳಲ್ಲಿ ಪ್ರೇಮವಿಲ್ಲವೊ ಮತ್ತು ಅದರ ಪರಿಚಯವೇಸರಿಯಾಗಿಲ್ಲವೊ, ಅಂಥವರಿಗೆ ಈ ಕಥೆಯು ನೀರಸವಾಗಿರಬಹುದು. ಯಾರಿಗೆ ಹರಿಹರ ಚರಣಗಳಲ್ಲಿ ಪ್ರೇಮವಿರುವುದೊ, ಯಾರ ಬುದ್ಧಿಯು ಕುತರ್ಕದಲ್ಲಿ ಮಗ್ನವಾಗಿಲ್ಲವೊ, ಅಂಥವರಿಗೆ ಶ್ರೀರಾಮಚಂದ್ರನ ಕಥೆಯು ಮಧುರವಾಗಿರುವುದು. ಈ ಕಥೆಯು ಶ್ರೀರಾಮನ ಮೇಲಣ ಭಕ್ತಿಯಿಂದ ಭೂಷಿತವಾದುದೆಂದೆಣಿಸಿ ಸಜ್ಜನರು ಇದನ್ನು ಕೇಳುವರು. ಮತ್ತು ತಮ್ಮ ಸುಂದರವಾದ ವಾಣಿಯಿಂದ ಸ್ತುತಿಸುವರು. ನಾನು ಕವಿಯಲ್ಲ, ಮಾತಿನಲ್ಲಿ ಚತುರನೂ ಅಲ್ಲ. ಎಲ್ಲ (೬೪) ಕಲೆಗಳನ್ನೂ, ಎಲ್ಲ (೧೪) ವಿದ್ಯೆಗಳನ್ನೂ ಅರಿತವನಲ್ಲ. ಅಕ್ಷರ, ಅದರ ಅರ್ಥ, ಅಲಂಕಾರ, ಛಂದಸ್ಸು ಮತ್ತು ಅವುಗಳ ರಚನೆಗಳು ಅನೇಕ ಪ್ರಕಾರವಾಗಿರುವವು. ಭಾವ ಮತ್ತು ರಸಗಳಲ್ಲಿ ಅಪಾರಭೇದಗಳಿರುವವು. ಹಾಗೆಯೆ ಕವಿತೆಯಲ್ಲಿ ನಾನಾ ಪ್ರಕಾರವಾದ ಗುಣದೋಷಗಳಿರುವವು. ಕವಿತೆಯ ವಿಚಾರವು ನನಗೆ ಒಂದಾದರೂ ಗೊತ್ತಿಲ್ಲ. ಈ ಮಾತನ್ನು ನಾನು ನೂತನ ಪತ್ರದ ಮೇಲೆ ಬರೆದು (ಎಂದರೆ ಶಪಥಪೂರ್ವಕವಾಗಿ) ಹೇಳುವೆನು. (ನೂತನ

ಪತ್ರದ ಮೇಲೆ ಬರೆವುದೂ ಒಂದು ವಿಧವಾದ ಪ್ರಮಾಣವೆಂದು ಗಣಿಸಲ್ಪಟ್ಟಿರುವುದು.)

ದೋ॥೧೮॥ ನನ್ನ ಕವಿತೆಯಲ್ಲಿ ಯಾವ ಗುಣವೂ ಇಲ್ಲ. ಆದರೆ ಜಗತ್ತಿನಲ್ಲಿ ವಿಖ್ಯಾತವಾದ ಒಂದು ಗುಣವು ಇದರಲ್ಲಿರುವುದು. ಈ ವಿಚಾರದಿಂದ ಸುಬುದ್ಧಿಯುತರೂ, ನಿರ್ಮಲಜ್ಞಾನಿಗಳೂ ಇದನ್ನು ಕೇಳುವರು ಇದರಲ್ಲಿ ಪರಮಪವಿತ್ರವೂ, ಉದಾರವೂ, ಪುರಾಣ ಮತ್ತು ಶ್ರುತಿಗಳ ಸಾರಭೂತವೂ, ಮಂಗಳ ಭವನಸ್ವರೂಪವೂ, ದುಃಖನಾಶಕವೂ ಆದ, ಪಾರ್ವತೀಪರಮೇಶ್ವರರಿಂದ ಜಪಿಸಲ್ಪಡುತ್ತಿರುವ ರಾಮನಾಮವು ಇರುವುದು. ಕವಿತೆಯು ಎಷ್ಟೇ ವಿಚಿತ್ರವಾಗಿರಲಿ, ಅಥವಾ ಶ್ರೇಷ್ಠಕವಿಯಿಂದ ರಚಿಸಲ್ಪಟ್ಟದ್ದೇ ಆಗಿರಲಿ, ಅದರಲ್ಲಿ ರಾಮನಾಮವಿಲ್ಲದಿದ್ದರೆ ಅದು ಶೋಭಿಸಲಾರದು. ಚಂದ್ರಮುಖಿಯಾದ ಸುಂದರಿಯು ಎಲ್ಲ ವಿಧವಾದ ಶೃಂಗಾರಗಳನ್ನು ಮಾಡಿಕೊಂಡಿದ್ದರೂ ವಸ್ತ್ರದ ವಿನಾ ಶೋಭಿಸುವುದಿಲ್ಲ. ಸರ್ವ ಗುಣರಹಿತವಾದ ಕುಕವಿಯ ಕವಿತೆಯು ರಾಮನಾಮದಿಂದ ಅಂಕಿತವಾಗಿದ್ದರೆ ಪಂಡಿತರು ಅದನ್ನು ಅದರಪೂರ್ವಕವಾಗಿ ಶ್ರವಣಪಠನಮಾಡುವರು; ಏಕೆಂದರೆ ಸಂತ ಜನರು ಭ್ರಮರದಂತೆ ಗುಣಗ್ರಹಣ ಮಾಡುವರು. ಇದರಲ್ಲಿ ಕವಿತೆಯ ರಸವು ತಿಲಮಾತ್ರವೂ ಇಲ್ಲ. ಆದರೂ ರಾಮಚಂದ್ರನ ಪ್ರತಾಪವು ಇದರಲ್ಲಿ ಪ್ರಕಟವಾಗಿರುವುದು. ಇನ್ನು ಸಾಕು ನನಗೆ ಈ ನಾಮವೊಂದರಲ್ಲಿಯೆ ಪೂರ್ಣಭರವಸೆಯಿರುವುದು. ಸತ್ಸಂಗದಿಂದ ಶ್ರೇಷ್ಠತೆಯನ್ನು ಹೊಂದದವರಾರು? ಧೂಮವೂ ಅಗರ (ಊದು) ಬತ್ತಿಯೊಂದಿಗೆ ಸುಗಂಧಿತವಾಗಿ ತನ್ನ ಸ್ವಾಭಾವಿಕ ತಮೋಗುಣವನ್ನು ಬಿಡುವುದು. ನನ್ನ ಕವಿತೆಯು ನಿರ್ಬೋಧಕವಾಗಿದೆ. ಆದರೆ ಇದರಲ್ಲಿ ಜಗತ್ತಿಗೆ ಮಂಗಳಕರವಾದ **'ರಾಮಕಥಾ'** ರೂಪಿಯಾದ ಒಳ್ಳೆಯ ವಸ್ತುವಿನ ವರ್ಣನೆ ಇರುವುದು.

**ಶ್ರೀರಾಮನಾಮ ಮಹಾತ್ಮೆಯೂ ಶ್ರೀರಾಮಚರಿತ ಮಹಿಮೆಯೂ.**

ಪಾಠಕರೆ,! ಶ್ರೀ ಗೋಸ್ವಾಮಿ ತುಳಸೀದಾಸರು ಹೇಳುತ್ತಾರೆ, ಕೇಳಿರಿ! ಶ್ರೀರಾಮನ ಕಥೆಯು ಮಂಗಳಕರವಾದುದು, ಮತ್ತೆ ಕಲಿಯುಗದ ದೋಷಗಳನ್ನು ನಾಶಪಡಿಸುವುದು. ಈ ಕವಿತಾರೂಪಿಯಾದ ನದಿಯು ಪವಿತ್ರಜಲಮಯಿಯಾದ ಗಂಗಾನದಿಯಂತೆ ವಕ್ರಗತಿಯಿಂದ ಪ್ರವಹಿಸುತ್ತಲಿರುವುದು. ಆದರೆ ಮಹಾದೇವನ ಅಂಗಸಂಗದಿಂದ ಮನೋಹರವೂ, ಸ್ಮರಣಮಾತ್ರದಿಂದ ಪವಿತ್ರಕರವೂ ಆದ ಸ್ಮಶಾನದ ಅಪವಿತ್ರ ಬೂದಿಯಂತೆ, ಪ್ರಭುವಿನ ಸುಯಶಸ್ಸಂಗದಿಂದ ನನ್ನ ಕುಕವಿತೆಯು ಸುಕವಿತೆಯಾಗಿ ಸಜ್ಜನರ ಮನಸ್ಸಿಗೆ ಸಂತೋಷವನ್ನುಂಟು ಮಾಡುವುದು.

ದೋ॥ ೧೯॥೨೦॥ ಚಂದನವು ಕಟ್ಟಿಗೆಯಾಗಿದ್ದರೂ ಮಲಯ ಪರ್ವತದ ಸಂಬಂಧ ವಿಶೇಷದಿಂದ ಆದರ ಹೊಂದುವಂತೆ ನನ್ನ ಕವಿತೆಯು ಶ್ರೀರಾಮಚಂದ್ರನ

ಯಶಸ್ಸಂಬಂಧದಿಂದ ಎಲ್ಲರಿಗೂ ಪ್ರಿಯಕರವಾಗಲಿ! ಹಸುವು ಕಪ್ಪಾಗಿದ್ದರೂ ಅದರ ಉಜ್ವಲ ದುಗ್ಧವು ಅಧಿಕ ಗುಣದಾಯಕವೆಂದು ಜನರು ಪಾನಮಾಡು ವಂತೆ, ನನ್ನ ಕವಿತೆಯ ಭಾಷೆಯು ಗ್ರಾಮ್ಯವಾಗಿದ್ದರೂ ಸುಂದರವೂ ಉಜ್ವಲವೂ ಆದ ಶ್ರೀ ಸೀತಾರಾಮರ ಯಶೋವರ್ಣನ ಪ್ರಭಾವದಿಂದ ಚತುರರಾದ ಸಜ್ಜನರು ಇದನ್ನೇ ಹಾಡುವರು ಮತ್ತು ಕೇಳುವರು. ಮಣಿ, ಮಾಣಿಕ್ಯ, ಮುತ್ತು ಇವು ಗಳು ರಾಜನ ಮುಕುಟ ಮತ್ತು ಯುವತಿಯಾದ ಸ್ತ್ರೀಯ ಶರೀರವನ್ನು ಹೊಂದಿ ಶೋಭಿಸುವಂತೆ ಸಸ್ಯ ಪರ್ವತ ಮತ್ತು ಆನೆಗಳ ಮಸ್ತಕಗಳಮೇಲೆ ಶೋಭಿಸ ಲಾರವು. ಸುಕವಿಯ ಕವಿತೆಗಳು ಒಂದೆಡೆಯಲ್ಲಿ ರಚಿಸಲ್ಪಟ್ಟರೆ ಮತ್ತೊಂದೆಡೆ ಯಲ್ಲಿ ಅವು ಶೋಭೆಯನ್ನು ಹೊಂದುವುವೆಂದು ಪಂಡಿತರು ಹೇಳುವರು. ಎಂದರೆ ಕವಿಯು ಕವಿತ್ವವನ್ನು ಮಾಡುವನು, ಅದನ್ನು ಓದುವವನ ಮುಖದಲ್ಲಿ ಅದುಶೋಭೆಯನ್ನು ಹೊಂದುವುದು ಆವನಾದರೊಬ್ಬ ಕವಿಯು ಕವಿ ತೆಯನ್ನು ಬರೆಯಲು ಕುಳಿತಾಗ ಭಕ್ತಿಯಿಂದ ಸರಸ್ವತಿಯ ಧ್ಯಾನಮಾ ಡಿದರೆ, ಸರಸ್ವತೀದೇವಿಯು ಬ್ರಹ್ಮ ಲೋಕವನ್ನು ಬಿಟ್ಟು ಕೂಡಲೇ ಕವಿಯ ಬಳಿಗೆ ಓಡಿ ಬರುವಳು. ಬ್ರಹ್ಮಲೋಕದಿಂದ ಪೃಥ್ವಿಯ ವರೆಗೆ ಬಳಲಿ ಬಂದಿರುವ ಸರಸ್ವತಿಯ ದಣುವನ್ನು ಈ ರಾಮಚರಿತ ರೂಪಿ ಯಾದ ಸರೋವರದಲ್ಲಿ ಸ್ನಾನ ಮಾಡಿಸುವುದರ ವಿನಾ ಬೇರೆ ಕೋಟ್ಯಾಂತರ ಉಪಾಯಗಳಿಂದಲೂ ನಿವಾರಿಸಲಾಗುವುದಿಲ್ಲ. ಕವಿಯೂ ಪಂಡಿತನೂ ತನ್ನ ತನ್ನ ಹೃದಯದಲ್ಲಿ ಈ ಭಾವನೆಯನ್ನು ತಂದುಕೊಂಡು ಕಲಿಮಲವನ್ನು ನಿವಾ ರಿಸುವ ದಾರಿಯ ಯಶಸ್ಸನ್ನು ಹಾಡುವರು. ಸಾಧಾರಣ ಮನುಷ್ಯರ ಗುಣಗಾನ ವನ್ನು ಮಾಡುವುದರಿಂದ ಸರಸ್ವತಿಯು ತನ್ನ ತಲೆಯನ್ನು ಬಡಿದುಕೊಂಡು ಪರಿತಪಿಸಲಾರಂಬಿಸುವಳು. ಜ್ಞಾನಿಗಳು ಕವಿಗಳ ಹೃದಯವನ್ನು ಸಮುದ್ರ ವೆಂದೂ, ಬುದ್ಧಿಯನ್ನು ಮುತ್ತಿನ ಚಿಪ್ಪೆಯೆಂದೂ ಸರಸ್ವತಿಯನ್ನು ಸ್ವಾತೀ ನಕ್ಷತ್ರ ಸಮಾನಳೆಂದೂ ಕರೆಯುವರು. ಸರಸ್ವತೀ ದೇವಿಯು ವಿಚಾರ ರೂಪಿಯಾದ ಜಲವರ್ಷವನ್ನು ಉಂಟುಮಾಡುವದರಿಂದ ಕವಿತಾ ರೂಪಿಯಾದ ಸುಂದರ ಮುಕ್ತಾಫಲವು ಉತ್ಪನ್ನವಾಗುವುದು.

ದೋ ॥ ೨೧ ॥ ಆ ಕವಿತಾ ರೂಪಿಯಾದ ಮುತ್ತನ್ನು ಯುಕ್ತಿಯಿಂದ ಭೇದಿಸಿ ರಾಮಚರಿತರೂಪಿಯಾದ ಸುಂದರ ಸೂತ್ರದಲ್ಲಿ ಪೋಣಿಸಿ ಆ ಮಾಲೆ ಯನ್ನು ಸಜ್ಜನರು ತಮ್ಮ ಶುದ್ಧ ಹೃದಯದಲ್ಲಿ ಅತ್ಯಂತಪ್ರೇಮದಿಂದ ಧಾರಣ ಮಾಡುವರು. ಅದರಿಂದವರ ಶೋಭೆಯು ಹೆಚ್ಚುವುದು. ಈ ಕರಾಳವಾದ ಕಲಿಯುಗದಲ್ಲಿ ಕಾಗೆಗಳಂತೆ ಕಾರ್ಯವನ್ನು ಮಾಡುವವರೂ ಹಂಸದಂತೆ ವೇಷ ಧರಿಸುವವರೂ ವೇದಮಾರ್ಗವನ್ನು ಬಿಟ್ಟು ಕುಮಾರ್ಗದಲ್ಲಿ ನಡೆಯು ವವರೂ ಕಪಟ ಶರೀರಿಗಳೂ ಕಲಿಮಲ ಭಂಡಾರಿಗಳು ಆದಂತಹ ಜನರೂ

ಜ್ಞನ್ನಿಸಿರುವರು. ಇಂತಹರು ಬಹಿರಂಗದಲ್ಲಿ ರಾಮಭಕ್ತರೆಂದು ಹೇಳಿಕೊಂಡರೂ ಅಂತರಂಗದಲ್ಲಿ ಕಾಂಚನ, ಕ್ರೋಧ, ಮತ್ತು ಕಾಮದೇವನ ಸೇವಕರಾಗಿರುವರು. ಜಗತ್ತಿನಲ್ಲಿ ಇಂತಹರಲ್ಲಿ ನಾನು ಮೊದಲನೆಯವನೆಂದು ಗಣಿಸಿರುವೆನು. ಅಂತಹ ಧರ್ಮಧ್ವಜದ ಹೊದಿಕೆಯಲ್ಲಿ ಉದ್ಯೋಗವನ್ನು ಮಾಡುವ ಪಶುಗಳಿಗೆ ಧಿಕ್ಕಾರವಿರಲಿ. ನಾನು ನನ್ನ ಅವಗುಣಗಳನ್ನೆಲ್ಲಾ ಲೆಕ್ಕಿಸುತ್ತಾ ಹೋದರೆ ಕಥೆಯು ಬಹು ದೀರ್ಘವಾಗುವುದು ಮತ್ತು ದೋಷಗಳ ಮೇರೆಯೇ ಸಿಕ್ಕದಂತಾಗುವುದು. ಆದುದರಿಂದ ನನ್ನ ಅವಗುಣಗಳನ್ನು ಬಹು ಸಂಕ್ಷಿಪ್ತವಾಗಿ ನಾನು ವರ್ಣಿಸಿರುವೆನು. ಬುದ್ಧಿವಂತರು ಸ್ವಲ್ಪ ವಾಕ್ಯಗಳಿಂದಲೆ ಅವುಗಳನ್ನು ತಿಳಿಯಬಲ್ಲರು. ಆದರೆ ನನ್ನ ಅನೇಕ ಪ್ರಕಾರವಾದ ವಿನಂತಿಗಳನ್ನು ಸನ್ಮಾನಿಸಿ, ಕಥೆಯನ್ನು ಕೇಳಿ ಯಾರೂ ನನ್ನ ಮೇಲೆ ದೋಷವನ್ನು ಹೊರಿಸಲಾರರು. ಇಷ್ಟರ ಮೇಲೂ ಯಾವನಾದರೂ ಸಂದೇಹಪಟ್ಟರೆ ಅವನು ನನ್ನಿಂದಲೂ ಅಧಿಕ ಮೂರ್ಖನೊ ಮಂದಮತಿಯೊ ಆಗುವನು. ನಾನು ಕವಿಯೂ ಅಲ್ಲ, ಚತುರನೂ ಅಲ್ಲ. ನನ್ನ ಬುದ್ಧಿಗನುಸಾರವಾಗಿ ನಾನು ಶ್ರೀರಾಮಚಂದ್ರನ ಗುಣಗಾನ ಮಾಡುವೆನು. ಅಪಾರವಾದ ರಾಮಚರಿತೆ ಎಲ್ಲಿ! ಸಂಸಾರ ಸಮರದಲ್ಲಿ ಸಿಲುಕಿಕೊಂಡಿರುವ ನನ್ನ ಬುದ್ಧಿಯು ಎಲ್ಲಿ! ಪರ್ವತವನ್ನೇ ಹಾರಿಸುವಂತಹ ಗಾಳಿಯ ಎದುರಿನಲ್ಲಿ ಕ್ಷುಲ್ಲಕವಾದ ಉಕ್ತಿಯ ಶಕ್ತಿಯು ಎಷ್ಟು ಮಾತ್ರದ್ದು? ಶ್ರೀರಾಮಚಂದ್ರನ ಪ್ರಭುತ್ವವನ್ನು ಅಪಾರವೆಂದು ತಿಳಿದು ಆತನ ಕಥೆಯನ್ನು ಹೇಳುವುದರಲ್ಲಿ ನನ್ನ ಮನಸ್ಸಿಗೆ ವಿಶೇಷ ಸಂಕೋಚವಾಗುತ್ತಿದೆ

ದೋ ॥೨೨॥ ಏಕೆಂದರೆ ಸರಸ್ವತಿಯೂ ಆದಿಶೇಷನೂ ಮಹಾದೇವನೂ ಬ್ರಹ್ಮನೂ ಶಾಸ್ತ್ರಗಳೂ ವೇದಗಳೂ ಪುರಾಣಗಳೂ 'ನೇತಿ ನೇತಿ' ಎಂದರ ಅಂತವಿಲ್ಲ ಅಂತವಿಲ್ಲವೆಂದು ಆತನ ಗುಣಗಳನ್ನು ಹಗಲಿರುಳೂ ಗಾನಮಾಡುತ್ತಿರುವರು.

ಪ್ರಭು ಶ್ರೀರಾಮಚಂದ್ರನ ಮಹಿಮೆಯು ಹೀಗೆ ಅನಂತವಾಗಿರುವುದೆಂದು ಸರ್ವರು ತಿಳಿದಿದ್ದರೂ ಅದನ್ನು ಹೇಳದಿರುವುದು ಅಸಾಧ್ಯವು. ಈ ವಿಚಾರದಲ್ಲಿ ಭಜನೆಯ ಪ್ರಭಾವವು ಅನೇಕ ಪ್ರಕಾರವಾಗಿರುವುದೆಂದು ವೇದವು ಹೇಳಿರುವುದು. ವೇದಕ್ಕನುಸಾರವಾಗಿ ಪರಮೇಶ್ವರನು ಒಬ್ಬನೇ, ಆತನು ಚೇಷ್ಟಾರಹಿತನು ರೂಪರಹಿತನು ನಾಮರಹಿತನು ಜನ್ಮರಹಿತನು. ಆತನು ಸಚ್ಚಿದಾನಂದನು ಪರಮಧಾಮನು. ಆತನು ಇಡೀ ವಿಶ್ವವನ್ನು ವ್ಯಾಪಿಸಿಕೊಂಡಿರುವನು, ಆತನು ವಿಶ್ವರೂಪಿಯು ಎಂದರೆ ಇಡೀ ವಿಶ್ವವು ಆತನಲ್ಲಿ ಸ್ಥಿತವಾಗಿರುವುದು, ಆ ಪರಮೇಶ್ವರನು ಶರೀರಧಾರಣಮಾಡಿ ನಾನಾಚರಿತ್ರ ಘಟನೆಗಳನ್ನುಂಟುಮಾಡುವನು. ಆತನು ಕೇವಲ ತನ್ನ ಭಕ್ತರ ಹಿತಕ್ಕೋಸುಗ ಅವತಾರ ಧರಿಸುವನು, ಏಕೆಂದರೆ ಆತನು ಬಹು ಕೃಪಾಳು, ಸೇವಕರ ಮೇಲೆ ಸ್ನೇಹವನ್ನಿಡುವನು ಭಕ್ತ ಜನರ ಮೇಲೆ ಆತನ ಮಮತೆಯೂ ಕೃಪೆಯೂ ವಿಶೇಷವಾಗಿರುವುದು ಮತ್ತು ಆತನ

ಕರುಣೆಯ ದೆಸೆಯಿಂದಲೆ ಭಕ್ತನ ಮೇಲೆ ಆತನೆಂದಿಗೂ ಕೋಪಗೊಳ್ಳುವುದಿಲ್ಲ. ಮಮತಾ ಪೂರ್ಣನಾದ ಶ್ರೀರಘುನಾಥನು ಕಳೆದುಹೋದ ವಸ್ತುವನ್ನು ಪುನಃ ದೊರಕಿಸಿ ಕೊಡುವನು. ಆತನು ದೀನ ಬಂಧುವೂ ಸರಳನೂ ಬಲಿಷ್ಟನೂ ಸರ್ವರ ಸ್ವಾಮಿಯೂ ಆಗಿರುವನು. ಇದನ್ನು ತಿಳಿದು ಪಂಡಿತರು ಆ ಹರಿಯ ಯಶೋವರ್ಣನೆಯನ್ನು ಮಾಡಿ ತಮ್ಮ ವಾಣಿಯನ್ನು ಪವಿತ್ರ ಮತ್ತು ಸಫಲಗೊಳಿಸುವರು. ನಾನೂ ಸಹ ಅದೇ ಬಲದಿಂದ ಶ್ರೀರಾಮಚಂದ್ರನ ಚರಣಗಳಲ್ಲಿ ಶಿರವನ್ನಿಟ್ಟು ಆತನ ಗುಣದ ಕಥೆಯನ್ನು ಹೇಳುವೆನು ಭ್ರಾತೃಗಳೆ, ವಾಲ್ಮೀಕರಾದಿಯಾಗಿ ಮುನಿಗಳೆಲ್ಲರು ಈ ಮೊದಲು ಹರಿಯ ಕೀರ್ತಿಯನ್ನು ಪಾಡಿರುವರು. ಅದೇ ಮಾರ್ಗದಲ್ಲಿ ಹೋಗುವುದು ನನಗೆ ವಿಶೇಷ ಸುಗಮವಾಗಿರುವುದು

ದೊ॥ ೨೩ ॥ ಯಾವ ಪ್ರಕಾರವಾಗಿ ಅಗಲವಾದ ನದಿಯ ಮೇಲೆ ರಾಜನು ಕಟ್ಟಿಸಿದ ಸೇತುವೆಯ ಮೇಲೆ ಹತ್ತಿ ಸಣ್ಣ ಸಣ್ಣ ಇರುವೆಗಳೂ ಕೂಡ, ವಿಶೇಷ ಶ್ರಮವಿಲ್ಲದೆ ಪಾರಾಗಬಲ್ಲವೊ, ಅದೇ ಪ್ರಕಾರವಾಗಿ ನಾನೂ ಕೂಡ ಮನಸ್ಸಿನಲ್ಲಿ ಬಲವನ್ನು ಧರಿಸಿ ರಘುಪತಿಯ ಮನೋಹರವಾದ ಕಥೆಯನ್ನು ರಚಿಸುವೆನು. ವೇದವ್ಯಾಸರಾದಿಯಾಗಿ ಅನೇಕ ಕವಿಪುಂಗವರು ಸಾದರದಿಂದ ಭಗವಾನನ ಚರಿತ್ರೆಯನ್ನು ಬರೆದಿರುವರು. ನಾನೂ ಆ ಸರ್ವ ಕವಿಗಳ ಚರಣಕಮಲಗಳಿಗೆ ಪ್ರಣಾಮಮಾಡುವೆನು. ಎಲೌ ಕವಿರಾಜರೆ, ನೀವು ನನ್ನ ಮನೋರಥಗಳನ್ನೆಲ್ಲ ಪೂರ್ಣಮಾಡಿರಿ! ಶ್ರೀರಾಮಚಂದ್ರನ ಅನೇಕ ಗುಣಗಳ ವರ್ಣನೆಯನ್ನು ಮಾಡಿರುವ ಕಲಿಯುಗದ ಕವಿಗಳಿಗೂ ಕೂಡ ನಮಿಸುವೆನು. ಪ್ರಾಕೃತ ಭಾಷೆಯಲ್ಲಿ ಚತುರರಾದ ಕವಿಗಳಿಗೂ ಮತ್ತು ಆ ಭಾಷೆಯಲ್ಲ ಹರಿಚರಿತ್ರ ವರ್ಣನೆಯನ್ನು ಮಾಡಿರುವ ಭೂತಭವಿಷ್ಯದ್ವರ್ತಮಾನ ಕವಿಗಳೆಲ್ಲರಿಗೂ ನಿಷ್ಕಪಟ ಭಾವದಿಂದ ನಾನು ನಮಸ್ಕರಿಸುವೆನು. ಎಲ್ಲ ಕವಿಗಳು ನನ್ನ ಮೇಲೆ ಪ್ರಸನ್ನರಾಗಿ ನನ್ನ ಕಥೆಯು ಸಾಧು ಸಮಾಜದಲ್ಲಿ ಆದರಗೊಳ್ಳುವಂತೆ ವರದಾನಮಾಡಬೇಕು ಏಕೆಂದರೆ ಪಂಡಿತರ ಆದರಕ್ಕೆ ಪಾತ್ರವಾಗದ ಗ್ರಂಥವನ್ನು ರಚಿಸುವ ಶ್ರಮವು ವ್ಯರ್ಥವಾಗುವುದು. ಅಂತಹ ಕೆಲಸವನ್ನು ಬಾಲ (ಮೂರ್ಖ) ಕವಿಯು ಮಾಡುವನು. ಗಂಗಾನದಿಯಂತೆ ಸರ್ವರಿಗೂ ಸಮಾನ ಹಿತವನ್ನುಂಟು ಮಾಡುವಂತಹ ಕೀರ್ತಿಯೂ ಕವಿತೆಯೂ ಸಂಪತ್ತಿಯೂ ಶ್ರೇಷ್ಠವಾದುದು. ಆದರೆ ರಾಮಚಂದ್ರನ ಕೀರ್ತಿಯಾದರೊ ಬಹು ಸುಂದರವಾದುದು. ನನ್ನ ಕವಿತೆಯಾದರೊ ಬಹು ದುಷ್ಟವಾಗಿರುವುದು ಎಂಬುದೇ ನನಗೆ ಚಿಂತೆಯನ್ನುಂಟು ಮಾಡಿರುವುದು. ಇದು ಅಸಮಂಜಸವೇ ಸರಿ. ಹೇ ಸಾಧುಪುರುಷರೇ, ನಿಮ್ಮ ಕೃಪೆಯಿಂದ ನನಗೆ ಸುಕವಿತೆಯೂ ಸುಲಭಸಾಧ್ಯವಾಗುವುದು. ಅಥವಾ ಗೋಣಿಯಲ್ಲಿ ರೇಶ್ಮೆಯ ಹೊಲಿಗೆಯಂತೆ ನನ್ನ ಒರಟು ಭಾಷೆಯಲ್ಲಿ ರಾಮಚರಿತವು ಮನೋಹರವಾಗುವುದು.

ದೊ ॥ ೨೪ ॥ ಯಾವ ಕವಿತೆಯನ್ನು ಕೇಳಿ ಶತ್ರುವೂ ಕೂಡ ತನ್ನ ಸ್ವಾಭಾವಿಕವೈರವನ್ನು ಬಿಟ್ಟು ಅದರ ಪ್ರಶಂಸೆಯನ್ನು ಮಾಡುವನೋ ಅಂತಹ ಸರಳವಾದ ಕವಿತೆ ಮತ್ತು ನಿರ್ಮಲವಾದ ಕೀರ್ತಿಗಳನ್ನು ವಿದ್ವಜ್ಜನರು ಆದರಿಸುವರು.

ದೊ ॥ ೨೫—೨೯ ॥ ಆದರೆ ಅಂತಹ ಸರಳ ಕವಿತೆಯು ಶುದ್ಧಬುದ್ಧಿಯ ವಿನಾ ಲಭಿಸಲಾರದು ನನಗೆ ಬುದ್ಧಿ ಬಲವು ಬಹು ಸ್ವಲ್ಪವಾಗಿರುವುದು ಆದುದರಿಂದ ನಾನು ಬಾರಿಬಾರಿಗೂ ವಿನಂತಿಮಾಡಿಕೊಳ್ಳುವೆನು, ಹೇ ಸಜ್ಜನರೆ ತಾವು ಕೃಪೆಯಿಡಬೇಕು ನಾನು ರಾಮಚಂದ್ರನ ಯಶೋವರ್ಣನೆಯನ್ನು ಮಾಡುವೆನು. ರಾಮಚರಿತರೂಪಿಯಾದ ಮಾನಸ ಸರೋವರದ ಸುಂದರ ಹಂಸದಂತಿರುವ ಕವಿಗಳೂ ಪಂಡಿತ ಜನರೂ ಬಾಲಕನಾದ ನನ್ನ ಬಿನ್ನಹವನ್ನು ಕೇಳಿ, ನನ್ನ ರಾಮಕಥಾ ಪಠನದ ಸುರುಚಿಯನ್ನು ನೋಡಿ ನನ್ನ ಮೇಲೆ ಕೃಪೆಮಾಡಬೇಕು. ಖರ (ರಾಕ್ಷಸ) ನ ಕಥೆಯನ್ನೊಳಗೊಂಡಿದ್ದರೂ ಕೋಮಲವಾಗಿಯೂ ಸುಂದರವಾಗಿಯೂ ಇರುವ ಮತ್ತು ದೂಷಣ (ರಾಕ್ಷಸ) ನ ಕಥೆಯನ್ನೊಳಗೊಂಡಿದ್ದರೂ ನಿರ್ದೋಷವಾಗಿ ಇರುವ ಶ್ರೀಮದ್ರಾಮಾಯಣವನ್ನು ರಚಿಸಿದ ಶ್ರೀ ವಾಲ್ಮೀಕಿ ಮುನಿಯ ಚರಣ ಕಮಲಗಳಿಗೆ ನಾನು ನಮಸ್ಕರಿಸುವೆನು ಸಂಸಾರ ಸಮುದ್ರವನ್ನು ಪಾರಾಗಲು ನಾವೆಯಂತಿದ್ದು ರಘುನಾಥನ ಪವಿತ್ರ ಚರಿತ್ರೆಯನ್ನು ವರ್ಣಿಸುವುದರಲ್ಲಿ ಸ್ವಪ್ನದಲ್ಲಿಯೂ ಕೂಡ ಭೇದವನ್ನೊಳಗೊಳ್ಳದ ನಾಲ್ಕು ವೇದಗಳಿಗೂ ಪ್ರಣಾಮಮಾಡುವೆನು ಈ ಸಂಸಾರಸಾಗರವನ್ನು ನಿರ್ಮಿಸಿದ ಬ್ರಹ್ಮನ ಚರಣರಜಕ್ಕೆ ನಮಿಸುವೆನು. ಈ ಸಮುದ್ರದಲ್ಲಿ ಅಮೃತ, ಚಂದ್ರ ಮತ್ತು ಕಾಮಧೇನುಗಳ ಬದಲಾಗಿ ಸಜ್ಜನರನ್ನೂ, ವಿಷ ಮತ್ತು ಮದಿರೆಗಳ ಸ್ಥಳದಲ್ಲಿ ದುಷ್ಟ ಜನರನ್ನೂ ನಿರ್ಮಿಸಲಾಗಿದೆ.

ದೊ ॥ ೩೦ ॥ ದೇವತಾ, ಬ್ರಾಹ್ಮಣ, ಪಂಡಿತ, ಗ್ರಹ—ಇವರೆಲ್ಲರ ಚರಣಗಳಿಗೆ ವಂದಿಸಿ ನಾನು ಕೈಜೋಡಿಸಿ ಪ್ರಾರ್ಥಿಸಿಕೊಳ್ಳುವುದೇನೆಂದರೆ, ನನ್ನ ಮೇಲೆ ಪ್ರಸನ್ನರಾಗಿ ನನ್ನ ಶುಭ ಮನೋರಥಗಳೆಲ್ಲವನ್ನು ಪೂರ್ಣಮಾಡಿರಿ. ಪವಿತ್ರವೂ ಮನೋಹರವೂ ಆದ ಚರಿತ್ರೆಯನ್ನುಳ್ಳ ಸರಸ್ವತೀ ಮತ್ತು ಗಂಗಾದೇವಿಯರಿಗೆ ಮತ್ತೆ ನಾನು ನಮಸ್ಕರಿಸುವೆನು. ಒಬ್ಬಾಕೆ ಸ್ನಾನ ಮತ್ತು ಜಲಪಾನದಿಂದ ಪಾಪವನ್ನು ದೂರೀಕರಿಸುವಳು, ಮತ್ತೊಬ್ಬಾಕೆ ಪಠನ ಶ್ರವಣಗಳಿಂದ ಅಜ್ಞಾನವನ್ನು ನಿವಾರಿಸುವಳು. ನನ್ನ ಗುರುವೂ, ಮಾತಾಪಿತೃವೂ, ದೀನದಯಾಳುವೂ ಮತ್ತು ಸುದಿನದಾನಿಯೂ ಸೀತಾಪತಿಯೂ ಆದ ಶ್ರೀರಾಮಚಂದ್ರನ ಸೇವಕನೂ ಸ್ವಾಮಿಯೂ ಮತ್ತು ಮಿತ್ರನೂ, ಮತ್ತೆ ತುಳಸೀದಾಸನಿಗೆ ಸರ್ವ ಪ್ರಕಾರದಿಂದಲೂ ಹಿತಕಾರಿಯೂ ಆದ ಉಮಾಮಹೇಶ್ವರನಿಗೆ ನಮಸ್ಕರಿಸುವೆನು. ಗಿರಿಜಾಶಂಕರನು ಕಲಿಯುಗವನ್ನು ನೋಡಿ ಪ್ರಾಣಿಗಳ ಹಿತಾರ್ಥವಾಗಿ ಸಾಬರಮಂತ್ರ

ಜಾಲವನ್ನು * ರಚಿಸಿರುವನು. ಆ ಮಂತ್ರಗಳ ಅಕ್ಷರಗಳು ಕ್ರಮದಿಂದ ಮಿಳಿತವಾಗಿರುವದಿಲ್ಲ, ಅವುಗಳಿಗೆ ವಿಧಿ ಬದ್ಧವಾದ ಅರ್ಥವೂ ಇರುವುದಿಲ್ಲ. ಆದರೆ ಅದರ ಜಪಮಾತ್ರದಿಂದಲೇ ಮಹಾದೇವನ ಪ್ರತಾಪದ ಪ್ರಭಾವವು ಪ್ರಕಟವಾಗುವುದು ಆ ಶಿವನು ನನ್ನ ಮೇಲೆ ಪ್ರಸನ್ನನಾಗಲಿ! ಏಕೆಂದರೆ ನಾನು ಹರ್ಷಪ್ರದಾಯಕವೂ ಮಂಗಳಕರವೂ ಆದ ರಾಮಕಥೆಯನ್ನು ಹೇಳುವೆನು. ನಾನು ಉಮಾಮಹೇಶ್ವರರಿಬ್ಬರನ್ನೂ ಸ್ಮರಿಸಿ, ಅವರ ಪ್ರಸಾದವನು ಹೊಂದಿ ರಾಮಚರಿತೆಯ ವರ್ಣನೆಯನ್ನು ಮಾಡುವೆನು. ತಾರಾಗಣಸಹಿತನಾದ ಚಂದ್ರನಿಂದ ಕಾಳರಾತ್ರಿಯು ಶೋಭಾಪೂರ್ಣವಾಗುವಂತೆ ಮಹಾದೇವನ ಕೃಪೆಯಿಂದ ನನ್ನ ಕಥೆಯು ಮನೋಹರವಾಗುವುದು ಯಾರು ಈ ಕಥೆಯನ್ನು ಪ್ರೇಮದಿಂದ ಹೇಳುವರೊ, ಭಕ್ತಿಯಿಂದ ಕೇಳುವರೊ, ಏಕಾಗ್ರ ಚಿತ್ತದಿಂದ ತಿಳಿದುಕೊಳ್ಳುವರೊ ಅಂತಹರು ರಾಮಚಂದ್ರನ ಚರಣಗಳ ಭಕ್ತರಾಗುವರು ಮತ್ತು ಅವರು ಕಲಿಯುಗದ ದೋಷಗಳಿಂದ ದೂರರಾಗಿ ಕಲ್ಯಾಣ ಭಾಗಿಗಳಾಗುವರು.

ದೋ ॥೩೧॥ ಉಮಾಮಹೇಶ್ವರರು ನನ್ನ ಸ್ವಪ್ನದಲ್ಲಿ ನಿಜವಾಗಿಯೂ ನನ್ನ ಮೇಲೆ ಅನುಗ್ರಹವಿಟ್ಟಿದ್ದರೆ ನನ್ನ ಭಾಷೆಯ ಕವಿತಾ ಪ್ರಭಾವದ ವಿಚಾರವಾಗಿ ನಾನು ಹೇಳಿರುವುದೆಲ್ಲಾ ನಿಜವಾಗಲಿ. ವಿಶೇಷ ಪವಿತ್ರವಾದ ಅಯೋಧ್ಯಾ ಪುರಿಗೂ ಕಲಿಯುಗದ ದೋಷಗಳನ್ನು ನಾಶಪಡಿಸುವ ಸರಯೂ ನದಿಗೂ ನಮಿಸುವೆನು. ಮತ್ತು ರಾಮಚಂದ್ರ ಪ್ರಭುವಿನ ಕೃಪಾ ವಿಶೇಷಕ್ಕೆ ಪಾತ್ರರಾದ ಆ ನಗರದ ಜನರಿಗೂ ಪ್ರಣಾಮ ಮಾಡುವೆನು. ಶ್ರೀ ರಾಮಚಂದ್ರನು ಸೀತೆಯನ್ನು ನಿಂದಿಸಿದ ಅಗಸನ † ಪಾಪ ಸಮೂಹವನ್ನು ನಾಶಮಾಡಿ ಅವನಿಗೆ ಮೃತ್ಯು ರಹಿತವಾದ ವೈಕುಂಠ ಲೋಕದಲ್ಲಿ ಸ್ಥಳವನ್ನು ಕೊಟ್ಟನು. ಪೂರ್ವದಿಸೆಗೆ ಸಮಾನಳಾಗಿ ತನ್ನ ಕೀರ್ತಿಯನ್ನು ಇಡೀ ಜಗತ್ತಿನಲ್ಲಿ ಹಬ್ಬಿಸಿರುವ ಕೌಸಲ್ಯಾ ದೇವಿಗೆ ನಮಸ್ಕರಿಸುವೆನು. ಕೌಸಲ್ಯಾರೂಪಿಣಿಯಾದ ಪೂರ್ವದಿಸೆಯಲ್ಲಿ ಇಡೀ ಜಗತ್ತಿಗೆ ಸುಖವನ್ನು ಕೊಟ್ಟು, ದುಷ್ಟರೂಪಿಯಾದ ಕಮಲಗಳಿಗೆ ತುಷಾರರೂಪಿ

---

* ಇದೊಂದು ಸುಪ್ರಸಿದ್ಧ ತಂತ್ರ ಗ್ರಂಥವು (ಅದಕ್ಕೆ ಸಿದ್ಧಸಾಬರ ತಂತ್ರವೆಂದೂ ಹೆಸರು)

† ಒಂದು ದಿನ ಒಬ್ಬ ಅಗಸನು ತೌರುಮನೆಗೆ ಹೋಗಿದ್ದ ತನ್ನ ಹೆಂಡತಿಯು ಮನೆಗೆ ಬರಲು ಆಕೆಯನ್ನು ಕುರಿತು "ನಾನು ನಿನ್ನನ್ನು ಮನೆಯೊಳಕ್ಕೆ ಸೇರಿಸಲು ರಾಮನಲ್ಲ. ದುಷ್ಟ ರಾವಣನಿಂದ ಒಯ್ಯಲ್ಪಟ್ಟು ಬಹು ದಿನಗಳವರೆಗೆ ಆತನಲ್ಲಿದ್ದನಂತರ ಹೆಂಡತಿಯನ್ನ ಹಿಂತಿರುಗಿ ಕರೆದುಕೊಂಡು ಬಂದು ಅಂಗೀಕಾರಮಾಡಲು ನಾನೇನೂ ರಾಮಚಂದ್ರನಲ್ಲ" ಎಂದು ನಿಂದಿಸಿದನು. ಶ್ರೀರಾಮಚಂದ್ರನು ಈ ವಾಕ್ಯಗಳನ್ನು ಕೇಳಿ ತನ್ನ ಪುರವಾಸಿಯಾದ ಅಗಸನಿಗೆ ಏನೂ ಹೇಳದೆ ಸೀತಾದೇವಿಯನ್ನು ವನಕ್ಕೆ ಕಳುಹಿಸಿಬಿಟ್ಟನು.

ಯಾದ ಚಂದ್ರನಂತೆ ಸುಂದರನಾದ, ರಾಮಚಂದ್ರನ ಉದಯವಾಗಿದೆ. ಎಲ್ಲಾ ರಾಣಿಯರ ಸಮೇತನಾದ ದಶರಥ ಮಹಾರಾಜನು ಪುಣ್ಯಾತ್ಮನೂ ಮಂಗಲ ಮೂರ್ತಿಯೂ ಆಗಿರುವನೆಂದು ಭಾವಿಸಿ ನಾನು ಮನೋವಾಕ್ಕಾಯಗಳಿಂದ ಆತ ನಿಗೆ ನಮಿಸುವೆನು. ಆತನು ನನ್ನನ್ನು ತನ್ನ ಪುತ್ರನ ಸೇವಕನೆಂದು ತಿಳಿದು ಕೃಪೆಮಾಡಲಿ. ಇಂತಹ ಸೌಭಾಗ್ಯಶಾಲಿಗಳಾದ ಮಾತಾಪಿತೃಗಳನ್ನು ಸೃಷ್ಟಿಸಿ ಬ್ರಹ್ಮನು ಗೌರವವನ್ನು ಪಡೆದನು. ರಾಮನ ಮಾತಾಪಿತೃಗಳೆನಿಸಿದ ಕಾರಣ ದಿಂದ ಕೌಸಲ್ಯೆ ಮತ್ತು ದಶರಥರ ಮಹಿಮೆಯು ಮೇರೆಗಂಡಿತು.

ದೋ ॥೩೨॥ ರಾಮಚಂದ್ರನ ಚರಣಗಳಲ್ಲಿ ನಿಜವಾದ ಪ್ರೇಮವನ್ನಿಟ್ಟು, ದೀನ ದಯಾಳುವಾದ ರಾಮಚಂದ್ರನು ಪ್ರತ್ಯೇಕವಾಗುತ್ತಲೆ ಎಂದರೆ ವನ ವಾಸಕ್ಕೆ ತೆರಳುತ್ತಲೇ ವಿಯೋಗವನ್ನು ಸಹಿಸಲಾರದೆ ತನ್ನ ಪ್ರಿಯ ಶರೀರವನ್ನು ಹುಲ್ಲಿಗಿಂತಲೂ ಕಡೆಯಾಗಿ ಭಾವಿಸಿ ತ್ಯಜಿಸಿದ ದಶರಥ ಮಹಾರಾಜನಿಗೆ ನಮಿ ಸುವೆನು. ರಾಮಚಂದ್ರನ ಚರಣಗಳಲ್ಲಿ ಗುಪ್ತ ಸ್ನೇಹವನ್ನಿಟ್ಟು ಅದನ್ನು ತನ್ನ ಯೋಗಭೋಗಗಳಲ್ಲಿ ಮುಚ್ಚಿಟ್ಟಿದ್ದ ಜನಕ ಮಹಾರಾಜನಿಗೆ ನಾನು ನಮಿಸುವೆನು. ಜನಕರಾಜನ ಆ ಸ್ನೇಹವು ರಾಮಚಂದ್ರನನ್ನು ನೋಡಿದಾಕ್ಷಣವೇ ಪ್ರಕಟ ವಾಗಿ ಹೋಯಿತು. ಮೊದಲು ನಾನು ಯಾರ ನಿಯಮ ವ್ರತಗಳ ವರ್ಣನೆ ಯನ್ನು ಮಾಡಲಾರೆನೊ ಮತ್ತು ಯಾರ ಮನಸ್ಸು ಲೋಭದಿಂದ ಭ್ರಮರ ದಂತೆ ರಾಮಚಂದ್ರನ ಚರಣರೂಪಿಯಾದ ಕಮಲವನ್ನು ಬಿಟ್ಟು ಅಗಲಲಾರದೊ ಅಂತಹ ಭರತನ ಚರಣಗಳಿಗೆರಗುವೆನು. ಪರಮಶಾಂತನೂ ಸುಂದರನೂ ಭಕ್ತರಿಗೆ ಸುಖಕರನೂ ಆದ ಮತ್ತೆ ರಾಮಚಂದ್ರನ ಕೀರ್ತಿರೂಪವಾದ ವಿಮಲ ಪತಾಕೆಯಲ್ಲಿ ಯಾರ ಯಶಸ್ಸು ಪತಾಕೆಯ ಸ್ತಂಭದಂತಿರುವುದೋ ಆ ಲಕ್ಷ್ಮಣ ನಿಗೆ ಪ್ರಣಾಮಮಾಡುವೆನು. ಯಾರು ಜಗತ್ತಿಗೆ ಕಾರಣವಾಗಿ ಸಹಸ್ರ ಶಿರನಾದ ಆದಿ ಶೇಷನೆನಿಸಿಕೊಂಡು ಪೃಥ್ವಿಯ ಭಾರವನ್ನು ಇಳಿಸುವುದಕ್ಕೋಸ್ಕರ ಅವತರಿ ಸಿದನೊ ಆ ಕೃಪಾಸಾಗರನೂ ಗುಣಗಣಿಯೂ ಆದ ಸುಮಿತ್ರಾದೇವಿಯ ಮಗ ಶ್ರೀ ಲಕ್ಷ್ಮಣನು ಸದಾ ನನಗೆ ಅನುಕೂಲನಾಗಿರಲಿ ಶೂರನೂ ಸುಶೀಲನೂ ಮತ್ತು ಭರತನ ಅನುಗಾಮಿಯೂ ಆದ ಶತ್ರುಘ್ನನ ಚರಣಸರೋಜಗಳಿ ಗೆರಗುವೆನು. ಯಾರ ಯಶಸ್ಸನ್ನು ರಾಮಚಂದ್ರನೇ ತನ್ನ ಸ್ವಂತ ಮುಖದಿಂದ ಪ್ರಶಂಸಿಸಿರುವನೊ ಅಂತಹ ಆ ವೀರ ಹನುಮಂತನಿಗೆ ವಿನಂತಿಮಾಡಿಕೊಳ್ಳು ವೆನು.

ದೋ ॥೩೩॥ ದುಷ್ಟರೂಪಿಯಾದ ವನವನ್ನು ಭಸ್ಮೀಕರಿಸುವುದಕ್ಕೆ ಅಗ್ನಿ ಮತ್ತು ಜ್ಞಾನಗಳಿಂದ ಪೂರ್ಣನಾಗಿ ಇರುವ ಮತ್ತು ತನ್ನ ಹೃದಯ ರೂಪವಾದ ಮನೆಯಲ್ಲಿ ಧನುರ್ಬಾಣಧಾರಿಯಾದ ರಾಮಚಂದ್ರನಿಗೆ ಆಸನವನ್ನು ಸ್ಥಾಪಿಸಿರು ವವನೂ ಪವನ ಕುಮಾರನೂ ಆದ ಹನುಮಂತನಿಗೆ ನಮಿಸುವೆನು. ಅಥವ

ಶರೀರದ (ಯೋನಿಯ) ಲ್ಲಿ ಜನಿಸಿದ್ದರೂ ರಾಮಚಂದ್ರನಿಗೆ ಸಹಾಯಮಾಡಿದ ವಾನರಗಳ ಸೇನಾಧಿಪತಿಯಾದ ಸುಗ್ರೀವನಿಗೂ ಭಲ್ಲೂಕ (ಕರಡಿ) ಪತಿಯಾದ ಜಾಂಬವಂತನಿಗೂ ರಾಕ್ಷಸರ ರಾಜನಾದ ವಿಭೀಷಣನಿಗೂ ಅಂಗದಾದಿಯಾಗಿ ವಾನರ ಸಮೂಹಕ್ಕೆ ಸೇರಿದವರಿಗೂ ನಮಸ್ಕಾರ ಮಾಡುವೆನು. ಪಶು, ಪಕ್ಷಿ, ದೇವತೆ, ಮನುಷ್ಯ ಮತ್ತು ಅಸುರರ ಸಮೇತ ರಾಮಚಂದ್ರನ ಚರಣಗಳ ಉಪಾಸಕರಾದವರೆಲ್ಲರ ಚರಣ ಕಮಲಗಳಿಗೆ ಎಂದರೆ ಯಾವ ಕಾಮ ವಾಸನೆಯೂ ಇಲ್ಲದ ರಾಮಚಂದ್ರನ ಭಕ್ತರಾದವರೆಲ್ಲರಿಗೂ ಪ್ರಣಾಮಮಾಡುವೆನು. ಮಹದೇವ, ಸನಕ, ಸನಂದನ, ಸನಾತನ, ಸನತ್ಕುಮಾರಾದಿ ಭಕ್ತರ ಮತ್ತು ನಾರದಾದಿ ಮುನಿಗಳ ಹಾಗೆಯೇ ಇತರ ಜ್ಞಾನಿಗಳಾದ ಋಷಿಗಳ ಪಾದಕಮಲಗಳಿಗೆ ನಾನು ತಲೆವಾಗಿ ನಮಿಸುವೆನು. ಹೇ ಮುನೀಶ್ವರ ಗಣಗಳೆ! ನನ್ನನ್ನು ತಮ್ಮ ಸೇವಕನಾಗಿ ತಿಳಿದು ನನ್ನ ಮೇಲೆ ಕೃಪೆಯಿಡಬೇಕು! ಜನಕನ ಕನ್ಯೆಯೂ ಜಗನ್ಮಾತೆಯೂ ಕರುಣಾನಿಧಿಯೂ ಆಗಿ ಶ್ರೀರಾಮಚಂದ್ರನಿಗೆ ಅತ್ಯಂತ ಪ್ರಿಯಳಾದ ಶ್ರೀ ಜಾನಕೀದೇವಿಯ ಪದಯುಗಲಗಳಿಗೆ ನಾನು ನಮಿಸುವೆನು ಆಕೆಯ ಕೃಪೆಯಿಂದ ನಾನೂ ನಿರ್ಮಲ ಬುದ್ಧಿಯನ್ನು ಹೊಂದುವೆನು. ಮತ್ತೆ ನಾನು ಸರ್ವಶ್ರೇಷ್ಟನಾದ ಶ್ರೀ ರಾಮಚಂದ್ರನ ಚರಣಕಮಲಗಳಿಗೆ ಮನೋವಾಕ್ಕಾಯಗಳಿಂದ ನಮಸ್ಕರಿಸುವೆನು ಆತನ ನಯನಗಳು ಕಮಲವಂತಿರುವವು ಧನುರ್ಬಾಣಗಳನ್ನು ಧರಿಸಿದ ಆತನು ಭಕ್ತರ ಸಂಕಟಗಳನ್ನು ದೂರಮಾಡಿ ಅವರಿಗೆ ಸುಖವನ್ನು ಕೊಡುವನು

ದೋ ॥೩೪॥ ಶಬ್ದ ಮತ್ತು ಅರ್ಥಗಳು, ಜಲ ಮತ್ತು ಅದರ ತರಂಗಗಳಂತೆ ಪ್ರತ್ಯೇಕ ಪ್ರತ್ಯೇಕವಾಗಿ ಕಾಣಿಸುತ್ತಿದ್ದರೂ ಯಥಾರ್ಥದಲ್ಲಿ ಎರಡೂ ಒಂದೆಯಾಗಿರುವವು. ಅದರಂತೆಯೇ ದುಃಖಿಗಳೆಲ್ಲರಿಂದಲೂ ಅಧಿಕ ಪ್ರಿಯರಾಗಿ ಭಾವಿಸಲ್ಪಟ್ಟಿರುವ ಶ್ರೀ ಸೀತಾರಾಮರು ಕೂಡ ಹೇಳಿಕೆಯಲ್ಲಿ ಭಿನ್ನವಾಗಿ ತೋರಿದರೂ ಅವರಿಬ್ಬರೂ ಒಂದೇ ಎಂದು ತಿಳಿದು ನಾನು ಅವರ ಚರಣಗಳಿಗೆ ನಮಿಸುವೆನು. ನಾನೂ ರಾಮಚಂದ್ರನ 'ರಾಮ'ನಾಮವನ್ನು ವಂದಿಸುವೆನು. ಅದು ಅಗ್ನಿ, ಸೂರ್ಯ ಮತ್ತು ಚಂದ್ರರ ಹೇತುವನ್ನು ತೋರಿಸುವುದು. ಆ ನಾಮವು ಅಗ್ನಿ (ರ) ಸೂರ್ಯ (ಅ) ಮತ್ತು ಚಂದ್ರ (ಮ) ರ ಬೀಜವಾಗಿರುವುದು. ಆ ರಾಮ ನಾಮವು ಹರಿಹರ ಬ್ರಹ್ಮಾದಿಗಳ ಮಯವಾಗಿ ಏಕರೂಪವಾಗಿರುವುದು. ಎಂದರೆ ಇವು ಮೂರರಲ್ಲಿಯೂ ಏಕರೂಪವಾಗಿ ರಾಮನಾಮವಾಗಿರುವುದು. ಅದು ವೇದಗಳ ಪ್ರಾಣವಾಗಿದೆ. ಏಕೆಂದರೆ ವೇದಗಳ ಮೂಲವಾದ ಓಂಕಾರವು ರಾಮ ನಾಮದಿಂದಲೇ ಹೊರಡುವುದು ಮತ್ತು ಶ್ರೀರಾಮನು ಉಪಮಾರಹಿತನೂ ನಿರ್ಗುಣನೂ ಗುಣಗಣಿಯೂ ಆಗಿರುವನು. ರಾಮನಾಮ ರೂಪಿಯಾದ ಮಹಾ ಮಂತ್ರವನ್ನು ಶಿವನು ಜಪಿಸುತ್ತಿರುವನು. ಅದರ ಉಪದೇಶವು ಕಾಶಿಯಲ್ಲಿ

ಮುಕ್ತಿಕಾರಣವಾಗಿರುವುದು. ಅದರ ಮಹಿಮೆಯು ಗಣೇಶನಿಗೆ ತಿಳಿದಿರುವುದು. ಏಕೆಂದರೆ ಆ ರಾಮನಾಮದ ಪ್ರಭಾವದಿಂದ * ಆತನು ಸರ್ವಪ್ರಥಮ ಪೂಜ್ಯನಾಗಿರುವನು. ಆದಿಕವಿಯಾದ † ಶ್ರೀ ವಾಲ್ಮೀಕಿಮುನಿಯು ಆ ನಾಮದ ಪ್ರತಾಪವನ್ನು ತಿಳಿದಿರುವನು. ಅದರ ತಲೆಕೆಳಗಾದ (ಪಲ್ಲಟವಾದ) ಎಂದರೆ "ಮರಾಮರಾ" ಎಂಬ ಶಬ್ದವನ್ನು ಜಪಿಸಿ ಆತನು ಪವಿತ್ರನಾದನು. ಪಾರ್ವತೀದೇವಿಯು ಶಿವನ ಮುಖದಿಂದ ರಾಮನಾಮವು ಸಹಸ್ರನಾಮ ಸಮಾನವಾದುದೆಂದು ಕೇಳಿ ‡ ಪತಿಯೊಂದಿಗೆ ಈ ನಾಮವನ್ನು ಜಪಿಸಿ ಅನಂತರ ಭೋಜನ ಮಾಡಿದಳು. ಶಿವನು ಪಾರ್ವತೀದೇವಿಯ ಹೃದಯದೊಳಗಣ ಇಂತಹ ಭಕ್ತಿಯನ್ನು ನೋಡಿ ಪ್ರಸನ್ನನಾಗಿ ಆಕೆಯನ್ನು ಎಲ್ಲಾ ಶ್ರೇಷ್ಠಸ್ತ್ರೀಯರಿಗೂ ಭೂಷಣವಾಗುವಂತೆ ಮಾಡಿದನು. ಈ ರಾಮನಾಮದ ಪ್ರಭಾವವನ್ನು ಶಿವನು § ಚೆನ್ನಾಗಿ

---

* ಒಂದಾನೊಂದು ಸಮಯದಲ್ಲಿ ದೇವತೆಗಳು "ನಿಮ್ಮಲ್ಲಿ ಪ್ರಥಮ ಪೂಜ್ಯರಾಗಲು ಯೋಗ್ಯರಾರೆಂದು" ಪ್ರಶ್ನಿಸಲ್ಪಟ್ಟರು ಆಗ ಎಲ್ಲಾ ದೇವತೆಗಳು ತಂತಮ್ಮಲ್ಲಿ ಪರಸ್ಪರ ಜಗಳವಾಡಲಾರಂಭಿಸಿದರು. ಕೊನೆಗೆ ಬ್ರಹ್ಮನು ಹೇಳಿದುದೇನೆಂದರೆ —"ನಿಮ್ಮಲ್ಲಿ ಯಾರು ಪೃಥ್ವಿಯನ್ನು ಸುತ್ತಿ ಮೊದಲು ನನ್ನ ಹತ್ತಿರ ಬರುವಿರೊ ಅವರಿಗೆ ನಮ್ಮಲ್ಲಿ ಅಗ್ರಸ್ಥಾನವನ್ನು ನಾನು ಕೊಡುವೆನು."—ಆನಂತರ ದೇವತೆಗಳೆಲ್ಲರೂ ತಮ್ಮತಮ್ಮ ವಾಹನಗಳನ್ನು ಹತ್ತಿ ಓಡಿದರು, ಇವರಲ್ಲಿ ಗಣೇಶನು ಹಿಂದೆ ಉಳಿದನು. ಏಕೆಂದರೆ ಅವನ ವಾಹನವಾದ ಮೂಷಕವು ಇತರ ವಾಹನಗಳಂತೆ ಶೀಘ್ರವಾಗಿ ಓಡುತ್ತಿರಲಿಲ್ಲ ಆಗ ಗಣೇಶನು ಬಹು ವ್ಯಾಕುಲದಿಂದ, ಈಗ ಏನು ಮಾಡಬೇಕೆಂದು ಚಿಂತಿಸಲಾರಂಭಿಸಿದನು. ಆ ಸಮಯದಲ್ಲಿ ನಾರದನು ಅಲ್ಲಿಗೆ ಬಂದು, ಗಣೇಶನನ್ನು ಕುರಿತು, "ನೀನು ಪೃಥ್ವಿಯ ಮೇಲೆ ರಾಮನಾಮವನ್ನು ಬರೆದು, ಅದನ್ನು ಪರಿಕ್ರಮಿಸಿ ಬ್ರಹ್ಮನ ಬಳಿಗೆ ಹೋಗು" ಎಂದು ಹೇಳಿದನು ಅವನು ಹಾಗೆಯೇ ಮಾಡಿದನು ಕೊನೆಗೆ ಬ್ರಹ್ಮನು ರಾಮನಾಮದ ಪ್ರಭಾವವನ್ನು ತಿಳಿದು ಗಣೇಶನಿಗೇ ಪ್ರಥಮ ಪೂಜ್ಯಪದವನ್ನು ಕೊಟ್ಟನು.

† ಏಳನೆಯ ದೋಹದಿಂದ ಮುಂದೆ ಓದಿನೋಡಿರಿ.

‡ ಒಂದಾನೊಂದು ಸಮಯದಲ್ಲಿ ಕೈಲಾಸಪರ್ವತದ ಮೇಲೆ ಶಂಕರನು ವಿಷ್ಣು ಪೂಜನಮಾಡಿ, ಭೋಜನಕ್ಕೆ ಕುಳಿತು ಪಾರ್ವತಿಯನ್ನು ಕುರಿತು, "ಹೇ ಪಾರ್ವತಿ! ನೀನೂ ಬಾ ನನೊಟ್ಟಿಗೆ ಭೋಜನಮಾಡು" ಎಂದು ಕರೆದನು. ಅದನ್ನು ಕೇಳಿ ಪಾರ್ವತಿಯು, "ನೀವು ಭೋಜನ ಮಾಡಬೇಕು. ನಾನು ಇನ್ನೂ ಸಹಸ್ರನಾಮ ಪಾರಮಾಡಬೇಕಾಗಿದೆ. ಅದನ್ನು ಪಠಿಸಿ ಪ್ರಸಾದವನ್ನು ತೆಗೆದುಕೊಳ್ಳುವೆನು" ಎಂದಳು. ಅದನ್ನು ಕೇಳಿ ಮಹಾದೇವನು ನಕ್ಕು, "ನೀನೇ ಧನ್ಯಳು, ಪರಮಭಕ್ತಳು, ಹೇ ವರಾನನೆ! ನೀನು ರಾಮನಾಮವನ್ನು ಉಚ್ಚರಿಸಿ, ನನ್ನೊಂದಿಗೆ ಭೋಜನಮಾಡು! ಅದರಿಂದ ನಿನಗೆ ಸಹಸ್ರನಾಮದ ಫಲವು ದೊರೆವುದು, ನಿನ್ನ ನಿಯಮವೂ ಭಂಗವಾಗುವುದಿಲ್ಲ," ಎಂದನು. ಶಿವನ ಆ ವಚನಗಳನ್ನು ಕೇಳಿ, ವಿಶ್ವಾಸಪೂರ್ವಕವಾಗಿ ಪಾರ್ವತೀದೇವಿಯು ಶ್ರೀರಾಮನಾಮೋಚ್ಚಾರಣೆಮಾಡಿ ಮಹಾದೇವನೊಂದಿಗೆ ಕುಳಿತು ಭೋಜನಮಾಡಿದಳು

§ ಸಮುದ್ರ ಮಥನ ಮಾಡಿದಾಗ ಅದರಲ್ಲಿ ವಿಷವುತ್ಪನ್ನವಾಯಿತು ಆಗ ಆ ಸರ್ವದೇವತೆಗಳ ಪ್ರಾರ್ಥನೆಗನುಸಾರವಾಗಿ ಶಿವನು ರಾಮನಾಮವನ್ನು ಜಪಿಸಿ ವಿಷವನ್ನು ಪಾನಮಾಡಿದನು. ಅದರಿಂದ ಇತರರಿಗಾಗುವ ಸಂಕಷ್ಟವು ದೂರವಾದುದಲ್ಲದೆ ಶಿವನ ಕಂಠಕ್ಕೂ ಭೂಷಣವಾಯಿತು.

ಅರಿತಿರುವನು. ಇದರ ಪ್ರಭಾವದಿಂದಲೆ ಆತನಿಗೆ ವಿಷದಿಂದ ಅಮೃತದ ಫಲವು ಉಂಟಾಯಿತು.

ದೊ ॥ ೩೫ ॥ ರಘುನಾಥ ಭಕ್ತಿಯು ವರ್ಷಾಋತುವು. ಪರಮಭಕ್ತ ನಾದ ತುಳಸೀದಾಸನು ಛತ್ತ (ಧಾನ್ಯ) ವಾಗಿರುವನು. ಮತ್ತು ರಾಮನಾಮದ ಸುಂದರವಾದ ಎರಡಕ್ಷರಗಳು ಶ್ರಾವಣ ಮತ್ತು ಭಾದ್ರಪದ ಮಾಸಗಳಾಗಿರುವವು. ಈ ಎರಡಕ್ಷರಗಳು ಎಂದರೆ ರಕಾರ ಮಕಾರಗಳು ಮಧುರವಾಗಿಯೂ ಮನೋಹರ ವಾಗಿಯೂ ಇರುವವು. ಎಲ್ಲಾ ಅಕ್ಷರಗಳಿಗೂ ಮತ್ತು ಮನುಷ್ಯರ ಹೃದಯಕ್ಕೂ ಇವೆರಡು ನೇತ್ರದಂತಿರುವುವು ಎಂದರೆ ಇವೆರಡು ಅಕ್ಷರಗಳು ಇತರ ಎಲ್ಲಾ ಅಕ್ಷರ ಗಳಿಗೆ ಮುಕುಟದಂತಿರುವವು, ಮತ್ತು ಯಾರ ಹೃದಯದಲ್ಲಿ ಈ ಅಕ್ಷರ ರೂಪ ವಾದ ನೇತ್ರಗಳಿಲ್ಲವೋ ಅಂತಹರು ಅಂಧರೇ ಸರಿ. ಇವು ಸ್ಮರಣೆಗೆ ಸುಲಭ ವಾಗಿಯೂ ಸುಖವನ್ನು ಕೊಡುವವಾಗಿಯೂ ಇವೆ. ಇವುಗಳು ಈ ಲೋಕ ದಲ್ಲಿ ಲಾಭವನ್ನೂ ಪರಲೋಕದಲ್ಲಿ ಸುಖವಾಸ ಎಂದರೆ ಮುಕ್ತಿಯನ್ನೂ ಕೊಡುವ ವಾಗಿಯೂ ಇರುವವು. ಈ ಎರಡು ಅಕ್ಷರಗಳನ್ನು ಉಚ್ಚರಿಸುವುದು, ಹೇಳು ವುದು, ಮತ್ತು ಸ್ಮರಣಮಾಡುವುದು ಹಿತಕರವಾಗಿರುವುದು. ತುಳಸೀದಾಸನಿಗೆ ಈ ಎರಡು ಅಕ್ಷರಗಳು ರಾಮಲಕ್ಷ್ಮಣರಿಗೆ ಸಮಾನವಾಗಿ ಪ್ರಿಯವಾಗಿರುವವು, ಇವೆರಡು ಅಕ್ಷರಗಳ ವರ್ಣನೆಯನ್ನು ಮಾಡುವುದರಲ್ಲಿ ಅದೊಂದು ವಿಧವಾದ ಪ್ರತ್ಯೇಕ ಪ್ರೀತಿಯುಂಟಾಗಿರುವುದು. ಇವೆರಡೂ ಪರಮಾತ್ಮ ಜೀವಾತ್ಮರಂತೆ ಸಮಾನವಾಗಿ ಸಮ್ಮಿಳಿತವಾಗಿರುವವು; ನರನಾರಾಯಣರಂತೆ ಭ್ರಾತೃಭಾವದಲ್ಲಿ ಇರುವವು ಇವು ಜಗತ್ಪಾಲಕವಾಗಿಯೂ, ವಿಶೇಷವಾಗಿ ಮನುಷ್ಯರ ದುಃಖಗಳನ್ನು ದೂರೀಕರಿಸುವವಾಗಿಯೂ ಇರುವವು. ಭಕ್ತರೂಪಿಣಿಯಾದ ಸುಂದರಸ್ತ್ರೀಯ ಕರ್ಣಕುಂಡಲಗಳಂತೆ ಇವೆರಡು ಅಕ್ಷರಗಳೂ ಸುಂದರವಾ ಗಿರುವವು. ಸಂಸಾರದ ಹಿತಕ್ಕೋಸ್ಕರ ಈ ಎರಡು ಅಕ್ಷರಗಳು ನಿರ್ಮಲವಾದ ಸೂರ್ಯ ಚಂದ್ರರಂತೆ ಇರುವವು ಇವು ಮುಕ್ತಿ ರೂಪಿಣಿಯಾದ ಅಮೃತದ ಸವಿಸಂತೋಷಗಳಂತಿರುವವು ಪೃಥ್ವಿಯನ್ನು ಧಾರಣೆಮಾಡಲು ಇವೆರಡು ಅಕ್ಷರಗಳು ಕೂರ್ಮ ಮತ್ತು ಶೇಷರಂತಿರುವವು. ಭಕ್ತರ ಮನೋರೂಪಿಣಿ ಯಾದ ಸುಂದರ ಕಮಲಗಳಿಗೆ ಇವೆರಡು ಅಕ್ಷರಗಳು ಭೃಂಗಗಳಂತಿರುವವು. ಜಿಹ್ವಾರೂಪಿಣಿಯಾದ ಯಶೋದೆಗೆ ಇವೆರಡೂ ಶ್ರೀಕೃಷ್ಣ ಮತ್ತು ಬಲರಾಮ ರಂತಿರುವವು.

ದೊ ॥ ೩೬ ॥ ತುಳಸೀದಾಸನು ಹೇಳುವುದೇನೆಂದರೆ.–ಶ್ರೀರಾಮ ಚಂದ್ರನ ಹೆಸರಿನ ಈ ಎರಡು ಅಕ್ಷರಗಳಲ್ಲಿ, ಒಂದು ಛತ್ರ ಸಮಾನವಾಗಿಯೂ ಮತ್ತೊಂದು ಮುಕುಟಮಣಿಯ ಸಮಾನವಾಗಿಯೂ ವರ್ಣಗಳಲ್ಲಿ ವಿರಾಜಮಾನವಾಗಿರುವವು. ನೋಡುವದಕ್ಕೆ ಹೆಸರೂ ಮತ್ತು ಹೆಸರುಳ್ಳವನು ಎಂದರೆ ನಾಮ ಮತ್ತು ನಾಮಧಾ

ರಿಯು ಸಮಾನವಾಗಿರುವಂತೆ ಕಾಣಿಸುವವು. ಇವೆರಡರ ಪ್ರೀತಿಯು ಸ್ವಾಮಿಸೇವಕರ ಪರಸ್ಪರ ಪ್ರೀತಿಯಂತಿರುವದು. ನಾಮರೂಪಗಳೆರಡೂ ಪರಮೇಶ್ವರನ ಉಪಾಧಿಗಳು. ಇವೆರಡು ರೂಪಗಳೂ ವರ್ಣನಾತೀತವಾಗಿಯೂ ಅನಾದಿಯಾಗಿಯೂ ಇರುವವು. ಇದರ ವಿಚಾರವು ಜ್ಞಾನಿಗಳಿಗೆ ಗೊತ್ತಿರುವುದು. ನಾಮ ಮತ್ತು ರೂಪಗಳಲ್ಲಿ ಯಾವುದು ದೊಡ್ಡದು ಯಾವುದು ಚಿಕ್ಕದು—ಎಂದು ಪರಿಶೀಲಿಸುವುದು ಮಹಾ ದೋಷವು. ಇವೆರಡರ ಗುಣಭೇದಾನುಸಾರವಾಗಿ ಸಾಧುಜನರು ಎರಡರ ಯೋಗ್ಯತೆಯನ್ನೂ ತಿಳಿಯುವರು. ರೂಪವು ನಾಮದ ಅಧೀನವೆಂದು ಅವರಿಗೆ ಗೊತ್ತು. ಏಕೆಂದರೆ ನಾಮದ ವಿನಾ ರೂಪದ ಜ್ಞಾನವಾಗಲಾರದು. ನಾಮದ ವಿನಾ ಕೈಯಲ್ಲಿಟ್ಟಿರುವ ವಸ್ತುವಿನ ಕೇವಲ ರೂಪದಿಂದಲೇ ಅದನ್ನು ತಿಳಿಯಲಾಗುವುದಿಲ್ಲ. ರೂಪದ ವಿನಾ ನೋಡುವ ವಸ್ತುವಿನ ನಾಮ ಸ್ಮರಣೆಯಿಂದಲೇ ಹೃದಯದಲ್ಲಿ ಅಧಿಕವಾದ ಪ್ರೇಮ ಉತ್ಪನ್ನವಾಗುವುದು. ನಾಮ ಮತ್ತು ರೂಪಗಳ ಗತಿಯು ಕಥೆಯು ವರ್ಣನಾತೀತವಾದುದು. ಅದರ ತಿಳಿವಳಿಕೆಯು ಸುಖದಾಯಕವಾಗಿದ್ದರೂ ಅದನ್ನು ವರ್ಣಿಸಲಾಗುವುದಿಲ್ಲ. ನಿರ್ಗುಣ ಮತ್ತು ಸಗುಣಗಳ ಮಧ್ಯದಲ್ಲಿ ಭೇದವನ್ನು ತಿಳಿಸಲು ನಾಮವು ಒಂದು ಮಹತ್ವಪೂರ್ಣ ಸಾಕ್ಷಿಯಾಗಿದೆ. ಅವೆರಡರ ಭಾಷೆಗಳನ್ನು ತಿಳಿಯಲು ಇದು ಬಹು ಚತುರ ದ್ವಿಭಾಷೆಯಂತಿರುವುದು.

ದೊ ॥ ೩೭ । ಸಜ್ಜನರೇ, ತುಳಸೀದಾಸನು ಹೇಳುವುದನ್ನು, ಕೇಳಿರಿ! ನೀವು ಅಂತರಂಗ ಬಹಿರಂಗಗಳೆರಡನ್ನು ಪ್ರಕಾಶಮಯವಾಗಿಡಬೇಕಾಗಿದ್ದರೆ ಜಿಹ್ವಾರೂಪಿಯಾದ ಬಾಗಿಲಿನ ಹೊಸ್ತಿಲಮೇಲೆ ರಾಮನಾಮರೂಪಿಯಾದ ಮಣಿಯು, ಎಂದಿಗೂ ನಂದಿಹೋಗದ, ದೀಪವನ್ನಿಡಿರಿ ಎಂದರೆ ಜಪಮಾಡಿರಿ. ಯೋಗಿಗಳು ಜಿಹ್ವೆಯಿಂದ ರಾಮನಾಮವನ್ನು ಜಪಿಸುತ್ತ ಮೋಹರೂಪಿಯಾದ ರಾತ್ರಿಯಲ್ಲಿ ಜಾಗ್ರತರಾಗಿರುವರು ಮತ್ತು ಅವರು ಜಾಗೃತರಾಗಿದ್ದು ಈ ಸಂಸಾರವನ್ನು ವೈರಾಗ್ಯದ ಮೂಲಕ ತ್ಯಜಿಸಿ ಬ್ರಹ್ಮಾನಂದದ ಅನುಭವವನ್ನು ಹೊಂದುವರು. ಆ ಬ್ರಹ್ಮಾನಂದವು ಉಪಮಾ ರಹಿತವಾಗಿರುವುದು. ಮೋಕ್ಷಮಾರ್ಗದ ಗುಪ್ತಗತಿಯನ್ನರಿಯಲಿಚ್ಛಿಸುವವರೂ ಅದನ್ನು ನಿರಂತರವೂ ಜಿಹ್ವೆಯಿಂದ ಜಪಿಸಿ ಅರ್ಥವನ್ನು ತಿಳಿಯುವರು. ಸಾಧಕರು ರಾಮನಾಮವನ್ನು ಮನೋಯೋಗದ ಮೂಲಕ ಜಪಿಸಿ ಅಣಿಮಾದಿ ಅಷ್ಟಸಿದ್ಧಿಗಳನ್ನು ಹೊಂದಿ ಸಿದ್ಧಪುರುಷರಾಗುವರು. (ಇದಕ್ಕೆ ಸುಗ್ರೀವ ವಿಭೀಷಣಾದಿಗಳೇ ಉದಾಹರಣ ಸ್ವರೂಪರಾಗಿರುವರು). ಅತ್ಯಂತ ದುಃಖಿಗಳಾದ ಜನರು ನಾಮವನ್ನು ಜಪಿಸಿ ಅದರ ಪ್ರಭಾವದಿಂದ ಸಂಕಷ್ಟಮುಕ್ತರಾಗಿ ಸುಖವನ್ನು ಹೊಂದುವರು. ಈ ಪ್ರಪಂಚದಲ್ಲಿ ರಾಮಭಕ್ತರು ನಾಲ್ಕುವಿಧವಾಗಿರುವರು. ಅವರಾರೆಂದರೆ (೧) ಜಿಜ್ಞಾಸು—ಎಂದರೆ ಈಶ್ವರನನ್ನು ತಿಳಿಯಲಿಚ್ಛೆಯುಳ್ಳವರು; (೨) ಅರ್ಥಿ—ಎಂದರೆ ಆವುದಾ

ದರೊಂದು ಪ್ರಯೋಜನ ಸಿದ್ಧಿಗೋಸುಗ ಈಶ ಸ್ಮರಣೆ ಮಾಡುವವರು; (೩) ಆರ್ತ–ಎಂದರೆ ಅವುದಾದರೊಂದು ದುಃಖದಲ್ಲಿ ತೊಳಲುತ್ತ ಈಶ್ವರನನ್ನು ಸ್ಮರಿಸುವವರು; (೪) ಜ್ಞಾನಿ–ಎಂದರೆ ಈಶ್ವರನನ್ನು ತಿಳಿದು ಭಜನೆಮಾಡುವವರು. ಈ ನಾಲ್ವರು ಪುಣ್ಯಾತ್ಮರೂ ಪಾಪಹೀನರೂ ಉದಾರರೂ ಆಗಿರುವರು. ಈ ನಾಲ್ವರು ರಾಮಭಕ್ತರಿಗೆ ರಾಮನಾಮವೇ ಆಧಾರವು, ಜ್ಞಾನಿಗಳು ಶ್ರೀರಾಮನಿಗೆ ಅತ್ಯಂತ ಪ್ರಿಯರಾಗಿರುವರು ಚತುರ್ವೇದಗಳಲ್ಲಿಯೂ ಚತುರ್ಯು ಗಗಳಲ್ಲಿಯೂ ನಾಮಮಹಿಮೆಯು ಪ್ರಶಂಸಿತವಾಗಿರುವುದು ಆದರ ಮುಖ್ಯ ವಾಗಿ ಕಲಿಯುಗದಲ್ಲಿ ರಾಮನಾಮವನ್ನು ಬಿಟ್ಟರೆ ಬೇರೆ ಯಾವ ಉಪಾ ಯವೂ ಇಲ್ಲ.

ದೊ ॥ ೩೮ ॥ ಸರ್ವಪ್ರಕಾರವಾದ ಕಾಮವಾಸನೆಗಳನ್ನು ಬಿಟ್ಟು ರಾಮ ಭಕ್ತಿರಸದಲ್ಲಿ ಮಗ್ನವಾಗಿರುವವರು ರಾಮನಾಮ ರೂಪಿಯಾದ ಸುಂದರ ಪ್ರೇಮಾ ಮೃತ ಕುಂಡದಲ್ಲಿ ತಮ್ಮ ಮನಸ್ಸನ್ನು ಮೀನಿನಂತೆ ಮಾಡಿರುವರು ನಿರ್ಗುಣ ಮತ್ತು ಸುಗುಣಗಳೆರಡೂ ಬ್ರಹ್ಮನ ಸ್ವರೂಪವಾಗಿರುವವು ಇವುಗಳು ಅಕಥ ನೀಯವಾಗಿಯೂ ಅಗಾಧವಾಗಿಯೂ ಅನಾದಿಯಾಗಿಯೂ ಅನುಪಮವಾಗಿಯೂ ಇರುವವು. ತುಳಸೀದಾಸನ ಅಭಿಪ್ರಾಯವೇನೆಂದರೆ,–ಇವೆರಡರಲ್ಲಿಯೂ ನಾಮವೇ ಮಹತ್ವವುಳ್ಳದ್ದು. ಏಕೆಂದರೆ ನಾಮವು ತನ್ನ ಬಲದಿಂದ ನಿರ್ಗುಣ ಮತ್ತು ಸಗುಣಗಳೆರಡನ್ನೂ ತನ್ನ ಆಧೀನದಲ್ಲಿಟ್ಟುಕೊಂಡಿರುವುದು ಚತುರರೂ ವೃದ್ಧರೂ ಆದ ಜನರು ಮನುಷ್ಯ ಸಾಮಾನ್ಯರ ಮನಸ್ಸಿನ ಮಾತುಗಳನ್ನರಿಯುವರು. ನಾನು ನನ್ನ ಮನಸ್ಸಿನ ವಿಶ್ವಾಸ ಪ್ರೀತಿ ಮತ್ತು ರುಚಿಗಳ ವಿಚಾರವನ್ನು ಹೇಳುತ್ತಿರುವೆನು. ಈ ಎರಡೂ ವಿಧಾನಗಳ ಬ್ರಹ್ಮ ವಿಚಾರವು ಅಗ್ನಿ ಸಮಾನವಾಗಿರುವುದು. ಒಂದು ವಿಧವಾದ ಅಗ್ನಿಯು ಕಟ್ಟಿಗೆಯೊಳಗೆ ವ್ಯಾಪ್ತವಾದಂತಿರುವುದು, ಮತ್ತೊಂದು ವಿಧವಾದ ಅಗ್ನಿಯು ನಮಗೆ ಗೋಚರವಾಗುತ್ತಿರುವ ಅಗ್ನಿಯಂತೆ ಇರುವುದು. ಎಂದರೆ ಅಂತಃಕರಣದೊಳಗಣ ಅಗ್ನಿಯು ನಿರ್ಗುಣವಾಗಿಯೂ ಬಹಿರಂಗದ ಅಗ್ನಿಯು ಸಗುಣರೂಪವಾಗಿಯೂ ಇರುವುದು. ಬ್ರಹ್ಮನ ಸಗುಣ ಮತ್ತು ನಿರ್ಗುಣಗಳ ಭೇದಸಾಧನೆಯು ಕಠಿಣವಾದುದು. ಆದರೆ ನಾಮಕ್ಕೆ ಎರಡೂ ಸುಗಮವಾಗಿರುವವು. ನಿರ್ಗುಣ ಬ್ರಹ್ಮ ಮತ್ತು ಸಗುಣ ರಾಮನಲ್ಲಿ ನಾಮವೇ ಶ್ರೇಷ್ಠವೆಂದು ನಾನು ಹೇಳುವೆನು. ಆದರೂ ಬ್ರಹ್ಮನು ಒಬ್ಬನೇ, ಅವಿನಾಶಿಯು, ಸಚ್ಚಿದಾನಂದನು (ಸತ್+ಚಿತ್+ಆನಂದಗಳ ಘನೀಭೂತರಾಶಿಯು) ಮತ್ತು ಸರ್ವವ್ಯಾಪಕನು. ಇಂತಹ ಶುದ್ಧನೂ ನಿರ್ವಿಕಾರನೂ ಆದ ಬ್ರಹ್ಮನು ಸರ್ವರ ಹೃದಯದಲ್ಲಿ ವಿರಾಜಮಾನನಾಗಿರುವನು. ಆದರೂ ಈ ಜಗತ್ತಿನ ಎಲ್ಲಾ ಜೀವಿ ಗಳು ದೀನರೂ ದುಃಖಿಗಳೂ ಆಗಿರುವರು. ಸಂಗತಿಯೇನೆಂದರೆ ದೇಹಾಭಿ ಮಾನದಿಂದ ಸಂಸಾರಜಾಲದಲ್ಲಿ ಸಿಲುಕಿಕೊಂಡ ಜೀವಿಗಳು ತಮ್ಮ ಅಂತಃಕರಣ

ದಲ್ಲಿ ಬ್ರಹ್ಮನನ್ನು ನೋಡಲಾರರು. ಅವನನ್ನು ನೋಡಿ ಬ್ರಹ್ಮಜ್ಞಾನಿಗಳಾದರೆ ದುಃಖವು ಅಂತಹರನ್ನು ಸಮೀಪಿಸುವುದಿಲ್ಲ. ಅವರು ಸದಾ ಆನಂದದಲ್ಲಿ ತಲ್ಲೀನರಾಗುವರು.

ದೋ ॥ ೩೯ ॥ ಈ ರೀತಿಯಾಗಿ ನಿರ್ಗುಣನಿಗಿಂತಲೂ ನಾಮದ ಪ್ರಭಾವವು ಬಹು ವಿಸ್ತಾರವಾದುದೂ ಅಪಾರವಾದುದೂ ಆಗಿದೆ. ಈಗ ನನ್ನ ಅಭಿಪ್ರಾಯಾನುಸಾರವಾಗಿ ರಾಮನಿಗಿಂತಲೂ ನಾಮವೇ ದೊಡ್ಡದಾಗಿದೆಯೆಂದು ಹೇಳುವೆನು. ಶ್ರೀರಾಮಚಂದ್ರನು ಭಕ್ತರ ಹಿತಕ್ಕೋಸ್ಕರ ಮನುಷ್ಯಶರೀರವನ್ನು ಧರಿಸಿ, ಸಂಕಷ್ಟಗಳನ್ನು ಸಹಿಸಿ, ಸಾಧುಗಳಿಗೆ ಸುಖವನ್ನುಂಟುಮಾಡಿದನು. ಆದರೆ ಯಾವ ಭಕ್ತರು ಪ್ರೇಮಯುಕ್ತರಾಗಿ ರಾಮನಾಮವನ್ನು ಜಪಿಸುವರೊ ಅಂಥವರು ಅನಾಯಾಸವಾಗಿ ಆನಂದ ಮತ್ತು ಮಂಗಳಗಳ ಕೋಶಗೃಹದಂತಾಗುವರು. ಶ್ರೀರಾಮನು ಒಬ್ಬ ಋಷಿಪತ್ನಿಯಾದ ಅಹಲ್ಯೆಯನ್ನು ಉದ್ಧರಿಸಿದನು. ಆದರೆ ಆತನ ನಾಮವು ಕೋಟ್ಯಾನುಕೋಟಿ ದುಷ್ಟರ ಬುದ್ಧಿಯನ್ನು ಸುಧಾರಿಸಿತು ಶ್ರೀರಾಮನು (ವಿಶ್ವಾಮಿತ್ರಾದಿ) ಋಷಿಗಳ ಹಿತಕ್ಕೋಸುಗ ತಾಟಕಿಯನ್ನೂ, ಅವಳ ಮಕ್ಕಳಾದ ಸುಬಾಹು, ಮಾರೀಚಾದಿಗಳನ್ನೂ ಅವರ ಸೇನೆಯನ್ನೂ ಸಂಹರಿಸಿದನು. ಆದರೆ ಸೂರ್ಯನು ಕತ್ತಲೆಯನ್ನು ನಾಶಮಾಡುವಂತೆ ಶ್ರೀರಾಮನಾಮವು ಪರಮಭಕ್ತರ ದೋಷಗಳನ್ನೂ ದುಃಖಸಹಿತವಾಗಿರುವ ದುರಾಶೆಗಳನ್ನೂ ನಾಶಮಾಡುವುದು. ಶ್ರೀರಾಮನು ಭವ (ಶಿವ)ನ ಧನುಸ್ಸನ್ನು ಮುರಿದನು, ಆದರೆ ನಾಮದ ಪ್ರತಾಪದಿಂದ ಭವದ (ಸಂಸಾರದ) ಭಯವು ಎಂದರೆ ಜನನ, ಮರಣ, ಜೀವನಾದಿ ಎಲ್ಲಾ ದುಃಖಗಳು ನಾಶವಾಗುವವು. ಪ್ರಭುವಾದ ಶ್ರೀರಾಮನು ದಂಡಕಾರಣ್ಯವನ್ನು (ತನ್ನ ಸಂಚಾರದಿಂದ) ಪವಿತ್ರ ಮಾಡಿದನು. ಆತನ ನಾಮವು ಅನೇಕ ಭಕ್ತ ಜನರ ಮನಸ್ಸನ್ನು ಪವಿತ್ರಮಾಡಿರುವುದು. ಶ್ರೀರಾಮನು ರಾಕ್ಷಸರ ಸಮೂಹವನ್ನು ನಾಶಪಡಿಸಿದನು. ಆದರೆ ಆತನ ನಾಮವು ಕಲಿಯುಗದ ಎಲ್ಲ ಪಾಪಗಳನ್ನೂ--ದೋಷಗಳನ್ನೂ ನಾಶಪಡಿಸುವಂಥಾದ್ದಾಗಿರುವುದು.

ದೋ ॥ ೪೦ ॥ ರಾಮಚಂದ್ರನು ಶಬರೀ† (ಭಿಲ್ಲಣಿಯು) ಗಿಧ್ರ †—ಇವರೆ ಮೊದಲಾದ ಸುಸೇವಕ (ಸದ್ಭಕ್ತ) ರಿಗೆ ಸದ್ಗತಿಯನ್ನು ಕೊಟ್ಟನು. ಆದರೆ ಆತನ ನಾಮವು ದುಷ್ಟ ಜನರನ್ನು ಉದ್ಧರಿಸಿರುವುದು. ಈ ನಾಮಗುಣಗಳ ಕಥನವು ವೇದದಲ್ಲಿ ಪ್ರಕಟವಾಗಿರುವುದು. ಶ್ರೀರಾಮನು (ತನ್ನ ಸಹಾಯಕ್ಕೋಸ್ಕರ) ಸುಗ್ರೀವನನ್ನೂ (ಭೇದವನ್ನು ಹುಟ್ಟಿಸಲೋಸುಗ) ವಿಭೀಷಣನನ್ನೂ ತನ್ನ ಶರಣಾಗತರನ್ನಾಗಿ ಸ್ವೀಕರಿಸಿದನೆಂದು ಎಲ್ಲರೂ ಹೇಳುತ್ತಾರೆ ಆದರೆ

---

† ಅರಣ್ಯಕಾಂಡವನ್ನು ನೋಡಿರಿ.

ಆತನ ಸುಂದರವಾದ ನಾಮದ ಯಶಸ್ಸಿನಿಂದ ಅನೇಕ (ಅಜಾಮಿಲ, ಗಣಿಕಾದಿ) ದೀನರು ಉದ್ಧಾರಹೊಂದಿದರೆಂಬುದು ಲೋಕದಲ್ಲೆಲ್ಲಿಯೂ ವೇದದಲ್ಲಿಯೂ ಪ್ರಕಟವಾಗಿರುವುದು ಶ್ರೀರಾಮಚಂದ್ರನು ಕರಡಿ, ಕಪಿಗಳ ಸಮೂಹವನ್ನು ಏಕತ್ರ ಸಂಗ್ರಹಿಸಿ ಸಮುದ್ರದಲ್ಲಿ ಸೇತುವೆಯನ್ನು ಕಟ್ಟುವುದಕ್ಕೆ ವಿಶೇಷ ಶ್ರಮ ಪಟ್ಟನು. ಆದರೆ ಆತನ ನಾಮವನ್ನು ಉಚ್ಚರಿಸಿದ ಕೂಡಲೆ ಸಂಸಾರ ರೂಪಿಯಾದ ಸಮುದ್ರವು ಒಣಗಿ ಹೋಗುವುದು. ಹೇ ಸಜ್ಜನರೆ, ರಾಮನು ದೊಡ್ಡವನೊ, ನಾಮವು ದೊಡ್ಡದೊ ಎಂಬದನ್ನು ಕುರಿತು ಮನಸ್ಸಿನಲ್ಲಿ ವಿಚಾರ ಮಾಡಿರಿ! ಶ್ರೀರಾಮನು ಕುಟುಂಬ ಸಹಿತನಾದ ರಾವಣನನ್ನು ಯುದ್ಧದಲ್ಲಿ ಸಂಹರಿಸಿದನು. ಮತ್ತೆ ಸೀತಾಸಮೇತನಾಗಿ ಅಯೋಧ್ಯೆಗೆ ಹಿಂತಿರುಗಿ ಬಂದನು. ರಾಮಚಂದ್ರನು ರಾಜನು, ಆತನ ರಾಜಧಾನಿಯು ಅಯೋಧ್ಯಾನಗರವು ಆತನ ಗುಣಗಳನ್ನು ದೇವತೆಗಳೂ, ಮುನಿಗಳೂ ಮನೋಹರವಾದ ವಾಣಿಯಿಂದ ಗಾನಮಾಡುತ್ತಿರುವರು. ಆದರೆ ಪ್ರೇಮಪೂರ್ವಕವಾಗಿ ಆತನ ನಾಮವನ್ನು ಸ್ಮರಿಸುವಂಥಾ ಭಕ್ತನು ಅನಾಯಾಸದಿಂದ ಬಲಿಷ್ಠವಾದ ಮೋಹಾದಿ (ಅಜ್ಞಾನಗಳ) ದಳವನ್ನು ಗೆಲ್ಲುವನು; ಮತ್ತೆ ನಾಮದ ಪ್ರಸಾದದಿಂದ ಆತ್ಮಾನಂದದಲ್ಲಿ ಮಗ್ನನಾಗುವನು ಅವರಿಗೆ ಸ್ವಪ್ನದಲ್ಲಿ ಕೂಡ ಯಾವ ಚಿಂತೆಯೂ ಇರುವುದಿಲ್ಲ.

ದೋ ॥ ೪೧ ॥ (ನಿರ್ಗುಣ) ಬ್ರಹ್ಮ ಮತ್ತು (ಸಗುಣ) ರಾಮ–ಇವರಗಿಂತಲೂ ನಾಮವು ಶ್ರೇಷ್ಠತರವಾದುದು ಇದು ವರದಾನ ಶಕ್ತಿಯುಳ್ಳ ಬ್ರಹ್ಮಾದಿಗಳಿಗೆ ಕೂಡ ವರವನ್ನು ಕೊಡುವಂಥಾದ್ದು. ಇದು ನೂರುಕೋಟಿ * ರಾಮಾ

---

* ಶತಕೋಟಿ ರಾಮಾಯಣಂಗಳ ಸಂಬಂಧವಾಗಿ ಒಂದು ಕತೆಯಿರುವುದು. ಅದೇನೆಂದರೆ–ವಾಲ್ಮೀಕಿ ಮಹಾಮುನಿಯು ಶತಕೋಟಿ ರಾಮಾಯಣಗಳನ್ನು ರಚಿಸಿದನು. ಆಗ ಅದನ್ನು ಪರಮೇಶ್ವರನ ಹತ್ತಿರ ಓದಿ ತೋರಿಸಲು ಕೊಂಡು ಹೋದನು. ಕೈಲಾಸಪರ್ವತದಲ್ಲಿ ರಾಮಾಯಣ ಪಠನವಾಗುವುದೆಂಬ ಸಮಾಚಾರವನ್ನು ದೇವತೆಗಳು ಕೇಳಿದ ಕೂಡಲೆ ಅವರೆಲ್ಲರೂ ಅದನ್ನು ಕೇಳುವುದಕ್ಕೆ ಕೈಲಾಸಪರ್ವತಕ್ಕೆ ಹೋದರು. ಶಂಕರನು ಅವರನ್ನು ಆದರಿಸಿ ಕುಳ್ಳಿರಿಸಿದನು. ಒಂದು ವರ್ಷ ಕಾಲದಲ್ಲಿ ಶತಕೋಟಿ ರಾಮಾಯಣಗಳ ಪಠನವು ಮುಗಿಯಿತು. ಕಥೆಯನ್ನು ಕೇಳಿ ದೇವತೆಗಳೆಲ್ಲರೂ ಪ್ರಸನ್ನರಾಗಿ ಮಹಾದೇವನನ್ನು ಕುರಿತು–"ರಾಮಾಯಣಗಳೊಳಗಣ ಕೆಲವು ಭಾಗವನ್ನು ನಮಗೆ ಕೊಟ್ಟರೆ, ನಾವು ಅದನ್ನು ಮೂರುಲೋಕಗಳಲ್ಲಿಯೂ ಪ್ರಸಿದ್ಧಪಡಿಸುವೆವು" ಎಂದರು ಮಹಾದೇವನು ಪ್ರಸನ್ನನಾಗಿ ೩೩ ಕೋಟಿ ೩೩ ಲಕ್ಷ ೩೩ ಸಾವಿರ ೩೩೩ ಶ್ಲೋಕಗಳನ್ನೂ ೧೦ ಅಕ್ಷರಗಳನ್ನೂ ಬ್ರಹ್ಮಾದಿ ದೇವತೆಗಳಿಗೆ ಕೊಟ್ಟನು. ಅವರು ಅವುಗಳನ್ನು ಸ್ವರ್ಗಕ್ಕೆ ತೆಗೆದುಕೊಂಡು ಹೋದರು. ಅಲ್ಲಿ ಅವುಗಳನ್ನು ಆದಿಶೇಷನಿಗೆ ಒಪ್ಪಿಸಿದರು. ಅವನು ಅದನ್ನು ಪಾತಾಳಲೋಕಕ್ಕೆ ತೆಗೆದುಕೊಂಡು ಹೋಗಿ ಅಲ್ಲಿದ್ದ ಮುನಿಗಳಿಗೆ ಕೊಟ್ಟನು. ಅವರು ಅದನ್ನು ತೆಗೆದು

ಯಣಗಳ ಜೀವ (ಸಾರ) ವೆಂದು ಗ್ರಹಿಸಿ ಮಹಾದೇವನು ಈ ("ರಾಮ"ಎಂಬ) ಎರಡು ಅಕ್ಷರಗಳನ್ನು ಆರಿಸಿರುವನು. ಈ ನಾಮಪ್ರಸಾದದಿಂದಲೆ ಶಿವನು ಅವಿನಾಶಿಯಾಗಿರುವನು; ಮತ್ತೆ ನೋಡುವುದಕ್ಕೆ (ರುಂಡಮಾಲೆ ಸರ್ಪ, ಸ್ಮಶಾನಧೂಲಿ–ಇತ್ಯಾದಿ ಅಮಂಗಳಕರವಾದ ವಸ್ತುಗಳನ್ನು ಧರಿಸಿ) ಅಮಂಗಲ ನಾಗಿ ಭಾಸವಾಗುತ್ತಿದ್ದರೂ, ಮಂಗಲ ಸಮೂಹ (ಮಂಗಲಮಯ) ನಾಗಿರುವನು. ಶುಕ, ಸನಕಾದಿ ಸಿದ್ಧಪುರುಷರು, ಮುನಿಗಳು, ಯೋಗಿ ಜನರೂ ನಾಮದ ಪ್ರಭಾವದಿಂದಲೆ ಬ್ರಹ್ಮಾನಂದಸುಖವನ್ನು ಭೋಗಿಸುತ್ತಿರುವರು. ನಾರದನು ನಾಮಜಪದ ಮಹಿಮೆಯನ್ನು ತಿಳಿದಿರುವನು. ಏಕೆಂದರೆ ಹರಿಹರರು ಜಗತ್ತಿಗೆ ಪ್ರಿಯರಾಗಿರುವರು ಅವರಿಬ್ಬರಿಗೂ ನಾರದನು ಪ್ರಿಯನಾಗಿರುವನು. ನಾಮವನ್ನು ಜಪಿಸಿದ್ದರಿಂದ ಭಗವಂತನು ಪ್ರಹ್ಲಾದನಿಗೆ ಪ್ರಸನ್ನನಾದನು. ಮತ್ತೆ ಅವನು (ಪ್ರಹ್ಲಾದನು) § ಭಕ್ತಶಿರೋಮಣಿಯೆಂದು ಪ್ರಸಿದ್ಧನಾದನು. ಧ್ರುವನು † ಗ್ಲಾನಿಯಿಂದ ಹರಿನಾಮವನ್ನು ಜಪಿಸಿ, ಅಚಲವೂ

---

ಕೊಂಡು ಹೋಗಿ ಸಪ್ತದೀಪಗಳಲ್ಲಿಯೂ ಒಂಭತ್ತು ಖಂಡಗಳಲ್ಲಿಯೂ ಹಂಚಿದರು. ಆಗ ಕೇವಲ "ರಾಮ" ಎಂಬ ಎರಡು ಅಕ್ಷರಗಳು ಉಳಿದವು ಅವುಗಳನ್ನು ಮೂರು ಭಾಗವಾಗಿ ವಿಭಾಗಿಸಲಾಗಲಿಲ್ಲ ಮಹಾದೇವನು ಅವುಗಳನ್ನು ತೆಗೆದುಕೊಂಡು ತನ್ನ ಹೃದಯದಲ್ಲಿ ಧರಿಸಿದನು ಹಾಗಾದರೆ ಎಲ್ಲ ರಾಮಾಯಣಗಳಿಗೂ ಸಾರಭೂತವಾದ "ರಾಮ" ಎಂಬೆರಡು ಅಕ್ಷರಗಳನ್ನು ಶಿವನು ತೆಗೆದುಕೊಂಡದ್ದಾದರೆ ಇನ್ನು ರಾಮಾಯಣದಲ್ಲಿ ಉಳಿದದ್ದೇನು? ಎಂದು ಶಂಕಿಸಕೂಡದು ಅದಕ್ಕೆ ಸಮಾಧಾನವಾಗಿ ಯಾವುದು ರಾಮನ ಸ್ಥಾನವಾಗಿರುವುದೋ ಎಂದರೆ ಎಲ್ಲಿ ರಾಮನು ಸ್ವಯಂವಿದ್ಯಮಾನನಾಗಿರುವನೊ ಅಲ್ಲಿ ನಾಮದ ಅವಶ್ಯಕತೆಯಿಲ್ಲ, ಮತ್ತೆ ರಾಮಾಯಣವು ರಾಮಮಯವಾಗಿರುವುದು. ಈ ರಾಮ ಎಂಬೆರಡು ಅಕ್ಷರಗಳಿಲ್ಲದ ವಸ್ತುವೆ ಇಲ್ಲ. ಅದು ಹೇಗೆಂದರೆ—"ನಾಮ ಚತುರ್ಗುಣ ಪಂಚಯುತ ದ್ವಿಗುಣಿತ ವಸುಹೃತ ಶೇಷ। ರಮ್ಯೌ ರಾಮ ಸಬ ಜಗತಮೆಂ ತುಲಸೀ ಯಹಪ್ರತಿ ಲೇಖ।" ಎಂದು ತುಳಸೀದಾಸರು ಹೇಳಿರುವರು.

§ ಪ್ರಹ್ಲಾದನು ತನ್ನ ತಂದೆಯು ಕೊಟ್ಟ ಘೋರ ಸಂಕಷ್ಟಗಳನ್ನು ಸಹಿಸಿದನು. ಆದರೆ ಹರಿನಾಮ ಜಪವನ್ನು ಮಾತ್ರ ಬಿಡಲಿಲ್ಲ ಕೊನೆಗೆ ಭಗವಂತನು ಭಕ್ತಿವಶನಾಗಿ ಅವನನ್ನು ಉದ್ಧರಿಸಿದನು. ಅವನು ಭಕ್ತಶಿರೋಮಣಿಯೆಂದು ಪ್ರಸಿದ್ಧನಾದನು ಅವನ ಪೂರ್ಣಚರಿತೆಯು ಭಾಗವತದಲ್ಲಿ ಇರುವುದು.

† ಸ್ವಾಯಂಭೂಮನುವೂ, ಶತರೂಪದೇಶದ ರಾಜನೂ ಆದ ಉತ್ತಾನಪಾದ ರಾಯನಿಗೆ ಇಬ್ಬರು ರಾಣಿಯರಿದ್ದರು. ಹಿರಿಯ ರಾಣಿಗೆ ಧ್ರುವನೆಂಬ ಮಗನಿದ್ದನು. ಆದರೆ ಕಿರಿಯರಾಣಿಯನ್ನು ರಾಜನು ವಿಶೇಷವಾಗಿ ಪ್ರೀತಿಸುತ್ತಿದ್ದನು. ಒಂದಾನೊಂದು ದಿನ ರಾಜನು ಕಿರಿಯರಾಣಿಯ ಹತ್ತಿರ ಕುಳಿತಿದ್ದಾಗ, ಧ್ರುವನು ರಾಜನ ತೊಡೆಯ ಮೇಲೆ ಕುಳಿತುಕೊಂಡನು ಆಗ ಚಿಕ್ಕ ರಾಣಿಯು ಧ್ರುವನನ್ನು ರಾಜನ ತೊಡೆಯ ಮೇಲಿಂದ ಕೆಳಗಿಳಿಸಿ "ಧ್ರುವಾ! ನೀನು ನನ್ನ ಹೊಟ್ಟೆಯಲ್ಲಿ ಹುಟ್ಟಿದ್ದರೆ ಅಲ್ಲಿ ಕುಳಿತುಕೊಳ್ಳುವುದಕ್ಕೆ ಯೋಗ್ಯನಾಗುತ್ತಿದ್ದಿ" ಎಂದಳು. ಆದರಿಂದ ಧ್ರುವನಿಗೆ ನಾಚಿಗೆ ಹುಟ್ಟಿ, ಅವನು ತನ್ನ ತಾಯಿಯಿಂದ ಅಪ್ಪಣೆ ಪಡೆದು ತಪಸ್ಸು ಮಾಡುವುದಕ್ಕೆ ಕಾಡಿಗೆ ಹೋದನು. ಅಲ್ಲಿ ನಾರದರ ಉಪದೇಶಾನುಸಾರವಾಗಿ ಘೋರವಾದ ತಪಸ್ಸನ್ನಾಚರಿಸಿ, ಶಾಶ್ವತಪದವನ್ನು ಹೊಂದಿದನು

(ಸ್ಥಿರವೂ), ಉಪಮಾ ರಹಿತವೂ ಆದ ಸ್ಥಾನವನ್ನು ಹೊಂದಿದನು. ಹನುಮಂತನು ಪವಿತ್ರವಾದ ನಾಮಜಪದಿಂದ ಶ್ರೀರಾಮನನ್ನು ತನ್ನ ವಶಪಡಿಸಿಕೊಂಡನು. ಪಾಪಿಯಾದ ಅಜಾಮಿಳನೂ * ಗಜೇಂದ್ರನೂ, § ಗಣಿಕೆಯೂ † ಭಗವಂತನ ನಾಮ ಪ್ರಭಾವದಿಂದ ಮುಕ್ತಿಯನ್ನು ಪಡೆದರು. ನಾನು ನಾಮದ ಮಹಿಮೆಯನ್ನು ಎಷ್ಟು ತಾನೆ ಹೇಳಲಿ! ಶ್ರೀರಾಮನೂ ಕೂಡ ನಾಮಮಂತ್ರದ ಗುಣವನ್ನು ವರ್ಣಿಸಲಾರನು.

ದೋ ॥ ೪೨ ॥ ರಾಮನಾಮರೂಪಿಯಾದ ಕಲ್ಪವೃಕ್ಷವು, ಕಲಿಕಾಲದಲ್ಲಿ ಕಲ್ಯಾಣದ ಸ್ಥಾನವಾಗಿದೆ ಅದರ ಸ್ಮರಣೆಮಾತ್ರದಿಂದಲೆ ಭಂಗೀ ಎಲೆಯನ್ನು ಹೋಲುತ್ತಿದ್ದ ತುಳಸೀದಾಸನು (ಭಗವತ್ ಪ್ರೀತಿ ವಸ್ತುವಾದ) ತುಳಸೀ ವೃಕ್ಷವಾಗಿರುವನು. ಚತುರ್ಯುಗಗಳಲ್ಲಿಯೂ, ಕಾಲತ್ರಯ ಮತ್ತು ತ್ರಿಲೋಕಗಳಲ್ಲಿಯೂ ನಾಮವನ್ನು ಜಪಿಸಿ ಜನರು ಶೋಕರಹಿತರಾದರು

* ಅಜಾಮಿಳನೆಂಬವನು ಬಹು ಪಾಪಿಯಾಗಿದ್ದನು. ಒಂದು ದಿನ ಅವನು ಹೊರಗೆ ಹೋಗಿದ್ದಾಗ, ಕೆಲವು ಜನ ಸಾಧುಗಳು ಅವನ ಮನೆಗೆ ಬಂದರು. ಆಗ ಗರ್ಭವತಿಯಾಗಿದ್ದ ಅವನ ಹೆಂಡತಿಯು ಅವರನ್ನು ಚೆನ್ನಾಗಿ ಉಪಚರಿಸಿ ಅತಿಥಿಸತ್ಕಾರ ಮಾಡಿದಳು ಅವರು ಪ್ರಸನ್ನರಾಗಿ, ನಿನಗೆ ಪುತ್ರನು ಜನಿಸುವನು. ಅವನಿಗೆ "ನಾರಾಯಣ" ಎಂದು ಹೆಸರಿಡು ಎಂದು ಅಜ್ಞಾಪಿಸಿ ಆಶೀರ್ವದಿಸಿದರು ಆಕೆಯೂ ಹಾಗೆ ಮಾಡಿದಳು ಅಜಾಮಿಳನು ಪುತ್ರನನ್ನು ಬಹುವಾಗಿ ಪ್ರೀತಿಸಲಾರಂಭಿಸಿದನು. ಮರಣಾಂತ ಸಮಯದಲ್ಲಿ, ಅವನು ಮಾಡಿದ್ದ ವಿಶೇಷ ಪಾಪಗಳಿಗೋಸ್ಕರ ಯಮದೂತರು ಅವನಿಗೆ ವಿಶೇಷ ಭಯವನ್ನು ತೋರಿಸಲಾರಂಭಿಸಲು, ಆಗ ಅವನು ತನ್ನ ಪುತ್ರನಾದ ನಾರಾಯಣನನ್ನು ಕರೆದನು. ಆಗ, ಭಗವನ್ನಾಮೋಚ್ಚಾರಣೆಯಾದ ಕೂಡಲೆ ದೇವದೂತರು ಬಂದು ಅವನಿಗೆ ಸದ್ಗತಿಯನ್ನು ಕೊಟ್ಟರು.

§ ಮೊಸಳೆಯು ಗಜೇಂದ್ರನನ್ನು ಹಿಡಿದು, ವಿಶೇಷ ಸಮಯ ಅದಕ್ಕೂ ಗಜೇಂದ್ರನಿಗೂ ಯುದ್ಧವಾದ ಮೇಲೆ, ಅದು ಆನೆಯನ್ನು ಮುಳುಗಿಸಲೆತ್ನಿಸಿತು ಆಗ ಗಜೇಂದ್ರನು "ಭಗವಾನ್! ರಕ್ಷಿಸು! ರಕ್ಷಿಸು!" ಎಂದು ದೀನವಾಣಿಯಿಂದ ಪ್ರಾರ್ಥಿಸಲು ಭಗವಂತನು ಸ್ವತಃ ತಾನೆ ಬಂದು ಅದನ್ನು ಮುಕ್ತಪಡಿಸಿದನು.

† ಪಿಂಗಲಾ ಎಂಬೊಬ್ಬ ಗಣಿಕಾಸ್ತ್ರೀಯಿದ್ದಳು. ಒಂದು ದಿನ ಅವಳು ವಿಶೇಷ ಅಲಂಕಾರಗಳನ್ನು ಮಾಡಿಕೊಂಡು, ವಿಷಯಿಗಳಾದ ಪುರುಷರ ಆಗಮನವನ್ನು ನೋಡುತ್ತ ಕುಳಿತಳು. ಅವತ್ತು ಯಾರೂ ಅವಳೆಡೆಯಲ್ಲಿ ಸುಳಿಯಲಿಲ್ಲ. ಆಗ ಅವಳಲ್ಲಿ ಜ್ಞಾನೋದಯವುಂಟಾಗಿ, "ಧನಹರಣ ಮಾಡುವುದಕ್ಕಾಗಿ ಇಂದಿನವರೆಗೆ ಪುರುಷರ ಆಗಮನವನ್ನೆದುರು ನೋಡುವುದರಲ್ಲಿ ಕಳೆದ ಸಮಯವನ್ನು, ನಾನು ದೇವರ ಧ್ಯಾನದಲ್ಲಿ ವಿನಿಯೋಗಿಸಿದ್ದರೆ ನನ್ನ ಉದ್ಧಾರವಾಗುತ್ತಿತ್ತಲ್ಲ!" ಎಂದು ಎಚ್ಚೆತ್ತಳು. ಆ ಮೇಲ್ಕೇಳತಕ್ಕದ್ದೇನು ? ತನ್ನ ಇಡೀ ಸಮಯವನ್ನು ಭಗವದ್ಭಜನೆಯಲ್ಲಿ ವಿನಿಯೋಗಿಸುತ್ತ ಕೊನೆಗೆ ಪರಮ ಪದವನ್ನು ಹೊಂದಿದಳು.

ವೇದ, ಪುರಾಣ, ಮತ್ತು ಸಂತರು, 'ರಾಮನಲ್ಲಿ ಸ್ನೇಹಮಾಡುವುದೇ ಎಲ್ಲ ಪುಣ್ಯಗಳ ಫಲವಾಗಿರುವುದೆಂದು ಏಕಕಂಠದಿಂದ ಸಾರುತ್ತಲಿರುವರು. ಮೊದಲನೆಯ (ಸತ್ಯ) ಯುಗದಲ್ಲಿ ಧ್ಯಾನದಿಂದಲೂ ಎರಡನೆಯ (ತ್ರೇತಾ) ಯುಗದಲ್ಲಿ ಯಜ್ಞಮಾಡುವುದರಿಂದಲೂ, ದ್ವಾಪರಯುಗದಲ್ಲಿ ಪೂಜೆಮಾಡುವುದರಿಂದಲೂ ಈಶ್ವರನು ಪ್ರಸನ್ನನಾಗುವನು. ಆದರೆ ಕಲಿಯುಗವು ಮಲದಿಂದ ಜಡವೂ ಮಲಿನವೂ ಆಗಿದೆ. ಪಾಪಸಮುದ್ರದಲ್ಲಿ ಮನುಷ್ಯರಮನಸ್ಸು ಮೀನಿನಂತೆ ವಾಸಿಸುತ್ತಿರುವುದು. ಇಂಥ ಕರಾಳರೂಪಕಾಲದಲ್ಲಿ ನಾಮವು ಕಲ್ಪವೃಕ್ಷವಾಗಿದೆ. ಅದರ ಸ್ಮರಣೆಮಾಡಿದ ಕೂಡಲೆ ಸಂಸಾರದ ಜಾಲವು ಸಂಪೂರ್ಣವಾಗಿ ನಾಶವಾಗುವುದು. ಶ್ರೀರಾಮನ ನಾಮವು ಕಲಿಯುಗದಲ್ಲಿ ಎಲ್ಲ ಮನೋರಥಗಳನ್ನು ಈಡೇರಿಸುವುದು. ಇದು ಈ ಲೋಕದಲ್ಲಿ ಮಾತಾಪಿತೃ ಸಮಾನವಾಗಿಯೂ, ಪರಲೋಕದಲ್ಲಿ ಹಿತವನ್ನುಂಟುಮಾಡುವುದಾಗಿಯೂ ಇರುವುದು. ಕಲಿಕಾಲದಲ್ಲಿ ಕರ್ಮ, ಭಕ್ತಿ, ಮತ್ತೆ ಜ್ಞಾನ ಇವುಗಳಾವವೂ ಇಲ್ಲ, ಕೇವಲ ರಾಮನಾಮದ ಆಧಾರ ಮಾತ್ರವಿರುವದು. ಕಲಿಯುಗವು ಕಪಟತ್ವದ ಗಣಿಯಾಗಿಯೂ, ಕಾಲನೇಮಿ ದೈತ್ಯಸದೃಶವಾಗಿಯೂ ಇದೆ. ಅದನ್ನು ನಾಶಪಡಿಸುವುದಕ್ಕೆ ರಾಮನಾಮವನ್ನು ಸುಮತಿಯಿಂದ ಭಜಿಸುವುದು ಸಮರ್ಥನಾದ ಹನುಮಂತನಂತಿರುವುದು.

ದೋ ॥ ೪೩ ॥ * ನೃಸಿಂಹರೂಪಿಯಾದ ರಾಮನಾಮವು ದೇವತೆಗಳಿಗೆ ದುಃಖವನ್ನು ಕೊಡುವಂಥ ಹಿರಣ್ಯಕಶಿಪು ರೂಪಿಯಾದ ಕಲಿಕಾಲವನ್ನು ನಾಶಪಡಿಸಿ, ಪ್ರಹ್ಲಾದನಂತೆ ನಾಮಜಪವನ್ನು ಮಾಡುವ ಭಕ್ತರನ್ನು ರಕ್ಷಿಸುವುದು. ಇಂತೆಂಬಲ್ಲಿಗೆ ನಾಮವಂದನೆಯು ಮುಗಿದುದು

ಯಾವ ಮನುಷ್ಯನು ಪ್ರೀತಿಯಿಂದಾಗಲಿ, ವೈರತ್ವದಿಂದಾಗಲಿ, ಈರ್ಷೆಯಿಂದಾಗಲಿ, ಅಥವಾ ಆಲಸ್ಯದಿಂದಾಗಲಿ ನಾಮಜಪವನ್ನು ಮಾಡುತ್ತಿರುವನೋ ಅವನಿಗೆ ಹತ್ತು ದಿಕ್ಕುಗಳಿಂದಲೂ ಕಲ್ಯಾಣವಾಗುವುದು §

---

* "ರಾಮೇತಿ ವರ್ಣದ್ವಯಮಾದರೇಣ ಸದಾ ಸ್ಮರನ್ಮುಕ್ತಿಮುಪೈತಿ ಜನ್ತುಃ । ಕಲೌ ಯುಗೆ ಕಲ್ಮಷಮಾನಸಾನಾಮನ್ಯತ್ರ ಧರ್ಮೋ ಖಲು ನಾಧಿಕಾರಃ ॥೧॥" ಎಂದರೆ ರಾಮ ಎಂಬೀ ಎರಡು ಅಕ್ಷರಗಳನ್ನು ಯಾವಾಗಲೂ ಆದರಪೂರ್ವಕವಾಗಿ ಜಪಿಸುವುದರಿಂದ ಮನುಷ್ಯ ಪ್ರಾಣಿಯು ಮುಕ್ತಿಯನ್ನು ಹೊಂದುವನು. ಕಲಿಯುಗದಲ್ಲಿ ಪಾಪಿ ಮನುಷ್ಯರಿಗೆ ಅನ್ಯತ್ರ ಧರ್ಮದಲ್ಲಿ ಖಂಡಿತವಾಗಿಯೂ ಅಧಿಕಾರವಿಲ್ಲ.

§ ಈ ವಿಚಾರದಲ್ಲಿ ಪ್ರಹ್ಲಾದನು ತನ್ನ ತಂದೆಗೆ ಹೇಳಿರುವುದೇನೆಂದರೆ –"ರಾಮನಾಮ ಜಪತಾಂ ಕುತೋಭಯಂ ಸರ್ವಪಾಪಶಮನೈಕ ಭೇಷಜಮ್ । ಪಶ್ಯ ತಾತ ಮಮಗಾತ್ರಸನ್ನಿಧೌ ಪಾವಕೋಽಪಿ ಸಲಿಲಾಯತೇಽಧುನಾ "ಎಂದರೆ ಹೇ ಪಿತನೆ ! ಎಲ್ಲ ಪಾಪಗಳನ್ನೂ ದೂರ ಮಾಡುವ ಏಕಮಾತ್ರ ಔಷಧವಾದ ರಾಮನಾಮವನ್ನು ಜಪಿಸುವವನಿಗೆ ಭಯವೆಲ್ಲಿಯದು ? ನೋಡು, ಈಗ ನನ್ನ ಶರೀರ ಸಮೀಪದಲ್ಲಿ ಅಗ್ನಿಯು ಕೂಡ ನೀರಿನಂತೆ ತಣ್ಣಗಾಗಿರುವುದು.—

ಅಂಥಾ ರಾಮನಾಮವನ್ನು ಜಪಿಸುತ್ತ ಶ್ರೀರಾಮಚಂದ್ರನಿಗೆ ತಲೆಬಾಗಿ ನಮಸ್ಕರಿಸಿ ರಘುನಾಥನ ಗುಣಗಳ ಕಥೆಯನ್ನು ರಚಿಸುವೆನು. ಆ ಭಗವಂತನು ನಾನು ರಚಿಸಿದ ಕಥೆಯನ್ನು ಎಲ್ಲ ವಿಧದಲ್ಲಿಯೂ ಸರಿಪಡಿಸುವನು. ಆತನ ಕರುಣೆಯು ಅಪಾರವಾದುದು. ಅಹಾ! ಶ್ರೀರಾಮನಂತಹ ಒಳ್ಳೆಯ ಸ್ವಾಮಿಗೆ ನನ್ನಂಥ ಯೋಗ್ಯತೆಯಿಲ್ಲದ ಸೇವಕನೆ! ಆದರೆ ಹೇ ದಯಾನಿಧೆ! ನನ್ನ ಕಡೆಗೆ ನೋಡು, ನನ್ನನ್ನು ರಕ್ಷಿಸು, ರಕ್ಷಿಸು! ಸ್ವಾಮಿಯಾದವನು ವಿನಯವನ್ನು ನೋಡಿ ತನ್ನ ಸೇವಕನ ಪ್ರೀತಿಯನ್ನು ತಿಳಿಯುತ್ತಾನೆಂದು ಜಗತ್ತಿನಲ್ಲಿಯೂ ವೇದಗಳಲ್ಲಿಯೂ ಯೋಗ್ಯನಾದ ಸ್ವಾಮಿಯ ನಡತೆಯನ್ನು ವರ್ಣಿಸಿರುವರು. ಬಡವನು, ಶ್ರೀಮಂತನು, ಅಜ್ಞಾನಿ, ಚತುರ, ಪಂಡಿತ, ಮೂರ್ಖ, ಮಂದಮತಿ, ಪ್ರಸಿದ್ಧಕವಿ, ಸಾಮಾನ್ಯಕವಿ ಮತ್ತು ಎಲ್ಲ ಸ್ತ್ರೀಪುರುಷರೂ (ತಮ್ಮ ದೇಶದ) ರಾಜನನ್ನು ತಮ್ಮವನೆಂದು ತಿಳಿದು ಅವರವರ ಬುದ್ಧಿಗನುಸಾರವಾಗಿ ರಾಜನನ್ನು ಸ್ತುತಿಸುವರು ಏಕೆಂದರೆ ರಾಜನಾಗುವವನು ಸನ್ಮಾರ್ಗದಲ್ಲಿ ನಡೆಯುವಂತಹನಾಗಿಯೂ ಚತುರನಾಗಿಯೂ ಸುಶೀಲನಾಗಿಯೂ ಇರುವನು. ಅಂತಹ (ರಾಜ) ನಲ್ಲಿ ಈಶ್ವರನ * ಅಂಶವಿರುವುದು, ಅವನು ಬಹು ದಯಾಳುವಾಗಿರುವನು. ಅವನು ಎಲ್ಲರ ಮಾತುಗಳನ್ನೂ ಸಾವಧಾನದಿಂದ ಕೇಳಿ, ಅವರವರ ಭಕ್ತಿ, ಮತಿಗತಿಗಳನ್ನು ತಿಳಿದುಕೊಂಡು ತನ್ನ ಮಧುರವಾದ ಮಾತುಗಳಿಂದ ಅವರನ್ನು ಸಮ್ಮಾನಿಸುವನು. ಸಾಮಾನ್ಯರಾಜರ ಸ್ವಭಾವವು ಹೀಗಿರುವಾಗ, ಕೋಸಲದೇಶದ ರಾಜನಾದ ರಾಮಚಂದ್ರನ ಸ್ವಭಾವವನ್ನು ವರ್ಣಿಸಬೇಕಾದ್ದೇ ಇಲ್ಲ ಆತನು ರಾಜರಾಜೇಶ್ವರನು (ಜ್ಞಾನಿಗಳಲ್ಲಿ ಶಿರೋಮಣಿ ಎನಿಸಿರುವವನು) ಶ್ರೀರಾಮನು ಶುದ್ಧ ಭಕ್ತಿಯಿಂದ ಪ್ರಸನ್ನನಾಗತಕ್ಕವನು. ಆದರೆ ನನ್ನಂತಹ ಮೂರ್ಖನೂ ಮಲಿನಮತಿಯೂ ಈ ಜಗತ್ತಿನಲ್ಲಿ ಬೇರೆ ಇಲ್ಲ.

ದೋ ॥ ೪೪ ॥ ೪೫ ॥ ಶ್ರೀರಾಮಚಂದ್ರನು ಕೃಪಾಳುವು ಆದುದರಿಂದ ನನ್ನಂತಹ ಮೂರ್ಖ ಸೇವಕನ ಭಕ್ತಿಯನ್ನೂ ರುಚಿಯನ್ನೂ ಸ್ವೀಕರಿಸುವನು ಏಕೆಂದರೆ ಕಲ್ಲುಗಳನ್ನು ನೀರಿನಮೇಲೆ ತೇಲಿಸುವುದಕ್ಕೂ, ಕರಡಿ ಕಪಿಗಳನ್ನು ಬುದ್ಧಿವಂತರಾದ ಮಂತ್ರಿಗಳನ್ನಾಗಿ ಮಾಡುವುದಕ್ಕೂ ಆತನಲ್ಲಿ ಶಕ್ತಿಯಿರುವುದು. ರಾಮನಂತಹ ಪ್ರಭುವಿಗೆ ತುಲಸೀದಾಸನು ಸೇವಕನಾದನೆಂದು ನಾನು ಹೇಳುತ್ತಿರುವೆನು. ಜನರೂ ಹೇಳುತ್ತಿರುವರು, ಈ ನಗೆಯ ಮಾತನ್ನು ರಾಮಚಂದ್ರನು ಕೇಳಿ ಸಹಿಸುತ್ತಿರುವನು. ಅಂಥಾ ಮಹಾಪ್ರಭುವಿಗೆ ತುಚ್ಛನಾದ ನಾನು

---

* ಈ ವಿಷಯದಲ್ಲಿ ಮನು ಮಹರ್ಷಿಯು ಹೀಗೆ ಬರೆದಿರುವನು.—"ಅಷ್ಟಾಭಿಶ್ಚ ಸುರೇಂದ್ರಾಣಾಂ ಮಾತ್ರಾಭಿರ್ನಿರ್ಮಿತೊ ನೃಪಃ। ತಸ್ಮಾದಭಿಭವತ್ಯೇಷ ಸರ್ವಭೂತಾನಿ ತೇಜಸಾ॥"

ಸೇವಕನೆಂದು ತಿಳಿದುಕೊಂಡಿರುವೆನು. ಈ ನನ್ನ ಧೃಷ್ಟತನದ ದೋಷ ಪೂರ್ಣವಾದ ಮಾತನ್ನು ಕೇಳಿ ಪಾಪಪೂರ್ಣವಾದ ನರಕವೂ ಮೂಗುಮುರಿ ಯುತ್ತಿದೆ. ಏಕೆಂದರೆ ನಾನು ಆತನ ಸೇವಕನಾಗಲು ಯೋಗ್ಯನಲ್ಲ. ನನ್ನ ದೋಷವೇ ನನ್ನನ್ನು ಹೆದರಿಸುತ್ತಿದೆ. ಆದರೆ ಶ್ರೀರಾಮನು ಸ್ವಪ್ನದಲ್ಲಿ ಕೂಡ (ದೋಷವನ್ನು) ಲಕ್ಷಿಸಲಿಲ್ಲ. ಏಕೆಂದರೆ ನನ್ನ ಪ್ರಾರ್ಥನೆಯನ್ನು ಕೇಳಿ ಸ್ವಾಮಿಯಾದ ರಾಮಚಂದ್ರನು ತನ್ನ ದಿವ್ಯದೃಷ್ಟಿಯಿಂದ ನನ್ನ ಮನಸ್ಸಿನ ಮಾತಿನ ಮರ್ಮವನ್ನು ತಿಳಿದು ನನ್ನ ಬುದ್ಧಿಯನ್ನೂ ಭಕ್ತಿಯನ್ನು ವೃದ್ಧಿಗೊಳಿ ಸಿದನು. ಹೇಳಿಕೆಯಲ್ಲಿ ಅದು ಸವಿನುಡಿಯಾಗಿರಲಿ, ಅಥವಾ ಬಿರುನುಡಿಯಾಗಲಿ ರಾಮಚಂದ್ರನೇನೊ ತನ್ನ ಭಕ್ತರ ಹೃದಯದೊಳಗಣ ಭಕ್ತಿಯನ್ನು ತಿಳಿದು ಪ್ರಸನ್ನನಾಗುವನು. ಭಕ್ತರ ತತ್ವಗಳನ್ನು ಆತನು ಮನಸ್ಸಿನಲ್ಲಿಡುವುದಿಲ್ಲ ಆತನು ಕೇವಲ ಅವರ ಹೃದಯದಲ್ಲಿರುವ ಭಕ್ತಿಯನ್ನೆ ಬಾರಿಬಾರಿಗೂ ಸ್ಮರಿ ಸುತ್ತಿರುವನು. ಆತನು ಅಪರಾಧಿಯಾದ ವಾಲಿಯನ್ನು ವ್ಯಾಧನಂತೆ ಸಂಹರಿ ಸಿದ ಪಾಪವು ಸುಗ್ರೀವನಿಂದಲೇ ಆಚರಿಸಲ್ಪಟ್ಟಿತು, ಏಕೆಂದರೆ ರಾಜ್ಯವು ಸಿಕ್ಕಿದ ಕೂಡಲೆ ಸುಗ್ರೀವನು ವಿಷಯದಲ್ಲಿ ಮಗ್ನನಾಗಿ ರಾಮಚಂದ್ರನ ಉಪಕಾರವನ್ನೆ ಮರೆತನು. ಇದೇರೀತಿಯಾಗಿ ಮತ್ತೆ ವಿಭೀಷಣನು ಆಚರಿಸಿದನು. ಆದರ ಶ್ರೀರಾಮನು ಆ ವಿಚಾರಗಳನ್ನು ಸ್ವಪ್ನದಲ್ಲಿ ಕೂಡ ಸ್ಮರಿಸಲಿಲ್ಲ. ಭರತನ ಭೇಟಿ ಯಾದ ಕೂಡಲೆ ರಾಮಚಂದ್ರನು ಅವನನ್ನು ಸನ್ಮಾನಿಸಿದನು, ಮತ್ತೆ ರಾಜ ಸಭೆಯಲ್ಲಿ ಆತನ ಗುಣಗಳನ್ನು ವರ್ಣಿಸಿದನು.

## ರಾಮಾಯಣದ ಮಹಾತ್ಮೆ

(ಯಾಜ್ಞವಲ್ಕ್ಯಮುನಿಯ ಮೂಲಕ ಶ್ರೀರಾಮಚರಿತ ಮಾನಸ ಕಥೆಯು.)

ದೋ ॥ ೪೬ ॥ ೪೮ ॥ ಶ್ರೀರಾಮಚಂದ್ರನು ಮರದ ಕೆಳಗೆ, ಕಪಿಗಳು ಮರದ ಮೇಲೆ! ಅರ್ಥಾತ್ ರಾಮಚಂದ್ರನು ಭೂಚಾರಿಯಾದ ಮನುಷ್ಯನು, ಕಪಿಗಳಾದರೊ ಶಾಖಾ–ಮೃಗಗಳು! ಆದಾಗ್ಯೂ ಅವುಗಳನ್ನು ಆತನು ತನ್ನ ಸಮಾನಸ್ಕಂದರಾಗ ಮಾಡಿಕೊಂಡನು; ಆದುದರಿಂದ ರಾಮಚಂದ್ರನ ಸಮಾನ ನಾದ ಸಮಾಧಾನ ಶೀಲನಾದ ಸ್ವಾಮಿಯು ಮತ್ತಾವನೂ ಇಲ್ಲವೆಂದು ತುಳಸೀ ದಾಸರು ಹೇಳುತ್ತಾರೆ.—ಹೇ, ರಾಮಚಂದ್ರನೆ! ನಿನ್ನ ಸ್ವಭಾವವು ಎಲ್ಲರಿಗೂ ಲಾಭವನ್ನುಂಟುಮಾಡುವುದಾಗಿದೆ. ಇದು ಸತ್ಯ! ಹಾಗಾದರೆ ಅದರಿಂದ ತುಳಸೀ ದಾಸನಿಗೂ ಲಾಭವಾಗುವುದೆಂಬದರಲ್ಲಾವ ಸಂಶಯವೂ ಇಲ್ಲ. ಈ ರೀತಿಯಾಗಿ ನನ್ನ ಗುಣದೋಷಗಳನ್ನು ಹೇಳಿ ಪುನಃ ಎಲ್ಲರಿಗೂ ನಮಸ್ಕರಿಸಿ, ಶ್ರೀ ರಘು ನಾಥನ ನಿರ್ಮಲವಾದ ಯಶಸ್ಸನ್ನು ವರ್ಣಿಸುವೆನು. —ಅದನ್ನು ಕೇಳುವುದರಿಂದ ಕಲಿಯುಗದ ದೋಷಗಳೆಲ್ಲ ನಾಶವಾಗುವವು. ॥ ಚೌ ॥ ಯಾಜ್ಞವಲ್ಕ್ಯ

ಮುನಿಯು ಯಾವ ಸುಂದರವಾದ ಕಥೆಯನ್ನು ಮುನಿಶ್ರೇಷ್ಠನಾದ ಭರದ್ವಾಜನಿಗೆ ಹೇಳಿದನೊ ಆ ಸಂವಾದವನ್ನು ನಾನು ವರ್ಣಿಸುವೆನು.—ಸಜ್ಜನರೆ, ಸುಖವಾಗಿ ಕೇಳಿರಿ. ಮೊದಲು ಆ ರಾಮಚರಿತೆಯನ್ನು ಶಿವನು ರಚಿಸಿದನು. ಅದನ್ನೇ ಕೃಪಾಪೂರ್ವಕವಾಗಿ ಪಾರ್ವತೀ ದೇವಿಗೆ ಹೇಳಿದನು. ಪುನಃ ಅದನ್ನೇ ರಾಮಭಕ್ತಿಗೆ ಅಧಿಕಾರಿಯಾದ ಕಾಗಭುಶುಂಡಿಗೆ ಶಂಕರನು ಕೊಟ್ಟನು. ಅವನಿಂದ ಯಾಜ್ಞವಲ್ಕ್ಯ ಮುನಿಯು ಅದನ್ನು ಹೊಂದಿದನು. ಅದನ್ನೆ ಆತನು ಭರದ್ವಾಜ ಮುನಿಗೆ ಹೇಳಿದನು. ಇದನ್ನು ಕೇಳಿದವರೂ, ಹೇಳಿದವರೂ ಸಮಶೀಲರಾಗಿಯೂ ಸಮದರ್ಶಿಗಳಾಗಿಯೂ ಇದ್ದರು. ಮತ್ತೆ ಅವರು ಶ್ರೀಹರಿಯ ಲೀಲೆಗಳನ್ನು ಬಲ್ಲವರಾಗಿದ್ದರು. ಏಕೆಂದರೆ ಕೈಮೇಲಿಟ್ಟುಕೊಂಡಿರುವ ಆಮಲಕ ಫಲದಂತೆ ತ್ರಿಕಾಲದ ವಿಷಯಗಳನ್ನೂ ಅವರು ತಮ್ಮ ಜ್ಞಾನಬಲದಿಂದ ತಿಳಿದಿದ್ದರು. ಇನ್ನೂ ಅನೇಕ ಚತುರಭಕ್ತರು ಇರುವರು ಅವರು ಈ ಚರಿತ್ರೆಯನ್ನು ವಿವಿಧವಾಗಿ ವರ್ಣಿಸುವರು, ಕೇಳುವರು, ಮತ್ತೆ ಅದಕ್ಕೆ ವಿವಿಧಾರ್ಥಗಳನ್ನು ಹೇಳುವರು.

ಧೋ ॥ ೪೯ ॥ ೫೦ ॥ ನಾನು ಆ ಕಥೆಯನ್ನು ಶೂಕರಕ್ಷೇತ್ರದಲ್ಲಿ ನನ್ನ ಗುರುವಿನಿಂದ ಕೇಳಿದ್ದೆನು. ಆದರೆ ಆಗ ಬಾಲ್ಯಾವಸ್ಥೆಯ ದೆಸೆಯಿಂದ ನಾನು ಕೇವಲ ಅಜ್ಞಾನಿಯಾಗಿದ್ದೆನು. ಆದುದರಿಂದ ಅದನ್ನು ಚೆನ್ನಾಗಿ ನಾನು ತಿಳಿದುಕೊಳ್ಳಲಿಲ್ಲ. ಅದು ಹೇಗೆ ತಿಳಿಯಬೇಕು? ಏಕೆಂದರೆ ರಾಮನ ಚರಿತ್ರೆಯು ಬಹು ಗೂಢವಾದುದು ಅದನ್ನು ಹೇಳುವವರು, ಕೇಳುವವರು—ಇಬ್ಬರೂ—ಜ್ಞಾನನಿಧಿಗಳಾಗಿರಬೇಕು. ಹಾಗಿದ್ದರೆ ಕೆಲಸವು ನಡೆಯುವುದು. ಆದರೆ ಕಲಿಪಾಪ ಪಂಕದಲ್ಲಿ ಸಿಕ್ಕಿಕೊಂಡಿರುವ ಈ ಮೂರ್ಖಜೀವಿಗೆ (ತುಳಸೀದಾಸನಿಗೆ) ಅದು ಹೇಗೆ ತಿಳಿಯಬೇಕು ಆದಾಗ್ಯೂ ಮೇಲಿಂದ ಮೇಲೆ ಲಭಿಸಿದ ಗುರುವಿನ ಉಪದೇಶದಿಂದ ನನ್ನ ಬುದ್ಧಿಗನುಸಾರವಾಗಿ ಸ್ವಲ್ಪ ಅದರ ತಿಳಿವಳಿಕೆಯುಂಟಾಯಿತು. ಅದನ್ನೆ ನಾನು ಕರ್ಣಾಟಕ ಭಾಷೆಯಲ್ಲಿ ದತ್ತಾತ್ರೇಯನಿಂದ ಹೇಳಿಸುವೆನು. ನನ್ನ ಬುದ್ಧಿ ಮತ್ತು ಜ್ಞಾನಬಲಕ್ಕನುಸಾರವಾದ ಭಗತ್ಪ್ರೇರಣೆಯಿಂದ ಹೇಳುವೆನು. ನಿಮ್ಮ ಸಂದೇಹ ಅಜ್ಞಾನ ಮತ್ತು ಭ್ರಮೆಗಳನ್ನು ನಾಶಗೊಳಿಸುವಂತಹ, ಮತ್ತೆ ಸಂಸಾರರೂಪಿಯಾದ ನದಿಯನ್ನು * ದಾಟುವುದಕ್ಕೆ ನಾವೆಯಂತಿರುವ ಕಥೆಯನ್ನು ಹೇಳುವೆನು. ಶ್ರೀರಾಮಚರಿತ್ರೆಯು ಪಂಡಿತರಿಗೆ ವಿಶ್ರಾಮವನ್ನು ಕೊಡುವುದಾಗಿಯೂ ಸಕಲ ಮಾನವರ ಮನಸ್ಸನ್ನು ಪ್ರಸನ್ನಗೊಳಿಸುವುದಾಗಿಯೂ ಕಲಿಯುಗದ ಪಾಪಗಳನ್ನು ನಾಶಪಡಿಸುವುದಾಗಿಯೂ ಇರುವುದು. ಕಲಿಯುಗರೂಪಿಯಾದ ಸರ್ಪಕ್ಕೆ

* ಕೆಲವು ಮೂಲದಲ್ಲಿ "ಭವಸರಿತಾತರಣೀ" ಎಂದೂ ಕೆಲವದರಲ್ಲಿ "ಭವಸಾಗರತರಣೀ" ಎಂದು ಇದೆ. ಆದರೆ ನಾವು ಕಾಶೀನಾಗರೀ ಪ್ರಚಾರಿಣೀ ಸಭೆಯವರಿಂದ ಪ್ರಕಟಿತವಾದ ಮೊದಲನೆಯ ಮೂಲವನ್ನೆ ಅನುಸರಿಸಿರುವೆವು.

ರಾಮಚರಿತೆಯು ಭರಣೀಪಕ್ಷಿ* ಯಂತೆಯೂ, ಜ್ಞಾನರೂಪಿಯಾದ ಅಗ್ನಿಗೆ ಅರಣಿಯು ಕಾಷ್ಟದಂತೆಯೂ § ಇರುವುದು. ಅದು ಕಲಿಯುಗದಲ್ಲಿ ಕಾಮಧೇನುವು. ಸಂತರಿಗೆ ಮನೋಲ್ಲಾಸಕರವಾದ ಸಜೀವ ಅಮೃತದಂತಿರುವುದು. ಈ ಕಥೆಯು ಪೃಥ್ವಿಯಮೇಲೆ ಹರಿಯುತ್ತಲಿರುವ ನದಿಯೆಂದು ತಿಳಿಯಬೇಕು ಇದು ಭಯವನ್ನು ನಾಶಗೊಳಿಸತಕ್ಕದ್ದಾಗಿಯೂ, ಸಂದೇಹರೂಪಿಯಾದ ಕಪ್ಪೆಗೆ ಸರ್ಪದಂತೆಯೂ ಇರುವುದು. ಅದು ರಾಕ್ಷಸ ಸೇನಾರೂಪಿಯಾದ ನರಕವನ್ನು ನಾಶಪಡಿಸುವುದಾಗಿಯೂ, ಸಾಧು ಮತ್ತು ಪಂಡಿತರ ಸಮೂಹಕ್ಕೆ ಪರ್ವತನಂದಿನಿಯಾದ ಗಂಗೆಯಂತೆಯೂ, ಸಂತಸಮಾಜರೂಪಿಯಾದ ಸಮುದ್ರಕ್ಕೆ ಲ ಕ್ಷ್ಮಿಯಂತೆಯೂ, ಇಡೀ ಜಗತ್ತಿನ ಸಂಸಾರದ ಭಾರವನ್ನು ಧಾರಣಮಾಡುವ ಪೃಥ್ವಿಯಂತೆ ಅಚಲವಾಗಿಯೂ ಯಮದೂತರ ಮುಖಕ್ಕೆ ಮಸಿ ಬಳಿಯುವುದಕ್ಕೆ ಈ ಸಂಸಾರದಲ್ಲಿ ಯಮುನೆ ‡ ಯಂತೆಯೂ, ಜೀವನ್ಮುಕ್ತಿಗೆ ಕಾಶಿಯಂತೆಯೂ, ರಾಮನಿಗೆ ಪ್ರಿಯವಾದ ತುಳಸಿಯಂತೆಯೂ ತುಳಸೀದಾಸನಿಗೆ ಹುಲಸಿಯಂತೆ † ಹಿತಕಾರಿಯಾಗಿಯೂ ಇರುವುದು ಈ ರಾಮಕಥೆಯು ಶಿವನಿಗೆ ನರ್ಮದಾನದಿಯಂತೆ ಪ್ರಿಯಕರವಾಗಿದೆ ಇದು ಎಲ್ಲ ಸಿದ್ಧಿ-ಸುಖ-ಸಂಪತ್ತಿಗಳಿಗೆ ಗಣಿಯಂತೆಯೂ ಸುಂದರಗುಣಿಗಳಾದ ದೇವತೆಗಳಿಗೆ ಅವರ ಮಾತೆಯಾದ ಅದಿತಿಯಂತೆಯೂ ಶ್ರೀರಘುನಾಥನ ಭಕ್ತಿ ಮತ್ತು ಪ್ರೇಮಗಳಿಗೆ ಮೇರೆಯಂತೆಯೂ ಇರುವುದು.

ದೋ ॥ ೩೧ ॥ ತುಳಸೀದಾಸರು ಹೇಳುತ್ತಾರೆ, ಕೇಳಿರಿ. ರಾಮಕಥೆಯೇ ಆಕಾಶಗಂಗೆಯು, ನಿರ್ಮಲಚಿತ್ತವೇ ಚಿತ್ರಕೂಟವು. ಸುಂದರವಾದ ಭಕ್ತಿಯು ಅದರ ವನವು. ಅದರಲ್ಲಿ ಸೀತಾರಾಮನು ವಿಹರಿಸುತ್ತಿರುವನು. ಚೌ॥ ರಾಮ

* ಭರಣೀ ನಕ್ಷತ್ರದ ಮಳೆಗೆ ಸರ್ಪವು ಸಾಯುವುದೆಂದು ಕೆಲವರ ತಿಳಿವಳಿಕೆ.— ಭರಣಿಯೆಂಬ ಒಂದು ಜಾತಿಯ ಪಕ್ಷಿಯೂ ಇರುವುದು. ಅದು ಸರ್ಪವನ್ನು ನೋಡಿದ ಕೂಡಲೆ ತನ್ನ ರೆಕ್ಕೆಗಳನ್ನು ಮುದುರಿಕೊಂಡು ಬೀಳುವುದು, ಸರ್ಪವು ಅದನ್ನು ನುಂಗಿದ ನಂತರ ಅದು ಸರ್ಪದ ಹೊಟ್ಟೆಯಲ್ಲಿ ತನ್ನ ರೆಕ್ಕೆಗಳನ್ನು ಬಿಚ್ಚಿಕೊಂಡು, ಅದರ ಹೊಟ್ಟೆಯನ್ನು ಸೀಳಿಕೊಂಡು ಹಾರಿ ಹೋಗುವುದು,

§ ಪೂರ್ವಕಾಲದಲ್ಲಿ ಯಜ್ಞಯಾಗಾದಿಗಳನ್ನು ಮಾಡುವಾಗ ಅರಣೀಕಟ್ಟಿಗೆಯನ್ನು ಒಂದರಮೇಲೊಂದನ್ನಿಟ್ಟು ಅದರ ಘರ್ಷಣದಿಂದ ಉಂಟಾಗುವ ಅಗ್ನಿಯನ್ನೇ ಉಪಯೋಗಿಸುತ್ತಿದ್ದರು

‡ ಯಮುನೆಯು ಸೂರ್ಯಪುತ್ರಿಯೆಂದೂ, ಯಮರಾಜನು ಸೂರ್ಯನ ಮಗನೆಂದೂ ಪುರಾಣಗಳಲ್ಲಿ ಹೇಳಿದೆ. ತನ್ನ ಜಲದಲ್ಲಿ ಸ್ನಾನಮಾಡಿದವರಿಗೆ ಯಮದೂತರು ದಂಡವನ್ನು ವಿಧಿಸಲಾಗದೆಂದು ಯಮುನೆಯು ವರವನ್ನು ಪಡೆದಿರುವಳು,

† ಶ್ರೀ ತುಳಸೀದಾಸರ ತಾಯಿಯ ಹೆಸರು ಹುಲಸೀ ಎಂದು ಇದ್ದಿತು.

ಚಂದ್ರನ ಕಥೆಯು ಸುಂದರವಾದ ಚಿಂತಾಮಣಿಯಂತೆಯೂ, ಸಂತರ ಸುಂದರ ಬುದ್ಧಿರೂಪಿಣಿಯಾದ ಸ್ತ್ರೀಯು ಮನೋಹರವಾದ ಶೃಂಗಾರದಂತೆಯೂ ಇರುವುದು. ರಾಮಚಂದ್ರನ ಗುಣಗಳ ಸಮೂಹವು ಜಗತ್ತಿಗೆ ಕಲ್ಯಾಣಕಾರಿಯಾಗಿಯೂ, ಮೋಕ್ಷ, ಧನ, ಧರ್ಮ ಮತ್ತು ವೈಕುಂಠ ಲೋಕಪ್ರಾಪ್ತಿಯನ್ನು ಕೊಡುವುದಾಗಿಯೂ ಇರುವುದು. ಮತ್ತೆ ಇದು ಜ್ಞಾನ, ವೈರಾಗ್ಯ ಯೋಗಗಳಿಗೆ ಸದ್ಗುರುವಿನಂತೆಯೂ, ಸಂಸಾರರೂಪಿಯಾದ ಭಯಂಕರ ರೋಗಕ್ಕೆ ಅಶ್ವಿನೀ ಕುಮಾರ ವೈದ್ಯರಂತೆಯೂ, ಸೀತಾರಾಮರಲ್ಲಿ ಭಕ್ತಿಯನ್ನು ಬಳೆಯಿಸಲು ಹಿತೈಷಿಗಳಾದ ಮಾತಾಪಿತೃಗಳಂತೆಯೂ, ಎಲ್ಲ ವ್ರತ, ಧರ್ಮ, ನಿಯಮಗಳಿಗೆ ಬೀಜವಂತೆಯೂ ಪಾಪ, ತಾಪ, ಶೋಕಗಳನ್ನು ಶಾಂತಗೊಳಿಸುವಂಥಾದ್ದಾಗಿಯೂ, ಇಹಲೋಕ ಪರಲೋಕಗಳಲ್ಲಿ ಪ್ರೀತಿಯಿಂದ ಪಾಲನ ಮಾಡುವಂಥಾದ್ದಾಗಿಯೂ, ವಿಚಾರರೂಪಿಯಾದ ರಾಜನ ಚತುರ ಮಂತ್ರಿಯಂತೆಯೂ, ಲೋಭರೂಪಿಯಾದ ಅಪಾರ ಸಮುದ್ರಕ್ಕೆ ಅಗಸ್ತ್ಯಮುನಿಯಂತೆಯೂ ಇರುವುದು. ಮತ್ತೆ ಸದ್ಭಕ್ತರೇ, ಕೇಳಿರಿ, ಇದು ಸಾಧುಸಂತರ ಮನಸ್ಸೆಂಬ ವನದಲ್ಲಿ ವಿಹರಿಸುವ ಕಲಿಮಲ ದೋಷರೂಪಿ ಕಾಮ ಕ್ರೋಧಗಳೆಂಬ ಆನೆಗಳಿಗೆ ಸಿಂಹದ ಮರಿಯಂತೆಯೂ ಮಹಾದೇವನಿಗೆ ಬಹ ಪ್ರಿಯನೂ ಪೂಜ್ಯನೂ ಆದ ಅತಿಥಿಯಂತೆಯೂ, ದಾರಿದ್ರ್ಯವೆಂಬ ದಾವ ನಲಕ್ಕೆ ಶಾಂತಿಕರವಾದ ಮೇಘದಂತೆಯೂ, ವಿಷಯರೂಪಿಯಾದ ಸರ್ಪಕ್ಕೆ ಇರುವ ಮಹಾಮಣಿ–ಮಂತ್ರಗಳಂತೆಯೂ ಹಣೆಯ ಬರಹದ ದುಷ್ಕರ್ಮ ಫಲಕ್ಕೆ ಔಷಧಿಯಂತೆಯೂ, ಅಜ್ಞಾನರೂಪಿಯಾದ ಅಂಧಕಾರವನ್ನು ನಿವಾರಿಸಲು ಸೂರ್ಯಕಿರಣಗಳಂತೆಯೂ ಸೇವಕರೂಪಿಯಾದ ಧಾನ್ಯವನ್ನು ರಕ್ಷಿಸುವ ಮೇಘದಂತೆಯೂ, ಎಲ್ಲ ಮನೋರಥಗಳನ್ನು ನೆರವೇರಿಸಲು ಕಲ್ಪತರುವಿನಂತೆಯೂ, ಸೇವೆಯನ್ನು ಮಾಡಿದ ಕೂಡಲೆ ಪ್ರಸನ್ನರಾಗುವ ಹರಿಹರರಂತೆ ಸುಖವನ್ನು ನೀಡುವಂಥಾದ್ದಾಗಿಯೂ ಶರದ್‌ರೂಪಿಗಳಾದ ಕವಿಶ್ರೇಷ್ಠರ ಮನಸ್ಸೆಂಬ ಆಕಾಶಕ್ಕೆ ನಕ್ಷತ್ರಗಳಂತೆಯೂ, ರಾಮಭಕ್ತರಿಗೆ ಜೀವನಧನದಂತೆಯೂ ಎಲ್ಲ ಯಜ್ಞಾದಿ ಪುಣ್ಯಕರ್ಮಗಳ ಫಲಕ್ಕೆ ಭೋಗದಂತೆಯೂ, ಜಗತ್ತಿನ ಹಿತವನ್ನು ಸಾಧಿಸಲು ಛಲರಹಿತರಾದ ಸಾಧುಸಂತರಂತೆಯೂ, ಭಕ್ತರ ಮನಸ್ಸೆಂಬ ಮಾನಸ ಸರೋವರಕ್ಕೆ ಹಂಸದಂತೆಯೂ, (ದೇಹವನ್ನು) ಪವಿತ್ರಮಾಡಲು ಗಂಗಾನದಿಯ ತರಂಗ ಮಾಲೆಗಳಂತೆಯೂ ಇರುವುದು.

ದೋ ॥ ೩೨ ॥ ೩೩ ॥ ರಾಮನ ಗುಣಸಮೂಹವು ಕಲಿಯುಗದ ಅಸತ್ಯ ಮಾರ್ಗ, ಕುತರ್ಕ, ದುರ್ನಡತೆ, ಕಪಟ, ದಂಭ ಮತ್ತು ನಪುಂಸಕತ್ವಗಳನ್ನು ನಾಶಮಾಡುವದಕ್ಕೆ ಪ್ರಚಂಡವಾದ ಅಗ್ನಿಗೆ ಕಟ್ಟಿಗೆ (ಇಂಧನ) ಯಂತಿರುವದು. ಶ್ರೀರಘುನಾಥನ ಚರಿತ್ರೆಯು ಚಂದ್ರನ ಕಿರಣಗಳಂತೆ ಎಲ್ಲರಿಗೂ ಆನಂದವನ್ನು ಕೊಡುವುದು. ಕುಮುದ ಮತ್ತು ಚಕೋರರೂಪಿಯಾದ ಸಜ್ಜನರ

ಚಿತ್ತಕ್ಕೆ ವಿಶೇಷ ಲಾಭಕರವಾಗಿಯೂ ಸುಖದಾಯಕವಾಗಿಯೂ ಇದೆ. ಪಾರ್ವತೀದೇವಿಯು ಶಿವನನ್ನು ಹೇಗೆ ಪ್ರಶ್ನಿಸಿದಳು ಮತ್ತೆ ಶಂಕರನು ಹೇಗೆ ಅದನ್ನು ವರ್ಣಿಸಿದನು ಎಂಬ ಎಲ್ಲಾ ವಿಷಯಗಳನ್ನು ಒಂದು ವಿಚಿತ್ರಕಥೆಯ ರೂಪದಲ್ಲಿ ರಚಿಸಿ ಪಾಡುವೆನು. ಯಾರಾದರೂ ಮುಂಚೆ ಈ ಕಥೆಯನ್ನು ಕೇಳದಿದ್ದರೆ ಇದನ್ನು ಕೇಳಿ ಆಶ್ಚರ್ಯ ಪಡಕೂಡದು ಜ್ಞಾನಿಗಳು ವಿಚಿತ್ರವಾದ ಕಥೆಗಳನ್ನು ಕೇಳಿ ಆಶ್ಚರ್ಯಪಡುವುದಿಲ್ಲ. ಏಕೆಂದರೆ ಈ ಜಗತ್ತಿನಲ್ಲಿ ರಾಮಚಂದ್ರನ ಕಥೆಗೆ ಮೇರೆಯೇ ಇಲ್ಲವೆಂದು ಅವರು ತಿಳಿದಿರುವರು. ರಾಮಚಂದ್ರನ ಅವತಾರವು ಅನೇಕ ಪ್ರಕಾರವಾಗಿ ಆಗಿರುವುದು. ಮತ್ತೆ ರಾಮಾಯಣಗಳೂ ನೂರುಕೋಟಿ*ಗಿಂತಲೂ ಹೆಚ್ಚಾಗಿರುವವು ಅನೇಕ ಮುನಿಗಳು ಕಲ್ಪ† ಭೇದಾನುಸಾರವಾಗಿ ರಾಮಚಂದ್ರನ ಕಥೆಯನ್ನೇ ಅನೇಕ ಪ್ರಕಾರವಾಗಿ ಹಾಡಿರುವರು ಈ ವಿಚಾರವನ್ನು ಹೃದಯದಲ್ಲಿ ಧರಿಸಿ ಸಂದೇಹಪಡದೆ ನಾನು ಹೇಳುವ ಕಥೆಯನ್ನು ಆದರ ಪೂರ್ವಕ ಭಕ್ತಿಯಿಂದ ಕೇಳಬೇಕು.

ದೋ ॥ ೫೪ ॥ ಶ್ರೀರಾಮಚಂದ್ರನು ಅನಂತನು, ಆತನ ಗುಣಗಳು ಅನಂತವಾದವು. ಆತನ ಕಥೆಯು ವಿಸ್ತಾರವುಳ್ಳದ್ದು, ಅಪಾರವಾದುದು. ಯಾರ ವಿಚಾರವು ಶುದ್ಧವಾಗಿರುವುದೋ ಅವರು ಈ ಕಥೆಯನ್ನು ಕೇಳಿ ಆಶ್ಚರ್ಯಪಡುವುದಿಲ್ಲ. ಈ ಪ್ರಕಾರವಾಗಿ ಸಂದೇಹವನ್ನೆಲ್ಲಾ ವಿಸರ್ಜಿಸಿ ಗುರುವಿನ ಚರಣಕಮಲಗಳ ಧೂಳಿಯನ್ನು ಶಿರಸ್ಸಿನಲ್ಲಿ ಧರಿಸಿ ಮತ್ತೆ ಕೈಜೋಡಿಸಿ, ಕಥಾರಚನೆಯಲ್ಲಿ ಯಾವ ದೋಷಗಳೂ ಬಾರದಂತೆ ಅನುಗ್ರಹಿಸಬೇಕೆಂದು ಪ್ರಾರ್ಥಿಸುವೆನು ಈಗ ಶಿವನಿಗೆ ಆದರ ಪೂರ್ವಕವಾಗಿ ನಮಿಸಿ ರಾಮಚಂದ್ರನ ನಿರ್ಮಲವಾದ ಗುಣಗಳ ಕಥೆಯನ್ನು ವರ್ಣಿಸುವೆನು. ಕೇಳಿರಿ! ಕೇಳಿರಿ!! ಶ್ರೀ ವೈಕುಂಠನಾಥನ ಚರಣಗಳ ಮೇಲೆ ಶಿರವನ್ನಿಟ್ಟು ನಾನು ಈ ಕಥೆಯನ್ನು ಸಂವತ್ ೧೬೩೧ರಲ್ಲಿ ವರ್ಣನೆ

---

* ೪೧ ನೇ ದೋಹವನ್ನು ನೋಡಿರಿ ಇದರ ವಿಚಾರವಾಗಿ ಹೇಳಿರುವುದೇನೆಂದರೆ—"ಚರಿತಂ ರಘುನಾಥಸ್ಯ ಶತಕೋಟಿ ಪ್ರವಿಸ್ತರಮ್ । ಏಕೈಕ ಮಕ್ಷರಂ ಪುಂಸಾಂ ಮಹಾಪಾತಕ ನಾಶನಮ್ ಅಂದರೆ—ರಾಮಚಂದ್ರನ ಚರಿತ್ರೆಯು ವಿಸ್ತಾರವು ನೂರು ಕೋಟಿಗಳವರೆಗೆ ಇರುವುದು. ಅವುಗಳೊಳಗಣ ಪ್ರತಿಯೊಂದು ಅಕ್ಷರವೂ ಮಹಾ ಮಹಾ ಪಾತಕಗಳನ್ನು ನಾಶಮಾಡುವಂಥಾದ್ದಾಗಿದೆ.

† ಬ್ರಹ್ಮದೇವನ ಒಂದು ದಿನಕ್ಕೆ ಕಲ್ಪವೆನ್ನುವರು. ಒಂದು ಕಲ್ಪದಲ್ಲಿ ಹದಿನಾಲ್ಕು ಮನ್ವಂತರಗಳು ಒಂದು ಮನ್ವಂತರಕ್ಕೆ ೭೧ ಚತುರ್ಯುಗಗಳು. ಒಂದು ಚತುರ್ಯುಗಕ್ಕೆ ೪೩,೨೦,೦೦೦ ವರ್ಷಗಳು. ಅಂತೂ ಬ್ರಹ್ಮನ ಒಂದು ದಿನಕ್ಕೆ ೪,೩೨೦.೦೦೦,೦೦೦ ವರ್ಷಗಳಾಗುವವು ಇಷ್ಟೇ ವರ್ಷಗಳು ಮತ್ತೊಮ್ಮೆ ಕಳೆದರೆ ಬ್ರಹ್ಮನ ಒಂದು ರಾತ್ರಿಯು.

ಮಾಡುತ್ತಿರುವೆನು. ಚೈತ್ರಶುದ್ಧ ನವಮಿ ** ಮಂಗಳವಾರ (ಭೌಮವಾರ) ದ ದಿನ ಈ ಚರಿತೆಯು ಅಯೋಧ್ಯೆಯಲ್ಲಿ ಪ್ರಕಾಶಿತವಾಯಿತು. ಆ ದಿನವೇ ಶ್ರೀರಾಮ ಚಂದ್ರನು ಜನ್ಮಿಸಿದನು. ಆದಿನ ಎಲ್ಲ ತೀರ್ಥಗಳೂ ಅಯೋಧ್ಯಾನಗರಕ್ಕೆ ಬರುವ ವೆಂದು ವೇದಗಳು ಸಾರುವವು. ಆದಿನ ಅಸುರರೂ ನಾಗಕನ್ನಿಕೆಯರೂ ಪಕ್ಷಿ ಗಳೂ ಮನುಷ್ಯರೂ ಮುನಿಗಳೂ ದೇವತೆಗಳೂ ಅಯೋಧ್ಯೆಗೆ ಬಂದು ರಘು ನಾಥನ ಸೇವೆಯನ್ನು ಮಾಡುವರು ಸಜ್ಜನರು ಈ ದಿವಸ ರಾಮಚಂದ್ರನ ಜನ್ಮೋತ್ಸವವನ್ನು ಮಾಡುವರು. ಮತ್ತೂ ಆತನ ಸುಂದರವಾದ ಕೀರ್ತಿಗಾನ ವನ್ನು ಮಾಡುವರು. ಅನೇಕ ಸಜ್ಜನರು ರಾಮನವಮಿ ದಿವಸ ಸರಯೂ ನದಿಯ ಪವಿತ್ರ ಜಲದಲ್ಲಿ ಸ್ನಾನಮಾಡಿ ಹೃದಯದಲ್ಲಿ ಸುಂದರನೂ ಶ್ಯಾಮಶರೀರಿಯೂ ಆದ ರಾಮಚಂದ್ರನ ಧ್ಯಾನವನ್ನು ಮಾಡಿ ಆತನ ನಾಮವನ್ನು ಜಪಿಸುವರು. ಸರಯೂ ನದಿಯ ದರ್ಶನ, ಸ್ಪರ್ಶ, ಸ್ನಾನ ಮತ್ತು ಪಾನಗಳಿಂದ ಪಾಪಗಳು ನಾಶ ಹೊಂದುವವೆಂದು ವೇದಗಳೂ ಪುರಾಣಗಳು ಹೇಳುವವು. ಈ ನದಿಯು ಬಹು ಪವಿತ್ರವಾದುದು. * ಇದರ ಮಹಿಮೆಯು ಅನಂತವಾದುದು. ಇದನ್ನು ವಿಮಲ ಬುದ್ಧಿಶಾಲಿಯಾದ ಸರಸ್ವತೀ ದೇವಿಯು ಸಹ ವರ್ಣಿಸಲಾರಳು.

## ಅಯೋಧ್ಯಾನಗರದ ವರ್ಣನೆ.

ಈ ಸುಂದರವಾದ ಅಯೋಧ್ಯಾ ನಗರವು ರಾಮನಾಮವನ್ನು ಎಂದರೆ— ವೈಕುಂಠವನ್ನು ಪ್ರಾಪ್ತಿಮಾಡಿಕೊಡುವಂಥಾದ್ದಾಗಿಯೂ ಲೋಕಪ್ರಸಿದ್ಧವಾಗಿ ಯೂ ಇದೆ. ಇದು ಸಂಸಾರವನ್ನು ಪವಿತ್ರೀಕರಿಸುವುದು. ಈ ಜಗತ್ತಿನಲ್ಲಿ ನಾಲ್ಕು ತೆರನಾದ ಜೀವಗಳಿರುವವು. ಅವುಗಳಲ್ಲಿ ಯಾವ ಪ್ರಾಣಿಯು ಅಯೋ

---

** ನವಮಿಯು ರಿಕ್ತ ತಿಥಿ ಎಂತಲೂ ಮಂಗಳವಾರವು ಕ್ರೂರವೆಂತಲೂ ಆ ಮುಹೂರ್ತದಲ್ಲಿ ಏನು ಶ್ರೇಷ್ಠತೆಇದೆಯೆಂದು ಕೆಲವು ಜ್ಯೋತಿಷ್ಕರು ಸಂದೇಹಪಡು ವರು. ಆದರೆ ತುಲಸೀದಾಸರು ನವಮಿ ತಿಥಿಯನ್ನು ಏಕೆ ಆರಿಸಿರುವರೆಂದರೆ— ನವಮಿಯು ಶ್ರೀರಾಮನ ಜನ್ಮದಿನವು. ಮತ್ತೆ ಅದು ದುರ್ಗೆಯ ತಿಥಿಯು ಜಾನ ಕಿಯು ದುರ್ಗೆಯ ಅವತಾರಳು. ಮಂಗಳವಾರವು ಹನುಮಂತನ ವಾರವು. ಗೋ ಸ್ವಾಮಿಗಳು ಸೀತಾರಾಮ ಮತ್ತು ಮಾರುತಿ ಈ ಮೂವರ ಉಪಾಸಕರಾಗಿದ್ದರು ಮತ್ತೆ ಭಗವಂತನು ಗೀತೆಯಲ್ಲಿ "ಋತೂನಾಂ ಕು ಸುಮಾಕರಃ" ಎಂದು ಹೇಳಿ ರುವನು.

* ಪದ್ಮಪುರಾಣದಲ್ಲಿ ಹೇಳಿರುವುದೇನಂದರೆ—"ಮನ್ವಂತರ ಸಹಸ್ರೇಷು ಕಾಶೀ ವಾಸೇನಯತ್ಫಲಮ್ । ತತ್ಫಲಂ ಸಮವಾಪ್ನೋತಿ ಸರಯೂದರ್ಶನೇ ಕೃತೇ ॥೧॥ ಪ್ರಯಾಗೇ ಯೋ ನರೋಗತ್ವಾ ಮಾಘಾನಾಂ ದ್ವಾದಶಂ ವಸೇತ್ । ತತ್ಫಲಾದಧಿಕಂ ಪ್ರೋಕ್ತಂ ಸರಯೂ ದರ್ಶನೇ ಕೃತೇ ॥೨॥ ಮಥುರಾಯಾಂಕಲ್ಪಮೇಕಂ ವಸತೇ ಮಾನವೋ ಯದಿ । ತತ್ಫಲಾಧಧಿಕಂಪ್ರೋಕ್ತಮ್ । ಸರಯೂದರ್ಶನೇ ಕೃತೇ ॥೩॥"

ಧ್ಯಾನಗರದಲ್ಲಿ ಶರೀರವನ್ನು ತ್ಯಜಿಸುವುದೋ ಅದಕ್ಕೆ ಪುನರ್ಜನ್ಮವು ಬರುವುದಿಲ್ಲ.* ಈ ನಗರವು ಎಲ್ಲಕ್ಕಿಂತಲೂ ಮನೋಹರವಾಗಿಯೂ ಸರ್ವಸಿದ್ಧಿದಾಯಕವಾಗಿಯೂ ಶುಭ ವಸ್ತುಗಳ ಮೂಲಸ್ಥಾನವಾಗಿಯೂ ಇರುವುದೆಂಬ ಭಾವನೆಯಿಂದ ನಾನು ಈ ನಿರ್ಮಲವಾದ ಕಥೆಯನ್ನು ರಚಿಸಲು ಪ್ರಾರಂಭಿಸಿರುವೆನು. ಇದನ್ನು ಕೇಳುವದರಿಂದ ಕಾಮ, ಮದ ಮತ್ತು ಅಹಂಕಾರಗಳು ನಾಶವಾಗುವವು ಇದರ ಹೆಸರು **"ರಾಮಚರಿತಮಾನಸ"** ವೆಂದಿರುವುದು. ಇದನ್ನು ಶ್ರವಣಮಾಡುವುದರಿಂದ ಸರ್ವ ಪ್ರಾಣಿಗಳಿಗೂ ವಿಶ್ರಾಂತಿಯು ದೊರೆಯುವುದು. ಮನೋರೂಪಿಯಾದ ಆನೆಯು ವಿಷಯರೂಪಿಯಾದ ಅಗ್ನಿಯ ವನದಲ್ಲಿ ಸುಟ್ಟು ಸಾಯುವುದು, ಆದರೆ ಅದು ಈ ರಾಮಚರಿತಮಾನಸ ಸರೋವರಕ್ಕೆ ಬಂದು ಮಿಂದರೆ ಶಾಂತಿ ಸುಖವನ್ನು ಹೊಂದುವುದು ಮುನಿಗಳಿಗೆ ಪ್ರಿಯಕರವಾದುದಾಗಿಯೂ ಪವಿತ್ರವಾಗಿಯೂ ಸುಪ್ರಸಿದ್ಧವಾಗಿಯೂ ಇರುವ ಈ ರಾಮಚರಿತ್ರರೂಪಿ ಸರೋವರವನ್ನು ಶಿವನು ರಚಿಸಿರುವನು ಇದು ಮೂರು ಪ್ರಕಾರವಾದ ದೋಷಗಳನ್ನು ಎಂದರೆ, ಮಾನಸಿಕ, ವಾಚಕ, ಕಾಯಕ ಅಥವಾ ದೈಹಿಕ, (ಜ್ವರಾ ಇತ್ಯಾದಿ) ದೈವಿಕ (ವಜ್ರಪಾತ ಇತ್ಯಾದಿ) ಮತ್ತೂ ಭೌತಿಕ (ಸರ್ಪ ಪಶು ಇತ್ಯಾದಿಗಳಿಂದ ಭಯ) ದುಃಖಗಳನ್ನು ದಾರಿದ್ರ್ಯವನ್ನೂ ನಾಶಮಾಡುವಂಥಾದ್ದಾಗಿಯೂ ಕಲಿಯುಗದ ದೋಷಗಳನ್ನೂ ಪಾಪಗಳನ್ನೂ ದೂರೀಕರಿಸುವಂಥಾದ್ದಾಗಿಯೂ ಇರುವುದು. ಮೊದಲು ಇದನ್ನು ಶಂಕರನು ರಚಿಸಿ ತನ್ನ ಮನಸ್ಸಿನಲ್ಲಿಯ ಧಾರಣಮಾಡಿದನು ಆಮೇಲೆ ಒಂದು ಒಳ್ಳೆಯ ಸಮಯದಲ್ಲಿ ಅದನ್ನು ಪಾರ್ವತೀದೇವಿಗೆ ಹೇಳಿದನು ಈ ರೀತಿಯಾಗಿ ಇದರಿಂದ ಪ್ರಸನ್ನನಾದ ಮಹದೇವನು ಚೆನ್ನಾಗಿ ಯೋಚನೆಮಾಡಿಯೇ ಇದಕ್ಕೆ **"ರಾಮಚರಿತಮಾನಸ"** ವೆಂಬ ಹೆಸರನ್ನಿಟ್ಟನು ಅದೇ ಸುಂದರವಾದ, ಸುಖದಾಯಕವಾದ ಕಥೆಯನ್ನು ನಾನು ಹೇಳುವೆನು, ಹೇ ಭಕ್ತಜನರೆ, ಆದರಪೂರ್ವಕವಾಗಿ, ಮನಸ್ಸಿಟ್ಟು ಇದನ್ನು ಕೇಳಿರಿ.

ಅಥ ಮಾನಸ ಪ್ರಾರಂಭಃ (ಮಾನಸ ಸರೋವರ ವರ್ಣನೆ.)

ದೋ ॥೩೬॥ ರಾಮಚರಿತ ಮಾನಸಕ್ಕೆ ಯಶಸ್ಸು ಹೇಗೆ ದೊರೆಯಿತು. ಮತ್ತು ಯಾವ ಕಾರಣದಿಂದ ಇದರ ಪ್ರಚಾರವು ಜಗತ್ತಿನಲ್ಲಿ ಹಬ್ಬಿತು ಎಂಬ ಚರಿತ್ರೆಯನ್ನು ನಾನು ಪಾರ್ವತೀ ಪರಮೇಶ್ವರರನ್ನು ಸ್ಮರಿಸಿ ಹೇಳುವೆನು, ಕೇಳಿರಿ. ಶಿವನ ಕೃಪೆಯಿಂದ ನನ್ನ ಹೃದಯದಲ್ಲಿ ನಿರ್ಮಲ ಬುದ್ಧಿಯು ಪ್ರಕಾಶವಾಗಿದೆ

---

* ಪದ್ಮಪುರಾಣೇ—"ಷಷ್ಟಿವರ್ಷಸಹಸ್ರಾಣಿ ಕಾಶೀವಾಸೇನಯತ್ಫಲಮ್ । ತತ್ಫಲಂ ನಿಮಿಷಾರ್ಧೇನ ಕಲೌ ದಾಶರಥೀ ಪುರೀ ಯದಾಮತಿಂ ಪ್ರಕುರುತೇ ಅಯೋಧ್ಯಾ ಗಮನಂ ಪ್ರತಿ । ತದಾ ನರಕನಿರ್ಮುಕ್ತಾ ಗಾಯಂತಿ ಪಿತರೋ ದಿವಿ ॥

ಆದರಿಂದಲೆ ತುಳಸೀದಾಸನಾದ ನಾನು ರಾಮಚರಿತ ಮಾನಸದ ಕವಿಯಾದೆನು. ಆದನ್ನು ನನ್ನ ಬುದ್ಧಿ ಶಕ್ತಿಗನುಸಾರವಾಗಿ ಮನೋಹರವಾಗಿಯೇ ರಚಿಸುವೆನು. (ಅದನ್ನೇ ರಾಮಚರಣ ಸೇವಕನ ಭೃತ್ಯನಾದ ದತ್ತಾತ್ರೇಯನು ತನ್ನ ಅಲ್ಪ ಮತಿಗನುಸಾರವಾಗಿ ಕರ್ಣಾಟಕ ಭಾಷೆಯಲ್ಲಿ ಹೇಳಲೆತ್ನಿಸಿರುವನು. ಅದರಲ್ಲಿ ದೋಷಗಳೇನಾದರೂ ಇದ್ದರೆ) ಸಜ್ಜನರು ಅದನ್ನು ಕೇಳಿ ಸುಧಾರಿಸಿಕೊಳ್ಳಲಿ.— ಸುಬುದ್ಧಿಯೆ ಪೃಥ್ವೀತಲವು, ಹೃದಯವೇ ವಿಶಾಲವಾದ ಪೃಥ್ವಿಯು, ವೇದಪುರಾಣ ಗಳೇ ಸಮುದ್ರ, ಸಾಧುಜನರೇ ಮೇಘ ಸ್ವರೂಪರಾಗಿ ರಾಮಚರಿತ ರೂಪವಾದ ಸುಂದರವೂ, ಸಿಹಿಯೂ, ಮನೋಹರವೂ, ಕಲ್ಯಾಣಕಾರಿಯೂ ಆದ ಜಲವನ್ನು ವರ್ಷಿಸುವರು, ಎಂದರೆ ಮೋಡವು ಸಮುದ್ರದ ನೀರನ್ನು ತೆಗೆದುಕೊಂಡು ಪೃಥ್ವಿ ತಲ ಮತ್ತು ಸರೋವರಗಳಲ್ಲಿ ನೀರನ್ನು ತುಂಬುವಂತೆ ಸಾಧುಜನರು ವೇದ ಪುರಾಣಗಳ ಸಾರವನ್ನು ತೆಗೆದುಕೊಂಡು ಭಕ್ತರ ಮನಸ್ಸೆಂಬ ಮಾನಸ ಸರೋ ವರವನ್ನು ತುಂಬಿ ಬುದ್ಧಿಯನ್ನು ನಿರ್ಮಲಗೊಳಿಸುವರು. ಸಗುಣ ಲೀಲೆಯ ವರ್ಣನೆಯೆ ಮಲವನ್ನು ನಾಶಮಾಡುವ ನಿರ್ಮಲತೆಯಾಗಿರುವುದು. ವರ್ಣಿಸ ಲಾಗದಾ ಭಕ್ತಿ ಪ್ರೇಮವೇ (ಈ ಮಾನಸ ಸರೋವರದ ನೀರಿನ) ಮಧುರತೆ ಮತ್ತು ಶೀತಲತೆಯಾಗಿರುವುದು. ಆ ಜಲವೇ ಪುಣ್ಯರೂಪಿಯಾದ ಧಾನ್ಯಗಳಿಗೆ ಹಿತಕರವಾದುದು. ಅದೇ ರಾಮಚಂದ್ರ ಭಕ್ತರ ಜೀವನವಾಗಿರುವುದು. ಆ ಪವಿತ್ರ ಜಲವು ಬುದ್ಧಿರೂಪಿಯಾದ ಪೃಥ್ವಿಯಮೇಲೆ ಸಂಗ್ರಹವಾಗಿ ಕಿವಿಗಳೆಂಬ ಸುಂದರವಾದ ಮಾರ್ಗದಿಂದ ಒಳಗೆ ಪ್ರವೇಶಿಸಿತು ಆ ಜಲವು ಮಾನಸ ರೂಪಿಯಾದ ಸರೋವರದಲ್ಲಿ ತುಂಬಿ ನಿರ್ಮಲವಾಗಿ ರುಚಿರೂಪಿಯಾದ ಶರದ್ ಋತುವಿನಲ್ಲ * ಹಳೆಯದಾಗಿಸಿಕೊಂಡು ಸುಖದಾಯಕವಾಯಿತು.

ದೋ ॥೩೭॥ ಬುದ್ಧಿ ವಿಚಾರದಿಂದ ಈ ಕಥೆಯಲ್ಲಿ ರಚಿಸಿರುವ ನಾಲ್ಕು ಸಂವಾದಗಳೇ (ಎಂದರೆ ಯಾಜ್ಞವಲ್ಕ್ಯ ಮತ್ತು ಭರದ್ವಾಜ, ಶಿವ ಮತ್ತು ಪಾರ್ವತಿ, ಕಾಗಭುಶುಂಡ ಮತ್ತು ಗರುಡ, ಗೋಸ್ವಾಮಿ ತುಳಸೀದಾಸ ಮತ್ತು ಅವರ ಭಕ್ತರ ಸಂವಾದಗಳೇ) ಈ ಸುಂದರವೂ ಪವಿತ್ರವೂ ಆದ ಸರೋವರದ ಮನೋಹರವಾದ ನಾಲ್ಕು ಘಟ್ಟ (ಕಟ್ಟೆ)ಗಳಾಗಿರುವವು. ಈ ಚರಿತೆಯ ಸಪ್ತ ಕಾಂಡಗಳೇ ಈ ಸರೋವರದ ಏಳು ಮೆಟ್ಟಲುಗಳು ಜ್ಞಾನರೂಪಿಯಾದ ನೇತ್ರ ಗಳಿಂದ ಅವುಗಳನ್ನು ನೋಡಿದ ಕೂಡಲೆ ಚಿತ್ತವು ಪ್ರಸನ್ನವಾಗುವುದು. ಈ ಸರೋವರದಲ್ಲಿರುವ ರಾಮಚಂದ್ರನ ಗುಣರಹಿತವೂ ಸಂಕಷ್ಟರಹಿತವೂ ಆದ ಮಹಿಮೆಯೆಂಬ ಜಲದ ಆಳವನ್ನು ಕಂಡು ಹಿಡಿಯುವುದು ಅಸಾಧ್ಯವು. ಸೀತಾ ರಾಮರ ಯಶಸ್ಸಿನ ರೂಪದಲ್ಲಿರುವ ಜಲವೇ ಅಮೃತಪ್ರಾಯವಾಗಿದೆ. ಇದರಲ್ಲಿ

* ವರ್ಷಾಕಾಲದ ನೀರು ಶರದೃತುವಿನಲ್ಲಿ ನಿರ್ಮಲವಾಗುವುದು. ಏಕೆಂದರೆ ಆಗ ಅದರೊಳಗಣ ಧೂಳೆಲ್ಲವೂ ಅಡಿಯಲ್ಲಿ ಸಂಗ್ರಹವಾಗುವುದು.

ಹೇಳಿರುವ ಉಪಮೆಗಳೆ ಆ ಜಲದ ತರಂಗಗಳ ವಿಲಾಸವು, ಅದು ಮನೋರಂಜಕ ವಾಗಿದೆ. ಇದರಲ್ಲಿರುವ ಸುಂದರವಾದ ಚೌಪಾಇ (ಎಂಬ ಚೌಪದಿ)ಗಳೇ ಘನವಾದ ಕಮಲ ಪತ್ರಗಳು, ಕವಿತೆಯ ಯುಕ್ತಿಯೆ ಉಜ್ವವಾದ ಮುತ್ತಿನ ಚಿಪ್ಪುಗಳು. ಇದರಲ್ಲಿರುವ ಸುಂದರವಾದ ದೋಹಾ, ಮತ್ತು ಸೋರಟಾ* ಎಂಬ ಛಂದಸ್ಸು ಗಳೇ ನಾನಾವಿಧವಾದ ಬಣ್ಣಗಳ ಕಮಲಗಳ ಸಮೂಹವು. ದೋಹಾದಿಗಳ ಅನುಪಮವಾದ ಅರ್ಥ, ಸುಂದರವಾದ ಭಾವ ಮತ್ತು ಮನೋಹರವಾದ ಭಾಷೆಗಳೇ (ಆ ಸರೋವರ ಪುಷ್ಪಗಳ) ಪರಾಗ, ಪುಷ್ಪರಸ, ಮತ್ತು ಸುಗಂಧ ವಾಗಿರುವವು. ಪುಣ್ಯಾತ್ಮರಾದ ಭಕ್ತಜನ ಸಮೂಹವೇ ಸುಂದರವಾದ ಭ್ರಮರ ಮಾಲೆಯಾಗಿರುವುದು, ಜ್ಞಾನ ವೈರಾಗ್ಯ ವಿಚಾರವೇ ಹಂಸವು. ಕವಿತೆಯ ಧ್ವನಿ, ವಕ್ರೋಕ್ತಿ ಮೊದಲಾದ ಕವಿತೆಯಲ್ಲಿರುವ ಗುಣಭೇಧಗಳು ಅನೇಕ ಪ್ರಕಾರದ ಮನೋಹರವಾದ ಮೀನುಗಳಾಗಿರುವವು. ಧರ್ಮ, ಅರ್ಥ, ಕಾಮ, ಮೋಕ್ಷಗಳೂ, ಜ್ಞಾನ, ವಿಜ್ಞಾನ, ವಿಚಾರ, ನವರಸ, ಜಪ, ತಪ, ಯೋಗ ವೈರಾಗ್ಯ,— ಇವುಗಳು ಈ ಸುಂದರವಾದ ಸರೋವರದ ಜಲಚರಗಳು. ಪುಣ್ಯಾತ್ಮರ ಮತ್ತು ಸಾಧುಜನರ ನಾಮ ಮತ್ತು ಗುಣಗಳ ಕೀರ್ತನೆಗಳೇ ಜಲದಲ್ಲಿ ವಿಹಾರಮಾಡತಕ್ಕ ವಿಚಿತ್ರ ಪಕ್ಷಿಗಳಾಗಿವೆ ಸಂತರ ಸಭೆಯೆ ನಾಲ್ಕು ದಿಕ್ಕುಗಳಲ್ಲಿ ಇರುವ ಆಮ್ರವನ (ಮಾವಿನತೋಪು). ಶ್ರದ್ಧೆಯೆ ವಸಂತ ಋತುವು. ಅನೇಕ ವಿಧವಾಗಿರುವ ಭಕ್ತಿನಿರೂಪಣ, ಕ್ಷಮಾ, ದಯೆ——ಇವುಗಳೇ ವೃಕ್ಷ ಮತ್ತು ಲತಾ ಕುಸುಮಗಳು. ಸಂಯಮ ‡ ದಮ ನಿಯಮ § ಗಳೇ ಇದರ ಪುಷ್ಪಗಳು, ಜ್ಞಾನವೇ ಫಲ. ಭಗವಂತನ ಚರಣಗಳಲ್ಲಿ ಪ್ರೇಮವನ್ನಿಡುವುದೇ ರಸ.—ಇದು ವೇದದಲ್ಲಿ ಕೂಡ ಪ್ರಕಟವಾಗಿದೆ. ಪ್ರಸಂಗವಶಾತ್ ಅನೇಕರು ಅನೇಕವಿಧವಾಗಿ ಹೇಳಿರುವ ಶ್ರೀರಾಮನ ಕಥೆಗಳೇ ಮೈನಾ, ಕೋಕಿಲಾದಿ ನಾನಾವಿಧವಾದ ಪಕ್ಷಿಗಳಾಗಿರುವವು.

ದೋ ॥ ೩೮ ॥ ಈ ಪರಮ ಪಾವನವಾದ ರಾಮಚರಿತೆಯನ್ನು ಕೇಳುವುದರಿಂದ ಉಂಟಾಗುವ ರೋಮಾಂಚನವೇ ಪುಷ್ಪವಾಟಿಕೆ (ಹೂದೋಟ) ಮತ್ತು

---

* ಶ್ರೀ ತುಳಸೀದಾಸರು ತಮ್ಮ ಗ್ರಂಥದಲ್ಲಿ ದೋಹಾ, ಸೋರಟಾ, ಮತ್ತು ಚೌಪಾಇ ಎಂಬ ಛಂದಸ್ಸನ್ನೇ ವಿಶೇಷವಾಗಿ ಉಪಯೋಗಿಸಿರುವರು.

‡ ಗಾಯತ್ರೀ ಭಾಷ್ಯೆ:—"ಅಹಿಂಸಾ ಸತ್ಯಮಸ್ತೇಯಂ ಬ್ರಹ್ಮಚರ್ಯಂ ದಯಾರ್ಜವಮ್। ಕ್ಷಮಾ ಧೃತಿರ್ಮಿತಾಹಾರಃ ಶೌಚಂ ಚ ದಶ ಸಂಯಮಾಃ॥" ಎಂದರೆ ಅಹಿಂಸೆ, ಸತ್ಯ, ಕಳ್ಳತನ ಮಾಡದಿರುವುದು, ಬ್ರಹ್ಮಚರ್ಯೆ, ದಯೆ, ನಮ್ರತೆ, ಕ್ಷಮೆ, ಧೃತಿ, ಮಿತಭೋಜನ, ಶುಚಿತ್ವ ಇವೇ ೧೦ ಸಂಯಮಗಳಾಗಿವೆ.

§ "ಶೌಚಂ ತ್ಯಾಗಸ್ತಪೋ ದಾನಂ ಸ್ವಾಧ್ಯಾಯಶ್ಚಾಪ್ರತಿಗ್ರಹಃ। ವ್ರತೋಪವಾಸ ಮೌನಾನಿ ಸ್ನಾನಂಚ ನಿಯಮಾದಶ" ಎಂದರೆ ಶೌಚ, ಹೋಮ, ತಪ, ದಾನ, ವಿದ್ಯಾಧ್ಯಯನ, ಇಂದ್ರಿಯ ನಿಗ್ರಹ, (ಚಾಂದ್ರಾಯಣಾದಿ) ವ್ರತ, (ಏಕಾದಶ್ಯಾದಿ) ಉಪವಾಸ, ಮೌನ, (ತ್ರಿಕಾಲ) ಸ್ನಾನ—ಇವುಗಳೇ ಹತ್ತು ನಿಯಮಗಳು.

ವನವಾಗಿರುವುದು. ಇದರ ಶ್ರವಣದಿಂದ ಉಂಟಾಗುವ ಸುಖವೇ ಆ ವನದ (ಶುಕ, ಕೋಕಿಲಾದಿ) ಪಕ್ಷಿಗಳ ವಿಹಾರವೆಂದು ಭಾವಿಸಿರಿ. ನಿಮ್ಮ ಮನಸ್ಸೆಂಬ ಮಾಲಿಯು (ತೋಟಗಾರನು) ಸ್ನೇಹರೂಪವಾದ ಜಲವನ್ನು ನೇತ್ರರೂಪವಾದ ಪಾತ್ರೆಗಳಿಂದ ಸಿಂಪಡಿಸುತ್ತಿರುವನು. ಯಾರು ಈ ಪವಿತ್ರ ಚರಿತೆಯನ್ನು ಚೆನ್ನಾಗಿ ಗಾನಮಾಡುವರೊ ಅವರೇ ಈ ಸರೋವರದ ಚತುರ ಕಾವಲುಗಾರರು. ಯಾವ ಸ್ತ್ರೀಪುರುಷರು ಈ ಕಥೆಯನ್ನು ಯಾವಾಗಲೂ ಆದರಪೂರ್ವಕವಾಗಿ ಕೇಳುವರೋ ಅವರೇ ದೇವತೆಗಳಲ್ಲಿ ಉತ್ತಮರಾದವರು, ಅವರೇ ಈ ಮಾನಸ ಸರೋವರದ ಅಧಿಕಾರಿಗಳು ವಿಷಯಮಗ್ನರಾದ ದುಷ್ಟರೇ ಕಾಗೆ ಮತ್ತು ಬಕ ಸ್ವರೂಪರಾಗಿರುವರು. ನಿರ್ಭಾಗ್ಯರಾದ ಅವರು ಈ ರಾಮಚರಿತ ಮಾನಸ ಸರೋವರದ ಸಮೀಪಕ್ಕೆ ಬರಲಾರರು ಎಂದರೆ ಅವರು ಈ ಕಥೆಯನ್ನು ಕೇಳ ಲಾರರು. ಏಕೆಂದರೆ ಬಸವನಹುಳ, ಕಪ್ಪೆ ಮತ್ತು ಚಿಕ್ಕಚಿಕ್ಕ ಹುಳುಗಳ ಸ್ವರೂಪವಾದ ವಿಷಯರಸದ ಕಥೆಗಳು ಇದರಲ್ಲಿ ಇಲ್ಲ. ಆದುದರಿಂದಲೇ ಕಾಮಿ ಜನರೂಪದಲ್ಲಿರುವ ಕಾಗೆ ಮತ್ತು ಬಕಗಳು ಈ ಸರೋವರದ ಸಮೀಪಕ್ಕೆ ಬರಲು ಭಯಪಡುವವು ಎಂದರೆ ಇದರ ಸಮೀಪಕ್ಕೆ ಬರಲು ಅವುಗಳಿಗೆ ಇಚ್ಛೆಯೇ ಹುಟ್ಟುವುದಿಲ್ಲ. ಇಲ್ಲಿಗೆ ಬರುವುದೇ ಬಹು ಅಸಾಧ್ಯ. ಶ್ರೀರಾಮನ ಅನುಗ್ರಹ ವಾಗದ ವಿನಾ ಇಲ್ಲಿಗೆ ಬಂದು ಹೋಗಲಾಗುವುದಿಲ್ಲ (ಏಕೆಂದರೆ ಈ ಮಾನಸ ಸರೋವರದ ಮಾರ್ಗವು ಬಹು ಕಠಿಣತರವಾಗಿದೆ) ಘೋರವಾದ ಕುಸಂಗವೇ ಕಠಿಣವಾದ ಕುಮಾರ್ಗವು. ದುಷ್ಟ ಜನರ ಕೆಟ್ಟಮಾತುಗಳೇ (ಆಮಾರ್ಗದಲ್ಲಿರುವ) ಸಿಂಹ, ಹುಲಿ, ಸರ್ಪಾದಿಗಳು ಗೃಹಕಾರ್ಯಾದಿ ಅನೇಕ ಆಶಾಪಾಶಗಳೇ ಈ ಮಾರ್ಗದಲ್ಲಿರುವ ದೊಡ್ಡದೊಡ್ಡ ದುರ್ಗಮ ಪರ್ವತಗಳು. ಮಾನ, ಮದ, ಮೋಹಗಳೇ ಈ ಮಾರ್ಗದಲ್ಲಿರುವ ಗಹನವಾದ ವನಗಳು. ಅನೇಕವಿಧವಾದ ಕುತರ್ಕಗಳೇ ಈ ಮಾರ್ಗದಲ್ಲಿ (ಅಡ್ಡವಾಗಿ ಹರಿಯುವ) ನದಿಗಳು.

ದೋ ॥ ೩೮ ॥ ಯಾರ ಹತ್ತಿರ ಶ್ರದ್ಧೆಯೆಂಬ (ದಾರಿಯ ಖರ್ಚಿನ) ಧನವಿ ಲ್ಲವೊ, ಸಂತರ ಸಹವಾಸವಿಲ್ಲವೋ, ಯಾರಿಗೆ ರಘುನಾಥನು ಪ್ರಿಯಕರನಾಗಿಲ್ಲವೋ ಅಂತಹರಿಗೆ ಈ ಮಾನಸ ಸರೋವರವು ಅತಿ ಅಗಮ್ಯವಾಗಿರುವುದು. ಯಾವ ನಾದರೊಬ್ಬ ಮನುಷ್ಯನು ಬಹು ಕಷ್ಟಗಳನ್ನು ಸಹಿಸಿ ಅಲ್ಲಿಯವರೆಗೆ ಹೋದರೂ, ಅಲ್ಲಿಗೆ ಹೋದ ಕೂಡಲೆ ನಿದ್ರೆಯೆಂಬ ಚಳಿಯು ಅವನನ್ನು ಆಕ್ರಮಿಸುವುದು. (ಆಸ್ಥಳವನ್ನು ಅವನು ಸೇರಿದ್ದರೂ) ನಿರ್ಭಾಗ್ಯನಾದವನು ಅಲ್ಲಿ ಸ್ನಾನಮಾಡಲಾಗ ದಂತೆ ಮೂರ್ಖತ್ವವೆಂಬ ಕಡುತರವಾದ ಚಳಿಯು ಬರುವುದು ಆಗ ಅವನು ಆ ಸರೋವರದಲ್ಲಿ ಸ್ನಾನಪಾನಮಾಡಲಾಗದೇ ದುರಭಿಮಾನದಿಂದ ಹಿಂತಿರುಗಿ ಬರುವನು. ಅಂತಹನನ್ನು ಅನ್ಯರಾರಾದರೂ ಆ ಸರೋವರದ ವಿಷಯವಾಗಿ ಪ್ರಶ್ನಿ ಸಿದರೆ ಅವನು ಅದನ್ನು ನಿಂದಿಸಿ ಸಮಾಧಾನಪಡಿಸುವನು. ಆದರೆ ಯಾರ

ಮೇಲೆ ರಾಮಚಂದ್ರನ ಕೃಪಾದೃಷ್ಟಿಯು ಬೀಳುವುದೊ ಅಂತಹರಿಗೆ ಯಾವ ವಿಘ್ನವೂ ಉಂಟಾಗುವುದಿಲ್ಲ. ಅವರು ಆದರಪೂರ್ವಕವಾಗಿ ಆ ಸರೋವರದಲ್ಲಿ ಸ್ನಾನಮಾಡಿ, ದೈಹಿಕ, ದೈವಿಕ ಮತ್ತು ಭೌತಿಕಗಳೆಂಬ ಮೂರು ವಿಧವಾದ ದುಃಖ ಗಳಿಂದಲೂ ಮುಕ್ತರಾಗುವರು. ಯಾರ ಹೃದಯದಲ್ಲಿ ವೈಕುಂಠನಾಥನ ಚರಿತ್ರೆ ಯಲ್ಲಿ ನಿಜವಾದ ಭಕ್ತಿ ಇರುವುದೊ ಅಂತಹರು ಈ ಸರೋವರದಿಂದ ದೂರರಾಗು ವುದಿಲ್ಲ. ಹೇ ಭ್ರಾತೃಗಳೇ, ಯಾರು ಈ ಸರೋವರದಲ್ಲಿ ಸ್ನಾನಮಾಡಲಪೇಕ್ಷಿ ಸುವರೋ ಅವರು ಆದರಪೂರ್ವಕವಾಗಿ ಸಾಧುಸಂತರ ಸಹವಾಸವನ್ನು ಮಾಡ ಬೇಕು. ಇಂತಹ ಮಾನಸ ಸರೋವರದಲ್ಲಿ ಸ್ನಾನಮಾಡಲು ಹೃದಯದಲ್ಲಿ ನೇತ್ರ ವುಳ್ಳವರಾಗಿರಬೇಕು. ಇದರಲ್ಲಿ ಸ್ನಾನಮಾಡಿದ ಕೂಡಲೇ ಕವಿಯ ಬುದ್ಧಿಯು ನಿರ್ಮಲವಾಗುತ್ತದೆ. ಹೃದಯದಲ್ಲಿ ಆನಂದ ಮತ್ತು ಉತ್ಸಾಹಗಳು ತುಂಬಿ ಪ್ರೇಮ ಮತ್ತು ಸಂತೋಷಗಳ ಪ್ರವಾಹವು ಉಕ್ಕೇರಿ ಬರುವುದು. ಈ ಪ್ರಕಾರ ವಾದ ಕವಿತಾರೂಪಪ್ರವಾಹದಲ್ಲಿ ರಾಮಚಂದ್ರನ ವಿಮಲ ಯಶೋರೂಪವಾದ ಜಲವು ತುಂಬಿರುವುದು. ಸರ್ವಮಂಗಳ ವಿಚಾರಗಳಿಗೆ ಮೂಲವಾದ ಆ ಕವಿತಾ ರೂಪಿಣೀ ನದಿಯ ಹೆಸರು **ಸರಯೂ** ಎಂದಿದೆ. ಲೋಕ ಮತ್ತು ವೇದಗಳ ಅಭಿಪ್ರಾಯಗಳೇ ಈ ನದಿಯ ಸುಂದರವಾದ ಎರಡು ದಡಗಳಾಗಿವೆ. ರಾಮ ಚರಿತ ಮಾನಸ ರೂಪಿಣಿಯಾದ ಈ ನದಿಯು ಬಹು ಪವಿತ್ರವಾಗಿಯೂ ಆನಂದ ದಾಯಕವಾಗಿಯೂ ಕಲಿಯ ಪಾಪರೂಪವಾದ ವೃಕ್ಷಗಳನ್ನು ಬೇರುಸಹಿತ ಕಿತ್ತು ಹಾಕುವಂಥಾದ್ದಾಗಿಯೂ ಇದೆ.

ದೋ ॥ ೬೦ ॥ ಮೂರು ಪ್ರಕಾರವಾಗಿರುವ (ಎಂದರೆ–ಮುಕ್ತ, ಮುಮುಕ್ಷು ಮತ್ತು ವಿಷಯಿೂ ಎಂಬ) ಶ್ರೋತೃಗಳ ಸಮೂಹಗಳೇ ಈ ನದಿಯ ಎರಡೂ ಪಕ್ಕ ಗಳಲ್ಲಿ ಸ್ಥಾಪಿತವಾಗಿರುವ ಪುರ ನಗರ ಮತ್ತು ಗ್ರಾಮಗಳಾಗಿವೆ. ಸಂತರ ಸಭೆಯೇ ಅನುಪಮವಾದ ಮತ್ತು ಮಂಗಳ ವಿಚಾರಗಳಿಗೆ ಅಡಿಗಲ್ಲಿನಂತಿರುವ ಅಯೋಧ್ಯಾ ನಗರವಾಗಿದೆ. ರಾಮಭಕ್ತಿರೂಪವಾದ ಗಂಗಾನದಿಗೆ ನಿರ್ಮಲ ಯಶೋರೂಪಿ ಯಾದ ಸರಯೂ ನದಿಯು ಹೋಗಿ ಸೇರಿದೆ. ಲಕ್ಷ್ಮಣ ಸಹಿತನಾದ ಶ್ರೀರಾಮನ ಯುದ್ಧದ ಪವಿತ್ರಯಶಸ್ಸೇ ಸುಂದರವಾದ ಶೋಣ ಮಹಾನದಿಯಾಗಿ ಇದಕ್ಕೆ ಸಂಗ ಮಿಸಿದೆ. ಜ್ಞಾನ ಮತ್ತು ವೈರಾಗ್ಯಗಳ ಮಧ್ಯದಲ್ಲಿ ಭಕ್ತಿಯು ವಿರಾಜಿಸುವಂತೆ ಈ ನದಿಗಳೆರಡರ ಮಧ್ಯದಲ್ಲಿ ಗಂಗಾನದಿಯು ಶೋಭಾಯಮಾನವಾಗಿದೆ. ಈ ಪ್ರಕಾರ ಮೂರು ವಿಧವಾದ ತಾಪಗಳಿಗೆ ಭಯವನ್ನುಂಟುಮಾಡುವ ತ್ರಿಮುಖೀ (ಎಂದರೆ ಮೂರು ಮುಖಗಳುಳ್ಳ) ನದಿಗಳು ರಾಮರೂಪವಾದ ಸಮುದ್ರವನ್ನು ಸೇರಲು ಹರಿದು ಹೋಗುತ್ತಲಿವೆ. ಮಾನಸಚರಿತವನ್ನೇ (ಎಂದರೆ ರಾಮಚರಿ ತ್ರೆಯನ್ನೇ) ಮೂಲವಾಗಿ ವುಳ್ಳ ಸರಯೂ ನದಿಯು ಗಂಗಾನದಿಗೆ ಸೇರಿರುವುದ ರಿಂದ ಇದರ ಆದಿ ಅಂತ್ಯಗಳು ಶುದ್ಧವಾಗಿವೆ. ಆದುದರಿಂದ ಈ ಕಥೆಯನು

ಕೇಳುವ ಸಜ್ಜನರ ಮನಸ್ಸನ್ನು ಅದು ಪವಿತ್ರಮಾಡುವುದು. ಈ ಕಥಾರೂಪವಾದ ನದಿಯಲ್ಲಿ ನಾನಾವಿಧವಾದ ಅನೇಕ ವಿಚಿತ್ರಕಥೆಗಳೂ * ಇವೆ. ಅವುಗಳೇ ಇದರ ತೀರದಲ್ಲಿರುವ ವನ ಮತ್ತು ಉಪವನಗಳೆಂದು ತಿಳಿಯಿರಿ. ಉಮಾಮಹೇಶ್ವರರ ವಿವಾಹಮಹೋತ್ಸವದಲ್ಲಿ ಭಾಗಿಗಳಾಗಿದ್ದವರೆಲ್ಲರೂ ಈ ನದಿಯ ಅನೇಕ ವಿಧವಾದ ಅಸಂಖ್ಯ ಜಲಚರಜೀವಿಗಳೆಂದು ಭಾವಿಸಿರಿ. ರಾಮಚಂದ್ರನ ಜನ್ಮದಿಂದುಂಟಾದ ಆನಂದ ಮತ್ತು (ಜಗತ್ತಿನ) ಅಭಿನಂದನಗಳೇ ಈ ನದಿಯ ಸುಳಿ ಮತ್ತು ತರಂಗ ಗಳಾಗಿರುವವು. †

ದೋ ॥ ೬೧ ॥ ರಾಮಚಂದ್ರಾದಿ ನಾಲ್ವರ ಬಾಲಚರಿತ್ರಗಳೇ ಬೇರೆಬೇರೆ ವರ್ಣಗಳ ಕಮಲಗಳು. ಪುಣ್ಯಾತ್ಮನಾದ ದಶರಥರಾಜನೂ ಅವನ ರಾಣಿಯರೂ ಪರಿವಾರ ಜನರೂ ಭ್ರಮರ ಮತ್ತು ಜಲಪಕ್ಷಿ ಸ್ವರೂಪರಾಗಿರುವರು. ಇದರಲ್ಲಿ ರುವ ಸೀತೆಯ ಸ್ವಯಂವರದ ಮನೋಹರವಾದ ಕಥೆಯೇ ಈ ನದಿಯ ಸುಂದರ ವಾದ ಶೋಭೆಯಾಗಿದೆ. ಈ ಕಥಾರೂಪೀ ನದಿಯಲ್ಲಿರುವ ಅನೇಕ ಪ್ರಕಾರವಾದ ಸುಂದರ ಪ್ರಶ್ನೆಗಳೇ ನಾವೆಗಳಾಗಿರುವವು, ಮತ್ತು ಆ ಪ್ರಶ್ನೆಗಳಿಗೆ ಕೊಟ್ಟಿರುವ ವಿವೇಕಮಯವಾದ ಉತ್ತರಗಳೇ ನಾವಿಕರಾಗಿರುವರು. ಈ ಕಥೆಯನ್ನು ಕೇಳಿದ ನಂತರ ತಂತಮ್ಮಲ್ಲಿ ಇದರ ವಿಚಾರವಾಗಿ ಮಾತನಾಡಿಕೊಳ್ಳುವವರೇ ಈ ನದಿಯ ತೀರದಲ್ಲಿ ಸೇರಿರುವ ಯಾತ್ರಿಕರ ಸಮೂಹವೆಂದು ತಿಳಿಯಿರಿ. ಇದರಲ್ಲಿ ವರ್ಣಿತವಾಗಿರುವ ಪರಶುರಾಮನ ಕೋಪವೇ ಈ ನದಿಯ ಘೋರವಾದ ಧಾರೆ ಯೆಂದೂ ಅವನ ಕೋಪವನ್ನು ಶಾಂತಗೊಳಿಸಿದ ರಾಮಚಂದ್ರನ ಶ್ರೇಷ್ಠವಾದ ವಚನಗಳೇ ಅದರ ತೀರವೆಂದೂ ತಿಳಿಯಿರಿ. ಅನುಜಸಹಿತನಾದ ರಘುನಾಥನ ವಿವಾಹಮಹೋತ್ಸವದ ಸಂತೋಷವೇ ಈ ನದಿಯ ಸುಖದಾಯಕವೂ ಮನೋ ಹರವೂ ಆದ ತರಂಗವಾಗಿದೆ. ಈ ಕಥೆಯನ್ನು ಕೇಳುವುದರಿಂದಲೂ ಹೇಳುವುದರಿಂ ದಲೂ ಪುಲಕಿತರೂ ಪ್ರಸನ್ನರೂ ಆಗುವ ಜನರೇ ಈ ನದಿಯಲ್ಲಿ ಸ್ನಾನಮಾಡುವ ಪುಣ್ಯಾತ್ಮರೆಂದು ತಿಳಿಯಿರಿ. ಶ್ರೀರಾಮಚಂದ್ರನ ರಾಜತಿಲಕೋತ್ಸವಕ್ಕಾಗಿ ನೆರೆದ

---

* ಆ ವಿಚಿತ್ರಕಥೆಗಳಾವುವೆಂದರೆ ೧ ಯಾಜ್ಞವಲ್ಕ್ಯ ಮತ್ತು ಭರದ್ವಾಜರ ಸಂವಾದ ೨. ಪಾರ್ವತಿಯ ಜನ್ಮ. ೩ ಪಾರ್ವತಿಯ ತಪಸ್ಸು ೪. ಮಹಾದೇವ ಪಾರ್ವತಿಯರ ವಿವಾಹ. ೫. ಉಮಾಮಹೇಶ್ವರರ ಸಂವಾದ. ೬. ಸತ್ಯರೂಪನಕಥೆ—ಇವುಗಳಿಗೆ ಉಪವನದ ಉಪಮೆಯನ್ನು ಕೊಟ್ಟಿರುವರು. ಇನ್ನು ಸತೀದೇವಿಯ ಮೋಹ ಮತ್ತು ತನುತ್ಯಾಗ, ನಾರದನ ಮೋಹ, ಪ್ರತಾಪ ಭಾನುವಿನ ಕತೆ, ರಾವಣನ ಜನ್ಮ, ರಾವಣ ದಿಗ್ವಿಜಯ ಇವುಗಳಿಗೆ ವನದ ಉಪಮೆಯನ್ನು ಕೊಟ್ಟಿರುವರು.

† ಆನಂದಕ್ಕೆ ನೀರಿನ ಸುಳಿಯ ಉಪಮೆಯನ್ನು ಕೊಡುವ ಕಾರಣವೇನಂದರೆ ಅದು ಅಂತಃಕರಣದಲ್ಲಿರುವ ಆನಂದದಂತೆ ಪ್ರವಾಹದ ಒಳಗೆ ಇರುವುದು. ಲೋಕಾಭಿ ನಂದನವು ತರಂಗ (ತೆರೆ) ಗಳಂತೆ ಬಹಿರಂಗದಲ್ಲಿ ಗೋಚರವಾಗಿರುವುದು.

ಮಂಗಲಸಮೂಹವೇ ಈ ನದಿಯ ತೀರದಲ್ಲಿ ಪರ್ವಕಾಲದ ದಿನ ನೆರೆದಿರುವ ಯಾತ್ರಿಕರ ಸಮೂಹವಾಗಿರುವುದು. ಕೈಕೇಯಿಯ ದುರ್ಬುದ್ಧಿಯೇ ಈ ನದಿಯಲ್ಲಿರುವ ಪಾಚಿ (ಮಲತೆ) ಯಾಗಿರುವುದು. ಆದರಿಂದಲೇ ಘೋರವಾದ ವಿಪತ್ತು ಸಂಭವಿಸಿತು.

ದೋ ॥೬೨॥ ಆ ವಿಪತ್ತಿನಿಂದುಂಟಾದ ಅಸಂಖ್ಯಾತವಾದ (ರಾಮವನಗಮನಾದಿ) ಉತ್ಪಾತಗಳನ್ನು ಶಾಂತಿಗೊಳಿಸುವುದಕ್ಕೆ ಭರತನ ಚರಿತೆಯೇ ಜಪ ಮತ್ತು ಯಜ್ಞರೂಪವಾಗಿದೆ. ಕಲಿಯ ಪಾಪ ಮತ್ತು ದುಷ್ಟರ ಅವಗುಣಗಳ ವರ್ಣನೆಯೇ ಈ ನದಿಯ ಜಲದಲ್ಲಿರುವ ಕೆಸರು. ಮತ್ತೆ ಅದೇ ಕಾಗೆ ಮತ್ತು ಬಕಸ್ವರೂಪವಾಗಿರುವುದು. ಕೀರ್ತಿರೂಪಿಯಾದ ಈ ನದಿಯು ಆರು ಋತುಗಳಲ್ಲಿಯೂ ತುಂಬಿ ಹರಿಯುತ್ತಿರುವುದು ಆಗಿಂದಾಗ್ಗೆ ಇದು ಅತ್ಯಂತ ರಮ್ಯವೂ ಪವಿತ್ರವೂ ಆಗುವುದು ಇದರಲ್ಲಿ ಶಿವಪಾರ್ವತಿಯರ ವಿವಾಹ ವರ್ಣನೆಯೇ ಹೇಮಂತಋತುವು. * ಸುಖದಾಯಕವಾದ ರಾಮಚಂದ್ರನ ಜನ್ಮೋತ್ಸವವೇ ಶಿಶಿರಋತುವು. † ರಾಮಚಂದ್ರನ ವಿವಾಹದ ಕಥೆಯ ವರ್ಣನೆಯೇ ಆನಂದಮಂಗಲಮಯ ಋತುರಾಜ ವಸಂತ ಋತುವು. ‡ ರಘುನಾಥನ ವನಗಮನದ ಕಥೆಯೇ ಅಸಹನೀಯವಾದ ಗ್ರೀಷ್ಮಋತುವು.§ ಆ ವನಮಾರ್ಗದ ಕಥೆಯೇ ಕಡುತರವಾದ ಬಿಸಿಲಬೇಗೆ ಮತ್ತು ವೈಶಾಖ ಜೇಷ್ಠ ಮಾಸಗಳಲ್ಲಿ ಬೀಸುವ ಗಾಳಿಯು. ಘೋರರಾದ ರಾಕ್ಷಸರೊಂದಿಗೆ ನಡೆದ ಯುದ್ಧದ ಸಮಾಚಾರವೇ

---

* ಏಕೆಂದರೆ ಹೇಮಂತ ಋತುವಿನಲ್ಲಿ ಜಲ ಅಥವಾ ಚಳಿಯನ್ನು ನೋಡಿ ಭಯವಾಗುವುದು. ಹಾಗೆಯೆ ಶಿವನ ವಿವಾಹದಲ್ಲಿ ಭೂತಪ್ರೇತಾದಿಗಳನ್ನು ನೋಡಿ ಭಯವಾಗುವುದು.

† ನೃತ್ಯಗೀತಾದಿ ಆನಂದೋತ್ಸವವು ಶಿಶಿರು ಋತುವಿನಲ್ಲಿ ಆಗುವುದು. ಆಗಲೆ ಹೋಳಿಕಾಮಹೋತ್ಸವವು ಬರುವುದು. ಅದು ರಾಮಜನ್ಮೋತ್ಸವವಾದನಂತರವೇ ಬಂದಿತೆಂದು ಹೇಳಿಕೆಯುಂಟು.

‡ ವಸಂತ ಋತುವಿನಲ್ಲಿ ವೃಕ್ಷಗಳಮೇಲೆ ನವೀನ ಪಲ್ಲವ, ಪುಷ್ಪ ಮತ್ತು ಫಲಗಳು ಕಾಣುವವು ಹಾಗೆಯೆ ರಾಮಚಂದ್ರನ ವಿವಾಹಕಾಲದಲ್ಲಿ ಜನರು ನೂತನ ವಸ್ತ್ರಗಳನ್ನು ಧರಿಸಿದ್ದರು. ಅವುಗಳೇ ಪಲ್ಲವಗಳು, ಜನರ ಮುಖದಲ್ಲಿ ಕಂಡು ಬರುತ್ತಲಿದ್ದ ಸಂತೋಷವೆ ಪುಷ್ಪಗಳ ನಲಿದಾಟ, ಮತ್ತೆ ವಿವಾಹ ಸಮಾಪ್ತಿಯೆ ಫಲಗಳ ವಿಕಾಸ ಇದೇ ಸಾರಾಂಶವೆಂದು ಕಾಣುತ್ತದೆ.

§ ಗ್ರೀಷ್ಮಋತುವಿನಲ್ಲಿ ಜನರು ಕಡುತರವಾದ ಬಿಸಿಲು ಗಾಳಿಗಳಿಂದ ವ್ಯಾಕುಲಿತರಾಗುವರು, ಮತ್ತೆ ಹಲವರು ಸಾಯುವರು ಹಾಗೆಯೆ ರಾಮನ ವನಗಮನದಿಂದ ದಶರಥನಿಗೆ ಮರಣವುಂಟಾಯಿತು, ಪರಿವಾರದವರೂ ಪುರಜನರೂ ವ್ಯಾಕುಲಿತರಾದರು.

ವರ್ಷಋತುವು. * ಅದು ದೇವತಾಸಮೂಹವೆಂಬ ಧಾನ್ಯಕ್ಕೆ ವಿಶೇಷಹಿತಕರವಾದುದು. ರಾಮಚಂದ್ರನ ರಾಜ್ಯದಲ್ಲಿರುವ ಸುಖ, ಸುನೀತಿ, ಮತ್ತು ಪ್ರಶಂಸೆಗಳ ಸುದ್ದಿಯೇ ಶರದೃತುವಿಗೆ † ಸಮಾನವಾಗಿ ನಿರ್ಮಲ ಸುಖವನ್ನು ಕೊಡುವಂಥಾದ್ದಾಗಿದೆ. ಸತಿ ಶಿರೋಮಣಿಯಾದ ಸೀತೆಯ ಗುಣಗಳ ಕಥೆಯೇ ಆ ಜಲದ ನಿರ್ಮಲ ಮತ್ತು ಅನುಪಮ ಗುಣವಾಗಿದೆ. ಭರತನ ಸ್ವಭಾವವೇ ಮನೋಹರವಾದ ಶೀತಲತೆಯು. ಅದು ಯಾವಾಗಲೂ ಒಂದೇ ವಿಧವಾಗಿರುವುದು. ಅದನ್ನು ವರ್ಣಿಸುವುದಸಾಧ್ಯವು.

ಧೋ॥೬೩॥ ರಾಮಚಂದ್ರಾದಿ ನಾಲ್ವರು ಭ್ರಾತೃಗಳ ಪರಸ್ಪರ ನೋಟ ನುಡಿ ನಡೆ ಸ್ನೇಹ ಹಾಸ್ಯ ಮತ್ತು ಮನೋಹರವಾದ ಬಂಧುತ್ವ ಇವುಗಳೇ ಈ ಜಲದ ಮಾಧುರ್ಯ ಮತ್ತು ಸುವಾಸನೆ. ನನ್ನ ನಮ್ರತೆ, ವಿನಯ ಮತ್ತು ದೀನತೆಯೇ ಈ ಸುಂದರವಾದ ನೀರಿನ ಲಘುತ್ವವು, ಆದರೆ ಇದರಲ್ಲಿ ಯಾವ ದೋಷವೂ ಇಲ್ಲ. ಈ ಅದ್ಭುತವಾದ ನೀರಿನ ವಿಚಾರವನ್ನು ಕೇಳಿದ ಕೂಡಲೇ ಸುಖವುಂಟಾಗುವುದು. ಮತ್ತೆ ಅದರಿಂದಲೇ ಆಶಾರೂಪಿಯಾದ ಬಾಯಾರಿಕೆಯೂ ಮನಸ್ಸಿನ ಮಲಿನತೆಯೂ ದೂರವಾಗುವವು. ಈ ಜಲವು ರಾಮಭಕ್ತಿಯನ್ನು ಹೆಚ್ಚಿಸುವುದು, ಕಲಿಯುಗದ ಎಲ್ಲ ದುಷ್ಟಗ್ಲಾನಿಗಳನ್ನು ದೂರೀಕರಿಸುವುದು. ಸಾಂಸಾರಿಕ ಕಷ್ಟಗಳನ್ನು ಇದು ನಿವಾರಿಸುವುದು, ಸಂತೋಷವನ್ನು ಹೆಚ್ಚಿಸುವುದು, ದುಃಖದಾರಿದ್ರ್ಯರೂಪವಾದ ರೋಗಗಳನ್ನು ಶೀಘ್ರದಲ್ಲಿಯೇ ನಾಶಪಡಿಸುವುದು. ಇದು ಕಾಮ, ಕ್ರೋಧ, ಮದ ಮೋಹಗಳನ್ನು ನಾಶಪಡಿಸಿ ನಿರ್ಮಲ ಜ್ಞಾನ ವೈರಾಗ್ಯಗಳನ್ನು ಹೆಚ್ಚಿಸುವಂಥಾದ್ದಾಗಿರುತ್ತದೆ. ಇದರಲ್ಲಿ ಆದರಸಹಿತ ಸ್ನಾನಪಾನಾದಿಗಳನ್ನು ಮಾಡುವುದರಿಂದ ಹೃದಯದ ಎಲ್ಲಾ ಪಾಪಗಳೂ ದುಃಖಗಳೂ ನಿವಾರಣೆಯಾಗುವವು. ಯಾರು ಈ ಜಲದಿಂದ ತನ್ನ ಹೃದಯವನ್ನು ತೊಳೆಯುವದಿಲ್ಲವೋ, ಅಂಥ ಹೇಡಿಗಳ ಸಂಖ್ಯೆಯನ್ನು ಕಲಿಕಾಲವು ಹೆಚ್ಚಿಸಿರುವುದು. ಮರಳಿನ ಮೇಲೆ ಪ್ರಕಾಶಿಸುವಂಥ ಸೂರ್ಯಕಿರಣಗಳನ್ನು ದೂರದಿಂದ ನೋಡಿ ಜಲವೆಂಬ ಭ್ರಮೆಯಿಂದ ಬಾಯಾರಿದ ಹರಿಣ ಮೃಗಗಳು

---

* ವರ್ಷಋತುವಿನಲ್ಲಿ ಮೇಘಗಳ ಗರ್ಜನೆಯಾಗುವುದು ಹಾಗೆಯೆ ಯುದ್ಧದಲ್ಲಿ ಬಾಣಗಳ ಗರ್ಜನೆಯಾಗುವುದು. ಮೇಘದಿಂದಾಗುವ ಮಳೆಯಿಂದ ಹೊಲಗಳಿಗೆ ಹಿತವಾಗುವುದು ಬಾಣವರ್ಷನದಿಂದ ರಾಕ್ಷಸರಿಗೆ ಮೃತ್ಯುವುಂಟಾಗಿ ದೇವತೆಗಳಿಗೆ ಆನಂದವಾಯಿತು.

† ಶರದೃತುವಿನಲ್ಲಿ ಆಕಾಶವೂ ಸರೋವರದ ನೀರೂ ನಿರ್ಮಲವಾಗುವುದು ಹಾಗೆಯೇ ರಾಮರಾಜ್ಯದಲ್ಲಿ ಯಾವವಿಧವಾದ ಕಷ್ಟನಷ್ಟಗಳಿಲ್ಲದೆ ಜನರು ಸುಖವಾಗಿದ್ದರೆಂದು ಅಭಿಪ್ರಾಯವು.

ಅಲೆದಾಡುವಂತೆ ಮನುಷ್ಯರೂ ಕೂಡಾ ರಾಮಚರಿತಮಾನಸ ರೂಪಿಯಾದ ಸುಂದರ ಜಲವನ್ನು ಬಿಟ್ಟು ಸುಳ್ಳು ಕಥೆಗಳಲ್ಲಿ ಮನಸ್ಸಿಟ್ಟು ಅತ್ತಿತ್ತ ಅಲೆದಾಡುತ್ತ ದುಃಖಿಗಳಾಗುವರು.

ದೋ॥೬೪॥೬೫॥ ಆದರ ಗುಣಗಳ ಸಮೂಹವನ್ನು ಅರಿತು ಈ ಸುಂದರವಾದ ಜಲದಲ್ಲಿ ನನ್ನ ಮನಸ್ಸನ್ನು ತೊಳೆದು ಪಾರ್ವತೀಪರಮೇಶ್ವರರನ್ನು ಸ್ಮರಿಸಿ ಕವಿ ತುಲಸೀದಾಸನೆಂಬ ನಾನು ನನ್ನ ಬುದ್ಧಿಗೆ ಅನುಸಾರವಾಗಿ ಮನೋಹರವಾದ ಕಥೆಯನ್ನು ಹೇಳುವೆನು. ನಾನು ಈಗ ರಾಮಚಂದ್ರ ಚರಣಕಮಲಗಳನ್ನು ಹೃದಯದಲ್ಲಿ ಧರಿಸಿ, ಅವನ ಅನುಗ್ರಹವನ್ನು ಹೊಂದಿ ಇಬ್ಬರು ಮುನಿಶ್ರೇಷ್ಠರ ಸುಂದರಸಂವಾದವನ್ನು ವರ್ಣಿಸುವೆನು (ಭಕ್ತಿಯಿಂದ ಕೇಳಿರಿ)

## ಕಥಾ ಪ್ರಸಂಗವು

### ಯಾಜ್ಞವಲ್ಕ್ಯ ಭರದ್ವಾಜರ ಸಂವಾದ

ಭರದ್ವಾಜಮುನಿಯು ಪ್ರಯಾಗದಲ್ಲಿ ವಾಸಿಸುತ್ತಿರುವನು. ಆತನು ರಾಮಚಂದ್ರನ ಚರಣಗಳಲ್ಲಿ ವಿಶೇಷ ಪ್ರೀತಿಯನ್ನಿಟ್ಟಿರುವನು. ಆತನು ಮಹಾ ತಪಸ್ವಿಯಾಗಿಯೂ ಶಮದಮದಯಾದಿ ಗುಣಗಳ ಗಣಿಯಾಗಿಯೂ ಪಾರಮಾರ್ಥಿಕ ವಿದ್ಯೆಯಲ್ಲಿ ಬಹು ಚತುರನಾಗಿಯೂ ಇರುವನು. ಮಾಘಮಾಸದಲ್ಲಿ* ಸೂರ್ಯನು ಮಕರರಾಶಿಗೆ ಬಂದಾಗ ಎಂದರೆ–ಮಕರ ಸಂಕ್ರಾಂತಿಯಲ್ಲಿ ಎಲ್ಲಾ ಋಷಿಗಳೂ ಮುನಿಗಳೂ ದೇವತೆಗಳೂ ದಾನವರೂ ಗಂಧರ್ವರೂ ತೀರ್ಥರಾಜಪ್ರಯಾಗಕ್ಕೆ ಬಂದು ಬಹು ಆದರದಿಂದ ತ್ರಿವೇಣಿಯಲ್ಲಿ ಸ್ನಾನಮಾಡುವರು. ಮತ್ತೆ ವೇಣೀಮಾಧವನ ಚರಣಕಮಲಗಳನ್ನು ಪೂಜಿಸಿ ಅಕ್ಷಯವಟ † ವನ್ನು ಸ್ಪರ್ಶಿಸಿ ವಿಶೇಷ ಪ್ರಸನ್ನರಾಗುವರು. ಅಲ್ಲಿ ಭರದ್ವಾಜಮುನಿಯ ಆಶ್ರಮವು ಬಹು ಪವಿತ್ರವಾಗಿಯೂ ರಮಣೀಯವಾಗಿಯೂ ಮುನಿಜನರಿಗೆ ಮನೋರಂಜಕವಾಗಿಯೂ ಇದೆ. ಪ್ರಯಾಗದಲ್ಲಿ ಸ್ನಾನ ಮಾಡಲಿಕ್ಕೆ ಬರುವ ಎಲ್ಲ ಮುನಿಗಳ ಮತ್ತೆ ಋಷಿಗಳ ಸಭೆಯು ಆ ಆಶ್ರಮದಲ್ಲಿ ಸೇರುವುದು. ಅವರೆಲ್ಲರೂ ಪ್ರಾತಃ

---

* "ಮಾಘೇ ಮಾಸಿ ಗಮಿಷ್ಯಂತಿ ಗಂಗಾಯಾಮುನಸಂಗಮಮ್ । ಬ್ರಹ್ಮವಿಷ್ಣುಮಹಾದೇವರುದ್ರಾದಿತ್ಯಮರುದ್ಗಣಾಃ ॥ ೧ ॥ ಪ್ರಯಾಗೇ ಮಾಘಮಾಸೇ ತು ತ್ರ್ಯಹಂ ಸ್ನಾನಸ್ಯಯದ್ಭವೇತ್ । ನಾಶ್ವಮೇಧಸಹಸ್ರೇಣ ತತ್ಫಲಂ ಲಭತೇಭುವಿ ॥ ೨ ॥ "–ಅರ್ಥನು ಸಹಜವಾಗಿ ತಿಳಿಯುವಂತಿದೆ.

† ಪುಟ ೫ ನೋಡಿರಿ.

ಕಾಲದಲ್ಲಿ * ಉತ್ಸಾಹದಿಂದ ಸ್ನಾನಮಾಡಿ ತಮ್ಮ ಹೃದಯದಲ್ಲಿ ಹರಿಕೀರ್ತನೆ ಮಾಡುವರು.

ದೋ॥ ೬೭॥ ಆ ಮುನಿಶ್ರೇಷ್ಠರು ಬ್ರಹ್ಮನಿರೂಪಣೆ ಧರ್ಮವಿಧಾನ, ತತ್ವ ವಿಚಾರಗಳನ್ನು ವರ್ಣಿಸುತ್ತ ಜ್ಞಾನ ವೈರಾಗ್ಯಗಳಿಂದ ಯುಕ್ತವಾದ ಈಶ್ವರ ಭಕ್ತಿಯ ವಿಚಾರವಾಗಿ ಚರ್ಚಿಸುತ್ತಲಿರುವರು. ಈ ಪ್ರಕಾರವಾಗಿ ಇಡೀ ಮಾಘ ಮಾಸದಲ್ಲಿ ಅಲ್ಲಿ ಸ್ನಾನಮಾಡಿ ಅನಂತರ ತಂತಮ್ಮ ಆಶ್ರಮಗಳಿಗೆ ತೆರಳುವರು. ಈ ವಿಧವಾಗಿ ಅಲ್ಲಿ ಪ್ರತಿವರ್ಷವೂ ಆನಂದೋತ್ಸವವಾಗುತ್ತದೆ ಮತ್ತೆ ಮುನಿಗಳು ಸ್ನಾನಮಾಡುವುದಕ್ಕಾಗಿ ಅಲ್ಲಿಗೆ ತಂಡತಂಡವಾಗಿ ಹೋಗುತ್ತಾರೆ ಹಿಂದೆ ಒಂದಾನೊಂದು ಕಾಲದಲ್ಲಿ ಈ ರೀತಿಯಾಗಿ ಮಾಘಸ್ನಾನವನ್ನು ಮುಗಿಸಿ ಮುನಿಗಳೆಲ್ಲರೂ ತಮ್ಮ ತಮ್ಮ ಆಶ್ರಮಗಳಿಗೆ ತೆರಳಿದರು, ಆದರೆ ಭರದ್ವಾಜನು ಪರಮಜ್ಞಾನಿಯಾದ ಯಾಜ್ಞವಲ್ಕ್ಯಮುನಿಯ ಪಾದಗಳಿಗೆರಗಿ ಆದರದಿಂದ ಆತನ ಚರಣಕಮಲಗಳನ್ನು ತೊಳೆದು, ಪವಿತ್ರವಾದ ಆಸನದ ಮೇಲೆ ಆತನನ್ನು ಕುಳ್ಳಿರಿಸಿ ಪೂಜೆಮಾಡಿ ಸ್ತುತಿಸಿ, ಬಹು ಪುನೀತವೂ ಮೃದುವೂ ಆದ ವಚನಗಳಿಂದ ಹೀಗೆ ಕೇಳಿದನು.—ಹೇ ನಾಥಾ, ನನ್ನ ಹೃದಯದಲ್ಲಿ ಒಂದು ದೊಡ್ಡ ಸಂಶಯಹುಟ್ಟಿದೆ ಸಮಗ್ರವೇದಗಳ ತತ್ವವನ್ನು ತಮ್ಮ ಕೈಯಲ್ಲಿಟ್ಟುಕೊಂಡಿರುವಿರಿ. ನನ್ನ ಸಂದೇಹವನ್ನು ಪ್ರಕಾಶಪಡಿಸಲು ನನಗೆ ಭಯವೂ ನಾಚಿಗೆಯೂ ಉಂಟಾಗುತ್ತಿದೆ ಆದರೆ ಹೇಳದಿರೋಣವೆಂದರೆ ಅದರಿಂದ ದೊಡ್ಡಹಾನಿಯಾಗುವಂತಿದೆ

ದೊ ॥ ೬೭ ॥ ಹೇ ಪ್ರಭೋ ಗುರುವಿನ ಎದುರಿನಲ್ಲಿ ಯಾವ ವಿಷಯವನ್ನೂ ಮುಚ್ಚಿಡಕೂಡದು, ಹಾಗೆ ಮುಚ್ಚಿಟ್ಟರೆ ಹೃದಯದಲ್ಲಿ ನಿರ್ಮಲ ಜ್ಞಾನ ಪ್ರಾಪ್ತಿಯಾಗುವುದಿಲ್ಲವೆಂದು ಸಂತಜನರೂ ವೇದ ಪುರಾಣಗಳೂ ಮುನಿಗಳೂ ನೀತಿಯನ್ನು ಹೇಳುವರು. ಇದನ್ನರಿತು ನಾನು ನನ್ನ ಅಜ್ಞಾನವನ್ನು ಪ್ರಕಟಗೊಳಿಸುವೆನು. ಹೇ ನಾಥಾ, ತಾವು ನನ್ನಮೇಲೆ ಕೃಪೆಯಿಟ್ಟು ನನ್ನ ಸಂದೇಹವನ್ನು ಹೋಗಲಾಡಿಸಬೇಕು. ರಾಮನಾಮದ ಪ್ರಭಾವವು ಅಪಾರವಾಗಿದೆ. ಸಂತಜನರೂ ಪುರಾಣಗಳೂ ಉಪನಿಷತ್ತುಗಳೂ ಇದರ ಮಹಿಮೆಯನ್ನೂ ಗಾನ ಮಾಡುತ್ತಲಿರುವವು ಕಲ್ಯಾಣರೂಪಿಯೂ ಅವಿನಾಶಿಯೂ ಜ್ಞಾನಗುಣ

---

* ಮಾಘಮಾಸದ ಪ್ರಾತಃಸ್ನಾನದ ಫಲವು ವಿಶೇಷವಾಗಿ ಪ್ರಶಂಸಿತವಾಗಿದೆ. ಶಾಸ್ತ್ರದಲ್ಲಿ ಬರೆದಿರುವುದೇನೆಂದರೆ—"ಮಾಘಮಾಸೆ ರಟನ್ತ್ಯಾಪಃ ಕಿಂಚದಭ್ಯುದಿತೆ ರವೌ । ಬ್ರಹ್ಮಘ್ನಂ ವಾ ಸುರಾಪಂ ವಾ ಕಂ ಪತಂತಂ ಪುನೀಮಹೇ ॥" ಎಂದರೆ "ಸೂರ್ಯೋದಯದಲ್ಲಿ ಮಾಘ ಮಾಸದಲ್ಲಿ ಸ್ನಾನಮಾಡುವವನು, ಬ್ರಹ್ಮಘಾತಿಯಾಗಿರಲಿ, ಸುರಾಪಾನಮಾಡುವವನಾಗಿರಲಿ — ಅಂತಹನನ್ನು ನಾನು ಪವಿತ್ರಮಾಡುವೆನೆಂದು" ಜಲವು ಹೇಳುತ್ತದೆ.

ನಿಧಿಯೂ ಆದ ಭಗವಾನ್ * ಮಹಾದೇವನು ನಿರಂತರವೂ ಇದನ್ನು ಜಪಿಸುತ್ತಿರುವನು. ಈ ಪ್ರಪಂಚದಲ್ಲಿ ನಾಲ್ಕು ಜಾತಿಯ ಜೀವಿಗಳಿರುವವು. ಅವು ಕಾಶಿಯಲ್ಲಿ ದೇಹವನ್ನು ತ್ಯಜಿಸಿ ಪರಮಪದವನ್ನು ಅಂದರೆ ಮುಕ್ತಿಯನ್ನು ಹೊಂದುವವು. ಹೇ ಮುನಿರಾಜನೇ' ಶಿವನೂ (ಈ ಜಗತ್ತಿನ ಮೇಲೆ ಕೃಪೆಯನ್ನಿಟ್ಟು) ರಾಮನಾಮದ ಮಹಿಮೆಯನ್ನೇ ಉಪದೇಶಿಸುತ್ತಿರುವನು. ಹೇ ಪ್ರಭೋ! ಆ ರಾಮನು ಯಾರು? ಹೇ ಕೃಪಾಸಾಗರಾ, ಅದನ್ನು ನನಗೆ ತಿಳಿಸಬೇಕು. ಒಬ್ಬ ರಾಮನು ಅಯೋಧ್ಯೆಯ ರಾಜನಾದ ದಶರಥನ ಪುತ್ರನಾಗಿದ್ದನು. ಆತನ ಚರಿತ್ರೆಯು ಇಡೀ ಜಗತ್ತಿನಲ್ಲಿ ಪ್ರಕಟವಾಗಿದೆ. ಆತನು ಸ್ತ್ರೀವಿಯೋಗದಿಂದ ಅಪಾರದುಃಖವನ್ನು ಹೊಂದಿದ್ದನು ಮತ್ತು ಕ್ರೋಧವಶನಾಗಿ ರಾವಣನನ್ನು ಯುದ್ಧದಲ್ಲಿ ಕೊಂದನು.

ದೋ ॥೬೮॥ ಹೇ ಪ್ರಭೋ, ಶಿವನು ಜಪಿಸುತ್ತಿರುವ ರಾಮನು ಅವನೋ ಅಥವಾ ಬೇರೊಬ್ಬನೋ? ತಾವು ಸತ್ಯವಂತರಾಗಿಯೂ ಸರ್ವಜ್ಞರಾಗಿಯೂ ಇರುವಿರಿ. ಇದನ್ನು ಜ್ಞಾನದಿಂದ ವಿಚಾರಮಾಡಿ ಹೇಳಬೇಕು. ಹೇ ನಾಥಾ, ನನ್ನ ಈ ದೊಡ್ಡ ಭ್ರಮೆಯು ದೂರವಾಗುವಂತೆ ಅವನ ಕಥೆಯನ್ನು ವಿಸ್ತಾರವಾಗಿ ಹೇಳಬೇಕು.— ಎಂದನು. ಇದನ್ನು ಕೇಳಿ ಯಾಜ್ಞವಲ್ಕ್ಯನು ಮಂದಸ್ಮಿತನಾಗಿ ಹೇಳಿದ್ದೇನಂದರೆ–ಮುನಿಯೇ ರಾಮಚಂದ್ರನ ಮಹಿಮೆಯು ನಿನಗೆ ಗೊತ್ತೇಇದೆ. ಮನೋವಾಕ್ಕರ್ಮಗಳಿಂದ ನೀನು ರಾಮಭಕ್ತನಾಗಿರುವಿ. ನಿನ್ನ ಪ್ರಶ್ನೆಯ ರಹಸ್ಯವನ್ನು ನಾನು ತಿಳಿದುಕೊಂಡೆನು. ಗುಪ್ತವಾಗಿರುವ ರಾಮನ ಗುಣಗಾನವನ್ನು ನೀನು ಕೇಳಲಪೇಕ್ಷಿಸಿರುವಿ, ಆದುದರಿಂದ ನೀನು ಈ ಮಾತನ್ನು ಏನೂ ತಿಳಿಯದ ಮಂದಮತಿಯಂತೆ ಕೇಳುತ್ತಿರುವಿ. ಹೇ ಮಿತ್ರಾ, ನೀನು ಸಾದರದಿಂದ ಮನಸ್ಸಿಟ್ಟುಕೇಳು. ನಾನು ರಾಮನ ಕಥೆಯನ್ನು ಹೇಳುವೆನು. ರಾಮಚರಿತೆಯು ಮಹಾ ಮೋಹವೆಂಬ ಮಹಿಷಾಸುರನನ್ನು ಸಂಹರಿಸಲು ಭಯಂಕರ ಕಾಳೀದೇವಿಯ ಸ್ವರೂಪವಾಗಿರುವುದು. ಅದು ಚಂದ್ರನ ಕಿರಣಗಳಿಗೆ ಸಮಾನವಾಗಿಯೂ ಇರುವುದು. ಸಂತರೂಪಿ ಚಕೋರಗಳು ಅದನ್ನು ಪಾನಮಾಡುವವು. ಹಿಂದೆ ನಿನಗುಂಟಾದಂತಹ ಸಂದೇಹವೇ ಪಾರ್ವತಿಗೂ ಉಂಟಾಗಿತ್ತು. ಈಗ ನೀನು ನನ್ನನ್ನು ಕೇಳಿದಂತೆ ಪಾರ್ವತಿಯು ಮಹದೇವನನ್ನು ಪ್ರಶ್ನಿಸಿದ್ದಳು. ಆಗ ಮಹಾದೇವನು ಆಕೆಯನ್ನು ಸಮಾಧಾನಪಡಿಸಿದ್ದನು.

ದೋ॥೬೯॥ ಪಾರ್ವತೀ ಮತ್ತು ಮಹಾದೇವರ ಆ ಸಂವಾದವು ಯಾವ ಸಮಯದಲ್ಲಿ ಯಾವ ಕಾರಣದಿಂದ ನಡೆಯಿತೆಂಬುದನ್ನು ಈಗ ನಾನು ನನ್ನ

---

* ಯಾವನು ಷಡೈಶ್ವರ್ಯ ಸಂಪನ್ನನಾಗಿರುವನೊ ಅವನಿಗೆ ಭಗವಂತನೆನ್ನುವರು.— ದೋಹಾ—"ಶ್ರೀ ಐಶ್ವರ್ಯ ವಿರಾಗ ಆರು, ಮೋಕ್ಷ, ಧರ್ಮ, ಯಶ, ಜ್ಞಾನ । ಏ ಷಡ, ಭಗಕೀ ಖಾನಿ ಜೋ, ತಿಹಿ ಕಹಿಯೆ ಭಗವಾನ್ ॥"

ಬುದ್ಧಿಗನುಸಾರವಾಗಿ ಹೇಳುವೆನು. ಅದನ್ನು ಕೇಳುವುದರಿಂದ ಮುನಿಗಳ ದುಃಖವು ಕೂಡಾ ದೂರವಾಗುತ್ತದೆ.

(ಶಿವ ಮತ್ತು ಅಗಸ್ತ್ಯರ ಸಂವಾದ)

ತ್ರೇತಾಯುಗದಲ್ಲಿ ಒಮ್ಮೆ ಮಹಾದೇವನು ಅಗಸ್ತ್ಯಮುನಿಯ ಸಮೀಪಕ್ಕೆ ಹೋದನು ಆಗ ಅವನೊಂದಿಗೆ ಸತಿಯೂ ಜಗಜ್ಜನನಿಯೂ ಆದ ಭವಾನಿಯೂ ಇದ್ದಳು ಆ ಋಷಿಯು ಅವರನ್ನು ಜಗದೀಶ್ವರರೆಂದರಿತು ಪೂಜಿಸಿದನು. ಆಗಲೇ ಆ ಮುನಿಯು ರಾಮಚರಿತೆಯನ್ನು ಹೇಳಿದನು. ಅದನ್ನು ಕೇಳಿ ಶಿವನಿಗೆ ವಿಶೇಷ ಸುಖ ಉಂಟಾಯಿತು. ಪುನಃ ಆ ಋಷಿಯು ಮನೋಹರವಾದ ಹರಿಭಕ್ತಿಯ ವಿಷಯವಾಗಿ ಶಿವನನ್ನೇ ಪ್ರಶ್ನಿಸಿದನು. ಆಗ ಶಿವನು ಆತನನ್ನು ಅಧಿಕಾರಸಂಪನ್ನನೆಂದು ತಿಳಿದು ಭಕ್ತಿಯ ಸಂಬಂಧವಾದ ಎಲ್ಲ ವಿಚಾರಗಳನ್ನು ತಿಳಿಸಿದನು. ಈ ರೀತಿಯಾಗಿ ರಾಮಚಂದ್ರನ ಗುಣಗಳ ಕಥೆಯನ್ನು ಹೇಳುತ್ತ ಕೇಳುತ್ತ ಅಲ್ಲಿಯೇ ಹಲವು ದಿನಗಳನ್ನು ಕಳೆದನು. ಆ ನಂತರ ಆ ಮುನಿಯ ಅಪ್ಪಣೆಯನ್ನು ಪಡೆದು ಶಿವನು ದಕ್ಷಕನ್ಯೆಯಾದ ಭವಾನಿಯೊಂದಿಗೆ ಸ್ವಸ್ಥಾನಕ್ಕೆ ತೆರಳಿದನು. ಆ ಸಮಯದಲ್ಲಿ ಪೃಥ್ವಿಯ ಭಾರವನ್ನು ಕಡಿಮೆ ಮಾಡುವುದಕ್ಕಾಗಿ ವಿಷ್ಣು ಭಗವಾನನು ರಘುಕುಲದಲ್ಲಿ ಅವತರಿಸಿದ್ದನು. ಪಿತನ ಆಜ್ಞೆಯಿಂದ ರಾಜ್ಯವನ್ನು ಬಿಟ್ಟು ಅವಿನಾಶಿಯಾದ ರಾಮಚಂದ್ರನು ನಿರ್ಲೋಭದಿಂದ ದಂಡಕಾರಣ್ಯದಲ್ಲಿ ಸುತ್ತುತ್ತಿದ್ದನು.

ದೋ॥೭೦॥೭೧॥ ಮಹಾದೇವನು ಆ ಸಮಯದಲ್ಲಿ ರಾಮಚಂದ್ರನ ದರ್ಶನವು ಹೇಗಾದೀತೆಂದು ಆಲೋಚಿಸುತ್ತಿದ್ದನು. ಆಗ ಭಗವಂತನು ಗುಪ್ತರೂಪದಿಂದ ಪ್ರಕಟವಾಗಿದ್ದನೆಂದು ಎಲ್ಲರಿಗೂ ತಿಳಿದಿತ್ತು (ಈ ವಿಚಾರವನ್ನು ತಿಳಿಯುವುದು ಹೇಗೆ ಮತ್ತು ಆತನ ದರ್ಶನದ ವಿನಾ ನನಗೆ ಸಂತೋಷ ಉಂಟಾಗುವುದಿಲ್ಲವೆಂದು) ಮಹಾದೇವನ ಹೃದಯದಲ್ಲಿ ಅತ್ಯಂತ ಕ್ಷೋಭೆಯುಂಟಾಗಿತ್ತು. ಸತಿಗೂ ಇದರ ಮರ್ಮವು ಗೊತ್ತಿರಲಿಲ್ಲ. ಭಕ್ತರೇ, ತುಳಸೀದಾಸನು ಹೇಳುತ್ತಾನೆ, ಕೇಳಿರಿ.—ರಾಮದರ್ಶನ ಲಾಲಸೆಯಿಂದ ಶಿವನ ನೇತ್ರಗಳು ಕೆಂಪಾಗಿದ್ದವು, ಮತ್ತು ಇದರ ರಹಸ್ಯವನ್ನು ಯಾರಾದರೂ ತಿಳಿದುಕೊಂಡಾರೆಂಬ ಭಯವೂ ಮನಸ್ಸಿನಲ್ಲಿತ್ತು. ಈ ಪ್ರಕಾರವಾಗಿ ಮಹಾದೇವನು ಆಲೋಚನೆಯಲ್ಲಿ ಮಗ್ನನಾಗಿದ್ದನು. ಅದೇ ಸಮಯದಲ್ಲಿ ರಾವಣನು ನೀಚನಾದ ಮಾರೀಚನನ್ನು ಜತೆಯಲ್ಲಿ ಕರೆದುಕೊಂಡು ಹೋಗಿ ಅವನನ್ನು ಕಪಟಮೃಗವಾಗಿ ಮಾರ್ಪಡಿಸಿದನು. ಮತ್ತೆ ಮೂರ್ಖನಾದ ರಾವಣನು ಮೋಸದಿಂದ ಸೀತೆಯನ್ನು ಅಪಹರಿಸಿದನು. ಏಕೆಂದರೆ—ರಾಮಚಂದ್ರನ ಮಹಿಮೆಯನ್ನು ಅವನು ಚೆನ್ನಾಗಿ ತಿಳಿದಿರಲಿಲ್ಲ. ಹರಿಣಮೃಗ

ವನ್ನು ಕೊಂದು ರಾಮಚಂದ್ರನು ಅನುಜಸಹಿತನಾಗಿ ಪರ್ಣಶಾಲೆಗೆ ಬಂದು ನೋಡಿದಾಗ ಅವನ ಕಣ್ಣುಗಳಲ್ಲಿ ನೀರು ತುಂಬಿಕೊಂಡಿತು. ರಾಮಚಂದ್ರನು ಮನುಷ್ಯರಂತೆ ವಿರಹದಿಂದ ವ್ಯಾಕುಲನಾದನು. ಅಣ್ಣತಮ್ಮಂದಿರಿಬ್ಬರೂ ವನದಲ್ಲಿ ಸೀತೆಯನ್ನು ಹುಡುಕುತ್ತ ಅಲೆದಾಡಲಾರಂಭಿಸಿದರು. ಯಾವನಿಗೆ ಎಂದಿಗೂ ಸಂಯೋಗ ವಿಯೋಗಗಳಿಲ್ಲವೋ ಅಂತಹನ ವಿರಹದುಃಖವು ಪ್ರಕಟವಾದುದನ್ನು ನೋಡುವ ಸಂದರ್ಭ ಒದಗಿತು.

ದೋ॥೭೨॥ ರಾಮಚಂದ್ರನ ಚರಿತ್ರೆಯು ಬಹು ವಿಚಿತ್ರವಾದುದು. ಇದನ್ನು ದೊಡ್ಡ ದೊಡ್ಡ ಜ್ಞಾನಿಗಳು ಮಾತ್ರ ತಿಳಿದುಕೊಳ್ಳುತ್ತಾರೆ. ಅಜ್ಞಾನಿಗಳೂ ಮೂರ್ಖರೂ ಇದನ್ನು ಸರಿಯಾಗಿ ತಿಳಿಯಲಾರರು. (ರಾಮಚರಿತೆಯಿಂದ ಭಕ್ತಜನರಿಗೆ ಸುಂದರವಾದ ಶಿಕ್ಷಣವು ದೊರೆವುದು; ಆದರೆ ಮೂರ್ಖರಿಗೆ ಮೋಹವುಂಟಾಗುವುದು.) ಮಹಾದೇವನು ಆ ಸಮಯದಲ್ಲಿ (ಎಂದರೆ ರಾಮನು ಲಕ್ಷ್ಮಣಸಮೇತನಾಗಿ ಅಲೆದಾಡುತ್ತಿರುವಾಗ) ರಾಮಚಂದ್ರನನ್ನು ನೋಡಿದನು. ಆಗ ಆತನ ಮನಸ್ಸಿಗೆ ಅತ್ಯಾನಂದವಾಯಿತು. ಶಿವನು ಆ ಸೌಂದರ್ಯರಾಶಿಯನ್ನು ಕಣ್ಣುತುಂಬಾ ನೋಡಿದನು ಆದರೆ ಅದು ಸಮಯವಲ್ಲವೆಂದರಿತು ಆತನೊಂದಿಗೆ ಮಾತನಾಡಲಿಲ್ಲ. "ಹೇ ಸಚ್ಚಿದಾನಂದ! ಜಗತ್ಪಾವನ! ನಿನಗೆ ಜಯವಾಗಲಿ!" ಎಂದು ಹೇಳಿ ಕಾಮನನ್ನು ಸಂಹರಿಸಿದ ಶಿವನು ಆಗಿಂದಾಗ್ಗೆ ಆನಂದದಿಂದ ಪುಲಕಿತನಾಗುತ್ತ, ಸತಿಯೊಂದಿಗೆ ಹೋಗುತ್ತಿದ್ದನು. ಸತಿಯು ಮಹಾದೇವನ ಈ ಸ್ಥಿತಿಯನ್ನು ನೋಡಿ ಸಂದೇಹಗೊಂಡಳು. ಮತ್ತೆ "ಇಡೀ ಜಗತ್ತೇ ಶಿವನಿಗೆ ವಂದಿಸುತ್ತಿದೆ, ಈತನೇ ಜಗತ್ಪತಿ ಎನಿಸಿರುವನು, ಈತನಿಗೆ ದೇವತೆಗಳೂ ಮುನಿಮಾನವಾದಿಯಾಗಿ ಎಲ್ಲರೂ ತಲೆಬಾಗಿ ನಮಿಸುತ್ತಿರುವರು. ಹೀಗಿರುವಾಗ ನನ್ನ ಪತಿಯು ಒಬ್ಬ ರಾಜಪುತ್ರನಿಗೆ, 'ಸಚ್ಚಿದಾನಂದ! ಮೋಕ್ಷಧಾಮ!' ಎಂದು ಹೇಳಿ ನಮಸ್ಕರಿಸಿದುದಲ್ಲದೆ, ಅವನ ಸೌಂದರ್ಯವನ್ನು ನೋಡಿ ತಲ್ಲೀನರಾಗಿ, ಅವರ ಹೃದಯದಿಂದ ಪ್ರೇಮಪ್ರವಾಹವು ಇನ್ನೂ ಉಕ್ಕೇರಿಬರುತ್ತಲಿದೆ.

ದೋ॥೭೩॥ ಯಾವ ಬ್ರಹ್ಮನನ್ನು ವೇದಗಳೂ ತಿಳಿಯಲಾರವೊ, ಯಾವ ಬ್ರಹ್ಮನು ವ್ಯಾಪಕನಾಗಿಯೂ ಮಾಯಾರಹಿತನಾಗಿಯೂ ಜನ್ಮರಹಿತವಾಗಿಯೂ ಕಲಾರಹಿತನಾಗಿಯೂ ಚೇಷ್ಟಾರಹಿತನಾಗಿಯೂ ಭೇದರಹಿತನಾಗಿಯೂ ಇರುವನೋ ಅಂತಹನು ಮನುಷ್ಯ ಶರೀರವನ್ನು ಹೇಗೆ ಧರಿಸಬಲ್ಲನು? ವಿಷ್ಣು ಭಗವಾನನೇ ದೇವತೆಗಳ ಹಿತಕ್ಕಾಗಿ ಮನುಷ್ಯ ಶರೀರವನ್ನು ಧಾರಣಮಾಡಿದ್ದರೆ, ಆತನು ಶಿವನಂತೆ ಸರ್ವಜ್ಞನಾಗಿರುವನು. ಮಹಾ ಜ್ಞಾನಿಯೂ, ಲಕ್ಷ್ಮೀಪತಿಯೂ, ದೈತ್ಯಾರಿಯೂ ಆದ ವಿಷ್ಣುವು ಶೋಕದಿಂದ ವ್ಯಾಕುಲನಾಗಿ ಅಜ್ಞಾನಿಗಳಂತೆ ತನ್ನ ಸ್ತ್ರೀಯನ್ನು ಹುಡುಕುತ್ತಿರುವನೆ? ಆದರೆ ಶಿವನ ವಾಕ್ಯವೂ

ಅಸತ್ಯವಾಗಲಾರದು, ಏಕೆಂದರೆ ಪರಮೇಶ್ವರನು ಸರ್ವಜ್ಞನು " ಎಂಬಿತ್ಯಾದಿ ಅಪಾರವಾದ ಅನುಮಾನವು ಸತಿಯ ಹೃದಯದಲ್ಲಿ ಉದಯಿಸಿದವು. ಆಗ ಆಕೆಯ ಹೃದಯದಲ್ಲಿ ಜ್ಞಾನವುಂಟಾಗಲಿಲ್ಲ. ಈ ವಿಷಯವನ್ನು ಭವಾನಿಯು ಪ್ರಕಟಗೊಳಿಸದಿದ್ದರೂ, ಅಂತರ್ಯಾಮಿಯಾದ ಶಿವನು ಅದೆಲ್ಲವನ್ನು ತಿಳಿದು ಕೊಂಡು, " ಹೇ ಸತೀ, ಕೇಳು–ಇದು ನಿನ್ನ ಸ್ತ್ರೀಸ್ವಭಾವವಾಗಿದೆ. ಹೀಗೆ ಮನಸ್ಸಿನಲ್ಲಿ ಸಂದೇಹಪಡಕೂಡದು. ಯಾರ ಕಥೆಯನ್ನು ಅಗಸ್ತ್ಯ ಋಷಿಯು ನನಗೆ ಹೇಳಿದನೋ ಮತ್ತೆ ಯಾರ ಭಕ್ತಿ ವಿಚಾರವನ್ನು ನಾನು ಆ ಮುನಿಗೆ ತಿಳುಹಿಸಿಕೊಟ್ಟೆನೊ ಆ ರಾಮಚಂದ್ರನೇ ನನ್ನ ಇಷ್ಟದೇವತೆಯಾಗಿರುವನು. ಶ್ರೇಷ್ಠರಾದ ಮುನಿಗಳು ಯಾವಾಗಲೂ ಆತನ ಸೇವೆಯನ್ನು ಮಾಡುತ್ತಿರುವರು. (ವ್ಯಾಸ, ಪರಾಶರಾದಿ) ಧೀರ ಮುನಿಗಳೂ, (ಕಪಿಲಾದಿ) ಯೋಗಿಗಳೂ (ಶುಕಸನ ಕಾದಿ) ಸಿದ್ಧರೂ ನಿರ್ಮಲಾಂತಃಕರಣದಿಂದ ಯಾರ ಧ್ಯಾನವನ್ನು ಯಾವಾಗಲೂ ಮಾಡುತ್ತಿರುವರೋ, (ನಾಲ್ಕು) ವೇದಗಳೂ (ಹದಿನೆಂಟು) ಪುರಾಣಗಳೂ (ಆರು) ಶಾಸ್ತ್ರಗಳೂ ಯಾರ ಕೀರ್ತಿಯನ್ನು " ನೇತಿ ನೇತಿ " (ಎಂದರೆ ಅನಂತ, ಅನಂತ) ಎಂದು ಗಾನಮಾಡುತ್ತಲಿರುವವೋ, ಆ ರಾಮನು ಸರ್ವವ್ಯಾಪಕ ನಾಗಿಯೂ, ಸಕಲ ಭುವನ ಪತಿಯಾಗಿಯೂ, (ಏತರಿಂದ ಬ್ರಹ್ಮಾದಿ ದೇವತೆಗಳೂ ಮೋಹಿತರಾಗಿರುವರೊ ಆ) ಮಾಯೆಗೆ ಸ್ವಾಮಿಯಾಗಿಯೂ, ರಘುಕುಲಶಿರೋ ಮಣಿಯಾಗಿಯೂ ಇರುವನು. ಆತನು ತನ್ನ ಭಕ್ತರಿಗೋಸ್ಕರ ಕೇವಲ ತನ್ನ ಇಚ್ಛೆಯಿಂದಲೇ * ಅವತರಿಸಿರುವನು

(ಪಾರ್ವತಿಯು ರಾಮನನ್ನು ಪರೀಕ್ಷಿಸುವುದು)

ದೋ ॥೭೪॥ ಶಿವನು ಹಲವು ವಿಧದಿಂದ ಹೇಳಿದಾಗ್ಯೂ ಸತಿಯ ಹೃದಯ ದಲ್ಲಿ ಜ್ಞಾನೋದಯವಾಗಲಿಲ್ಲ. ಭಗವಂತನ ಮಾಯೆಯು ಬಲವಾಗಿರುವು ದೆಂದು ತಿಳಿದು ಮಹಾದೇವನು ನಕ್ಕು ಹೀಗೆ ಹೇಳಿದನು.—" ನಿನಗೆ ವಿಶೇಷ ಅನು ಮಾನವುಂಟಾಗಿದ್ದರೆ, ನೀನೇಕೆ ಅಲ್ಲಿಗೆ ಹೋಗಿ ಪರೀಕ್ಷಿಸುವುದಿಲ್ಲ? ನೀನು ಹಿಂದಿರುಗಿ ಬರುವವರೆಗೆ ನಾನು ಈ ಆಲದ ಮರದಡಿಯಲ್ಲಿ ಕುಳಿತಿರುವೆನು. ಅಜ್ಞಾನರೂಪವಾದ ನಿನ್ನ ಭ್ರಮೆಯು ದೂರವಾಗುವಂತೆ ನೀನೇ ಸರಿಯಾಗಿ ಯತ್ನಮಾಡಿ, ಉಪಾಯವನ್ನಾಲೋಚಿಸು."—ಹೀಗೆ ಶಿವನ ಆಜ್ಞೆಯನ್ನು ಪಡೆದ ಸತಿಯು ರಾಮಚಂದ್ರನನ್ನು ಪರೀಕ್ಷಿಸುವುದಕ್ಕೋಸ್ಕರ ಹೋಗುವಾಗ " ಈಗೇನು

---

* ಈ ವಿಚಾರದಲ್ಲಿ ಹೀಗೆ ಹೇಳಿರುವರು:—"ರುದ್ರಂ ಸಮಾಶ್ರಿತಾ ದೇವಾ ರುದ್ರೋ ಬ್ರಹ್ಮಾಣಮಾಶ್ರಿತಃ । ಬ್ರಹ್ಮಾ ಮಮಾಶ್ರಿತೋ ನಿತ್ಯಂ ನಾಽಹಂ ಕಂಚಿದು ಪಾಶ್ರಿತಃ ।।" ಎಂದರೆ ಸರ್ವ ದೇವತೆಗಳೂ ಮಹಾದೇವನಿಗೆ ಆಶ್ರಿತರು. ಮಹಾ ದೇವನು ಬ್ರಹ್ಮನಿಗೆ ಆಶ್ರಿತನು. ಬ್ರಹ್ಮನು ನನಗೆ ಆಶ್ರಿತನು ನಾನು ಯಾರಿಗೂ ಆಶ್ರಿತನಾಗಿಲ್ಲ, ಎಂದು ಭಾವಾರ್ಥ.

ಮಾಡಲಿ?” ಎಂದು ಮನಸ್ಸಿನಲ್ಲಿ ಆಲೋಚಿಸಲಾರಂಭಿಸಿದಳು. ಅತ್ತ ಶಿವನು ತನ್ನ ಮನಸ್ಸಿನಲ್ಲಿ “ದಕ್ಷನ ಪುತ್ರಿಯಾದ ಸತಿಯು ಬುದ್ಧಿವಂತೆಯಲ್ಲ. ನಾನು ವಿವರಿಸಿ ಹೇಳಿದರೂ ಸಂದೇಹವು ದೂರವಾಗದಿರುವುದು ಅವಳ ದುರದೃಷ್ಟ ದಿಂದಲೇ ಎಂದು ಹೇಳಬೇಕು. ಅವಳಿಗೆ ಒಳ್ಳೆಯದಾವುದೆಂಬುದೇ ತಿಳಿಯದು. ಎಲ್ಲವೂ ರಾಮನು ಬರೆದಿಟ್ಟಿರುವಂತೆಯೇ ಆಗುವುದು,” ಎಂದು ಹೇಳಿ ರಾಮ ನಾಮವನ್ನು ಜಪಿಸಲಾರಂಭಿಸಿದನು. ಇತ್ತ ಸತಿಯು ಸುಖಧಾಮನಾದ ರಾಮ ಚಂದ್ರನಿದ್ದೆಡೆಗೆ ಹೋದಳು.

ದೋ ॥ ೭೫ ॥ ಸತಿಯು ಮೇಲಿಂದಮೇಲೆ ಮನಸ್ಸಿನಲ್ಲಿಯೇ ವಿಚಾರ ಮಾಡುತ್ತ, ಸೀತೆಯ ರೂಪವನ್ನು ಧರಿಸಿ, ಮನುಷ್ಯರ ರಾಜನಾಗಿದ್ದ ರಾಮ ಚಂದ್ರನು ಹೋಗುತ್ತಿದ್ದ ಮಾರ್ಗದಲ್ಲಿಯೆ ಮುಂದರಿದು ಹೋದಳು. ಪಾರ್ವತಿಯು ಧರಿಸಿದ್ದ ರೂಪವನ್ನು ಲಕ್ಷ್ಮಣನು ನೋಡಿ, ಮನಸ್ಸಿನಲ್ಲಿಯೆ ಸಂದೇಹಗೊಂಡು ಚಕಿತನಾದನು. ಆತನು ಬಹು ಗಂಭೀರನೂ ಬುದ್ಧಿವಂತನೂ ಆಗಿದ್ದುದರಿಂದ ಯಾವ ಮಾತನ್ನು ಆಡಲಿಲ್ಲ. ಏಕೆಂದರೆ ರಾಮಚಂದ್ರನ ಪ್ರಭಾವವು ಆತನಿಗೆ ಗೊತ್ತಿದ್ದಿತು ಸತೀದೇವಿಯ ಕಪಟವನ್ನು ದೇವತೆಗಳ ಸ್ವಾಮಿಯಾದ ರಾಮ ಚಂದ್ರನು ತಿಳಿದನು ಏಕೆಂದರೆ ಆತನು ಸರ್ವದರ್ಶಿಯು, ಎಲ್ಲರ ಹೃದಯವನ್ನು ಅರಿತಿರತಕ್ಕವನು. ಆ ಸರ್ವಜ್ಞನಾದ ರಾಮಭಗವಾನನ ಸ್ಮರಣೆ ಮಾಡುವುದ ರಿಂದ ಅಜ್ಞಾನವೆಲ್ಲ ನಿರ್ಮೂಲವಾಗುವುದು. ಸ್ತ್ರೀಯರ ಸ್ವಭಾವವೆಂತಹ ದೆಂಬುದನ್ನು ನೋಡಿರಿ! ಸತೀದೇವಿಯು ಸರ್ವಜ್ಞನೆದುರಿಗೂ ತನ್ನ ಕಪಟವನ್ನು ಮುಚ್ಚಿಡಲೆತ್ನಿಸಿದಳು. ರಾಮಚಂದ್ರನು ತನ್ನ ಮಾಯೆಯಬಲದಿಂದ ಹೃದಯ ದಲ್ಲಿ ವಿಚಾರಮಾಡಿ, ನಕ್ಕು, ತನ್ನ ಕೋಮಲವಾಣಿಯಿಂದ ಮಾತನಾಡಿದನು. ಮೊದಲು ರಾಮಚಂದ್ರನು ಕೈಜೋಡಿಸಿ ಸತೀದೇವಿಗೆ ನಮಸ್ಕರಿಸಿ, ಪಿತೃನಾಮ ಸಮೇತವಾಗಿ ತನ್ನ ಹೆಸರನ್ನು ಹೇಳಿದನು, ಎಂದರೆ ನಾನು ದಶರಥರಾಜನ ಪುತ್ರ ನಾದ ರಾಮನು ಎಂದು ಹೇಳಿ, ‘ಮಹಾದೇವನೆಲ್ಲಿ? ನೀನು ವನದಲ್ಲಿ ಏಕಾಂಗಿ ಯಾಗಿ ಏಕೆ ಸಂಚರಿಸುತ್ತಿರುವಿ’ ಎಂದು ಕೇಳಿದನು.

ದೋ ॥ ೭೬ ॥ ರಾಮಚಂದ್ರನ ಕೋಮಲವೂ ಗೂಢವೂ ಆದ ವಚನ ಗಳನ್ನು ಕೇಳಿ, ಮನಸ್ಸಿನಲ್ಲಿ ಬಹು ಸಂಕೋಚವನ್ನು ತಾಳಿ, ಸತೀದೇವಿಯು ಭಯದಿಂದೊಡಗೂಡಿ ಶಿವನ ಬಳಿಗೆ ತೆರಳಿದಳು. “ನಾನು ಶಂಕರನ ಮಾತನ್ನು ಕೇಳಲಿಲ್ಲ ಮತ್ತೆ ನನ್ನ ಮೂರ್ಖತನದಿಂದ ನಾನು ರಾಮಚಂದ್ರನನ್ನು ಗುರು ತಿಸಲಾರದೇ ಹೋದೆನು. ಈಗ ನಾನು ಪತಿಯ ಬಳಿಗೆ ಹೋಗಿ ಅವರಿಗೇನು ಉತ್ತರ ಕೊಡಬೇಕು!” ಈ ಪ್ರಕಾರವಾಗಿ ಆಲೋಚಿಸಿ ಸತೀದೇವಿಯ ಹೃದಯ ದಲ್ಲಿ ಅಸಹನೀಯವಾದ ದಾಹವು ಹುಟ್ಟಿತು. ಸತಿಗೆ ಇದರಿಂದ ದುಃಖವಾಯಿ

ತೆಂದು ರಾಮಚಂದ್ರನು ತಿಳಿದುಕೊಂಡು. ಆನಂತರ ತನ್ನ ಕೆಲವು ಪ್ರಭಾವ ಗಳನ್ನು ಪ್ರಕಟಗೊಳಿಸಿ ತೋರಿಸಿದನು ಸತಿಯು ಮಾರ್ಗದಲ್ಲಿ ಹೋಗುತ್ತಿರು ವಾಗ ರಾಮನು ಸೀತಾಲಕ್ಷ್ಮಣಸಮೇತನಾಗಿ ತನ್ನ ಮುಂದೆ ಹೋಗುತ್ತಿರುವ ಕೌತುಕವನ್ನು ನೋಡಿದಳು. ಮತ್ತೆ ತನ್ನ ಹಿಂಭಾಗದಲ್ಲಿ ಸೀತಾಲಕ್ಷ್ಮಣ ಸಮೇತನಾದ ರಾಮಚಂದ್ರನು ಸುಂದರವಾದ ವೇಷದಲ್ಲಿರುವುದನ್ನು ನೋಡಿ ದಳು. ಆನಂತರ ಎಲ್ಲಿ ನೋಡಿದರಲ್ಲಿ ರಾಮಚಂದ್ರನು ವಿರಾಜಮಾನನಾಗಿದ್ದಾನೆ! ಪ್ರವೀಣರಾದ ಸಿದ್ಧ ಮುನಿಗಳು ಆತನ ಸೇವೆಯನ್ನು ಮಾಡುತ್ತಲಿರುವರು ಅಷ್ಟು ಮಾತ್ರವಲ್ಲದೆ ಮತ್ತೆ ಅನೇಕ ಶಿವ, ಅನೇಕ ಬ್ರಹ್ಮ, ಅನೇಕ ವಿಷ್ಣು— ಇವರುಗಳು ಒಬ್ಬರಿಗಿಂತೊಬ್ಬರು ವಿಶೇಷ ಪ್ರಭಾವದಿಂದ ಮೆರೆಯುತ್ತಿರುವು ದನ್ನೂ ದೇವತೆಗಳು ವಿವಿಧ ವೇಷಗಳನ್ನು ಧರಿಸಿ ರಾಮಚಂದ್ರನ ಚರಣ ಸೇವೆ ಮಾಡುತ್ತಿರುವುದನ್ನೂ ನೋಡಿದಳು

ದೋ ॥ ೭೭ ॥ ಅಷ್ಟು ಮಾತ್ರವಲ್ಲದೆ ಸತಿಯು ನೋಡಿದೊಡೆಲ್ಲೆಲ್ಲಿಯೂ ಅನುಪಮರಾದ ಅನೇಕ ಸತಿ, ಸರಸ್ವತಿ, ಲಕ್ಷ್ಮಿ—ಇವರುಗಳು ವಿರಾಜಮಾನ ರಾಗಿದ್ದಾರೆ!! ಬ್ರಹ್ಮಾದಿ ದೇವತೆಗಳು ವಿವಿಧ ವೇಷಗಳನ್ನು ಧರಿಸಿದ್ದರು. ಅವರ ಸ್ತ್ರೀಯರು ಅವರವರ ಪತಿಯವೇಷಕ್ಕೆ ತಕ್ಕ ವೇಷವನ್ನು ಧರಿಸಿದ್ದರು ಸತಿಯು ಎಲ್ಲಿ ನೋಡಿದೊಡಲ್ಲಿ ಅಸಂಖ್ಯಾತರಾದ ರಾಮಚಂದ್ರರೂ ದೇವತೆಗಳೂ ಅವರವರ ಶಕ್ತಿಸಹಿತರಾಗಿ ಕಾಣಿಸುತ್ತಿದ್ದರು ಮತ್ತೆ ಈ ಜಗತ್ತಿನಲ್ಲಿರುವ ಎಲ್ಲಾ ಚರಾಚರ ಜೀವಿಗಳು ಅಲ್ಲಿ ಅನೇಕಪ್ರಕಾರವಾಗಿ ಕಾಣಿಸುತ್ತಿದ್ದವು ವೇಷವನ್ನುಧರಿಸಿದ ದೇವತೆಗಳು ರಾಮಚಂದ್ರನ ಸೇವೆ ಮಾಡುತ್ತಿರುವುದನ್ನು ಸತಿಯು ನೋಡಿದರೂ ರಾಮಚಂದ್ರನ ರೂಪವು ಮಾತ್ರ ಏಕವಿಧವಾಗಿದ್ದಿತು ರಾಮಚಂದ್ರಮೂರ್ತಿ ಗಳು ಅನೇಕವಾಗಿದ್ದರೂ ಸೀತಾಸಹಿತನಾದ ರಾಮಚಂದ್ರನು ಮಾತ್ರ ಪೂರ್ವ ರೂಪದಲ್ಲಿಯೆ ವಿರಾಜಮಾನನಾಗಿದ್ದನು ಮತ್ತೆ * ಅದೇ ರಾಮ, ಅದೇ ಸೀತೆ, ಮುಂಚಿನ ಲಕ್ಷ್ಮಣನನ್ನು ನೋಡಿ ಸತಿಯು ಭಯಚಕಿತಳಾದಳು ಆಕೆಯ ಹೃದಯವು ನಡುಗಿತು, ಶರೀರದಲ್ಲಿ ಶಕ್ತಿಯೇ ಕುಗ್ಗಿತು ಆಗ ಆಕೆಯು ತನ್ನ ಕಣ್ಣುಗಳನ್ನು ಮುಚ್ಚಿಕೊಂಡು ಸ್ವಲ್ಪಹೊತ್ತು ಮಾರ್ಗದಲ್ಲಿಯೆ ಕುಳಿತುಬಿಟ್ಟಳು.

* ಶ್ರೀ ಗೋಸ್ವಾಮಿ ತುಳಸೀದಾಸರು 'ರಘುನಾಥನು ಏಕರೂಪನಾಗಿದ್ದನೆಂದು ಹೇಳಿದರು. ಮತ್ತೆ, ಜಾನಕೀಸಹಿತನಾದ ರಾಮ, ಲಕ್ಷ್ಮಣ ಸಹಿತನಾದ ರಾಮ' ಎಂದು ಹೇಳಿದುದರ ಆಶಯವೇನೆಂದರೆ,—ವೇದಗಳಲ್ಲಿ ಮೂರು ಮತಗಳಿವೆ. ಅವು ಗಳಾವುವೆಂದರೆ—ಅದ್ವೈತ—ದ್ವೈತ—ವಿಶಿಷ್ಟಾದ್ವೈತಗಳು. ಈ ಮೂರನ್ನೂ ಮೊದ ಲನೆಯ ರಾಮನು ನಿತ್ಯನೆಂದೂ, ಆ ಮೇಲೆ ಸೀತಾರೂಪಿ ಮಾಯಾಯುಕ್ತನೆಂದು, ಆನಂತರ ಲಕ್ಷ್ಮಣರೂಪಿ ಜೀವಯುಕ್ತನೆಂದೂ ರಾಮಾಯಣಕ್ಕೆ ಅನುಸಾರವಾಗಿ ವ್ಯಕ್ತಪಡಿಸಿರುವರು.

ಅನಂತರ ಕಣ್ತೆರದು ನೋಡಿದಾಗ ದಕ್ಷಕುಮಾರಿಗೆ ಅಲ್ಲಿ ಮುಂಚೆ ಕಾಣಿಸಿದ ವಸ್ತುಗಳಾವವೂ ಕಾಣಿಸಲಿಲ್ಲ. ಆಗ ಸತಿಯು ರಾಮಚಂದ್ರನ ಚರಣಗಳಿಗೆ ಶಿರಬಾಗಿ ಪುನಃಪುನಃ ನಮಿಸುತ್ತಾ ಮಹಾದೇವನ ಬಳಿಗೆ ತೆರಳಿದಳು.

ದೋ ॥ ೭೮ ॥ ಶಿವನಬಳಿಗೆ ಹೋದಕೂಡಲೇ ಆತನು ನಗುತ್ತಾ ಸತಿಯ ಯೋಗಕ್ಷೇಮವನ್ನು ವಿಚಾರಿಸಿ, "ನೀನು ರಾಮಚಂದ್ರನನ್ನು ಹೇಗೆ ಪರೀಕ್ಷಿಸಿದೆ? ಎಲ್ಲವನ್ನೂ ಸತ್ಯವಾಗಿ ಹೇಳು" ಎಂದು ಕೇಳಿದನು ಸತಿಯು ಶ್ರೀರಾಮ ಚಂದ್ರನ ಪ್ರಭಾವವನ್ನು ತಿಳಿದು ಭಯವಶಳಾಗಿ ಮಹಾದೇವನೆದುರಿಗೆ ತಾನು ಮಾಡಿದುದನ್ನು ಹೇಳದೆ, "ಹೇ ಸ್ವಾಮೀ, ನಾನು ಯಾವ ಪರೀಕ್ಷೆಯನ್ನು ಮಾಡಲಿಲ್ಲ. ನೀವು ಮಾಡಿದ ಹಾಗೆಯೇ ನಾನೂ ಪ್ರಣಾಮಮಾಡಿದೆನು. ನಿಮ್ಮ ಮಾತೆಂದಿಗೂ ಸಟೆಯಾಗದು. ಇದು ನನ್ನ ಮನಸ್ಸಿಗೆ ಗೊತ್ತಾಗಿದೆ" ಎಂದಳು. ಆಗ ಶಂಕರನು ಧ್ಯಾನಿಸಿ ನೋಡಲು ಸತಿಯು ಮಾಡಿದ್ದ ಕಾರ್ಯ ವಿಚಾರಗಳು ಗೋಚರವಾದವು. ಆಗ ಆತನು ಯಾರ ಪ್ರೇರಣೆಯಿಂದ ಸತಿಯು ಸುಳ್ಳನ್ನು ಹೇಳಿದಳೋ ಆ ರಾಮಚಂದ್ರನ ಮಾಯೆಗೆ ಪ್ರಣಾಮ ಮಾಡಿದನು. ಜ್ಞಾನಿಯಾದ ಶಂಕರನು—ಭಗವಂತನ ಇಚ್ಛೆಯೂ ಭಾವೀ ವಿಚಾರವೂ ಬಲಿಷ್ಟ ವಾಗಿದೆ, ಎಂದರೆ ಭಗವಂತನು ಇಚ್ಛಿಸಿದಂತೆ ಎಲ್ಲವೂ ಆಗುವದು. ಮತ್ತೆ ಆಗ ಬೇಕಾದ್ದೆಲ್ಲಾ ಆಗಲೇಬೇಕು ಎಂದು ತಿಳಿದುಕೊಂಡನು. ಹೀಗೆ ವಿಚಾರಮಾಡಿ ಸತಿಯು ಸೀತೆಯ ರೂಪವನ್ನು ಧರಿಸಿದ್ದುದಕ್ಕಾಗಿ ವಿಶೇಷ ವಿಷಾದಪಟ್ಟನು. ಆಮೇಲೆ ತನ್ನ ಮನಸ್ಸಿನಲ್ಲಿಯೇ ಆಲೋಚಿಸಿದ್ದೇನೆಂದರೆ—ಈಗ ನಾನು ಸತಿ ಯನ್ನು ಪ್ರೀತಿಸಿದ್ದಾದರೆ ಭಕ್ತಿಮಾರ್ಗವು ನಾಶವಾಗಿ ಬಹಳ ಅನರ್ಥವಾಗುವುದು.

ದೋ ॥ ೭೯ ॥ ಸತಿಯು ಬಹು ಪವಿತ್ರಳು. ಆದುದರಿಂದ ಅವಳನ್ನು ಬಿಡಲಾಗುವದಿಲ್ಲ. ಆದರೆ ಅವಳನ್ನು ಈಗ ಪ್ರೀತಿಸುವುದೂ ದೊಡ್ಡ ಪಾಪವಾಗು ತ್ತದೆ—ಹೀಗೆ ಚಿಂತಿಸುತ್ತಾ ಮಹಾದೇವನು ಪ್ರಕಟವಾಗಿ ಯಾಹ ಮಾತನ್ನಾಡ ದಿದ್ದರೂ ಆತನ ಹೃದಯವು ಮಾತ್ರ ದುಃಖಪೂರ್ಣವಾಗಿತ್ತು.

(ಶಿವನು ಸತಿಯನ್ನು ತ್ಯಜಿಸುವುದು)

ಆಗ ಶಿವನು ಮನಸ್ಸಿನಲ್ಲಿಯೇ ರಾಮಚಂದ್ರನ ಚರಣಗಳಿಗೆ ನಮಿಸಿ ಅವ ನನ್ನು ಸ್ಮರಿಸಿದ ಕೂಡಲೇ, ಆತನಲ್ಲಿ "ಈ ಶರೀರದಿಂದ ಸತಿಯೊಂದಿಗೆ ಇನ್ನು ನನ್ನ ಸಂಬಂಧವಿರಲಾಗದು" ಎಂಬ ಭಾವನೆಯು ಹುಟ್ಟಿತು. ಇದನ್ನೇ ಶಿವನು ಸಂಕಲ್ಪವಾಗಿ ಹಿಡಿದು ರಾಮಚಂದ್ರನ ಸ್ಮರಣೆಮಾಡುತ್ತಾ ತನ್ನ ಸ್ಥಾನಕ್ಕೆ ತೆರಳಿದನು. ಆ ಸಮಯದಲ್ಲಿ "ಹೇ ಶಂಕರಾ, ನಿನಗೆ ಜಯವಾಗಲಿ. ನಿನ್ನ ಭಕ್ತಿಯು ಬಹು ಪಕ್ವವಾಗಿದೆ ನಿನ್ನ ವಿನಾ ಮತ್ತಾರೂ ಇಂತಹ ಕಠಿಣ ಪ್ರತಿಜ್ಞೆಯನ್ನು ಮಾಡಲಾರರು. ನೀನು ರಾಮಭಕ್ತನೂ ಸಮರ್ಥನೂ ಆಗಿ

ರುವಿ" ಎಂದು ಆಕಾಶವಾಣಿಯಾಯಿತು. ಆ ಆಕಾಶವಾಣಿಯನ್ನು ಕೇಳಿ ಸತಿಯ ಮನಸ್ಸಿನಲ್ಲಿ ಚಿಂತೆಹುಟ್ಟಿ ಆಕೆಯು ಬಹು ಸಂಕೋಚದಿಂದ "ಶಿವನನ್ನು ಕೇಳಿದಳು.—ಹೇ ಕೃಪಾಳು, ನೀವು ಎಂತಹ ಪ್ರತಿಜ್ಞೆಯನ್ನು ಮಾಡಿದಿರಿ? ಹೇ ಪ್ರಭೋ, ನೀವು ಸತ್ಯಧಾಮರು, ದೀನದಯಾಳು" ಹೀಗೆಂದು ಸತಿಯು ಅನೇಕ ವಿಧವಾಗಿ ಪ್ರಾರ್ಥಿಸಿದರೂ ತ್ರಿಪುರಾರಿಯು ಏನನ್ನೂ ಹೇಳಲಿಲ್ಲ.

ದೋ॥೮೦॥ ಆಗ ಸತಿಯು "ಸರ್ವಜ್ಞನಾದ ಶಿವನಿಗೆ ಎಲ್ಲಾ ಗೊತ್ತಾಯಿತು, ನಾನು ಆತನೊಂದಿಗೆ ಕಪಟಾಚರಣೆಯನ್ನು ಮಾಡಿದೆನು. ಸ್ತ್ರೀಯರು ಸ್ವಾಭಾವಿಕವಾಗಿ ಮೂರ್ಖರೂ ಅಜ್ಞಾನಿಗಳೂ ಆಗಿರುವರು.

ದೋ॥೮೧॥ ಹಾಲಿನಲ್ಲಿ ಸೇರಿದ ನೀರು * ಹಾಲಿನ ರೂಪದಲ್ಲಿಯೇ ವಿಕ್ರಯಿಸಲ್ಪಡುವುದು. ಈ ಸಂಮಿಲನವು ನಿಜವಾದ ಪ್ರೇಮದ ಚಿನ್ಹೆಯಾಗಿದೆ. ಆದರೆ ಕಪಟರೂಪಿಯಾದ ಹುಳಿಯು ಅದರಲ್ಲಿ ಬಿದ್ದೊಡನೆಯೇ ಅದು ಒಡೆದುಹೋಗುವದು. ತಾನು ಮಾಡಿದ ಅಪರಾಧವನ್ನು ಸ್ಮರಿಸಿ ಸತಿಯ ಮನಸ್ಸಿನಲ್ಲಿ ಚಿಂತೆಯು ಅಧಿಕವಾಯಿತು. ಆ ಚಿಂತೆಯನ್ನು ವರ್ಣಿಸುವುದಸಾಧ್ಯವು. ಶಿವನು ಬಹು ಗಂಭೀರನು, ಕೃಪಾಸಾಗರನು. ಆತನು ನನ್ನ ಅಪರಾಧವನ್ನು ಪ್ರಕಟವಾಗಿ ಹೇಳಲಿಲ್ಲ ಎಂದಾಲೋಚಿಸಿ ಸತಿಯು ಶಂಕರನ ಮುಖವನ್ನು ನೋಡಿ ಸ್ವಾಮಿಯು ನನ್ನನ್ನು ತ್ಯಜಿಸಿದನು ಎಂದು ತಿಳಿದು ವಿಶೇಷ ವ್ಯಾಕುಲಳಾದಳು. ತಾನು ಮಾಡಿದ ಅಪರಾಧವನ್ನರಿತು ಮಾತನಾಡಲಾಗದಿದ್ದರೂ ಕುಂಬಾರನ ಆವೆಯಂತೆ ಆಕೆಯ ಹೃದಯವು ಅಧಿಕ ತಪ್ತವಾಯಿತು. ಆಲೋಚನೆಯಲ್ಲಿ ಮಗ್ನಳಾದ ಸತಿಯನ್ನು ನೋಡಿ ಶಂಕರನು ಸುಂದರವೂ ಸುಖದಾಯಕವೂ ಐತಿಹಾಸಿಕವೂ ಆದ ಹಲವು ಕಥೆಗಳನ್ನು ಹೇಳುತ್ತ ಕೈಲಾಸ ಶಿಖರವನ್ನು ಸೇರಿದನು. ಅಲ್ಲಿ ಮತ್ತೆ ತನ್ನ ಪ್ರತಿಜ್ಞೆಯನ್ನು ಸ್ಮರಿಸಿ ಶಿವನು ಒಂದು ಆಲದ ಮರದ ಕೆಳಗೆ ಪದ್ಮಾಸನವನ್ನು ಹಾಕಿ ಕುಳಿತು ಅಖಂಡವೂ ಅಪಾರವೂ ಆದ ಸಮಾಧಿಯನ್ನು ಹೊಂದಿ ತನ್ನ ನಿಜವಾದ ರೂಪವನ್ನು ಧರಿಸಿದನು.

ದೋ॥೮೨॥ ಸತಿಯು ಕೈಲಾಸದಲ್ಲಿ ವಾಸಿಸುತ್ತಿದ್ದರೂ ಆಕೆಯ ಮನಸ್ಸು ದುಃಖ ಪೂರ್ಣವಾಗಿತ್ತು ಅದರ ಮರ್ಮವಾರಿಗೂ ಗೊತ್ತಾಗಲಿಲ್ಲ. ಆಕೆಗೆ ಒಂದೊಂದು ದಿನವೂ ಒಂದೊಂದು ಯುಗದಂತೆ ಭಾಸವಾಗುತ್ತಿತ್ತು. ಸತಿಯ ಮನಸ್ಸಿನಲ್ಲಿ ಪ್ರತಿನಿತ್ಯವೂ ದೊಡ್ಡ ದೊಡ್ಡ ಹೊಸ ಆಲೋಚನೆಗಳು ಬರಲಾ

---

* "ಕ್ಷೀರೇಣಾತ್ಮಗತೋದಕಾಯ ಹಿ ಗುಣಾ ದತ್ತಾಃ ಪುರಾ ತೇಽಖಿಲಾಃ। ಕ್ಷೀರೇ ತಾಪಮವೇಕ್ಷ್ಯ ತೇನ ಪಯಸಾಹ್ಯಾತ್ಮಾ ಕೃಶಾನೌ ಹುತಃ। ಗನ್ತುಂ ಪಾವಕಮುನ್ಮನಾಸ್ತದಭವದ್ದೃಷ್ಟ್ವಾತು ಮಿತ್ರಾಪದಂ ಯುಕ್ತಂ ತೇನ ಜಲೇನ ಶಾಮ್ಯತಿ ಸತಾಂ ಮೈತ್ರೀ ಪುನಸ್ತ್ವೀದೃಶೀ ॥" ಎಂಬುದರ ಛಾಯೆಯು ಇಲ್ಲಿರುವುದು.

K. 576

ರಂಭಿಸಿದವು. ಆಗ "ನಾನು ಈ ಶೋಕಸಾಗರದಿಂದ ಎಂದು ಪಾರಾಗುವೆನು? ನಾನು ರಾಮಚಂದ್ರನಿಗೆ ಮಾಡಿದ ಅಪಮಾನ ಮತ್ತು ಪತಿಯ ವಚನವನ್ನು ಅಸತ್ಯವಾಗಿ ಭಾವಿಸಿದ ಪಾಪಗಳಿಂದ ಎಂದು ಮುಕ್ತಳಾಗುವೆನು? ನನ್ನ ಪಾಪಕ್ಕೆ ತಕ್ಕ ಫಲವನ್ನು ವಿಧಾತನು ಕೊಟ್ಟಿದ್ದು ಉಚಿತವಾಗಿದೆ. ಹೇ ವಿಧಾತಾ, ನನ್ನನ್ನು ಶಂಕರನಿಂದ ಅಗಲಿಸಿ ಜೀವದಿಂದಿಟ್ಟಿರುವುದು ನಿನಗೆ ಉಚಿತವಲ್ಲ" ಎಂದು ಸತಿಯು ಹೇಳಿಕೊಳ್ಳಲಾರಂಭಿಸಿದಳು. ಆ ಸಮಯದಲ್ಲಿ ಆಕೆಯ ಮನಸ್ಸಿನಲ್ಲುಂಟಾದ ಪಶ್ಚಾತ್ತಾಪವನ್ನು ಹೇಳಿಕೊಳ್ಳುವುದು ಅಸಾಧ್ಯವಾಗಿತ್ತು. ಆದರೆ ಚತುರಳಾದ ಸತಿಯು ಮನಸ್ಸಿನಲ್ಲಿಯೇ ರಾಮಚಂದ್ರನ ಸ್ಮರಣೆಯನ್ನು ಮಾಡಿ, "ಹೇ ಪ್ರಭೋ ನೀನು ದೀನದಯಾಳುವೆಂದೆನಿಸಿಕೊಂಡಿರುವಿ ನೀನು ದುಃಖನಾಶಕನೆಂದು ವೇದಗಳು ನಿನ್ನ ಯಶಸ್ಸನ್ನು ಗಾನಮಾಡುತ್ತಲಿವೆ. ಇದು ನಿಜವಾಗಿದ್ದರೆ, ನಾನು ಕೈಜೋಡಿಸಿ ಪ್ರಾರ್ಥಿಸುವೆನು ಕೇಳು, ನನ್ನ ಈ ಶರೀರವನ್ನು ಶೀಘ್ರವಾಗಿ ನಾಶಪಡಿಸು ಶಿವನ ಚರಣಗಳಲ್ಲಿ ನನ್ನ ಸ್ನೇಹವು ನಿಜವಾಗಿದ್ದರ ಮತ್ತು ನನ್ನ ನಡೆನುಡಿ ಕಾರ್ಯಗಳಿಂದ ನನ್ನ ವ್ರತಿವ್ರತ್ಯವು ನಿಜವೆಂದು ವ್ಯಕ್ತವಾಗುತ್ತಿದ್ದರೆ,–

ದೋ॥೫೩॥ ಹೇ ಅಂತರ್ಯಾಮಿಯಾದ ಭಗವಂತನೇ, ನನ್ನ ಪ್ರಾರ್ಥನೆಯನ್ನು ಕೇಳಿ, ಶ್ರಮವಿಲ್ಲದೆ ನನಗ ಮರಣವುಂಟಾಗುವಂತೆಯೂ ಈ ಅಸಹನೀಯವಾದ ವಿಪತ್ತಿನಿಂದ ದೂರಾಗುವಂತೆಯೂ ಉಪಾಯವನ್ನು ಸೂಚಿಸಿ ಅನುಗ್ರಹಿಸು ಎಂದು ಪ್ರಾರ್ಥಿಸಿದಳು ಈ ರೀತಿಯಾಗಿ ದಕ್ಷರಾಜನ ಮಗಳಾದ ಸತೀದೇವಿಯು ಬಹು ದುಃಖಿತಳಾಗಿದ್ದಳು. ಆಕೆಯ ಆ ದಾರುಣವಾದ ದುಃಖವನ್ನು ವರ್ಣಿಸುವುದಸಾಧ್ಯವು ಇತ್ತ ಎಂಬತ್ತೇಳುಸಾವಿರ ವರ್ಷಗಳು ಕಳೆದಮೇಲೆ ಅವಿನಾಶಿಯಾದ ಶಂಕರನು ತನ್ನ ಸಮಾಧಿಯಿಂದ ಎಚ್ಚತ್ತು ರಾಮನಾಮವನ್ನು ಜಪಿಸಲಾರಂಭಿಸಿದನು. ಆಗ ಜಗತ್ಪತಿಯು ಜಾಗ್ರತನಾದನೆಂದು ಸತಿಯು ತಿಳಿದು ಆತನ ಬಳಿಗೆ ಹೋಗಿ ಚರಣಗಳಿಗೆರಗಿದಳು ಶಿವನು ಆಕೆಗೆ ತನ್ನೆದುರಿನಲ್ಲಿ ಆಸನವನ್ನು ಕೊಟ್ಟು ಕುಳ್ಳಿರಿಸಿದನು. ಮತ್ತೆ ಭಗವಂತನ ಸುಂದರವಾದ ಕಥೆಗಳನ್ನು ಹೇಳಲಾರಂಭಿಸಿದನು. ಆ ಸಮಯದಲ್ಲಿ (ಸತೀದೇವಿಯ ಪಿತನೂ ಬ್ರಹ್ಮನ ಪುತ್ರನೂ ಆದ) ದಕ್ಷರಾಜನು ಪ್ರಜಾಪತಿಯಾದನು. ಏಕೆಂದರೆ ಆ ಕಾರ್ಯಕ್ಕೆ ಅವನೇ ಯೋಗ್ಯನೆಂದು ತಿಳಿದು ಬ್ರಹ್ಮನು ದಕ್ಷನನ್ನು ಪ್ರಜಾಪತಿನಾಯಕನಾಗಿರುವಂತೆ ನಿಯಮಿಸಿದನು. ತನಗೆ ಇಷ್ಟು ದೊಡ್ಡ ಅಧಿಕಾರ ಪ್ರಾಪ್ತಿಯಾಯಿತೆಂದು ದಕ್ಷನ ಮನಸ್ಸಿನಲ್ಲಿ ಅಹಂಕಾರವು ಹೆಚ್ಚಾಯಿತು ಏಕೆಂದರೆ ಈ ಜಗತ್ತಿನಲ್ಲಿ ಪ್ರಭುತ್ವವನ್ನು ಹೊಂದಿ ಮದಾಂಧರಾಗದವರಾರು?

ದೋ ॥ ೮೪ ॥ ದಕ್ಷನು ಅನೇಕ ಮುನಿಗಳನ್ನು ಕರೆಯಿಸಿ ದೊಡ್ಡ ಯಜ್ಞವನ್ನು ಮಾಡಲಾರಂಭಿಸಿದನು. ಆ ಯಜ್ಞದಲ್ಲಿ ಹವಿರ್ಭಾಗಗಳನ್ನು ಹೊಂದಲು ಅಧಿಕಾರವುಳ್ಳ ಎಲ್ಲಾ ದೇವತೆಗಳಿಗೂ ಆಮಂತ್ರಣವನ್ನು ಕಳುಹಿಸಿದನು ದಕ್ಷನ ಆಮಂತ್ರಣವು ತಲ್ಪಿದಕೂಡಲೇ ಕಿನ್ನರ, ನಾಗ, ಸಿದ್ಧ, ಗಂಧರ್ವ ಮತ್ತು ಇತರ ಎಲ್ಲಾ ದೇವತೆಗಳೂ ತಮ್ಮ ತಮ್ಮ ಸ್ತ್ರೀಸಹಿತರಾಗಿ ಹೊರಟರು. ವಿಷ್ಣು, ಬ್ರಹ್ಮ, ಶಿವ ಇವರು ಮೂವರನ್ನು ಬಿಟ್ಟು ಉಳಿದ ಎಲ್ಲಾ ದೇವತೆಗಳು ತಂತಮ್ಮ ವಿಮಾನಗಳಲ್ಲಿ ಹೊರಟರು. ಸತಿಯು ಆಕಾಶದಲ್ಲಿ ಆ ವಿಮಾನಗಳನ್ನು ನೋಡಿದಳು. ಅನೇಕ ವಿಧವಾದ ವಿಮಾನಗಳು ಶೋಭಾಯಮಾನವಾಗಿ ಹೋಗುತ್ತಲಿವೆ. ದೇವತೆಗಳ ಸ್ತ್ರೀಯರು ವಿಮಾನದಲ್ಲಿ ಕುಳಿತು ಮನೋಹರವೂ ಮಧುರವೂ ಆದ ಗೀತೆಯನ್ನು ಹಾಡುತ್ತಿದ್ದಾರೆ. ಅದನ್ನು ಕೇಳಿ ಮುನಿಗಳ ಧ್ಯಾನವು ಕೂಡ ಭಂಗವಾಗುವಂತಿದೆ. ಆಗ ಸತಿಯು (ಆ ದೇವತಾಸಮೂಹ)ಗಮನದ ಕಾರಣವನ್ನು ಕೇಳಲು ಶಿವನು ಅದನ್ನು ಆಕೆಗೆ ತಿಳಿಸಿದನು. ತಂದೆಯು ಯಜ್ಞಮಾಡುವನೆಂಬ ಸುದ್ದಿಯನ್ನು ಕೇಳಿ ಸತಿದೇವಿಗೆ ಹರ್ಷವುಂಟಾಯಿತು, ಮತ್ತೆ "ಈಗ ಶಿವನು ನನಗೆ ಅಪ್ಪಣೆಯನ್ನಿತ್ತರೆ ನಾನೂ ಇದೇ ವಾಹನದಲ್ಲಿ ಕುಳಿತು ಕೆಲವು ದಿನಗಳವರೆಗೆ ತಂದೆಯಮನೆಗೆ ಹೋಗಿ ಇರುವೆನು" ಎಂದುಕೊಂಡಳು ಪತಿಯನ್ನು ಬಿಟ್ಟಿರಲು ಸತಿಯ ಹೃದಯದಲ್ಲಿ ಬಹಳ ದುಃಖವಾಗುತ್ತಿತ್ತು. ಆದರೆ ತನ್ನ ಅಪರಾಧವನ್ನರಿತು ಹಚ್ಚು ಮಾತನಾಡಲಾಗದೆ ಭಯ, ಸಂಕೋಚ ಮತ್ತು ಪ್ರೇಮ ರಸಗಳಿಂದ ಪೂರ್ಣವಾದ ಮನೋಹರ ವಾಣಿಯಲ್ಲಿ ಹೀಗೆ ಕೇಳಿದಳು.

ದೋ ॥ ೮೫ ॥ "ಹೇ ಪ್ರಭೋ! ಕೃಪಾನಾಥಾ, ನನ್ನ ತಂದೆಯ ಮನೆಯಲ್ಲಿ ದೊಡ್ಡ ಉತ್ಸವವಾಗುತ್ತಿದೆ ತಾವು ಅಪ್ಪಣೆಯನ್ನಿತ್ತರೆ ನಾನು ಆದರಪೂರ್ವಕವಾಗಿ ಅದನ್ನು ನೋಡಲು ಹೋಗುವೆನು" ಅದಕ್ಕೆ ಶಿವನು, "ನೀನು ಹೇಳಿದ್ದು ನಿಜ. ಅದು ನನ್ನ ಮನಸ್ಸಿಗೂ ಭಾಸವಾಯಿತು. ಆದರೆ ನಮಗೆ ಆಮಂತ್ರಣವು ಬಂದಿಲ್ಲ. ದಕ್ಷನು ತನ್ನ ಎಲ್ಲಾ ಕುವರಿಯರನ್ನೂ ಕರೆಯಿಸಿರುವನು. ಆದರೆ ನಮ್ಮ ಮೇಲಣ ವೈರದಿಂದ ನಿನ್ನನ್ನು ಬಿಟ್ಟಿರುವನು ಹಿಂದೆ ಒಂದಾನೊಂದು ಸಮಯದಲ್ಲಿ ಬ್ರಹ್ಮನ ಸಭೆಯಲ್ಲಿ * ನಮ್ಮಿಂದ ಅವನಿಗೆ ಅಪ

---

* ಶಿವನು ಹೇಳಿದ್ದೇನೆಂದರೆ:—"ಹೇ ಪ್ರಿಯೆ! ಒಂದು ದಿನ ನಾನು ವಿಷ್ಣು ಆದಿಯಾಗಿ ಇತರ ದೇವತೆಗಳೊಂದಿಗೆ ಬ್ರಹ್ಮನ ಸಭೆಯಲ್ಲಿ ಕುಳಿತಿದ್ದೆನು ಆಗ ಅಲ್ಲಿಗೆ ನಿನ್ನ ತಂದೆಯಾದ ದಕ್ಷನು ಬಂದನು. ಅವನನ್ನು ನೋಡಿದಕೂಡಲೇ ಎಲ್ಲ ದೇವತೆಗಳೂ ಎದ್ದುನಿಂತರು. ಆದರೆ ನಾನು ಮತ್ತು ವಿಷ್ಣುವು ಎದ್ದು ನಿಲ್ಲಲಿಲ್ಲ. ಅದಕ್ಕಾಗಿ ಕೋಪಬಂದು "ನಿನಗೆ ಯಜ್ಞದಲ್ಲಿ ಹವಿರ್ಭಾಗವು ಸಿಕ್ಕದಿರಲಿ!" ಎಂದು ನನ್ನನ್ನು ಶಪಿಸಿದನು. ಅವತ್ತಿನಿಂದ ನನ್ನನ್ನು ಈರ್ಷೆಯಿಂದ ದ್ವೇಷಿಸುತ್ತ, ಅವಮಾನವನ್ನುಂಟುಮಾಡುತ್ತಿರುವನು. ಆದುದರಿಂದಲೆ ಈ ಯಜ್ಞಕ್ಕೆ ಅವನು ನಮ್ಮನ್ನು ಕರೆಯಲಿಲ್ಲ.

ಮಾನವಾಯಿತು. ಅಂದಿನಿಂದ ಇಂದಿನವರೆಗೆ ಅವನು ನಮಗೆ ಅವಮಾನ ವನ್ನುಂಟುಮಾಡುತ್ತಿರುವನು. ಹೇ ಭವಾನೀ, ಆಮಂತ್ರಣವಿಲ್ಲದೆ ನೀನು ಹೋದರೆ ಅದರಲ್ಲಿ ಶೀಲ, ಸ್ನೇಹ, ಮರ್ಯಾದೆ ಯಾವುದೂ ಉಳಿಯುವುದಿಲ್ಲ. ಮಿತ್ರರು, ಪತಿ, ಪಿತ, ಮತ್ತು ಗುರುಗಳ ಎಡೆಗೆ ಆಮಂತ್ರಣವಿಲ್ಲದೆ ಹೋಗ ಬಹುದೆಂಬದು ನಿಜ. ಆದರೆ ಎಲ್ಲಿ ವಿರೋಧವಿರುವುದೋ ಅಂತಹರ ಮನೆಗೆ ಹೋಗುವುದರಿಂದ ಒಳಿತಾಗುವುದಿಲ್ಲ—ಇತ್ಯಾದಿ ಹಲವು ಮಾತುಗಳನ್ನು ಹೇಳಿ ಶಿವನು ಹಲವು ವಿಧದಿಂದ ಸತಿಯನ್ನು ಸಮಾಧಾನ ಪಡಿಸಿದನು. ಆದರೆ ಹಣೆಯ ಬರಹದಲ್ಲಿ ಇದ್ದುದು ಆಗಿಯೇ ತೀರಬೇಕು. ಸತಿದೇವಿಯು ಸಮಾ ಧಾನಪಡಲಿಲ್ಲ. ಆಗ ಮತ್ತೆ ಶಿವನು “ನೀನು ಆಮಂತ್ರಣವಿಲ್ಲದೆ ಹೋಗು ವುದು ನನ್ನ ಮನಸ್ಸಿಗೆ ಸರಿದೋರುವುದಿಲ್ಲ” ಎಂದನು.

ದೋ ॥ ೬೬ ॥ ಶಿವನು ಅನೇಕ ವಿಧವಾದ ಉಪಾಯಗಳನ್ನು ಮಾಡಿ ನೋಡಿದರೂ ದಕ್ಷಸುತೆಯು ಕೇಳಲಿಲ್ಲ. ಆಗ ಆತನು ತನ್ನ ಮುಖ್ಯ ಸೇವಕ ರೊಟ್ಟಿಗೆ ಆಕೆಯನ್ನು ದಕ್ಷನ ಬಳಿಗೆ ಕಳುಹಿಸಿಕೊಟ್ಟನು. ಸತೀದೇವಿಯು ತಂದೆಯ ಮನೆಗೆ ಹೋದಳು. ಆದರೆ ಅಲ್ಲಿ ಆಕೆಯ ಪಿತನಾದ ದಕ್ಷನ ಭಯ ದಿಂದ ಯಾರೂ ಆಕೆಯನ್ನು ಸನ್ಮಾನಿಸಲಿಲ್ಲ. ಕೇವಲ ಆಕೆಯ ತಾಯಿಯು ಮಾತ್ರ ಆದರಿಸಿದಳು. ಅವಳ ಸಹೋದರಿಯರು (ಆವಳನ್ನು ಆದರಿಸುವುದಕ್ಕೆ ಬದು ಲಾಗಿ) ಮುಖ ಗಂಟಿಕ್ಕಿಕೊಂಡರು. ದಕ್ಷನು ಆಕೆಯ ಯೋಗಕ್ಷೇಮವನ್ನು ವಿಚಾರಿಸಲೇ ಇಲ್ಲ. ಯೋಗಕ್ಷೇಮವನ್ನು ಕೇಳುವುದಕ್ಕೆ ಬದುಲಾಗಿ ಅವಳನ್ನು ನೋಡಿದಕೂಡಲೇ ಅವನ ಶರೀರವೆಲ್ಲಾ ಬೆಂಕಿಯಂತೆ ಉರಿಯಲಾರಂಭಿಸಿತು. ಸತಿಯು ಯಜ್ಞಶಾಲೆಗೆ ಹೋಗಿ ನೋಡಲು ಅಲ್ಲಿ ಶಿವನ ಹವಿರ್ಭಾಗವೇ ಎಲ್ಲಿಯೂ ಕಂಡುಬರಲಿಲ್ಲ. ಆಗ ಶಂಕರನು ಹೇಳಿದಮಾತು ಸತಿಯ ಧ್ಯಾನಕ್ಕೆ ಬಂದಿತು. ತನ್ನ ಸ್ವಾಮಿಗುಂಟಾದ ಅಪಮಾನವನ್ನು ನೋಡಿ ಸತಿಯ ಹೃದಯ ದಲ್ಲಿ ಸಂತಾಪವುಂಟಾಯಿತು. ಆಗ ಉಂಟಾದ ದುಃಖವು ಆಕೆಯ ಮೊದಲಿನ ದುಃಖ ಎಂದರೆ ಪತಿಯ ಪರಿತ್ಯಾಗದಿಂದ ಉಂಟಾದುದಕ್ಕಿಂತಲೂ ಹೆಚ್ಚಾಗಿದ್ದಿತು. ಈ ಜಗತ್ತಿನಲ್ಲಿ ಅನೇಕ ಪ್ರಕಾರವಾದ ದಾರುಣ ದುಃಖಗಳಿರುವವು. ಆದಾಗ್ಯೂ ಸ್ವಜಾತಿಯ ಅವಮಾನವೆಂಬುದು ಎಲ್ಲವನ್ನೂ ಮೀರಿದ ದುಃಖವು. ಇದನ್ನರಿತು ಸತಿಗೆ ಕೋಪಬಂದಿತು. ಆದರೆ ಅವಳ ತಾಯಿಯು ಅವಳನ್ನು ಹಲವು ವಿಧವಾಗಿ ಸಮಾಧಾನಪಡಿಸಲೆತ್ನಿಸಿದಳು.

ದೋ ॥ ೬೭ ॥ ಶಿವನಿಗುಂಟಾದ ಅಪಮಾನವನ್ನು ಸಹಿಸಲಾಗದ ಸತೀ ದೇವಿಗೆ ಯಾರ ಸಮಾಧಾನವಾಕ್ಯಗಳಿಂದಲೂ ತೃಪ್ತಿಯುಂಟಾಗಲಿಲ್ಲ. ಆಗ ಇಡೀ ಸಭೆಯು ನಡುಗುವಂತೆ ಕ್ರೋಧದಿಂದ ಸತೀದೇವಿಯು ಹೀಗೆ ಹೇಳಿದಳು— ಯಜ್ಞಸಭೆಯಲ್ಲಿ ಕುಳಿತಿರುವ ಮುನಿಜನರೇ, ಕೇಳಿರಿ. ಯಾವನು ಶಿವನ

ನಿಂದೆಯನ್ನು ಮಾಡುವನೋ ಅಥವಾ ಹೇಳುವನೋ ಅಂತಹನಿಗೆ ಅದರ ಫಲವು ಶೀಘ್ರದಲ್ಲಿಯೇ ಪ್ರಾಪ್ತಿಯಾಗುವುದು. ಮತ್ತೆ ನನ್ನ ಪಿತನಾದ ದಕ್ಷನು ಕೂಡಾ ಆ ಮೇಲೆ ವಿಶೇಷ ಪಶ್ಚಾತ್ತಾಪಪಡಬೇಕಾಗುವುದು. ಸಂತಜನ. ಶಿವ ಮತ್ತು ವಿಷ್ಣು—ಇವರ ನಿಂದೆಯನ್ನು ಯಾರಾದರೂ ಮಾಡುತ್ತಿದ್ದರೆ, ಅದನ್ನು ಕೇಳಿದವರು ನಿಂದಕರ ನಾಲಿಗೆಯನ್ನ ಕತ್ತರಿಸಬೇಕು, ಅಥವಾ ಅದು ಸಾಧ್ಯವಿಲ್ಲದಿದ್ದರೆ ಕಿವಿಗಳನ್ನು ಮುಚ್ಚಿಕೊಂಡು ಆ ಸ್ಥಳವನ್ನು ಬಿಟ್ಟೋಡಬೇಕು ತ್ರಿಪುರಾರಿಯಾದ ಶಂಕರನು ಜಗತ್ತಿನ ಆತ್ಮನು, ಜಗತ್ತಿಗೆ ಪಿತನು, ಎಲ್ಲರಿಗೂ ಹಿತಕರನು. ನನ್ನ ಈ ಮೂರ್ಖಪಿತನು ಆತನನ್ನು ನಿಂದಿಸುತ್ತಿರುವನು. ಈ ನನ್ನ ಶರೀರವು ದಕ್ಷನ ವೀರ್ಯದಿಂದ ಹುಟ್ಟಿರುವುದು. ಆದುದರಿಂದ ಚಂದ್ರಮೌಳಿಯೂ*ಧರ್ಮಧ್ವಜನೂ ಆದ ಶಿವನ ಧ್ಯಾನವನ್ನು ಮಾಡುತ್ತಾ ನಾನು ಈ ಶರೀರವನ್ನು ಈಗಲೇ ಬಿಟ್ಟುಬಿಡುವೆನು–ಎಂದು ಹೇಳಿ ಯೋಗಾಗ್ನಿಯಿಂದ ಸತಿಯು ತನ್ನ ಶರೀರವನ್ನು ಭಸ್ಮಮಾಡಿಬಿಟ್ಟಳು !! ಇದನ್ನು ನೋಡಿ ಇಡೀ ಯಜ್ಞಮಂಟಪದಲ್ಲಿ ಹಾಹಾಕಾರವೆದ್ದಿತು!

(ಶಿವನು ವೀರಭದ್ರಾದಿಗಳ ಮೂಲಕ ದಕ್ಷನ ಯಜ್ಞ ವಿಧ್ವಂಸನ ಮಾಡುವುದು)

ದೋ ॥ ೮೮ ॥ ಸತಿಯ ಮರಣವಾರ್ತೆಯನ್ನು ಕೇಳಿದ ಕೂಡಲೇ ಶಿವಗಣಗಳು ಯಜ್ಞವನ್ನು ಕೆಡಿಸಲಾರಂಭಿಸಿದವು. ಆಗ ಯಜ್ಞವಿಧ್ವಂಸವನ್ನು ನೋಡಿ ಭೃಗುಋಷಿಯೂ ಇತರ ಮುನಿಗಳೂ ಯಜ್ಞವನ್ನು ರಕ್ಷಿಸಿದರು. ಈ ಸಮಾಚಾರವನ್ನು ಕೇಳಿ ಶಿವನು ಕೋಪದಿಂದ ವೀರಭದ್ರನನ್ನು ಕಳುಹಿಸಿದನು. ಅವನು ಹೋಗಿ ಯಜ್ಞವನ್ನು ಸಂಪೂರ್ಣವಾಗಿ ನಾಶಮಾಡಿ ದೇವತೆಗಳೆಲ್ಲರಿಗೂ ಉಚಿತವಾದ ಫಲವನ್ನು ಕೊಟ್ಟು ಕಳುಹಿಸಿದನು. ಶಿವನ ವೈರಿಗಳಿಗಾಗುವ ಗತಿಯೇ ದಕ್ಷನಿಗೂ ಆಯಿತೆಂಬುದು ಜಗತ್ತಿನಲ್ಲಿ ಪ್ರಸಿದ್ಧವಾಯಿತು. ಈ ಕಥೆಯನ್ನು ಎಲ್ಲರೂ ಬಲ್ಲರು. ಆದುದರಿಂದಲೇ ನಾನು ಅದನ್ನು ಇಲ್ಲಿ ಸಂಕ್ಷೇಪವಾಗಿ ಹೇಳಿದೆನು.

(ಪಾರ್ವತಿಯ ಜನ್ಮ, ನಾರದ ಮುನಿಯ ಉಪದೇಶದಿಂದ ಆಕೆ ತಪಸ್ಸು ಮಾಡುವುದು)

ಮರಣಸಮಯದಲ್ಲಿ ಸತಿಯು ತನಗೆ ಪ್ರತಿಯೊಂದು ಜನ್ಮದಲ್ಲಿಯೂ ಶಿವನ ಚರಣಗಳಲ್ಲಿಯೇ ಅನುರಾಗವಿರುವಂತಾಗಬೇಕೆಂದು ವಿಷ್ಣುವಿನಿಂದ ವರ

---

* ಚಂದ್ರಮೌಳಿಯೆಂದು ಹೇಳುವುದರಲ್ಲಿ ಈ ಭಾವವಿರುವಂತೆ ಕಾಣುತ್ತದೆ. ಚಂದ್ರನಲ್ಲಿ ಸಂಧಿಯಿರುವುದು. ಆದುದರಿಂದಲೆ ಅವನು ನನ್ನನ್ನು ಮತ್ತೆ ಬದುಕಿಸುವನು.—ವೃಷಕೇತು ಎಂದರೆ ಅವನು ಧರ್ಮಧ್ವಜನಾಗಿರುವುದರಿಂದ ನನ್ನ ಅಪರಾಧಗಳನ್ನು ಕ್ಷಮಿಸುವನು—ಏಕೆಂದರೆ ಅದೂ ಧರ್ಮದ ಲಕ್ಷಣಗಳಲ್ಲೊಂದಾಗಿದೆ ಅದರ ವಿಚಾರವಾಗಿ ಶಾಸ್ತ್ರವು ಹೇಳುವುದೇನೆಂದರೆ—"ಧೃತಿಃ ಕ್ಷಮಾ ದಮೋಽಸ್ತೇಯಂ ಶೌಚಮಿಂದ್ರಿಯ ನಿಗ್ರಹಃ । ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ಧರ್ಮ ಲಕ್ಷಣಮ್ ॥" ಇತಿ.

ವನ್ನು ಪಡೆದಿದ್ದಳು. ಆದುದರಿಂದ ಆಕೆಯು ಹಿಮವಂತನ ಮನೆಗೆ ಹೋಗಿ ಪಾರ್ವತಿಯ ಶರೀರವನ್ನು ಧಾರಣಮಾಡಿ ಜನಿಸಿದಳು. ಯಾವದಿನ ಉಮೆಯು ಹಿಮಾಚಲನ ಮನೆಗೆ ಬಂದಳೋ ಅಂದಿನಿಂದ ಅಲ್ಲಿ ಎಲ್ಲಾ ಪ್ರಕಾರವಾದ ಸಿದ್ಧಿಗಳೂ ಸಂಪತ್ತುಗಳೂ ತುಂಬಿದವು. ಮುನಿಜನರೂ ಅಲ್ಲಲ್ಲಿ ತಮ್ಮ ಆಶ್ರಮಗಳನ್ನು ಕಟ್ಟಿಕೊಂಡರು. ಹಿಮಾಚಲನು ಅವರಿಗೆ ಉಚಿತವಾದ ಸ್ಥಾನವನ್ನು ಕೊಟ್ಟನು.

ದೋ ॥ ೬೯ ॥ ಆ ಪರ್ವತದಮೇಲೆ ಸುಂದರವಾದ ಅನೇಕ ಜಾತಿಯ ವೃಕ್ಷಗಳು ಸದಾಕಾಲವೂ ಫಲಪುಷ್ಪಗಳನ್ನು ಕೊಡಲಾರಂಭಿಸಿದವು. ಮತ್ತೆ ಅಲ್ಲಿ ಬಹು ರಮ್ಯವಾದ ಅನೇಕ ಮಣಿನಿಧಿಗಳು ಪ್ರಕಟವಾದವು. ಅಲ್ಲಿ ಇದ್ದ ಎಲ್ಲ ನದಿಗಳೂ * ಪವಿತ್ರಜಲದಿಂದ ಪೂರ್ಣವಾಗಿ ಹರಿಯಲಾರಂಭಿಸಿದವು. ಪಶು ಪಕ್ಷಿಗಳೂ ಭೃಂಗಾದಿ ಕೀಟಗಳೂ ಸುಖವಾಗಿ ವಾಸಿಸಲಾರಂಭಿಸಿದವು. ಎಲ್ಲಾ ಜೀವಿಗಳು ತಮ್ಮ ತಮ್ಮ ಸ್ವಾಭಾವಿಕ ವೈರವನ್ನು ಬಿಟ್ಟು ಹಿಮವಂತನನ್ನು ಪ್ರೀತಿಸಲಾರಂಭಿಸಿದವು. ರಾಮಭಕ್ತಿಯನ್ನು ಹೊಂದಿದ ಮನುಷ್ಯನಿಗೆ ಉಂಟಾಗುವ ಸದ್ಗತಿಯಂತೆ ಪಾರ್ವತಿಯ ಜನ್ಮದಿಂದ ಆ ಪರ್ವತದ ಶೋಭೆಯು ಹೆಚ್ಚಿತು. ಆ ಹಿಮಾಚಲನ ಮನೆಯಲ್ಲಿ ನಿತ್ಯವೂ ಹೊಸ ಹೊಸ ಮಂಗಳೋತ್ಸವಗಳಾಗಲಾರಂಭಿಸಿದವು. ಆತನ ಯಶಸ್ಸನ್ನು ಬ್ರಹ್ಮಾದಿಗಳು ಈಗಲೂ ಗಾನಮಾಡುತ್ತಿರುವರು. ಪಾರ್ವತಿಯು ಜನಿಸಿದ ಸಮಾಚಾರವನ್ನು ಕೇಳಿ ನಾರದಮುನಿಯು ಸಾಧಾರಣ ರೀತಿಯಿಂದ ಶೈಲರಾಜನ ಮನೆಗೆ ಬಂದನು. ಹಿಮವಂತನು ಆತನನ್ನು ಬಹುವಾಗಿ ಆದರಿಸಿ ಕಾಲ್ತೊಳೆದು ಒಳ್ಳೆಯ ಆಸನದ ಮೇಲೆ ಕಳ್ಳಿರಿಸಿದನು. ಮತ್ತೆ ಶೈಲರಾಜನು ತನ್ನ ಪತ್ನಿಯ ಸಮೇತನಾಗಿ ಮುನಿಯ ಚರಣಗಳಮೇಲೆ ಮಸ್ತಕವನ್ನಿಟ್ಟು ಆತನ ಚರಣತೀರ್ಥವನ್ನು ಮನೆಯಲ್ಲೆಲ್ಲಾ ಪ್ರೋಕ್ಷಿಸಿದನು. ಮತ್ತೆ (ಮುನಿದರ್ಶನವಾದುದಕ್ಕಾಗಿ) ತನ್ನ ಸೌಭಾಗ್ಯವನ್ನು ಹೊಗಳಿಕೊಂಡು, ತನ್ನ ಪುತ್ರಿಯನ್ನು ಕರೆದು ಮುನಿಯಚರಣಗಳಿಗೆರಗಿಸಿದನು.

ದೋ॥೭೦॥ ಆನಂತರ ಮುನಿಯನ್ನು ನೋಡಿ ಹಿಮವಂತನು, "ಹೇ ಮುನಿವರ, ತಾವು ತ್ರಿಕಾಲದರ್ಶಿಗಳು, ಸರ್ವಜ್ಞರು, ತಾವು ತ್ರಿಲೋಕಸಂಚಾರಿಗಳು, ಆದುದರಿಂದ ಮನಸ್ಸಿನಲ್ಲಿ ವಿಚಾರಮಾಡಿ ನನ್ನ ಪುತ್ರಿಯ ಗುಣದೋಷಗಳನ್ನು ತಾವು ಹೇಳಬೇಕು" ಎಂದನು. ಇದನ್ನು ಕೇಳಿ ನಾರದ ಮುನಿಯು ನಕ್ಕು ಗೂಢವೂ ಮಧುರವೂ ಆದ ವಾಣಿಯಿಂದ "ನಿನ್ನ ಪುತ್ರಿಯು ಸರ್ವಶ್ರೇಷ್ಠಗುಣನಿಧಿಯಾಗಿರುವಳು. ಆಕೆಯು ಸ್ವಭಾವವೇ ಸುಂದರವಾಗಿಯೂ ಸುಶೀಲವಾ

---

* ಆ ನದಿಗಳಾವುವೆಂದರೆ –ಭಾಗೀರಥೀ, ಮನ್ದಾಕಿನಿ, ಯಮುನಾ, ಅಲಕನಂದಾ ಶೇಷಗಂಗಾ, ವಿಷ್ಣುಗಂಗಾ, ರಾಮಗಂಗಾ, ವ್ಯಾಸಗಂಗಾ, ಸ್ವರ್ಣಗಂಗಾ, ನನ್ದಗಂಗಾ, ಕರ್ಣಗಂಗಾ, ಪಾತಾಳಗಂಗಾ, ಇತ್ಯಾದಿ.

ಗಿಯೂ ಇದೆ. ಈಕೆಯು ಚತುರಳು. ಈಕೆಯ ಹೆಸರು 'ಉಮಾ,' 'ಅಂಬಿಕಾ' ಮತ್ತು 'ಭವಾನೀ' ಎಂದಿದೆ. ನಿನ್ನ ಮಗಳು ಸರ್ವಲಕ್ಷಣಯುಕ್ತಳಾಗಿರುವಳು. ಈಕೆಯು ತನ್ನ ಪತಿಗೆ ಸದಾ ಪ್ರಿಯಳಾಗಿರುವಳು ಈಕೆಯ ಸೌಭಾಗ್ಯವು ಸದಾ ಅಚಲವಾಗಿರುವುದು. ಇದರಿಂದ ಈಕೆಯ ಮಾತಾಪಿತೃಗಳು ಯಶಸ್ಸನ್ನು ಹೊಂದುವರು ಈಕೆಯು ಈ ಜಗತ್ತಿನಲ್ಲಿ ಪೂಜ್ಯಳಾಗುವಳು. ಈಕೆಯ ಸೇವೆಯಿಂದ ಎಲ್ಲವೂ ಸುಲಭವಾಗುವುದು. ಈ ಜಗತ್ತಿನಲ್ಲಿ ಸ್ತ್ರೀಯರು ಈಕೆಯ ನಾಮಸ್ಮರಣೆಯನ್ನು ಮಾಡಿ ಪಾತಿವ್ರತ್ಯವೆಂಬ ಹರಿತವಾದ ಆಯುಧವನ್ನು ಧರಿಸುವರು. ಹೇ ಶೈಲರಾಜ ! ನಿನ್ನ ಮಗಳು ಬಹು ಸುಂದರಲಕ್ಷಣಯುಕ್ತಳಾಗಿರುವಳು ಆದರೆ ಈಕೆಯಲ್ಲಿ ಇರುವ ಕೆಲವು ಅವಗುಣಗಳನ್ನು ಈಗ ಹೇಳುವೆನು ಕೇಳು ಗುಣರಹಿತನೂ ಮಾತಾಪಿತೃವಿಹೀನನೂ ಉದಾಸೀನನೂ ಸಂದೇಹರಹಿತನೂ

ದೋ॥೬೧॥ ಯೋಗಿಯೂ ಜಟಾಧಾರಿಯೂ ಕಾಮರಹಿತನೂ ನಗ್ನನೂ ಅಮಂಗಲವೇಷಧಾರಿಯೂ ಆದಂತಹ ಪತಿಯು ಇವಳಿಗೆ ಸಿಕ್ಕುವನು. ಏಕೆಂದರೆ ಇವಳ ಕೈಯಲ್ಲಿರುವ ಗೆರೆಯು ಹಾಗೆ ಬರೆಯಲ್ಪಟ್ಟಿದೆ" ಎಂದು ಹೇಳಿದನು. ನಾರದ ಮುನಿಯ ಈ ವಾಕ್ಯಗಳನ್ನು ಕೇಳಿ, ಅವುಗಳನ್ನು ಸತ್ಯವೆಂದು ನಂಬಿ, ಪಾರ್ವತಿಯ ಮಾತಾಪಿತೃಗಳು ಬಹು ದುಃಖಿತರಾದರು ಆದರ ಪಾರ್ವತಿಯು ಮಾತ್ರ ಪ್ರಸನ್ನಚಿತ್ತಳಾದಳು ನಾರದಮುನಿಗೆ ಇದರ ಭೇದವು ಗೊತ್ತಾಗಲಿಲ್ಲ. ಏಕೆಂದರೆ ಎಲ್ಲರ ಸ್ಥಿತಿಯೂ ಒಂದೇ ಆಗಿದ್ದರೂ ಅಂತಃಕರಣದೊಳಗಣ ಜ್ಞಾನವು ಮಾತ್ರ ಪ್ರತ್ಯೇಕವಾಗಿದ್ದಿತು ಉಮೆಯೂ ಅವಳ ಸಖಿಯರೂ ಮಾತಾಪಿತೃಗಳಾದಿಯಾಗಿ ಎಲ್ಲರೂ ಪುಲಕಿತರಾಗಿ, ಎಲ್ಲರ ಕಣ್ಣುಗಳಲ್ಲಿಯೂ ನೀರುತುಂಬಿತು. ದೇವರ್ಷಿ ನಾರದನ ಮಾತು ಎಂದಿಗೂ ಸಟೆಯಾಗದೆಂದು ಉಮೆಯು ತಿಳಿದುಕೊಂಡಳು. ಅವಳಿಗೆ ಶಿವನ ಚರಣಕಮಲಗಳಲ್ಲಿ ಪ್ರೀತಿಯುಂಟಾಯಿತು ಆದರೆ ಅವನನ್ನು ಹೊಂದುವುದು ಕಠಿಣವೆಂದು ಮನಸ್ಸಿನಲ್ಲಿ ಸಂದೇಹವೂ ಉಂಟಾಯಿತು. ಅವಳು ತನ್ನ ಪ್ರೀತಿಯನ್ನು ಅಡಗಿಸಿಟ್ಟುಕೊಂಡು ತನ್ನ ಸಖಿಯ ತೊಡೆಯಮೇಲೆ ಕುಳಿತುಕೊಂಡಳು. ಗಿರಿರಾಜನೂ ಆತನ ಪತ್ನಿಯಾದ ಮೈನಾದೇವಿಯೂ ಪಾರ್ವತಿಯ ಚತುರ ಸಖಿಯರೂ ದೇವರ್ಷಿ ನಾರದನ ವಾಣಿಯು ಸುಳ್ಳಾಗುವುದಿಲ್ಲವೆಂದು ತಿಳಿದು ಅದಕ್ಕೆ ಉಪಾಯವನ್ನು ಯೋಚಿಸಲಾರಂಭಿಸಿದರು. ಹಿಮವಂತನು ಹೃದಯದಲ್ಲಿ ಧೈರ್ಯವನ್ನು ತಳೆದು " ಹೇ ನಾಥಾ, ಮುನಿವರಾ, ಇದಕ್ಕೆ ಉಪಾಯವೇನೆಂದು ಹೇಳಬೇಕು " ಎಂದು ಕೇಳಿಕೊಂಡನು.

ದೋ॥೬೨॥ ಆದಕ್ಕೆ ನಾರದನು "ಹೇ ಹಿಮವಂತನೇ ಕೇಳು ಯಾವ ಮಾತನ್ನು ಬ್ರಹ್ಮನು ಹಣೆಯಲ್ಲಿ ಬರೆದಿರುವನೋ ಅದನ್ನು ಬದಲಾಯಿಸಲು ದೇವ, ದಾನವ, ಮನುಷ್ಯ, ನಾಗ ಮತ್ತು ಮುನಿ ಇವರುಗಳಲ್ಲಿ ಯಾರೂ ಸಮರ್ಥ

ರಲ್ಲ. ಆದಾಗ್ಯೂ ನಾನೊಂದು ಉಪಾಯವನ್ನು ಹೇಳುವೆನು. ಯಾವಕಾರ್ಯಕ್ಕೆ ದೈವಸಹಾಯವಿರುವುದೋ ಆ ಕಾರ್ಯವು ಆಗಿಯೇ ಆಗುವುದು. ನಾನು ವರ್ಣಿಸಿ ದಂತಹ ವರನೇ ಈಕೆಗೆ ಸಿಕ್ಕುವನು. ಇದರಲ್ಲಿ ಸಂದೇಹವಿಲ್ಲ. ನಾನು ಮೇಲೆ ವರ್ಣಿಸಿದ ದೋಷಗಳೆಲ್ಲವೂ ಶಿವನಲ್ಲಿ ಇರುವವು. ಆದುದರಿಂದ ಶಿವನೊಂದಿಗೆ ಇವಳ ವಿವಾಹವಾದರೆ ಯಾವ ಚಿಂತೆಯೂ ಇರುವುದಿಲ್ಲ. ಏಕೆಂದರೆ ಅವನ ದೋಷಗಳೆಲ್ಲವೂ ಕೆಲವು ಗುಣಗಳಿಗೆ ಸಮಾನವಾಗಿರುವುದೆಂದು ಜ್ಞಾನಿಗಳು ಹೇಳುವರು. ವಿಷ್ಣುಭಗವಾನನು ಶೇಷನಾಗನನ್ನೇ ಶಯ್ಯೆಯಾಗಿ ಮಾಡಿಕೊಂಡು ಮಲಗಿರುವುದು ಕೂಡಾ ದೋಷವಲ್ಲವೆಂದು ಪಂಡಿತರು ಹೇಳುವರು ಸೂರ್ಯನೂ ಅಗ್ನಿಯೂ ಒಳ್ಳೆಯ ಮತ್ತು ಕೆಟ್ಟ ರಸಗಳೆಲ್ಲವನ್ನೂ ಸ್ವೀಕರಿಸುವರು. ಆದರೆ ಆ ಕಾರ್ಯವು ಕೆಟ್ಟುದೆಂದು ಯಾರೂ ಹೇಳುವುದಿಲ್ಲ. ಪವಿತ್ರ ಮತ್ತು ಅಪವಿತ್ರ ವಸ್ತುಗಳೆರಡೂ ಗಂಗಾನದಿಯಲ್ಲಿ ತೇಲಿಹೋಗುತ್ತಿದ್ದರೂ ಆ ನದಿಯನ್ನು ಅಪವಿತ್ರ ವೆಂದು ಯಾರೂ ಭಾವಿಸುವುದಿಲ್ಲ. ಹೇ ಹಿಮವಂತನೇ, ಸೂರ್ಯ, ಅಗ್ನಿ, ಮತ್ತು ಗಂಗಾನದಿಯಂತಹ ಸಮರ್ಥರಲ್ಲಿ ಯಾವ ದೋಷವೂ ಇರಲಾರವು

ದೋ ॥ ೬೩ ॥ ಯಾವನಾದರೊಬ್ಬ ಮೂರ್ಖಮನುಷ್ಯನು ಜ್ಞಾನದ ಅಭಿಮಾನದಿಂದ (ದೇವತೆಗಳ ಕಾರ್ಯವನ್ನು ನೋಡಿ) ನಾನೂ ಹಾಗೆ ಮಾಡು ವೆನು ಎಂಬ ಈರ್ಷೆಯನ್ನು ಹೊಂದಿದರೆ ಅವನು ಒಂದು ಕಲ್ಪ (೧೦೦೦ ವರ್ಷ) ದ ವರೆಗೆ ನರಕದಲ್ಲಿ ವಾಸಿಸುವನು, ಏಕೆಂದರೆ ಮನುಷ್ಯನು ಎಂದಾದರೂ ಈಶನಿಗೆ ಸಮನಾಗಬಲ್ಲನೆ? ಮದಿರೆಯಲ್ಲಿ ಗಂಗಾಜಲವು ಸೇರಿದ್ದರೂ ಅದನ್ನು ಪವಿತ್ರವೆಂದು ಸಂತಜನರಾರೂ ಕುಡಿಯುವುದಿಲ್ಲ. ಆದರೆ ಅದೇ ಮದಿರೆಯು ಗಂಗೆಯಲ್ಲಿ ಸೇರಿ ಪ್ರವಹಿಸಿದರೆ ಅದು ಪವಿತ್ರವಾಗುವಂತೆಯೇ ಜೀವ ಮತ್ತು ಈಶ್ವರರಲ್ಲಿ ಭೇದವಿರು ವುದು. ಭಗವಾನ್ ಮಹಾದೇವನು ಸ್ವಾಭಾವಿಕವಾಗಿ ಸಮರ್ಥನು. ಆದುದ ರಿಂದ ಈ ವಿವಾಹಸಂಬಂಧವನ್ನು ಬಳೆಯಿಸಿದರೆ ಅದರಿಂದ ಸುಖವುಂಟಾಗು ವುದು. ಮಹಾದೇವನ ಆರಾಧನೆಯು ಬಹು ಕಠಿಣವಾಗಿದೆ. ಕ್ಲೇಶಸಾಧನೆಯಿಂದ ಎಂದರೆ ತಪಸ್ಸಿನಿಂದ ಆತನು ಬಹು ಶೀಘ್ರನಾಗಿ ಪ್ರಸನ್ನನಾಗುವನು. ನಿನ್ನ ಮಗಳು ಆತನ ಪ್ರಾಪ್ತಿಗೋಸ್ಕರ ತಪಸ್ಸನ್ನು ಮಾಡಿದ್ದಾದರೆ ಶಿವನು ಮುಂದಾ ಗುವ ಅಶುಭಗಳೆಲ್ಲವನ್ನೂ ನಿವಾರಿಸುವನು. ಈ ಸಂಸಾರದಲ್ಲಿ ಅನೇಕ ವರ ಗಳಿವೆ, ಆದರೆ ಶಿವನಂತಹ ವರನು ಬೇರೇ ಸಿಕ್ಕಲಿಕ್ಕಿಲ್ಲ. ಶಿವನು ವರವನ್ನು ಕೊಡುವವನಾಗಿಯೂ ಭಕ್ತರ ದುಃಖನಾಶಕನಾಗಿಯೂ ದಯಾಸಾಗರನಾ ಗಿಯೂ ಸೇವಕರ ಮನಸ್ಸಿಗೆ ಆನಂದವನ್ನುಂಟುಮಾಡುವವನಾಗಿಯೂ ಇರುವನು. ಮಹಾದೇವನ ಆರಾಧನೆಯನ್ನು ಮಾಡದವಿನಾ ಕೋಟಿಗಟ್ಟಲೆಯಾಗಿ ಯೋಗ ಮತ್ತು ಜಪಗಳನ್ನು ಮಾಡಿದರೂ ಅವುಗಳಿಂದ ಇಚ್ಛೆಯು ಸಾರ್ಥಕವಾಗು ವುದಿಲ್ಲ" ಎಂದು ಹೇಳಿದನು.

ದೋ ॥ ೯೪ ॥ ಅನಂತರ ನಾರದನು "ನಿನಗೆ ಕಲ್ಯಾಣವಾಗಲೆಂದು" ಪಾರ್ವತಿಗೆ ಆಶೀರ್ವದಿಸಿ, ಹಿಮವಂತನಿಗೆ "ನೀನು ಸಂದೇಹವನ್ನು ಬಿಡು" ಎಂದು ಹೇಳಿ, ಭಗವಂತನ ನಾಮಸ್ಮರಣೆ ಮಾಡುತ್ತಾ ಬ್ರಹ್ಮಲೋಕಕ್ಕೆ ತೆರಳಿದನು. ಮುಂದೆ ಏನಾಯಿತೆಂಬುದನ್ನು ಈಗ ಹೇಳುವೆನು, ಕೇಳಿರಿ. ಪತಿಯನ್ನು ಏಕಾಂತದಲ್ಲಿ ನೋಡಿ "ಹೇ ನಾಥಾ, ನಾರದಮುನಿಯ ಮಾತಿನ ಅರ್ಥವು ನನಗೆ ತಿಳಿಯಲಿಲ್ಲ. ಯಾವ ಮನೆಯೂ ವರನೂ ಕುಲವೂ ಮಗಳಿಗೆ ಅನುಕೂಲವಾಗಿರುತ್ತದೋ ಅಂತಹ ವರನಿಗೆ ಇವಳನ್ನು ಕೊಟ್ಟು ವಿವಾಹ ಮಾಡಬೇಕು. ಅಂತಹ ವರನು ಸಿಕ್ಕದಿದ್ದರೆ ನನ್ನ ಮಗಳು ಮದುವೆ ಇಲ್ಲದೆ ಕುಮಾರಿಯಾಗಿರಲಿ. ಹೇ ಸ್ವಾಮಿನ್, ಪಾರ್ವತಿಯು ನನಗೆ ಪ್ರಾಣಪ್ರಿಯಳಾಗಿರುವಳು ಅವಳಿಗೆ ಯೋಗ್ಯನಾದ ವರನು ಸಿಕ್ಕದಿದ್ದರೆ, ಗಿರಿರಾಜನು ಸ್ವಾಭಾವಿಕವಾಗಿಯೇ ಮೂರ್ಖನಾಗಿರುವನೆಂದು ಜನರು ಹೇಳುವರು. ಹೇ ನಾಥಾ, ಈ ವಿಷಯವನ್ನು ಚೆನ್ನಾಗಿ ಆಲೋಚಿಸಿ ಆಮೇಲೆ ಅದರಿಂದ ಪಶ್ಚಾತ್ತಾಪ ಉಂಟಾಗದಂತೆ ನೋಡಿಕೊಂಡು ವಿವಾಹ ಬೆಳಸಬೇಕು" ಎಂದು ಹೇಳಿ ಪಾರ್ವತೀ ದೇವಿಯ ತಾಯಿಯು ತನ್ನ ಪತಿಯ ಚರಣಗಳ ಮೇಲೆ ಶಿರವನ್ನಿಟ್ಟಳು. ಆಗ ಗಿರಿರಾಜನು ವಿಶೇಷ ಸ್ನೇಹದಿಂದ ತನ್ನ ಪತ್ನಿಯನ್ನು ಕುರಿತು "ಚಂದ್ರನಲ್ಲಿ ಅಗ್ನಿಯು ಬೇಕಾದರೆ ಪ್ರಕಟವಾಗಬಹುದು. ಆದರೆ ನಾರದನ ವಚನವೆಂದಿಗೂ ಸುಳ್ಳಾಗುವುದಿಲ್ಲ.

ದೋ ॥ ೯೫ ॥ ಹೇ ಪ್ರಿಯೇ ನೀನು ಸಂದೇಹವನ್ನು ಬಿಟ್ಟು ಶ್ರೀ ಭಗವಂತನ ಸ್ಮರಣೆಯನ್ನು ಮಾಡು. ಪಾರ್ವತಿಗೆ ಜನ್ಮವನ್ನಿತ್ತ ಪರಮಾತ್ಮನು, ಅವಳಿಗೆ ಕಲ್ಯಾಣವನ್ನೇ ಉಂಟುಮಾಡುವನು ನಿನ್ನ ಮಗಳ ಮೇಲೆ ನಿನಗೆ ಪ್ರೀತಿಯು ವಿಶೇಷವಾಗಿದ್ದರೆ ನೀನು ಈಗಲೇ ಅವಳ ಬಳಿಗೆ ಹೋಗಿ 'ಮಗಳೇ, ಶಿವನೇ ನಿನಗೆ ಲಭಿಸುವಂತೆ ತಪಸ್ಸನ್ನು ಮಾಡು' ಎಂದು ಉಪದೇಶಿಸು. ಇದರವಿನಾ ಬೇರೆ ಉಪಾಯದಿಂದ ದುಃಖವು ದೂರವಾಗುವುದಿಲ್ಲ. ನಾರದನ ವಚನವು ಸಾರಯುಕ್ತವಾದುದೂ ಕಾರಣಸಹಿತವಾದುದೂ ಆಗಿದೆ. ಶಿವನು ಸುಂದರ ಗುಣಗಳ ನಿಧಿಯಾಗಿರುವನು. ಇದನ್ನರಿತು ನಿನ್ನ ಭಯವನ್ನು ದೂರಪಡಿಸು. ಶಿವನು ಸರ್ವವಿಧದಲ್ಲಿಯೂ ನಿಷ್ಕಲಂಕನಾಗಿರುವನು" ಎಂದನು. ಪತಿಯ ವಚನವನ್ನು ಕೇಳಿ ಮನಸ್ಸಿನಲ್ಲಿ ಆನಂದವನ್ನು ಹೊಂದಿ ಮಯನಾದೇವಿಯು ಚಟ್ಟನೆ ಎದ್ದು ಪಾರ್ವತಿಯ ಬಳಿಗೆ ಹೋದಳು. ಅಲ್ಲಿ ಪಾರ್ವತಿಯನ್ನು ನೋಡಿ ಕಣ್ಣುಗಳಲ್ಲಿ ನೀರುತುಂಬಿದವಳಾಗಿ ಪ್ರೀತಿಯಿಂದ ಅವಳನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಬಾರಿಬಾರಿಗೂ ಅವಳನ್ನು ಆಲಿಂಗಿಸಿಕೊಳ್ಳುತ್ತಲಿದ್ದಳು. ಪ್ರೇಮಪ್ರವಾಹವು ಪೂರ್ಣವಾಗಿ ಕಂಠವು ಗದ್ಗದವಾಯಿತು. ಬಾಯಿಂದ ಮಾತೇ ಹೊರಡಲಿಲ್ಲ. ಜಗನ್ಮಾತೆಯೂ ಜ್ಞಾನಿಯೂ ಆದ ಭವಾನಿಯು ಮಾತೆಗೆ ಸುಖವನ್ನುಂಟುಮಾಡುವುದಕ್ಕೋಸ್ಕರ ಕೋಮಲವಾದ ವಾಣಿಯಿಂದ ಇಂತೆಂದಳು.

ದೋ ॥ ೯೬ ॥ ಮಾತೆಯೇ ಕೇಳು! ನಾನು ಒಂದು ಸ್ವಪ್ನವನ್ನು ನೋಡಿದೆನು. ಅದನ್ನು ನಿನ್ನೆದುರಿಗೆ ಹೇಳುವೆನು. ಸ್ವಪ್ನದಲ್ಲಿ ಒಬ್ಬ ಸುಂದರನಾದ ಗೌರ ವರ್ಣದ ಬ್ರಾಹ್ಮಣನು ನನಗೆ ಹೀಗೆಂದು ಉಪದೇಶಿಸಿದನು—" ಹೇ ಶೈಲ ಕುಮಾರೀ ನೀನು ಹೋಗಿ ತಪಸ್ಸು ಮಾಡು. ನಾರದನು ವಿಚಾರಮಾಡಿ ಹೇಳಿದುದೆಲ್ಲ ಸತ್ಯವು. ಆ ಮಾತು ನಿನ್ನ ಮಾತಾ ಪಿತೃಗಳಿಗೂ ಒಳ್ಳೆಯದೆಂದು ತೋರಿರುವುದು. ಏಕೆಂದರೆ ತಪಸ್ಸು ದುಃಖವನ್ನೂ ದೋಷವನ್ನೂ ನಾಶಮಾಡಿ ಸುಖವನ್ನು ಕೊಡುವಂಥಾದ್ದಾಗಿದೆ. ತಪಸ್ಸಿನ ಬಲದಿಂದಲೇ ಬ್ರಹ್ಮನು ಸೃಷ್ಟಿಯನ್ನುಂಟು ಮಾಡುತ್ತಿರುವನು. ತಪಸ್ಸಿನ ಬಲದಿಂದಲೇ ವಿಷ್ಣುವು ಇಡೀ ಜಗತ್ತನ್ನು ರಕ್ಷಿಸುತ್ತಿರುವನು. ಮತ್ತೆ ತಪಸ್ಸಿನಬಲದಿಂದಲೇ ಮಹಾದೇವನು ಜಗತ್ಸಂಹಾರವನ್ನು ಮಾಡುತ್ತಿರುವನು. ತಪಸ್ಸಿನ ಬಲದಿಂದಲೇ ಶೇಷನು ಪೃಥ್ವಿಯ ಭಾರವನ್ನು ಹೊತ್ತಿರುವನು. ಹೇ ಭವಾನೀ, ಸೃಷ್ಟಿಯೆಲ್ಲವೂ ತಪಸ್ಸಿನ ಬಲದಿಂದಲೇ ಇರುವುದು ಇದನ್ನು ಚೆನ್ನಾಗಿ ತಿಳಿದುಕೊಂಡು ತಪಸ್ಸು ಮಾಡು " ಎಂದು ಹೇಳಿದನು. ಈ ಮಾತನ್ನು ಕೇಳಿ ಪಾರ್ವತಿಯ ಮಾತೆಯು ವಿಶೇಷ ಆಶ್ಚರ್ಯವನ್ನು ಹೊಂದಿ ಹಿಮವಂತನನ್ನು ಕರೆಯಿಸಿ ಆತನಿಗೆ ಈ ಸ್ವಪ್ನವನ್ನು ತಿಳಿಯಿಸಿದಳು ಆ ನಂತರ ಮಾತಾಪಿತೃಗಳನ್ನು ಬಹುವಿಧವಾಗಿ ಸಮಾಧಾನಪಡಿಸಿ ಪಾರ್ವತಿಯು ಸಾನಂದದಿಂದ ತಪಸ್ಸುಮಾಡುವುದಕ್ಕೋಸ್ಕರ ಹೊರಟು ಹೋದಳು ಆಕೆ ಹೊರಟು ಹೋದನಂತರ ಆಕೆಯ ಪ್ರಿಯಸಖಿಯರೂ ಪರಿವಾರದವರೂ ಮಾತಾಪಿತೃಗಳೂ ಬಹಳ ವ್ಯಾಕುಲರಾದರು. ಯಾರ ಮುಖದಿಂದಲೂ ಮಾತೇ ಹೊರಡಲಿಲ್ಲ.

ದೋ ॥ ೯೭ ॥ ಆಗ ವೇದಶಿರಮುನಿಯು ಅಲ್ಲಿಗೆ ಬಂದು ಎಲ್ಲರನ್ನೂ ಸಮಾಧಾನಪಡಿಸಿದನು. (ಆತನ ಮೂಲಕ) ಪಾರ್ವತಿಯ ಮಹಿಮೆಯನ್ನು ಕೇಳಿ ಎಲ್ಲರಿಗೂಧೈರ್ಯ ಉಂಟಾಯಿತು. ಅತ್ತ ಉಮೆಯು ಪ್ರಾಣಪತಿಯಾದ ಶಿವನ ಚರಣಗಳನ್ನು ಹೃದಯದಲ್ಲಿ ಧ್ಯಾನಿಸುತ್ತಾ ವನಕ್ಕೆ ಹೋಗಿ ತಪಸ್ಸನ್ನು ಮಾಡಲಾರಂಭಿಸಿದಳು. ಅತಿ ಸುಕುಮಾರಿಯಾದ ಉಮೆಯ ಶರೀರವು ತಪಸ್ಸಿಗೆ ಯೋಗ್ಯವಾಗಿರಲಿಲ್ಲ. ಆದಾಗ್ಯೂ ಪತಿಯ ಚರಣಗಳನ್ನು ಸ್ಮರಿಸುತ್ತಾ ಆಕೆಯು ಭೋಗವನ್ನೆಲ್ಲ ತ್ಯಜಿಸಿದಳು. ಅವಳ ಹೃದಯದಲ್ಲಿ ದಿನದಿನಕ್ಕೆ ಪತಿಚರಣಗಳ ಮೇಲಣ ಪ್ರೀತಿಯು ಹೆಚ್ಚಿತು. ತಪಸ್ಸಿನಲ್ಲಿಯೇ ಮಗ್ನಳಾಗಿ ದೇಹವನ್ನು ಮರೆತಳು. ಒಂದು ಸಾವಿರ ವರ್ಷಗಳವರೆಗೆ ಫಲಮೂಲಗಳನ್ನು ತಿಂದು ಇದ್ದಳು. ಮತ್ತೆ ನೂರುವರ್ಷಗಳವರೆಗೆ ಎಲೆಗಳನ್ನು ತಿಂದು ಜೀವಧಾರಣೆಮಾಡಿದಳು. ಕೆಲವು ದಿನಗಳವರೆಗೆ ನೀರು ಗಾಳಿಗಳೇ ಆಕೆಯ ಆಹಾರವಾಗಿದ್ದವು. ಮತ್ತೆ ಕೆಲವು ದಿನಗಳವರೆಗೆ ಕಠಿಣವಾದ ಉಪವಾಸವನ್ನು ಆಚರಿಸಿದಳು. ಆಮೇಲೆ ಮೂರು ಸಾವಿರ ವರ್ಷಗಳವರೆಗೆ, ಭೂಮಿಯಮೇಲೆ ಬಿದ್ದು ಒಣಗಿದ ಬಿಲ್ವಪತ್ರವನ್ನು ಭುಂಜಿಸಿದಳು. ಆಮೇಲೆ ಆ ಒಣಗಿದೆಲೆಗಳನ್ನೂ ತ್ಯಜಿಸಿದಳು. ಆಗ ಉಮೆಗೆ

"ಅಪರ್ಣಾ" ಎಂದೂ ಹೆಸರಾಯಿತು. ತಪಸ್ಸಿನಿಂದ ಉಮೆಯ ಶರೀರವು ಕ್ಷೀಣ ವಾದುದನ್ನು ನೋಡಿ ಆಕಾಶದಲ್ಲಿ ಗಂಭೀರವಾದ ವಾಣಿಯಾಯಿತು.

ದೋ॥ ೭೮ ॥ ಅದೇನೆಂದರೆ— ಹೇ ಗಿರಿರಾಜ ಕುಮಾರಿ, ಕೇಳು ನಿನ್ನ ಮನೋರಥವು ಸಫಲವಾಯಿತು. ಇನ್ನು ನೀನು ಅಸಹನೀಯವಾದ ಎಲ್ಲಾ ಕ್ಲೇಶಗಳನ್ನೂ ಬಿಟ್ಟುಬಿಡು. ಈಗ ನಿನಗೆ ಶಿವನೂ ದೊರೆಯುವನು. ಹೇ ಭವಾನೀ, ಇಂದಿನವರೆಗೆ ಅನೇಕ ಧೀರರಾದ ಮುನಿಗಳೂ ಜ್ಞಾನಿಗಳೂ ಆಗಿ ಹೋದರು. ಅವರಲ್ಲಾರೂ ಇಂತಹ ತಪಸ್ಸನ್ನು ಮಾಡಿರಲಿಲ್ಲ. ಈ ಆಕಾಶ ವಾಣಿಯು ಸದಾಸತ್ಯವೂ ನಿರಂತರ ಪವಿತ್ರವೂ ಆದುದೆಂದು ನಂಬು. ನಿನ್ನ ತಂದೆಯು ನಿನ್ನನ್ನು ಕರೆಯುವುದಕ್ಕೆ ಬಂದಾಗ ನೀನು ಹಟಮಾಡದೆ ಮನೆಗೆ ಹೋಗಬೇಕು. ಯಾವಾಗ ನಿನಗೆ ಸಪ್ತಋಷಿಗಳ ಸಂದರ್ಶನವಾಗುವುದೋ ಆಗ ಈ ವಾಣಿಯ ನಿದರ್ಶನವಾಯಿತೆಂದು ತಿಳಿಯಬೇಕು." ಈ ರೀತಿಯಾದ ಬ್ರಹ್ಮನ ಆಕಾಶವಾಣಿಯನ್ನು ಕೇಳಿದಕೂಡಲೇ ಉಮೆಯು ಪುಲಕಿತಗಾತ್ರಳಾಗಿ ವಿಶೇಷ ಆನಂದವನ್ನು ಹೊಂದಿದಳು.—ಹೇ ಭರದ್ವಾಜನೇ, ಇದುವರೆಗೆ ನಾನು ಪಾರ್ವತಿಯ ಸುಂದರವಾದ ಚರಿತ್ರೆಯನ್ನು ಹೇಳಿದೆನು. ಈಗ ಶಿವನ ಮನೋ ಹರವಾದ ಚರಿತ್ರೆಯನ್ನು ಹೇಳುವೆನು, ಕೇಳು ಎಂದು ಯಾಜ್ಞವಲ್ಕ್ಯನು ಹೇಳಿ ದನು. ಯಾವ ದಿನ ಸತಿಯು ತನ್ನ ಶರೀರವನ್ನು ಬಿಟ್ಟಳೋ ಆ ದಿನ ಶಿವನ ಮನಸ್ಸಿನಲ್ಲಿ ವೈರಾಗ್ಯವು ಹುಟ್ಟಿತು ಅಂದಿನಿಂದ ಆತನು ಸದಾ ರಾಮನಾಮ ವನ್ನು ಜಪಿಸುತ್ತಾ ಅಲ್ಲಲ್ಲಿ ರಾಮಚಂದ್ರನ ಗುಣಗಳ ವರ್ಣನೆಯನ್ನು ಕೇಳಲಾ ರಂಭಿಸಿದನು.

ದೋ॥ ೭೯ ॥ ಚಿದಾನಂದನೂ ಸುಖಧಾಮನೂ ಮೋಹ-ಮದ-ಕಾಮ ರಹಿತನೂ ಇಡೀ ಜಗತ್ತಿಗೆ ಆನಂದದಾಯಕನೂ ಆದ ಶಿವನು ವಿಷ್ಣುವನ್ನು ಹೃದಯದಲ್ಲಿ ಧರಿಸಿ ಪೃಥ್ವಿಯಮೇಲೆ ತಿರುಗಾಡಲಾರಂಭಿಸಿದನು. ಆಗ ಆತನು ಕೆಲವೆಡೆಗಳಲ್ಲಿ ಮುನಿಗಳಿಗೆ ಜ್ಞಾನೋಪದೇಶಮಾಡುತ್ತ, ಕೆಲವೆಡೆಗಳಲ್ಲಿ ರಾಮ ಗುಣ ಗಾನಮಾಡುತ್ತ ತಿರುಗುತ್ತಿದ್ದನು. ಸುಜ್ಞಾನಿಯಾದ ಶಿವನು ಕಾಮ ರಹಿತನಾಗಿದ್ದರೂ, ಆಗ ಭಕ್ತಳ (ಪಾರ್ವತಿಯ) ವಿಯೋಗ ದುಃಖದಿಂದ ದುಃಖಿತ ನಾಗಿದ್ದನು. ಈ ರೀತಿಯಾಗಿ ಬಹು ಸಮಯ ಕಳೆದನಂತರ, ದಿನದಿನಕ್ಕೆ ಶ್ರೀರಾಮನ ಮೇಲಣ ಭಕ್ತಿಯು ಹೆಚ್ಚಲಾರಂಭಿಸಿತು. ಶ್ರೀಶಂಕರನ ನೇಮ, ಪ್ರೇಮ, ದೃಢ ಭಕ್ತಿಗಳನ್ನು ನೋಡಿ ಕೃತಜ್ಞನೂ ಕೃಪಾಳುವೂ ರೂಪಶೀಲ ನಿಧಿಯೂ, ಮಹಾ ತೇಜಸ್ವಿಯೂ ಆದ ಶ್ರೀರಾಮನು (ಶಿವನೆದುರಿನಲ್ಲಿ) ಪ್ರಕಟ ನಾಗಿ, ಶಿವನನ್ನು ಹಲವು ವಿಧವಾಗಿ ಪ್ರಂಶಸಿಸಿ, 'ನಿನ್ನವಿನಾ ಮತ್ತಾರು ಇಂತಹ ವ್ರತವನ್ನು ನೆರವೇರಿಸಬಲ್ಲರು ?' ಎಂದು ಹೇಳಿದನು. ಮತ್ತೆ ಶಿವನನ್ನು ಬಹು ವಿಧದಿಂದ ಸಮಾಧಾನಪಡಿಸಿ, ಪಾರ್ವತಿಯ ಜನ್ಮ ವೃತ್ತಾಂತವನ್ನೂ ಹೇಳಿ,

ಕೃಪಾನಿಧಿಯಾದ ರಾಮಚಂದ್ರನು ಪಾರ್ವತೀದೇವಿಯು ಕೈಗೊಂಡಿರುವ ಪವಿತ್ರ ಕಾರ್ಯವನ್ನೂ ವಿಸ್ತಾರವಾಗಿ ವರ್ಣಿಸಿದನು.

ದೋ॥ ೧೦೦॥ ಆತನು ಶಿವನನ್ನು ಕುರಿತು—"ಹೇ ಶಿವನೆ, ನೀನು ನಿಜವಾಗಿ ನನ್ನನ್ನು ಪ್ರೀತಿಸುವಿಯಾದರೆ ಈಗ ನನ್ನ ವಿನಂತಿಯನ್ನು ಮನ್ನಿಸಬೇಕು. (ನನಗೋಸ್ಕರ) ಈಗಲೇ ಹೋಗಿ ಶೈಲಜೆಯಾದ (ಪಾರ್ವತೀದೇವಿ) ಯನ್ನು ನೀನು ಮದುವೆಮಾಡಿಕೊಳ್ಳಬೇಕು" ಎಂದನು. ಅದಕ್ಕೆ ಶಿವನು (ಶ್ರೀರಾಮನೇ!) ಹೀಗೆ ಮಾಡುವುದು ಉಚಿತವಲ್ಲವಾದರೂ, ಪ್ರಭುವಿನ ಅಪ್ಪಣೆಯನ್ನು ಮೀರಲಾಗದು. (ಆದುದರಿಂದ) ನಿನ್ನ ಅಪ್ಪಣೆಯನ್ನು ಶಿರಸಾವಹಿಸಿ ನೆರವೇರಿಸುವೆನು. ಹೇ ನಾಥ, ಇದೇ ನಮ್ಮ ಪರಮಧರ್ಮವು. ತಾಯಿ, ತಂದೆ, ಗುರು ಮತ್ತು ತನ್ನ ಸ್ವಾಮಿಯ ಆಜ್ಞೆಯು ಶುಭಕರವೆಂದು ಭಾವಿಸಿ, ಹಿಂದುಮುಂದು ನೋಡದೆ, ಅದನ್ನು ಮಾಡಬೇಕು. ಎಲ್ಲ ವಿಧದಲ್ಲಿಯೂ ನೀನು ನನ್ನ ಪರಮಹಿತೈಷಿಯೇ ಆಗಿರುತ್ತಿ ಆದುದರಿಂದ ಹೇ ನಾಥ, ನಿನ್ನ ಆಜ್ಞೆಯನ್ನು ಶಿರಸಾವಹಿಸಿರುವೆನು."—ಎಂದನು ರಾಮಚಂದ್ರನು, ಶಿವನ ವಚನವನ್ನು ಕೇಳಿ ಸಂತುಷ್ಟನಾದನು. ಏಕೆಂದರೆ ಆತನ (ಶಿವನ) ವಚನಗಳು ಭಕ್ತಿ, ಜ್ಞಾನ ಮತ್ತು ಧರ್ಮ ಪೂರ್ಣವಾಗಿದ್ದವು. ಅನಂತರ ರಾಮಚಂದ್ರನು (ಶಿವನನ್ನು ಕುರಿತು) "ಹೇ ಹರನೆ, ನಿನ್ನ ವ್ರತವು ಪೂರ್ಣವಾಯಿತು. ಇನ್ನು ನಾನು ಹೇಳಿರುವುದನ್ನು ಹೃದಯದಲ್ಲಿ ಧರಿಸು" ಎಂದು ಹೇಳಿ, ಅಂತರ್ಧಾನನಾದನು. ಶಿವನು ಆತನ (ರಾಮನ) ಆ ಮೂರ್ತಿಯನ್ನು ಹೃದಯದಲ್ಲಿ ಧರಿಸಿದನು. ಆ ಸಮಯದಲ್ಲಿ ಸಪ್ತಋಷಿಗಳು (ಎಂದರೆ ಕಶ್ಯಪ, ಅತ್ರಿ, ವಶಿಷ್ಠ, ವಿಶ್ವಾಮಿತ್ರ, ಭರದ್ವಾಜ, ಗೌತಮ, ಮತ್ತು ಜಮದಗ್ನಿ ಋಷಿಗಳು) ಶಿವನ ಬಳಿಗೆ ಬಂದರು. ಅವರನ್ನು ಕಂಡು ಪ್ರಭುವು (ಮಹಾದೇವನು) ಸುಂದರವಾದೀ ವಚನಗಳನ್ನು ಹೇಳಿದನು.—

## ಶಿವನು ಸಪ್ತಋಷಿಗಳ ಮೂಲಕ ಪಾರ್ವತಿಯ ಪ್ರೇಮ ಪರೀಕ್ಷೆ ಮಾಡುವುದು.

ದೋ॥ ೧೦೧॥ "ನೀವು ಪಾರ್ವತಿಯ ಹತ್ತಿರಕ್ಕೆ ಹೋಗಿ ಅವಳ ಪ್ರೇಮ ಪರೀಕ್ಷೆಯನ್ನು ಮಾಡಿರಿ, ಮತ್ತೆ ಹಿಮವಂತನೆದುರಿಗೆ ಮಾತನಾಡಿ, ಅವಳನ್ನು ಮನೆಗೆ ಕಳುಹಿಸಿ, ಸಂದೇಹವನ್ನು ದೂರಪಡಿಸಿರಿ."—(ಎಂದು ಶಿವನು ಹೇಳಿದ ಕೂಡಲೆ,) ಆ ಏಳು ಮಂದಿ ಋಷಿಗಳೂ ಪಾರ್ವತಿಯ ಬಳಿಗೆ ಹೋದರು. ಅಲ್ಲಿ ಆಕೆಯ ಸ್ಥಿತಿಯನ್ನು ನೋಡಿ ಅವರಿಗೆ ಆಶ್ಚರ್ಯವಾಯಿತು. ಅವರು ಉಮೆಯನ್ನು ನೋಡಿ "ಎಂತಹ ದಿವ್ಯಮೂರ್ತಿಯ ತಪಸ್ಸಿದು" ಎಂದುಕೊಂಡರು. ಆಮೇಲೆ ಆ ಮುನಿಗಳು, "ಹೇ ಪಾರ್ವತಿ, ನಮ್ಮ ಮಾತನ್ನು ಕೇಳು. ನೀನು ಯಾವ ಕಾರಣದಿಂದ ಇಂತಹ ದೊಡ್ಡ ತಪಸ್ಸನ್ನು ಮಾಡುತ್ತಿರುವಿ? ಯಾರ ಆರಾಧನೆಯನ್ನು ಮಾಡುತ್ತಿರುವಿ? ಏನನ್ನು ಅಪೇಕ್ಷಿಸುವಿ? ನಮ್ಮ ಹತ್ತಿರ

ನಿನ್ನ ಮರ್ಮವನ್ನು ನಿಜವಾಗಿ ಹೇಳುವುದಿಲ್ಲವೇಕೆ ?" ಎಂದರು. (ಮುನಿಗಳ ಆ ಮಾತನ್ನು ಕೇಳಿ) ಪಾರ್ವತೀದೇವಿಯು ಬಹು ಸಂಕೋಚಭಾವದಿಂದ— "(ಹೇ ಮುನಿಶ್ರೇಷ್ಠರೇ) ನನ್ನ ಮೂಢಮಾತುಗಳನ್ನು ಕೇಳಿ ತಾವು ನಗ ಬಹುದು ಮನಸ್ಸು ಹಟವನ್ನು ಹಿಡಿದಿದೆ. ಅದು ಬೇರೆಯವರ ಮಾತನ್ನು ಕೇಳುವುದಿಲ್ಲ. ನೀರಿನಮೇಲೆ ಗೋಡೆಯನ್ನು ಕಟ್ಟಲು ಅದು ಅಪೇಕ್ಷಿಸುತ್ತಿದೆ. ನಾರದರು ಹೇಳಿರುವ ಮಾತನ್ನು ನಾನು ಸತ್ಯವೆಂದು ಭಾವಿಸಿರುವೆನು. ರೆಕ್ಕೆಗಳಿಲ್ಲದೆ ನಾನು (ಆಕಾಶಕ್ಕೆ) ಹಾರಲಪೇಕ್ಷಿಸುತ್ತಿರುವೆನು. ಹೇ ಮುನೀಗಳೇ ನನ್ನ ಮೂರ್ಖತನವನ್ನು ನೋಡಿರಿ ನನಗೆ ಶಿವನೇ ಸದಾ ಪತಿಯಾಗಿರಬೇಕೆಂದು ಅಪೇಕ್ಷಿಸುತ್ತಿರುವೆನು" ಎಂದಳು.

ದೋ ॥ ೧೦೨ ॥ ಪಾರ್ವತಿಯ ಮಾತನ್ನು ಕೇಳಿ ಋಷಿಗಳು ನಕ್ಕು, ಪಾರ್ವತಿಯನ್ನು ಕುರಿತು "ನೀನು ಹಿಮಾಚಲನ ಪುತ್ರಿಯು. ನಿಜವಾಗಿ ನೋಡಿದರೆ ನಾರದರ ಉಪದೇಶವನ್ನು ಕೇಳಿದವರಲ್ಲಿ ಯಾರ ಮನೆಯು ತಾನೇ ಉಳಿದಿದೆ. ನಾರದನು, ದಕ್ಷನ * ಮಕ್ಕಳಿಗೆ ಉಪದೇಶವನ್ನು ಕೊಟ್ಟಿದ್ದನು. ಆದರೆ ಅವರು ಹಿಂದಿರುಗಿ ಬಂದು ಮನೆಯನ್ನು ಸಹ ನೋಡಲಿಲ್ಲ. ಚಿತ್ರಕೇತು †

---

* ದಕ್ಷನು ಸಾವಿರ ಮಕ್ಕಳನ್ನು ಉತ್ಪನ್ನಮಾಡಿ, ಅವರಿಗೆ, "ನೀವು ಸೃಷ್ಟಿಯನ್ನು ಮಾಡಿರೆಂದು" ಆಜ್ಞಾಪಿಸಿದನು. ತಂದೆಯ ವಚನವನ್ನು ಪಾಲಿಸಲೋಸುಗ ಅವರು ಪಶ್ಚಿಮದ ಕಡೆ ತೆರಳಿ ವನದಲ್ಲಿ ತಪಸ್ಸನ್ನಾಚರಿಸಲಾರಂಭಿಸಿದರು. ಆ ಸಮಯದಲ್ಲಿ ನಾರದನು ಅವರ ಬಳಿಗೆ ಹೋಗಿ ಅವರೆಲ್ಲರೂ ವಿರಕ್ತರಾಗುವಂತೆ ಉಪದೇಶಿಸಿದನು. ಅವನಾ ಉಪದೇಶವನ್ನು ಕೇಳಿ ದಕ್ಷಪುತ್ರರಲ್ಲಿ ಒಬ್ಬನಾದರೂ ಮನೆಗೆ ಹಿಂತಿರುಗಿ ಬರಲಿಲ್ಲ ಆಗ ದಕ್ಷಪ್ರಜಾಪತಿಯು ಕನ್ಯೆಯರನ್ನು ಉತ್ಪನ್ನಮಾಡಿ ಸೃಷ್ಟಿಯನ್ನು ಬೆಳೆಯಿಸಿದನು, ಮತ್ತೆ ನಾರದನಿಗೆ "ನೀನು ಎರಡು ಘಳಿಗೆಗಳಿಗಿಂತಲೂ ಹೆಚ್ಚಾಗಿ ಒಂದೆಡೆಯಲ್ಲಿ ನಿಲ್ಲದಂತಾಗಲಿ ?" ಎಂದು ಶಾಪವನ್ನಿತ್ತನು. ಹೇ ಪಾರ್ವತೀ, ಇದೇ ನಾರದನ ಉಪದೇಶದ ಫಲವು !" ಎಂದು ಮುನಿಗಳು ಹೇಳಿದರು.

† ಚಿತ್ರಕೇತುವೆಂಬ ರಾಜನಿಗೆ ಒಂದು ಕೋಟಿ ಮಂದಿ ಮಡದಿಯರಿದ್ದರು. ಆದರೆ ಒಬ್ಬರಲ್ಲಿಯೂ ಪುತ್ರಪ್ರಾಪ್ತಿಯಾಗಲಿಲ್ಲ. ಕೊನೆಗೆ ಅಂಗಿರಾ ಋಷಿಯ ಆಶೀರ್ವಾದದಿಂದ ಚಿಕ್ಕರಾಣಿಗೆ ಒಬ್ಬ ಮಗನು ಹುಟ್ಟಿದನು. ಅವನು ಒಂದು ವರ್ಷದವನಾದಾಗ ಬೇರೆ ರಾಣಿಯರು ಹೊಟ್ಟೆಕಿಚ್ಚಿನಿಂದ ಅವನಿಗೆ ವಿಷವನ್ನು ಹಾಕಿ ಕೊಂದರು. ಆಗ ರಾಜನು ವಿಶೇಷವಾಗಿ ವಿಲಪಿಸಲಾರಂಭಿಸಿದನು. ನಾರದನು ಅಲ್ಲಿಗೆ ಬಂದು ರಾಜನಿಗೆ ಎಷ್ಟು ಜ್ಞಾನೋಪದೇಶಮಾಡಿದರೂ ಪ್ರಯೋಜನವಾಗಲಿಲ್ಲ. ಆಗ ಮುನಿಯು ಮೃತ ಬಾಲಕನ ಆತ್ಮನನ್ನು ಕರೆದು, "ನೀನು ಪುನಃ ಶರೀರವನ್ನು ಪ್ರವೇಶಿಸಿ, ರಾಜನ ದುಃಖವನ್ನು ಹೋಗಲಾಡಿಸು." ಎಂದನು ಅದಕ್ಕೆ ಆತ್ಮನು "ತಂದೆ ಯಾರು, ಮಗನು ಯಾರು ? ನಾನೂ ಪೂರ್ವಜನ್ಮದಲ್ಲಿ ರಾಜನಾಗಿದ್ದೆನು. ಆಗ ನಾನು ವಿರಕ್ತನಾಗಿ ವನದಲ್ಲಿ ತಪವನ್ನು ಮಾಡುತ್ತಿರಲು, ಅಲ್ಲಿ ಒಂದು ದಿನ ಒಬ್ಬ

ವಿನ ಮನೆಯನ್ನು ಕೂಡಾ ಅವನು ಹಾಳುಮಾಡಿದನು, ಮತ್ತೆ ಹಿರಣ್ಯಕಶಿಪು‡ವಿನ ಸ್ಥಿತಿಯೂ ಅದೇ ರೀತಿಯಾಯಿತು. ಯಾವ ಸ್ತ್ರೀ ಪುರುಷರು ನಾರದನ ಮಾತನ್ನು ಕೇಳುವರೋ ಅವರು ಅವಶ್ಯವಾಗಿ ಮನೆಮಾರುಗಳನ್ನು ಬಿಟ್ಟು ಭಿಕ್ಷುಕರಾಗುವರು. ಅವನ ಮನಸ್ಸು ಕಪಟಪೂರ್ಣವಾದುದು. ಅವನ ಶರೀರ ವಾದರೋ ಸಜ್ಜನರಂತೆ ಕಾಣುತ್ತಿರುವುದು. ಅವನು ಎಲ್ಲರನ್ನು ತನ್ನಂತೆಯೇ ಮಾಡಲಪೇಕ್ಷಿಸುತ್ತಿರುವನು. ಅವನ ಮಾತಿನಲ್ಲಿ ವಿಶ್ವಾಸವನ್ನಿಟ್ಟು, ನೀನು ಉದಾಸೀನ ಸ್ವಭಾವವುಳ್ಳವನೂ ಗುಣಹೀನನೂ ನಿರ್ಲಜ್ಜನೂ ಅಮಂಗಳವೇಷ ಧಾರಿಯೂ ಕಪಾಲಮಾಲೆಯನ್ನು ಧರಿಸಿರುವವನೂ ಕುಲಹೀನನೂ ಮನೆ ಬಾಗಿಲುಗಳಿಲ್ಲದವನೂ ದಿಗಂಬರನೂ ಸರ್ಪಧಾರಿಯೂ ಆದಂತಹನನ್ನು ಪತಿ ಯಾಗಿ ವರಿಸಬೇಕೆಂದು ಅಪೇಕ್ಷಿಸುತ್ತಿರುವಿ. ಇಂತಹ ವರ ಪ್ರಾಪ್ತಿಯಿಂದ ನಿನಗೇನು ಸುಖವಾಗುವುದು, ಹೇಳು. ನೀನು ಮೋಸಗಾರರ ಜಾಲದಲ್ಲಿ ಸಿಕ್ಕಿ ಬಿದ್ದಿರುವಿ. ಶಿವನು ಪಂಚ (ಮಹನೀಯು)ರ ಹೇಳಿಕೆಯ ಪ್ರಕಾರ ಸತಿ ಯನ್ನು ಮದುವೆಯಾದನು. ಮತ್ತೆ ಅವಳನ್ನು ತ್ಯಜಿಸಿ ಅವಳು ಸಾಯುವಂತೆ ಮಾಡಿದನು.

ದೋ॥೧೦೩॥ “ಈಗ ಶಿವನು ಸುಖವಾಗಿ ನಿದ್ರಿಸುತ್ತಿರುವನು. ಅವನು ನಿಶ್ಚಿಂತನಾಗಿ ಭಿಕ್ಷೆಯನ್ನು ಬೇಡಿ ಹೊಟ್ಟೆ ಹೊರೆಯುತ್ತಿರುವನು. ಇಂತಹ ಆ ಜನ್ಮ ಏಕಾಂಗಿಯಾದವನ ಮನೆಯಲ್ಲಿ ಎಂದಾದರೂ ಸ್ತ್ರೀಯು ವಾಸಿಸಬಲ್ಲಳೇ ? ಈಗಲಾದರೂ ನಮ್ಮ ಮಾತನ್ನು ಮನ್ನಿಸು. ನಾವು ನಿನಗೆ ಒಳ್ಳೆಯ ವರನನ್ನು

---

ಸ್ತ್ರೀಯು ಬಂದು ನನಗೆ ಒಂದು ಫಲವನ್ನು ಕೊಟ್ಟಳು. ಅದನ್ನು ತಿನ್ನುವುದಕ್ಕಾಗಿ ನಾನು ಅದನ್ನು ಬೆಂಕಿಯಲ್ಲಿ ಬೇಯಿಸಿದೆನು. ಆಗ ಆ ಫಲದಲ್ಲಿದ್ದ ಲಕ್ಷೋಪಲಕ್ಷ ಕೀಟಗಳು ಸತ್ತುಹೋದವು ಆ ಕೀಟಗಳೇ ಈಗ ರಾಜನಿಗೆ ಸ್ತ್ರೀಸ್ವರೂಪವಾಗಿ ಮುಯ್ಯಿ ತೀರಿಸಿಕೊಂಡರು ನನಗೆ ಫಲವನ್ನು ಕೊಟ್ಟಿದ್ದ ಸ್ತ್ರೀಯೇ ನನ್ನ ಮಾತೆ ಯಾಗಿರುವಳು," ಎಂದು ಹೇಳಿ ಹೊರಟುಹೋದನು. ಆಗ ಚಿತ್ರಕೇತುವಿಗೆ ಜ್ಞಾನೋದಯವಾಗಿ, ಅವನು ಎಲ್ಲವನ್ನೂ ಬಿಟ್ಟು ತಪಸ್ಸನ್ನು ಮಾಡಲು ವನಕ್ಕೆ ಹೊರಟುಹೋದನು.

‡ ಹಿರಣ್ಯಕಶಿಪುವಿನ ಸ್ತ್ರೀಯು ಗರ್ಭವತಿಯಾಗಿದ್ದಾಗ ಒಂದು ದಿನ ನಾರದನು ಬಂದು ಅವನಿಗೆ ಜ್ಞಾನೋಪದೇಶವನ್ನು ಮಾಡಿದನು. ಅದರಿಂದ ಹಿರಣ್ಯಕಶಿಪುವಿನ ಮನಸ್ಸಿನ ಮೇಲೆ ಪರಿಣಾಮವಾಗಲಿಲ್ಲ. ಆದರೆ ಆ ಉಪದೇಶವನ್ನು ಕೇಳುತ್ತಿದ್ದ ಅವನ ಸ್ತ್ರೀಯ ಗರ್ಭದಲ್ಲಿದ್ದ ಬಾಲಕನಿಗೆ ಅದರಿಂದ ಜ್ಞಾನೋದಯವುಂಟಾಯಿತು. ಆ ಬಾಲಕನೆ ಪ್ರಹ್ಲಾದನೆನಿಸಿದನು. ತಂದೆಯು ಎಷ್ಟು ವಿರೋಧವನ್ನು ಮಾಡಿ ದಾಗ್ಗೂ ಅವನು ವಿಷ್ಣು ಭಜನೆಯನ್ನು ಬಿಡಲಿಲ್ಲ. ಕೊನೆಗೆ ನಾರಾಯಣನು ಅವನಿ ಗೋಸ್ಕರ ನೃಸಿಂಹಾವತಾರವನ್ನು ತಾಳಿ ಹಿರಣ್ಯಕಶಿಪುವನ್ನು ಸಂಹರಿಸಿ ಪ್ರಹ್ಲಾದನನ್ನು ಉದ್ಧರಿಸಿದನು.

ಆರಿಸಿರುವೆವು. ಅವನು ಬಹುಸುಂದರನೂ ಸುಖದಾಯಕನೂ ಸುಶೀಲನೂ ಆಗಿರುವನು. ವೇದಗಳು ಕೂಡಾ ಅವನ ಯಶಸ್ಸಿನ ಲೀಲೆಯನ್ನು ಹೊಗಳುತ್ತಿರುವವು. ಅವನು ದೂಷಣರಹಿತನೂ, ಸಕಲ ಗುಣರಾಶಿರೂಪನೂ ಲಕ್ಷ್ಮೀಪತಿಯೂ ವೈಕುಂಠವಾಸಿಯೂ ಆಗಿರುವನು. ಇಂತಹ ವರನನ್ನು ನಿನ್ನೊಂದಿಗೆ ಸೇರಿಸುವೆವು" ಎಂದರು. ಆ ಮಾತನ್ನು ಕೇಳಿ ಭವಾನಿಯು ನಕ್ಕು ಇಂತೆಂದಳು—"ನನ್ನ ಈ ಶರೀರವು ಪರ್ವತರಾಜನಿಂದ ಉತ್ಪನ್ನವಾದುದೆಂದು ನೀವು ಹೇಳಿದ ಮಾತು ಸತ್ಯವಾದುದು. ಆದುದರಿಂದಲೇ ನಾನೂ ಹಿಡಿದ ಹಟವನ್ನು ಬಿಡಲಾರೆನು. ಇದರಿಂದ ನನ್ನ ಶರೀರವು ನಾಶವಾದರೂ ಚಿಂತೆಯಿಲ್ಲ. ಕಲ್ಲಿನಿಂದ ಬಂಗಾರವು ಉತ್ಪನ್ನವಾಗುವದು. ಆದರೆ ಅದನ್ನು ಕಾಯಿಸಿದಾಗ್ಯೂ ಅದು ತನ್ನ ಸ್ವಭಾವವನ್ನು ಬಿಡುವುದಿಲ್ಲ. ನಾನು ನಾರದ ಮುನಿಯ ವಚನವನ್ನು ನಿರಾಕರಿಸಲಾರೆನು. ಮನೆಯಿರಲಿ ಅಥವಾ ಇಲ್ಲದಿರಲಿ ಅದಕ್ಕೆ ನಾನು ಹೆದರುವುದಿಲ್ಲ. ಗುರುವಿನ ವಚನದಲ್ಲಿ ವಿಶ್ವಾಸವಿಲ್ಲದವರಿಗೆ ಸ್ವಪ್ನದಲ್ಲಿಯೂ ಕೂಡಾ ಸುಖಪ್ರಾಪ್ತಿಯಾಗಲಾರದು."

ದೋ॥ ೧೦೪ ॥ "ಮಹಾದೇವನು ಅವಗುಣಗಳ ನಿಧಿಯಾಗಿರಬಹುದು. ವಿಷ್ಣು ಭಗವಾನನು ಸಕಲ ಗುಣರಾಶಿರೂಪನಾಗಿರಬಹುದು. ಆದರೆ ಯಾರ ಮನಸ್ಸು ಯಾವುದರಲ್ಲಿ ಮಗ್ನವಾಗಿರುವುದೋ ಅವರಿಗೆ ಅದರಿಂದಲೇ ಫಲಪ್ರಾಪ್ತಿಯಾಗುತ್ತದೆ. * ಹೇ ಮುನೀಶ್ವರರೇ, ಮೊದಲೇ ನನಗೆ ನಿಮ್ಮ ದರ್ಶನವಾಗಿದ್ದರೆ ನಾನು ನಿಮ್ಮ ಉಪದೇಶವನ್ನು ಶಿರಸಾವಹಿಸಿ ನಡೆಯಿಸುತ್ತಿದ್ದೆನು. ಆದರೆ ಈಗ ನಾನು ನನ್ನ ಜನ್ಮವನ್ನು ಶಿವನಿಗೋಸ್ಕರ ಮುಡುಪಾಗಿ ಇಟ್ಟಿರುವೆನು. ಆದುದರಿಂದ ಶಿವನ ಗುಣದೋಷಗಳನ್ನು ಈಗ ಮಾಡಲಾಗದು. ಮದುವೆಯ ಮಾತಿನ ವಿನಹಾ ನಿಮ್ಮ ಮನಸ್ಸು ಶಾಂತವಾಗದಿದ್ದರೆ ನಿಮ್ಮಂತಹ ವಿನೋದಶೀಲರು ಇಲ್ಲಿ ಆಲಸ್ಯಮಾಡುವ ಕಾರಣವಿಲ್ಲ. (ಅರ್ಥಾತ್ ಬೇರೆ ಸ್ಥಳಗಳಲ್ಲಿ ಬೇಕಾದಷ್ಟು ಕೆಲಸಗಳು ಸಿಕ್ಕುವವು ಏಕೆಂದರೆ) ಈ ಜಗತ್ತಿನಲ್ಲಿ ಕನ್ಯೆ ಮತ್ತು ವರರ ಸಂಖ್ಯೆಯು ವಿಶೇಷವಾಗಿರುವುದು. ನನಗೆ ಕೋಟ್ಯಾನುಕೋಟಿ ಜನ್ಮಗಳು ಪ್ರಾಪ್ತವಾದರೂ "ಮದುವೆಯಾದರೆ ನಾನು ಶಂಭುವನ್ನೇ ವರಿಸುವೆನು. ಇಲ್ಲವಾದರೆ ಕುಮಾರಿಯಾಗಿರುವೆನು" ಎಂಬೀ ಹಟವನ್ನು ನಾನು ಬಿಡುವದಿಲ್ಲ. ಸಾಕ್ಷಾತ್ ಶಿವನೇ ಬಂದು ನೂರು ಸಾರಿ ಹೇಳಿದಾಗ್ಯೂ ನಾನು ನಾರದನ ಉಪದೇಶವನ್ನು ತ್ಯಜಿಸಲಾರೆನು. ಈಗ ನಾನು ನಿಮ್ಮ ಚರಣಗಳಿಗೆರಗುವೆನು. ನೀವು ನಿಮ್ಮ

* "ದಧಿ ಮಧುರಂ ಮಧು ಮಧುರಂ ದ್ರಾಕ್ಷಾ ಮಧುರಾ ಸಿತಾಪಿ ಮಧುರೈವ। ತಸ್ಯ ತದೇವ ಹಿ ಮಧುರಂ ಯಸ್ಯ ಮನೋ ಯತ್ರ ಸಂಲಗ್ನಮ್॥" ಎಂದರೆ ಮೊಸರು, ಜೇನುತುಪ್ಪ ದ್ರಾಕ್ಷಿ, ಸಕ್ಕರೆ—ಇವುಗಳೆಲ್ಲವೂ ಸಿಹಿಯಾದವುಗಳು. ಆದರೆ ಯಾರಿಗೆ ಯಾವುದರಲ್ಲಿ ಮನಸ್ಸಿರುವುದೊ ಅದೇ ಅವರಿಗೆ ಮಧುರವಾಗಿ ತೋರುವುದು.

ಮಂದಿರಕ್ಕೆ ತೆರಳಬೇಕು. ಈಗ ಬಹಳ ಹೊತ್ತಾಯಿತು," ಎಂದು ಜಗದಂಬಿಯಾದ ಪಾರ್ವತಿಯು ಹೇಳಿದುದನ್ನುಕೇಳಿ ಶಿವನಲ್ಲಿ (ಅಸೀಮವಾದಾ ಭವಾನಿಯ) ಪ್ರೇಮವನ್ನು ನೋಡಿ ಜ್ಞಾನಿಗಳಾದ ಮುನಿಗಳು "ಹೇ ಭವಾನೀ, ಹೇ ಜಗದಂಬಿಕೇ, ನಿನಗೆ ಜಯವಾಗಲಿ, ಜಯವಾಗಲಿ."

ದೋ॥ ೧೦೫ ॥ "ಮಾಯೆಯ ಸ್ವರೂಪಳಾದ ನೀನೂ ಈಶಸ್ವರೂಪನಾದ ಶಿವನೂ ಸಕಲ ಜಗತ್ತಿನ ಮಾತಾಪಿತೃಗಳಾಗಿರುವಿರಿ." ಎಂದು ಹೇಳಿ ಪಾರ್ವತಿಯ ಚರಣಗಳಿಗೆ ನಮಿಸಿ ಪುನಃ ಪುನಃ ಪುಲಕಾಯಮಾನರಾಗುತ್ತಾ (ಮುನಿವರರು) ಅಲ್ಲಿಂದ ತೆರಳಿದರು. ಅಲ್ಲಿಂದ ತೆರಳಿ ಹಿಮವಂತನನ್ನು ಪಾರ್ವತಿಯ ಬಳಿಗೆ ಕಳುಹಿಸಿದರು. ಅವನು ಪಾರ್ವತಿಗೆ ವಿನಂತಿಮಾಡಿಕೊಂಡು ಆಕೆಯನ್ನು ಮನೆಗೆ ಕರೆತಂದನು. ಅನಂತರ ಆ ಸಪ್ತಋಷಿಗಳು ಶಿವನ ಬಳಿಗೆ ಹೋಗಿ ಪಾರ್ವತಿಯ ಕಥೆಯನ್ನೆಲ್ಲಾ ಹೇಳಿದರು. ಪಾರ್ವತಿಯ (ಇಂತಹ) ಸ್ನೇಹದ ಕಥೆಯನ್ನು ಕೇಳಿ ಶಿವನು ವಿಶೇಷ ಪ್ರಸನ್ನನಾದನು. ಸಪ್ತಋಷಿಗಳು ಹರ್ಷಿತರಾಗಿ ತಂತಮ್ಮ ಮಂದಿರಗಳಿಗೆ ತೆರಳಿದರು. ಆಗ ಜ್ಞಾನಿಯಾದ ಶಿವನು ತನ್ನ ಮನಸ್ಸನ್ನು ಸ್ಥಿರೀಕರಿಸಿ ರಘುನಾಯಕನ ಧ್ಯಾನವನ್ನು ಮಾಡಲಾರಂಭಿಸಿದನು. ಅದೇ ಸಮಯದಲ್ಲಿ ತಾರಕನೆಂಬ ಒಬ್ಬ ಅಸುರನು ಹುಟ್ಟಿದನು. ಅವನು ಬಹುಭುಜಬಲ ಪ್ರತಾಪಿಯೂ ತೇಜಸ್ವಿಯೂ ಆಗಿದ್ದನು. ಅವನು ಎಲ್ಲ ಲೋಕಗಳನ್ನೂ ಸರ್ವ ಲೋಕಪಾಲಕರನ್ನೂ ಜೈಸಿ ಸಕಲ ದೇವತೆಗಳ ಸುಖಸಂಪದಗಳನ್ನು ಹರಣಮಾಡಿದ್ದನು. ದೇವತೆಗಳು ಅವನೊಂದಿಗೆ ಬಹಳವಾಗಿ ಯುದ್ಧಮಾಡಿ ಸೋತರು. ಏಕೆಂದರೆ ಅವನು ಅಜರನೂ ಅಮರನೂ ಆಗಿದ್ದನು. ಅವನನ್ನು ಸಂಹರಿಸುವುದು ಯಾರಿಂದಲೂ ಸಾಧ್ಯವಾಗಲಿಲ್ಲ. ಆಗ ದೇವತೆಗಳೆಲ್ಲರೂ ಬ್ರಹ್ಮನ ಬಳಿಗೆ ಹೋಗಿ ಮೊರೆ ಇಟ್ಟರು. ಬ್ರಹ್ಮನು ದುಃಖಿತರಾದ ದೇವತೆಗಳನ್ನು ನೋಡಿದನು.

ದೋ॥ ೧೦೬॥ ಬ್ರಹ್ಮದೇವನು ಅವರೆಲ್ಲರನ್ನು ಸಮಾಧಾನಪಡಿಸಿ ಹೇಳಿದುದೇನೆಂದರೆ,–ಯಾವಾಗ ಶಂಭುವಿನ ವೀರ್ಯದಿಂದ ಪುತ್ರನು ಉತ್ಪನ್ನನಾಗುವನೋ ಆವಾಗ ಈ ದೈತ್ಯನ ಮರಣವಾಗುವುದು. (ಏಕೆಂದರೆ) ಆ ಶಿವಪುತ್ರನೇ ಇವನನ್ನು ಯುದ್ಧದಲ್ಲಿ ಗೆಲ್ಲಬಲ್ಲನು. ನಾನು ಹೇಳುವಂತೆ ಒಂದು ಉಪಾಯವನ್ನು ಮಾಡಿರಿ. ಈಶ್ವರನು ಸಹಾಯಮಾಡಿದರೆ ಈ ಕಾರ್ಯವು ಸಿದ್ಧಿಸುವುದು. ದಕ್ಷಪ್ರಜಾಪತಿಯ ಯಜ್ಞದಲ್ಲಿ ಶರೀರವನ್ನು ತ್ಯಜಿಸಿದ್ದ ಸತೀದೇವಿಯು ಹಿಮಾಚಲನಲ್ಲಿ ಜನ್ಮವನ್ನು ಧರಿಸಿರುವಳು. ಆಕೆಯು ಶಿವನನ್ನೇ ಪತಿಯಾಗಿ ವರಿಸಬೇಕೆಂದು ತಪಸ್ಸನ್ನು ಮಾಡುತ್ತಿರುವಳು ಆದರೆ ಶಿವನು ಎಲ್ಲವನ್ನೂ ತ್ಯಜಿಸಿ ಸಮಾಧಿಯಲ್ಲಿ ಮಗ್ನನಾಗಿ ಕುಳಿತಿರುವನು. ಯದ್ಯಪಿ ಈ ಕಾರ್ಯದಲ್ಲಿ ವಿಘ್ನಗಳು ವಿಶೇಷವಾಗಿವೆ. ಆದಾಗ್ಯೂ ನನ್ನ ಮಾತನ್ನು ಕೇಳಿರಿ. ನೀವು ಕಾಮ

ದೇವನನ್ನು ಶಿವನ ಬಳಿಗೆ ಕಳುಹಿಸಿರಿ, ಅವನು ಹೋಗಿ ಶಿವನ ಮನಸ್ಸನ್ನು ಚಂಚಲಗೊಳಿಸುವನು. ಆಗ ನಾವು ಹೋಗಿ ಶಿವನಿಗೆ ಪ್ರಣಾಮಮಾಡಿ ಅವನ ವಿವಾಹವನ್ನು ನಿಶ್ಚೈಸುವೆವು.––ಬ್ರಹ್ಮದೇವನ ಈ ಮಾತನ್ನು ಕೇಳಿ, ಈ ಉಪಾಯವು ಬಹಳ ಚೆನ್ನಾಗಿದೆ. ಈ ಉಪಾಯದಿಂದ ದೇವತೆಗಳಿಗೆ ವಿಶೇಷ ಹಿತವಾಗುವುದು ಎಂದು ಕೆಲವು ದೇವತೆಗಳು ಹೇಳಿದರು. ಮತ್ತೆ ದೇವತೆಗಳು ಕಾಮದೇವನನ್ನು ವಿಶೇಷವಾಗಿ ಸ್ತುತಿಸಿದರು. ಆಗ ಪಂಚಬಾಣಯುಕ್ತನೂ (ಮತ್ಸ್ಯಚಿನ್ಹೆಯುಳ್ಳ ಧ್ವಜಯುಕ್ತನೂ ಆದ) ಕಾಮದೇವನು ಪ್ರಕಟನಾದನು.

### ಕಾಮದೇವನು ಶಿವನ ಬಳಿಗೆ ಹೋಗಿ ಭಸ್ಮೀಭೂತನಾಗುವನು.

ದೋ॥ ೧೦೭॥ ಆಗ ದೇವತೆಗಳು ಕಾಮ ದೇವನಿಗೆ ತಮ್ಮ ಸಂಕಷ್ಟವಿಚಾರಗಳನ್ನು ತಿಳುಹಿಸಿದರು. ಅದನ್ನು ಕೇಳಿ ಕಾಮದೇವನು ಮನಸ್ಸಿನಲ್ಲಿಯೇ ಸ್ವಲ್ಪ ಹೊತ್ತು ಆಲೋಚಿಸಿ, ಅನಂತರ ನಕ್ಕು, "ಶಿವನೊಂದಿಗೆ ವಿರೋಧಕಟ್ಟಿಕೊಳ್ಳುವುದರಿಂದ ನನಗೆ ಶುಭವಾಗದು. ಆದಾಗ್ಯೂ ನಾನು ನಿಮ್ಮ ಕೆಲಸವನ್ನು ಮಾಡುವೆನು. ಏಕೆಂದರೆ ಪರೋಪಕಾರವೇ ಪರಮಧರ್ಮವೆಂದು ವೇದಗಳು ಸಾರುತ್ತವೆ ಯಾವನು ಅನ್ಯರ ಹಿತಕ್ಕಾಗಿ ತನ್ನ ಶರೀರವನ್ನು ತ್ಯಜಿಸುವನೋ ಅಂತಹನನ್ನು ಸಂತಜನರು ಸದಾ ಸ್ತುತಿಸುವರು" ಎಂದು ಹೇಳಿ ಕಾಮದೇವನು ಎಲ್ಲರಿಗೂ ತಲೆಬಾಗಿ ನಮಿಸಿ ತನ್ನ ಪುಷ್ಪಧನುಸ್ಸನ್ನು ಕೈಯಲ್ಲಿ ತೆಗೆದುಕೊಂಡು (ವಸಂತಾದಿ) ತನ್ನ ಸಂಗಡಿಗರೊಂದಿಗೆ ಹೊರಟುಹೋದನು. ಅವನು ಹೋಗುತ್ತಿರುವಾಗ ತನ್ನ ಮನಸ್ಸಿನಲ್ಲಿಯೇ "ಶಿವನೊಂದಿಗೆ ವಿರೋಧಕಟ್ಟಿಕೊಳ್ಳುವದರಿಂದ ನನಗೆ ಮರಣವಾಗುವುದು ನಿಶ್ಚಯವು" ಎಂದು ಆಲೋಚಿಸಿದನು. ಆಗ ಅವನು ತನ್ನ ಪ್ರಭಾವವನ್ನು ಬೆಳೆಸಿ ಜಗತ್ತನ್ನೆಲ್ಲಾ ತನ್ನ ಅಧೀನಪಡಿಸಿಕೊಂಡನು. ಆ ಸಮಯದಲ್ಲಿ ಕಾಮದೇವನ ಕೋಪದಿಂದ ಸಕಲ ಶ್ರುತಿಸೇತುಗಳು (ಎಂದರೆ ವೇದ ಬಂಧನಗಳು) ಕ್ಷಣಕಾಲದಲ್ಲಿ ನಾಶವಾದವು. ಅರ್ಥಾತ್ ಧರ್ಮದ ಮರ್ಯಾದೆಯು ಕಡಿಮೆಯಾಗುತ್ತ ಬಂದಿತು ಬ್ರಹ್ಮಚರ್ಯ*, ವ್ರತ, ವಿವಿಧಸಂಯಮ, ಧೈರ್ಯ, ಜ್ಞಾನ, ವಿಜ್ಞಾನ, ಸದಾಚಾರ, ಜಪ, ಯೋಗ, ವೈರಾಗ್ಯ ಇವುಗಳೊಂದಿಗೆ ವಿವೇಕದ ಸೇನೆಯಲ್ಲವೂ ಹೆದರಿ ಓಡಿಹೋದವು ಕಾಮದೇವನ ಸೈನ್ಯದ ವೀರಭಟರು ರಣಭೂಮಿಯ ಕಡೆಗೆ ತಿರುಗಿದಾಗ ಜ್ಞಾನವು ತನ್ನ ಸಹಾಯಕರೊಂದಿಗೆ ಓಡಿಹೋಯಿತು. (ಅರ್ಥಾತ್

---

* ಎಂಟು ವಿಧವಾದ ಮೈಥುನಗಳಿಂದ ದೂರವಾಗಿರುವುದೇ ಬ್ರಹ್ಮಚರ್ಯವೆನಿಸಿಕೊಳ್ಳುವುದು. ಅವುಗಳಾವುವೆಂದರೆ–"ದರ್ಶನಂ ಸ್ಪರ್ಶನಂ ಕೇಲೀ ರಹಸ್ಯಂ ಗುಹ್ಯಭಾಷಣಮ್ । ಸಂಕಲ್ಪೋಽಧ್ಯವಸಾಯಶ್ಚ ಕ್ರಿಯಾನಿವೃತ್ತಿರೇವ ಚ । ಏತನ್ಮೈಥುನಮಷ್ಟಾಂಗಂ ಪ್ರವದನ್ತಿ ಮನೀಷಿಣಃ ॥"

ಕಾಮವು ಪ್ರಬಲವಾದ ಕೂಡಲೇ ಜ್ಞಾನವು ಮಾಯವಾಯಿತು) ಆಗ ಸದ್ಗ್ರಂಥಗಳೆಲ್ಲವೂ ಪರ್ವತಗಳ ಗುಹೆಗಳಲ್ಲಿ ಹೋಗಿ ಅಡಗಿಕೊಂಡವು. ಜಗತ್ತಿನಲ್ಲಿ ದೊಡ್ಡ ಕೋಲಾಹಲವೆದ್ದಿತು. ಆಗ ಹಲವರು, "ಹೇ ಪ್ರಭೋ! ಈಗೇನು ಸಂಭವಿಸುವುದು! ನಮ್ಮನ್ನು ರಕ್ಷಿಸುವವರಾರು! ಯಾರ ಮೇಲಣ ಕೋಪದಿಂದ ಕಾಮದೇವನು ಧನುರ್ಭಾಣವನ್ನು ಕೈಯಲ್ಲಿ ಧರಿಸಿರುವನೋ ಅಂತಹ ಎರಡು ತಲೆಯುಳ್ಳ ವ್ಯಕ್ತಿಯು (ದ್ವಿಮುಖಿಯು) ಯಾವನಿರುವನು?" ಎಂದು ಹಂಬಲಿಸಿದರು.

ದೋ॥ ೧೦೮ ॥ ಜಗತ್ತಿನ ಸರ್ವವಿಧವಾದ ಚರಾಚರ ಜೀವಿಗಳಲ್ಲಿ ಸ್ತ್ರೀಪುರುಷರೆಂಬ ನಾಮವುಳ್ಳವುಗಳೆಲ್ಲಾ ತಂತಮ್ಮ ಮರ್ಯಾದೆಯನ್ನು ಬಿಟ್ಟು ಕಾಮವಶವಾದವು. ಎಲ್ಲ ಹೃದಯಗಳಲ್ಲಿಯೂ ಕಾಮದ ಇಚ್ಛೆಯು ಪ್ರಬಲವಾಯಿತು. ಲತೆಗಳನ್ನು ನೋಡಿ ವೃಕ್ಷಗಳು ತಮ್ಮ ಶಾಖೆಗಳನ್ನು ಅಲ್ಲಾಡಿಸಲಾರಂಭಿಸಿದವು ನದಿಗಳು ಆನಂದೋನ್ಮಾದದಿಂದ ಉಕ್ಕುತ್ತ ಸಮುದ್ರದ ಕಡೆಗೆ ಓಡಿದವು. ಮತ್ತೆ ಕೆರೆಕೊಳಗಳು ತಂತಮ್ಮಲ್ಲಿ ಸಂಗಮಿಸಲಾರಂಭಿಸಿದವು. (ನದಿವೃಕ್ಷಾದಿ) ಜಡಸಂಸಾರದ ಸ್ಥಿತಿಯೇ ಹೀಗಾದಮೇಲೆ ಇನ್ನು ಚೇತನ ಜೀವಿಗಳ ಸ್ಥಿತಿಯನ್ನು ಯಾರು ತಾನೇ ಬಣ್ಣಿಸಬಲ್ಲರು? ಆಕಾಶ-ಜಲ ಮತ್ತು ಭೂಮಿಯ ಮೇಲೆ ವಾಸಮಾಡತಕ್ಕ ಎಲ್ಲ ಪಶುಪಕ್ಷಿಗಳು ಕಾಲ ಸಮಯವನ್ನು ಮರೆತು ಕಾಮವಶವಾದವು. ಜನರೆಲ್ಲರೂ ಕಾಮಾಂಧರಾಗಿ ವ್ಯಾಕುಲರಾದರು. ಕೋಗಿಲೆಗಳು ಹಗಲಿರುಳಿನ ಭೇದವನ್ನು ಮರೆತವು ದೇವತೆಗಳು, ದೈತ್ಯರು, ಮನುಷ್ಯರು ಕಿನ್ನರರು, ಸರ್ಪಗಳು, ಪ್ರೇತಗಳು, ಪಿಶಾಚಿಗಳು ಭೂತಬೇತಾಲಾದಿಗಳು— ಇವುಗಳೆಲ್ಲವೂ ಕಾಮದೇವನ ಶಿಷ್ಯತ್ವವನ್ನು ವಹಿಸಿದವೆಂದು ನಾನು ಅವುಗಳ ಸ್ಥಿತಿಯನ್ನು (ಇಲ್ಲಿ) ವರ್ಣಿಸಿಲ್ಲ. ಸಿದ್ಧರೂ ವೈರಾಗಿಗಳೂ, ಮಹಾಮುನಿಗಳೆನಿಸಿದ ಯೋಗಿಗಳೂ ಕೂಡಾ ಕಾಮವಶರಾಗಿ ಯೋಗಭ್ರಷ್ಟರಾದರು. ಯಾವಾಗ ಯೋಗಿಗಳೂ ತಪಸ್ವಿಗಳೂ ಕಾಮವಶರಾದರೋ ಆಗ ಚಿಕ್ಕಚಿಕ್ಕ ಬಡಜೀವಿಗಳ ಸ್ಥಿತಿಯನ್ನು ಯಾರು ಹೇಳಬಲ್ಲರು? ಸಕಲ ಚರಾಚರವನ್ನು * ಬ್ರಹ್ಮಮಯವಾಗಿ ನೋಡುತ್ತಿದ್ದವರೆಲ್ಲರೂ ಈಗ ಎಲ್ಲವನ್ನು ಸ್ತ್ರೀಮಯವಾಗಿ ನೋಡಲಾರಂಭಿಸಿದರು ಸ್ತ್ರೀಯರೆಲ್ಲರೂ ಇಡೀ ಜಗತ್ತನ್ನು ಪುರುಷಮಯವಾಗಿಯೂ ಪುರುಷರು ಸ್ತ್ರೀಮಯವಾಗಿಯೂ ನೋಡಲಾರಂಭಿಸಿದರು. ಕಾಮದೇವನು ಎರಡು ಘಳಿಗೆಗಳಲ್ಲಿ ಇಡೀ ಬ್ರಹ್ಮಾಂಡದಲ್ಲಿ ಈ ಕೌತುಕವನ್ನು ಮಾಡಿ ತೋರಿಸಿದನು.

---

* ವೇದದಲ್ಲಿ ಹೇಳಿರುವುದೇನಂದರೆ—"ಸರ್ವಂ ಖಲ್ವಿದಂ ಬ್ರಹ್ಮೇತಿ ಶೃತೇಃ" ಎಂದರೆ ಈ ಜಗತ್ತು ಬ್ರಹ್ಮಮಯವಾಗಿರುವುದು.

ದೋ॥ ೧೮೯ ॥ ಎಲ್ಲರ ಮನಸ್ಸನ್ನು ಕಾಮದೇವನು ಅಪಹರಿಸಿದನು. ಯಾರ ಹೃದಯದಲ್ಲಿಯೂ ಧೈರ್ಯವೇ ಉಳಿಯಲಿಲ್ಲ. ಆ ಸಮಯದಲ್ಲಿ ರಘುನಾಥನು ಯಾರನ್ನು ರಕ್ಷಿಸಿದ್ದನೋ ಅವರು ಮಾತ್ರ ಉಳಿದುಕೊಂಡರು. ಕಾಮದೇವನು ಶಿವನ ಬಳಿಗೆ ಹೋಗುವವರೆಗೆ ಎಂದರೆ ಎರಡು † ಘಳಿಗೆಗಳ ವರೆಗೆ ಈ ಕೌತುಕವು ನಡೆದಿತ್ತು. ಶಿವನನ್ನು ನೋಡಿದ ಕೂಡಲೇ ಕಾಮದೇವನು ಭಯಗ್ರಸ್ತನಾದನು. ಆಗ ಇಡೀ ಜಗತ್ತಿನ ಸ್ಥಿತಿಯು ಮೊದಲಿನಂತೆಯೇ ಆಯಿತು. ಈ ರೀತಿಯಾಗಿ ಕೂಡಲೇ ಜಗತ್ತಿನ ಜೀವಿಗಳೆಲ್ಲಾ ಸುಖವನ್ನು ಹೊಂದಿದವು, ಎಂದರೆ ಮದೋನ್ಮತ್ತರ ಮದವು ಇಳಿದುಹೋಯಿತು. ರುದ್ರನನ್ನು ನೋಡಿ ಕಾಮದೇವನು ಹೆದರಿದನು. ಏಕೆಂದರೆ? ಭಗವಾನ್ ‡ ಶಿವನು ದುರಾಧರ್ಷನೂ ದುರ್ಗಮನೂ ಆಗಿದ್ದನು. ಆಗ ಕಾಮದೇವನು ಹಿಂದುರಿಗಿ ಹೋಗಿದ್ದರೆ ಅವನಿಗೆ ಹೇಳಲಾರದಷ್ಟು ನಾಚಿಕೆಯುಂಟಾಗುತ್ತಿತ್ತು. ಆದುದರಿಂದ ತನ್ನ ಮರಣ ವಿಚಾರವನ್ನು ಜ್ಞಾಪಿಸಿಕೊಂಡು ಮನಸ್ಸಿನಲ್ಲಿಯೇ ಒಂದು ಉಪಾಯವನ್ನು ಯೋಚಿಸಿದನು. ಕೂಡಲೇ ಅಲ್ಲಿ ಸುಂದರವಾದ ವಸಂತ ಋತುವು ಪ್ರಕಟವಾಯಿತು. ಅದರಲ್ಲಿ ನವೀನ ತರುಪಂಕ್ತಿಗಳು ಸುಂದರವಾದ ಪುಷ್ಪಗಳಿಂದ ಶೋಭಾಯಮಾನವಾದವು. ವನ, ಉಪವನ, ಕೆರೆ, ಬಾವಿ, ಸರೋವರ ಇವುಗಳಿಂದ ಆ ಪ್ರದೇಶವು ಸುಂದರವಾಗಿ ಶೋಭಿಸಹತ್ತಿತು. ಎಲ್ಲಿ ನೋಡಿದೊಡಲ್ಲಿ ಪ್ರೇಮ ಪ್ರವಾಹವು ಉಕ್ಕಲಾರಂಭಿಸಿತು ಅದನ್ನು ನೋಡಿ ನಿರ್ಜೀವಿಗಳಲ್ಲಿ ಕೂಡಾ ಚೇತನ ಪ್ರವೃತ್ತಿಯುಂಟಾಯಿತು. ಈ ರೀತಿಯಾಗಿ ಕಾಮದೇವನ ಪ್ರಭಾವದಿಂದ ನಿರ್ಜೀವಿಗಳಲ್ಲಿಯೂ ಚೈತನ್ಯವುಂಟಾದಾಗ ಆ ವನದ ಶೋಭೆಯನ್ನು ವರ್ಣಿಸಲಾಗುತ್ತಿರಲಿಲ್ಲ. ಕಾಮಾಗ್ನಿಯ ಸನ್ಮಿತ್ರನೂ ಶೀತಲನೂ ಸುಗಂಧಿತನೂ ಆದ ವಾಯುವು ಮಂದಗತಿಯಿಂದ ಚಲಿಸಲಾರಂಭಿಸಿದನು.

---

† ಇಲ್ಲಿ ಎರಡು ಘಳಿಗೆಗಳೆಂದರೆ ಇಡೀ ಹಗಲು ಒಂದು ಘಳಿಗೆ, ಇಡೀ ರಾತ್ರಿ ಒಂದು ಘಳಿಗೆ ಎಂದು ಭಾವಿಸಬೇಕು. ಏಕೆಂದರೆ ಹಿಂದಿನ ಚೌಪದಿಯ ನಾಲ್ಕನೆಯ ಚರಣದಲ್ಲಿ 'ನಿಸಿದಿನ ನಹಿಂ ಅವಲೋಕಹಿಂ ಕೋಕಾ" ಎಂದರೆ "ಕೋಗಿಲೆಗಳು ಹಗಲಿರುಳಿನ ಭೇದವನ್ನು ಮರೆತವು" ಎಂದು ಹೇಳಿರುವರು.

‡ ಭಗವಂತನ ಲಕ್ಷಣಗಳಾವುವೆಂದರೆ—"ಐಶ್ವರ್ಯಸ್ಯ ಸಮಗ್ರಸ್ಯ ವೀರ್ಯಸ್ಯ ಯಶಸಃ ಶ್ರಿಯಃ ॥ ಜ್ಞಾನವೈರಾಗ್ಯಯೋಶ್ಚೈವ ಷಣ್ಣಾಂ ಭಗ ಇತಿಸ್ಮೃತಮ್ ॥ ಉತ್ಪತ್ತಿಂ ಪ್ರಲಯಂ ಚೈವ ಭೂತಾನಾಂ ಗತಿಮಾಗತಿಮ್ ॥ ವೇತ್ತಿವಿದ್ಯಾಮವಿದ್ಯಾಂ ಚ ಸವಾಚ್ಯೋ ಭಗವಾನಿತಿ ॥" ಅರ್ಥಾತ್ ಎಲ್ಲ ಐಶ್ವರ್ಯ, ವೀರ್ಯ, ಯಶಸ್ಸು, ಶ್ರೀ, ಜ್ಞಾನ ಮತ್ತು ವೈರಾಗ್ಯ ಇವುಗಳಿಗೆ ಭಗವೆನ್ನುವರು. ಇವುಗಳಾವನಲ್ಲಿರುವವೊ ಮತ್ತೆ ಇವುಗಳೊಂದಿಗೆ ಯಾವನು ಸೃಷ್ಟಿ, ಪ್ರಳಯ, ಅವಾಗಮನ, ವಿದ್ಯೆ, ಅವಿದ್ಯೆ ಇವುಗಳನ್ನರಿತಿರುವನೊ ಅವನನ್ನು ಭಗವಂತನೆನ್ನುವರು.

ಸರೋವರದಲ್ಲಿ ಅನೇಕ ಪ್ರಕಾರವಾದ ಕಮಲಗಳು ಅರಳಿದವು. ಸುಂದರವಾದ ಭ್ರಮರಗಳು ತಂಡೋಪತಂಡವಾಗಿ ಬಂದು ಅವುಗಳ ಮೇಲೆ ಝೇಂಕಾರ (ಗುಂಜಾರವ) ಮಾಡಲಾರಂಭಿಸಿದವು. ಸುಂದರವಾದ ಹಂಸಗಳು, ಕೋಗಿಲೆಗಳು, ಗಿಳಿಗಳು ಸರಸದಿಂದ ಕಲಕಲರವವನ್ನುಂಟುಮಾಡುತ್ತಿದ್ದವು. ಮತ್ತೆ ಅಪ್ಸರೆಯರು ಗಾನಮಾಡುತ್ತಾ ನರ್ತಿಸಲಾರಂಭಿಸಿದರು.

ದೋ॥ ೧೧೦ ॥ ಕಾಮದೇವನು ತನ್ನ ಸೇನೆಯೊಂದಿಗೆ ಕೋಟಿ ವಿಧ ಉಪಾಯಗಳನ್ನು ಮಾಡಿ ಸೋತುಹೋದನು. ಆದರೆ (ಅವುಗಳಿಂದ) ಶಿವನ ಅಚಲವಾದ ಸಮಾಧಿಯು ಇಳಿಯಲೇ ಇಲ್ಲ. ಆಗ ಆ ಕಾಮದೇವನಿಗೆ ವಿಶೇಷ ಕೋಪಬಂದಿತು. ಅವನು ಒಂದು ಮಾವಿನಮರದ ಸುಂದರವಾದ ಶಾಖೆಯೊಂದನ್ನು ನೋಡಿ ಅದರಮೇಲೆ ಹತ್ತಿ, ತನ್ನ ಪುಷ್ಪಧನುಸ್ಸಿನ ಮೇಲೆ ಬಾಣಗಳನ್ನೇರಿಸಿದನು. * ಕೋಪಭರಿತನಾಗಿ (ಶಂಕರನ ಮೇಲೆ ಗುರಿಯಿಟ್ಟು) ಕಿವಿಯವರೆಗೂ ಹೆದೆಯನ್ನೇರಿಸಿದನು. ಅನಂತರ ಅವನು ಬಿಟ್ಟ ಕಠಿಣವಾದ ಬಾಣಗಳು ಹೃದಯದಲ್ಲಿ ನೆಟ್ಟಕೂಡಲೇ ಶಿವನ ಸಮಾಧಿಯು ಭಂಗವಾಗಿ ಆತನು ಎಚ್ಚೆತ್ತನು ಶಿವನು ವಿಶೇಷ ಕೋಪದಿಂದ ಕಣ್ತೆರೆದು ನಾಲ್ಕೂ ಕಡೆಗೂ ನೋಡಿದನು. ಮಾವಿನಮರದ ಎಲೆಗಳ ಮಧ್ಯದಲ್ಲಿದ್ದ ಕಾಮದೇವನನ್ನು ನೋಡಿದಕೂಡಲೇ ಶಿವನ ಕೋಪವು ಹೆಚ್ಚಾಯಿತು; ಆಗ ಮೂರು ಲೋಕಗಳು ನಡುಗಿದವು. ಮತ್ತೆ ಶಿವನು ತನ್ನ ಮೂರನೇ ನೇತ್ರವನ್ನು ತೆರೆದು ನೋಡಿದಕೂಡಲೇ (ಅದರಿಂದ ಹೊರಟ ಜ್ವಾಲೆಯಿಂದ) ಕಾಮದೇವನು ಸುಟ್ಟು ಭಸ್ಮವಾದನು. † ಆಗ ಇಡೀ ಜಗತ್ತಿನಲ್ಲಿ ದೊಡ್ಡ ಹಾಹಾಕಾರವೆದ್ದಿತು. ದೇವತೆಗಳು ಹೆದರಿದರು. ದೈತ್ಯರು ಸುಖಿಗಳಾದರು. ಭೋಗಿಗಳು ಕಾಮದೇವನ ಸುಖವನ್ನು ಸ್ಮರಿಸಿಕೊಂಡು ಆಲೋಚಿಸಲಾರಂಭಿಸಿದರು. ಸಾಧಕರಾದ ಯೋಗಿಗಳು ನಿಶ್ಚಲಚಿತ್ತರಾದರು. ಯೋಗಿಗಳು ನಿಶ್ಚಿಂತರಾದರು ಆದರೆ ಕಾಮದೇವನ

---

* ಕಾಮದೇವನ ಪುಷ್ಪಬಾಣಗಳು ಐದು. ಯಥಾ ಶ್ಲೋಕ:—"ಅರವಿಂದ ಮಶೋಕಂಚ ಚೂತಂಚ ನವಮಲ್ಲಿಕಾ । ನೀಲೋತ್ಪಲಂತು ಪಂಚೈತೇ ಪಂಚಬಾಣಸ್ಯ ಸಾಯಕಾಃ" ಅರ್ಥಾತ್ (ಕೆಂಪು) ಕಮಲ, ಅಶೋಕಪುಷ್ಪ, ಮಾವಿನಹೂವು, ಮಲ್ಲಿಗೆ, ಮತ್ತು ನೀಲಕಮಲ—ಇವುಗಳು ಮದನನ ಪಂಚಬಾಣಗಳಿಗೆ ಸಹಾಯಕವಾದವು.

† ಈ ವಿಷಯದಲ್ಲಿ ಶಿವಪುರಾಣದಲ್ಲಿ ಹೇಳಿರುವುದೇನಂದರೆ—"ಕ್ರೋಧಂ ಸಂಹರ ಹೇ ದೇವ । ಇತಿ ಯಾವತ್ ವದನ್ತಿ ಖೇ । ಇಂದ್ರಾದಿ ಸಕಲಾ ದೇವಾಸ್ತಾವದ್ಭಸ್ಮೀಚಕಾರ ತಮ್ ॥" ಅರ್ಥಾತ್ (ಶಿವನ ಕೋಪವನ್ನು ನೋಡಿ) ದೇವತೆಗಳೆಲ್ಲರೂ 'ಹೇ ಶಂಕರ! ಕ್ರೋಧವನ್ನು ಬಿಡು, ಬಿಡು' ಎಂದು ಪ್ರಾರ್ಥಿಸುತ್ತಿರುವಷ್ಟರಲ್ಲಿಯೇ ಶಿವನು ಕಾಮದೇವನನ್ನು ಭಸ್ಮೀಕರಿಸಿದನು.

ಸ್ತ್ರೀಯಾದ ರತಿಯು ತನ್ನ ಪತಿಗೊದಗಿದ ದುಸ್ಥಿತಿಯನ್ನು ಕೇಳಿದಕೂಡಲೇ ಮೂರ್ಛಿತಳಾದಳು. ಮತ್ತೆ ಅವಳು ಅಳುತ್ತ ಕೂಗುತ್ತ ವಿಲಾಪಮಾಡುತ್ತ ಮತ್ತೆ ಹಲವು ವಿಧವಾದ ಹೃದಯದ್ರಾವಕ ಶೋಕವನ್ನು ಪ್ರಕಟಿಸುತ್ತ ಶಿವನ ಬಳಿಗೆ ಹೋದಳು. ಅಲ್ಲಿ ವಿಶೇಷ ಪ್ರೇಮದಿಂದ ಕೈಜೋಡಿಸಿ ಅನೇಕ ವಿಧದಿಂದ ಬಿನ್ನಹಗಳನ್ನು ಮಾಡಿಕೊಳ್ಳುತ್ತ ಶಿವನ ಎದುರಿಗೆ ನಿಂತಳು. ಶೀಘ್ರವಾಗಿ ಪ್ರಸನ್ನನಾಗತಕ್ಕ ಕೃಪಾಳುವಾದ ಶಿವನು ಆ ಸ್ತ್ರೀಯನ್ನು ನೋಡಿ ಮುಂದೆ ಹೇಳುವ ಶುಭವಚನಗಳನ್ನು ನುಡಿದನು.

ದೋ॥ ೧೧೧ ॥ "ಹೇ ರತಿ! ಇಂದಿನಿಂದ ನಿನ್ನ ಪತಿಯ ಹೆಸರು ಅನಂಗನೆಂದಾಗುವುದು. ಅವನು ಶರೀರ ರಹಿತನಾಗಿ ಸರ್ವವ್ಯಾಪಿಯಾಗುವನು. ಈಗ ನೀನು ನಿನ್ನ ಸ್ವಾಮಿಯನ್ನು ಸೇರುವ ಪ್ರಸಂಗವನ್ನು ಕೇಳು. ಯಾವಾಗ ಪೃಥ್ವಿಯ ಭಾರನವನ್ನಿಳಿಸುವುದಕ್ಕೋಸ್ಕರ ಯದುವಂಶದಲ್ಲಿ ಶ್ರೀಕೃಷ್ಣಚಂದ್ರನ ಅವತಾರವಾಗುವುದೋ ಆಗ ಅವನ ಪುತ್ರನು (ಪ್ರದ್ಯುಮ್ನನು) ನಿನ್ನ ಪತಿಯಾಗುವನು. ನನ್ನ ಮಾತು ಸುಳ್ಳಾಗುವುದಿಲ್ಲ." ಶಿವನ ಈ ಮಾತುಗಳನ್ನು ಕೇಳಿ ರತಿಯು ಹೊರಟುಹೋದಳು. ಈಗ ಮುಂದಣ ಕಥೆಯನ್ನು ಹೇಳುವೆನ್ನು, ಕೇಳಿರಿ? ಈ ಸಮಾಚಾರವು ದೇವತೆಗಳಿಗೆ ತಿಳಿದಕೂಡಲೇ ಬ್ರಹ್ಮಾದಿ ದೇವಗಣಗಳು ವೈಕುಂಠಕ್ಕೆ ತೆರಳಿದವು. ಅಲ್ಲಿಂದ ವಿಷ್ಣು ಮತ್ತು ಬ್ರಹ್ಮ ಸಹಿತರಾಗಿ ದೇವತೆಗಳು ಕೃಪಾನಿಧಿಯಾದ ಮಹಾದೇವನಿದ್ದೆಡೆಗೆ ಹೋದರು. ಅಲ್ಲಿ ಪ್ರತಿಯೊಬ್ಬನೂ ಶಿವನನ್ನು ವಿವಿಧವಾಗಿ ಸ್ತುತಿಸಿದನು. ಅದರಿಂದ ಚಂದ್ರಶೇಖರನು ಪ್ರಸನ್ನನಾದನು. ಕೃಪಾಸಾಗರನಾದ ಶಿವನು ಅವರನ್ನು ನೋಡಿ, "ಹೇ ದೇವತೆಗಳೇ ನೀವು ಏತಕ್ಕೆ ಬಂದಿರುವಿರಿ" ಎಂದು ಕೇಳಿದನು. ಆಗ ಬ್ರಹ್ಮನು, "ಹೇ ಪ್ರಭೋ ನೀನು ಅಂತರ್ಯಾಮಿಯು, ಆದಾಗ್ಯೂ ಹೇ ಸ್ವಾಮಿನ್, ಭಕ್ತಿವಶನಾದ ನಾನು ನಿನ್ನಲ್ಲಿ ವಿನಂತಿಮಾಡಿಕೊಳ್ಳುವೆನು.

ದೋ॥ ೧೧೨ ॥ ಹೇ ಶಂಕರಾ, ತಮ್ಮ ಕಣ್ಣುಗಳಿಂದ ನಿಮ್ಮ ವಿವಾಹವನ್ನು ನೋಡಬೇಕೆಂದು, ಹೇ ನಾಥ, ದೇವತೆಗಳ ಮನಸ್ಸಿನಲ್ಲಿ ಉತ್ಸಾಹವುಂಟಾಗಿರುವುದು. ಹೇ ಮದನಮದಮೋಚನನಾದ ಭಗವಂತನೇ, ನಾವು ಈ ಉತ್ಸವವನ್ನು ಕಣ್ಣುತುಂಬ ನೋಡುವಂತೆ ಅನುಗ್ರಹಿಸು. ಕೃಪಾಸಾಗರನಾದ ನೀನು ಕಾಮದೇವನನ್ನು ಭಸ್ಮಮಾಡಿ ಅನಂತರ ರತಿಗೆ ವರದಾನಮಾಡಿದ್ದು ಒಳ್ಳೆಯದಾಯಿತು. ಶಿಕ್ಷೆಯನ್ನು ವಿಧಿಸಿದನಂತರ ಪ್ರಸನ್ನತೆಯನ್ನು ತೋರಿಸಿರುವಿ. ಹೇ ನಾಥಾ! ಇದು ಸ್ವಾಮಿತ್ವವನ್ನು ಹೊಂದಿದವರ ಸ್ವಾಭಾವಿಕ ಸುಸ್ವಭಾವವು. ಪಾರ್ವತೀದೇವಿಯು ಅಪಾರವಾದ ತಪಸ್ಸನ್ನು ಮಾಡಿರುವಳು. ಈಗ ನೀನು ಅವಳನ್ನು ಸ್ವೀಕರಿಸಬೇಕು" ಎಂದನು. ಬ್ರಹ್ಮದೇವನ ಈ ಮಾತನ್ನು ಕೇಳಿ ವಿಷ್ಣುಭಗವಾನನ ಮಾತನ್ನು ಸ್ಮರಿಸಿಕೊಂಡು ಶಿವನು ಉಲ್ಲಾಸಚಿತ್ತದಿಂದ "ಹಾಗೆಯೇ ಆಗಲಿ"

ಎಂದನು. ಇದನ್ನು ಕೇಳಿದಕೂಡಲೇ ದೇವತೆಗಳು ನಗಾರಿಯನ್ನು ಬಾರಿಸಿ ಪುಷ್ಪವೃಷ್ಟಿಯನ್ನು ಸುರಿಸಿ, ಎಲ್ಲರೂ "ಹೇ ಧೇವತೆಗಳ ಸ್ವಾಮಿಯೇ, ನಿನಗೆ ಜಯವಾಗಲಿ, ಜಯವಾಗಲಿ!" ಎಂದರು. ಈ ಸಮಯವನ್ನರಿತು ಸಪ್ತಋಷಿಗಳು ಅಲ್ಲಿಗೆ ಬಂದರು. ಬ್ರಹ್ಮನು ಅವರನ್ನು ಹಿಮಾಚಲನ ಬಳಿಗೆ ಕಳುಹಿಸಿದನು. ಅವರು ಮೊದಲು ಪಾರ್ವತಿಯ ಬಳಿಗೆ ಹೋಗಿ ಮುಂಧೆ ಹೇಳುವ ಕಪಟಪೂರ್ಣವಾದ ಮಧುರ ವಚನಗಳನ್ನಾಡಿದರು.

ದೋ॥ ೧೧೩ ॥ (ಹೇ ಪಾರ್ವತೀದೇವಿ) ನೀನು ನಾರದನ ಮಾತನ್ನು ನಂಬಿ ನಮ್ಮ ಮಾತನ್ನು ಮನ್ನಿಸಲಿಲ್ಲ. ಈಗ ನಿನ್ನ ಶಪಥವು ಸುಳ್ಳಾಗಿ ಹೋಯಿತು. ಏಕೆಂದರೆ ಶಿವನು ಕಾಮದೇವನನ್ನು ಸುಟ್ಟು ಭಸ್ಮಮಾಡಿದನು.——ಹೀಗೆಂದ ಋಷಿಗಳ ಮಾತನ್ನು ಕೇಳಿ ಪಾರ್ವತಿಯು ಮಂದಸ್ಮಿತಳಾಗಿ ಇಂತೆಂದಳು—ಹೇ ಜ್ಞಾನಿಗಳಾದ ಮುನಿಶ್ರೇಷ್ಠರೇ ನೀವು ಹೇಳಿದ್ದು ನಿಜ. ಶಿವನು ಕಾಮದೇವನನ್ನು ಈಗ ಸುಟ್ಟಿರುವನೆಂದೂ ಈವರೆಗೆ ಆತನು ಸವಿಕಾರನೂ ಭೋಗಿಯೂ ಆಗಿದ್ದನೆಂದು ನೀವು ತಿಳಿದಿರುವಿರಿ. ಆದರೆ ನನ್ನ ತಿಳಿವಳಿಕೆಯ ಪ್ರಕಾರ ಶಿವನು ಸದಾ ಯೋಗಿಯೂ ಅಜನ್ಮನೂ ನಿಂದಾರಹಿತನೂ ಕಾಮಹೀನನೂ ಭೋಗರಹಿತನೂ ಆಗಿರುವನು. ಇದನ್ನು ತಿಳಿದುಕೊಂಡೇ ನಾನು ಮನೋವಾಕ್ಕಾಯಗಳಿಂದ ಶಿವನ ಸೇವೆಯನ್ನು ಪ್ರೀತಿಯಿಂದ ಮಾಡಿರುವೆನು. ಮತ್ತೆ ಹೇ ಮುನೀಶ್ವರರೇ! ಕೇಳಿರಿ! ಕೃಪಾನಿಧಿಯಾದ ಶಿವನು ನನ್ನ ಪ್ರತಿಜ್ಞೆಯನ್ನು ನೆರವೇರಿಸುವನು. ಶಿವನು ಕಾಮದೇವನನ್ನು ಭಸ್ಮಮಾಡಿದನೆಂಬ ನಿಮ್ಮ ಹೇಳಿಕೆಯು ಅವಿವೇಕವಾದುದು. ಹೇ ತಾತ! ಅಗ್ನಿಯ ಸ್ವಭಾವದಿಂದ ಚಳಿಯು ಅದರ ಸಮೀಪಕ್ಕೆ ಹೋಗಲಾರದು. ಹೋದರೆ ಅದು ಅವಶ್ಯವಾಗಿ ನಾಶವಾಗುವುದು. ಅದೇ ರೀತಿಯಾಗಿ ಕಾಮದೇವನು ಮಹಾದೇವನ ಹತ್ತಿರ ಹೋಗಿ ನಾಶಹೊಂದಿದನು."

ಧೋ॥ ೧೧೪ ॥ ಪಾರ್ವತಿಯ ಮಾತನ್ನು ಕೇಳಿ ಮತ್ತೆ ಅವಳ ಪ್ರೀತಿಯನ್ನೂ ವಿಶ್ವಾಸವನ್ನೂ ನೋಡಿ ಮುನಿಗಳು ವಿಶೇಷ ಪ್ರಸನ್ನರಾಗಿ ಭವಾನಿಗೆ ಪ್ರಣಾಮ ಮಾಡಿ ಹಿಮಾಚಲನ ಬಳಿಗೆ ತೆರಳಿದರು. ಅಲ್ಲಿ ಅವರು ಹಿಮಾಚಲನಿಗೆ ಈವರೆಗೆ ನಡೆದ ಎಲ್ಲ ವೃತ್ತಾಂತವನ್ನು ಅರುಹಿದರು. ಕಾಮದೇವನು ಭಸ್ಮಿತನಾದ ಸುದ್ದಿಯನ್ನು ಕೇಳಿ, ಹಿಮಾಚಲನು ವಿಶೇಷವಾಗಿ ದುಃಖಿಸಿದನು. ಆದರೆ ರತಿಯ ವರದಾನದ ಮಾತುಗಳನ್ನು ಕೇಳಿ ಮತ್ತೆ ಸುಖಿಯಾದನು.

### ಶಿವನ ಪರಿವಾರ ಮತ್ತು ವಿವಾಹಮಹೋತ್ಸವದ ವರ್ಣನೆ.

ಶಂಭುವಿನ ಪ್ರಭುತ್ವವನ್ನು ಮನಸ್ಸಿನಲ್ಲಿಯೇ ಆಲೋಚಿಸಿ ತಿಳಿದು ಹಿಮಾಚಲನು ಮುನಿಗಳನ್ನು ಸಾದರದಿಂದ ಕರೆಯಿಸಿದನು. ಅವರು ಶುಭದಿನ ಶುಭನಕ್ಷತ್ರ ಮತ್ತು ಶುಭ ಘಳಿಗೆಯನ್ನು ನೋಡಿ ವೇದೋಕ್ತ ವಿಧಾನದಿಂದ ಲಗ್ನವು

ಶೀಘ್ರವಾಗಿ ನೆರವೇರುವಂತೆ ನಿಶ್ಚೈಸಿದರು. ಅನಂತರ ಹಿಮಾಚಲನು ಲಗ್ನ ಪತ್ರಿಕೆಯನ್ನು ಬರೆದು ಸಪ್ತರ್ಷಿಗಳ ಕೈಯಲ್ಲಿ ಕೊಟ್ಟು, ಅವರ ಪಾದಗಳಿಗೆರಗಿ, ಆ ಪತ್ರಿಕೆಯನ್ನು ಬ್ರಹ್ಮನಿಗೆ ತಲುಪಿಸಬೇಕೆಂದು ಬೇಡಿಕೊಂಡನು. ಬ್ರಹ್ಮನು ಅದನ್ನು ಓದಿಕೊಂಡು ಆನಂದದಿಂದ ಹಿಗ್ಗಿದನು, ಮತ್ತೆ ಆ ಸುದ್ದಿಯನ್ನು ಎಲ್ಲ ದೇವತೆಗಳಿಗೂ ತಿಳಿಯಿಸಿದನು. ಅದನ್ನು ಕೇಳಿ ಎಲ್ಲರೂ ಪ್ರಸನ್ನಚಿತ್ತರಾದರು. ಆಕಾಶದಲ್ಲಿ ಪುಷ್ಪವೃಷ್ಟಿಯಾಯಿತು. ವಿವಿಧ ಮಂಗಲವಾದ್ಯಗಳು ಘೋಷಿಸಿದವು. ದಶದಿಕ್ಕುಗಳಲ್ಲಿಯೂ ಮಂಗಳ ಚಿನ್ಹೆಗಳು ಕಂಡುಬರಲಾರಂಭಿಸಿದವು.

ದೋ॥೧೧೫॥ ದೇವತೆಗಳೆಲ್ಲರೂ ತಂತಮ್ಮ ವಿವಿಧ ವಾಹನಗಳನ್ನು ವಿಮಾನ ಗಳನ್ನೂ ಸಿದ್ಧಗೊಳಿಸಲಾರಂಭಿಸಿದರು. ಶುಭಕರವೂ ಸುಖದಾಯಕವೂ ಆದ ಶಕುನಗಳಾಗುತ್ತಿವೆ. ಮತ್ತೆ ಅಪ್ಸರೆಯರು ಗಾನಮಾಡಲಾರಂಭಿಸಿರುವರು. (ನೋಡಿರಿ) ಶಿವಗಣಗಳು ಶಂಭುವನ್ನು ಅಲಂಕರಿಸುತ್ತಿವೆ. ಜಟೆಯು ಮುಕುಟ ವನ್ನೂ ಸರ್ಪದ ಹಾರವನ್ನೂ ಕಟ್ಟಿದರು. ಶಿವನ ಕಿವಿಯ ಕುಂಡಲ ಮತ್ತು ಕೈಯಲ್ಲಿ ಕಂಕಣಗಳಿಗೆ ಬದಲಾಗಿ ಸರ್ಪವನ್ನು ಸುತ್ತಿದ್ದಾರೆ. ಮೈಗೆಲ್ಲಾ ವಿಭೂತಿ ಯನ್ನು ಹಚ್ಚಿದ್ದಾರೆ. ವಸ್ತ್ರಕ್ಕೆ ಬದುಲಾಗಿ ವ್ಯಾಘ್ರಚರ್ಮವನ್ನು ಹೊದಿಸಿ ದ್ದಾರೆ. ಲಲಾಟದಲ್ಲಿ ಚಂದ್ರನೂ ಶಿರದಲ್ಲಿ ಗಂಗೆಯೂ ಶೋಭಾಯಮಾನರಾ ಗಿರುವರು. ಮತ್ತೆ ಆತನ ಮುಖದಲ್ಲಿ ತ್ರಿನೇತ್ರಗಳು ಶೋಭಿಸುತ್ತಿವೆ. ಉಪವೀ ತಕ್ಕೆ ಬದುಲಾಗಿ ಸರ್ಪವನ್ನು ಸುತ್ತಿದ್ದಾರೆ. ಕಂಠದಲ್ಲಿ ವಿಷ, ಕೊರಳಲ್ಲಿ ಮುಂಡ ಗಳ ಮಾಲೆ. ಆ ಕೃಪಾಳುವಾದ ಶಿವಧಾಮನ ಆ ವೇಷವು ಅಶಿವ ಎಂದರೆ ನೋಡುವುದಕ್ಕೆ ಅಮಂಗಲವಾಗಿದ್ದಿತು. ಕೈಯಲ್ಲಿ ತ್ರಿಶೂಲವೂ ಡಮರುವೂ ವಿರಾಜಿಸುತ್ತಿದ್ದವು. ಶಿವನು ಬಸವನ ಮೇಲೆ ಕುಳಿತನು. ಆಗ ವಾದ್ಯಗಳನ್ನು ಬಾರಿಸಿದರು. ಶಿವನನ್ನು ನೋಡಿ ದೇವತಾಸ್ತ್ರೀಯರು ಮಂದಸ್ಮಿತರಾಗಿ, ಈ ವರನಿಗೆ ಯೋಗ್ಯಳಾದ ಕನ್ಯೆಯು ಜಗತ್ತಿನಲ್ಲಿ ಇಲ್ಲವೆಂದುಕೊಂಡರು. ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ತಂತಮ್ಮ ವಾಹನಗಳ ಮೇಲೂ ವಿಮಾನಗಳ ಲ್ಲಿಯೂ ಕುಳಿತು ಆ ಮೆರವಣಿಗೆಯನ್ನು ಸೇರಿದರು. ದೇವತೆಗಳಾ ಸಮುದಾ ಯವು ಸರ್ವ ಪ್ರಕಾರದಿಂದಲೂ ಮನೋಹರವಾಗಿ ಕಾಣಿಸುತಿತ್ತು. ಆದರೆ ಮೆರವಣಿಗೆಯು ವರನಿಗೆ ಅನುರೂಪವಾಗಿರಲಿಲ್ಲ.

ದೋ॥ ೧೧೬ ॥ ಆಗ ವಿಷ್ಣುವು ದಿಕ್ಪಾಲಕರೆಲ್ಲರನ್ನು ಕರೆದು, ನಗುತ್ತಾ ನೀವೆಲ್ಲರೂ ಬೇರೆಬೇರೆಯಾಗಿ ನಿಮ್ಮನಿಮ್ಮ ಪರಿವಾರದೊಂದಿಗೆ ನಡೆಯಿರಿ. ಈ ಮೆರವಣಿಗೆಯು ವರನಿಗೆ ಅನುರೂಪವಾಗಿಲ್ಲ. ನೀವು ಅನ್ಯರ ಬಳಿಗೆ ಬಂದು ನಗುವುದು ಉಚಿತವಲ್ಲ ಎಂದನು. ವಿಷ್ಣುವಿನ ಮಾತನ್ನು ಕೇಳಿ ದೇವಗಣಗಳು ಮುಗುಳ್ನಗೆಯಿಂದ ತಂತಮ್ಮ ಪರಿವಾರದೊಂದಿಗೆ ಪ್ರತ್ಯೇಕವಾದವು. ಶಿವನು ಮನಸ್ಸಿನಲ್ಲಿಯೇ ನಗುತ್ತಾ ವಿಷ್ಣುವಿನ ವ್ಯಂಗ್ಯವಚನವು ಎಂದಿಗೂ ಹೋಗುವುದಿಲ್ಲ

ಎಂದನು. ಇದನ್ನು ಕೇಳಿದಕೂಡಲೇ ದೇವತೆಗಳು ನಗಾರಿಯನ್ನು ಬಾರಿಸಿ ಪುಷ್ಪ ವೃಷ್ಟಿಯನ್ನು ಸುರಿಸಿ, ಎಲ್ಲರೂ "ಹೇ ದೇವತೆಗಳ ಸ್ವಾಮಿಯೇ, ನಿನಗೆ ಜಯವಾಗಲಿ, ಜಯವಾಗಲಿ!" ಎಂದರು. ಈ ಸಮಯವನ್ನರಿತು ಸಪ್ತಋಷಿಗಳು ಅಲ್ಲಿಗೆ ಬಂದರು. ಬ್ರಹ್ಮನು ಅವರನ್ನು ಹಿಮಾಚಲನ ಬಳಿಗೆ ಕಳುಹಿಸಿದನು. ಅವರು ಮೊದಲು ಪಾರ್ವತಿಯ ಬಳಿಗೆ ಹೋಗಿ ಮುಂದೆ ಹೇಳುವ ಕಪಟ ಪೂರ್ಣವಾದ ಮಧುರ ವಚನಗಳನ್ನಾಡಿದರು.

ದೋ॥ ೧೧೩ ॥ (ಹೇ ಪಾರ್ವತೀದೇವಿ) ನೀನು ನಾರದನ ಮಾತನ್ನು ನಂಬಿ ನಮ್ಮ ಮಾತನ್ನು ಮನ್ನಿಸಲಿಲ್ಲ. ಈಗ ನಿನ್ನ ಶಪಥವು ಸುಳ್ಳಾಗಿ ಹೋಯಿತು. ಏಕೆಂದರೆ ಶಿವನು ಕಾಮದೇವನನ್ನು ಸುಟ್ಟು ಭಸ್ಮಮಾಡಿದನು.--ಹೀಗೆಂದ ಋಷಿಗಳ ಮಾತನ್ನು ಕೇಳಿ ಪಾರ್ವತಿಯು ಮಂದಸ್ಮಿತಳಾಗಿ ಇಂತೆಂದಳು—ಹೇ ಜ್ಞಾನಿಗಳಾದ ಮುನಿಶ್ರೇಷ್ಠರೇ ನೀವು ಹೇಳಿದ್ದು ನಿಜ. ಶಿವನು ಕಾಮದೇವನನ್ನು ಈಗ ಸುಟ್ಟಿರುವನೆಂದೂ ಈವರೆಗೆ ಆತನು ಸವಿಕಾರನೂ ಭೋಗಿಯೂ ಆಗಿದ್ದನೆಂದು ನೀವು ತಿಳಿದಿರುವಿರಿ. ಆದರೆ ನನ್ನ ತಿಳಿವಳಿಕೆಯ ಪ್ರಕಾರ ಶಿವನು ಸದಾ ಯೋಗಿಯೂ ಅಜನ್ಮನೂ ನಿಂದಾರಹಿತನೂ ಕಾಮಹೀನನೂ ಭೋಗರಹಿತನೂ ಆಗಿರುವನು. ಇದನ್ನು ತಿಳಿದುಕೊಂಡೇ ನಾನು ಮನೋವಾಕ್ಕಾಯಗಳಿಂದ ಶಿವನ ಸೇವೆಯನ್ನು ಪ್ರೀತಿಯಿಂದ ಮಾಡಿರುವೆನು. ಮತ್ತೆ ಹೇ ಮುನೀಶ್ವರರೇ! ಕೇಳಿರಿ! ಕೃಪಾನಿಧಿಯಾದ ಶಿವನು ನನ್ನ ಪ್ರತಿಜ್ಞೆಯನ್ನು ನೆರವೇರಿಸುವನು. ಶಿವನು ಕಾಮದೇವನನ್ನು ಭಸ್ಮಮಾಡಿದನೆಂಬ ನಿಮ್ಮ ಹೇಳಿಕೆಯು ಅವಿವೇಕವಾದುದು. ಹೇ ತಾತ! ಅಗ್ನಿಯ ಸ್ವಭಾವದಿಂದ ಚಳಿಯು ಅದರ ಸಮೀಪಕ್ಕೆ ಹೋಗಲಾರದು. ಹೋದರೆ ಅದು ಅವಶ್ಯವಾಗಿ ನಾಶವಾಗುವುದು. ಅದೇ ರೀತಿಯಾಗಿ ಕಾಮದೇವನು ಮಹಾದೇವನ ಹತ್ತಿರ ಹೋಗಿ ನಾಶಹೊಂದಿದನು."

ದೋ॥ ೧೧೪ ॥ ಪಾರ್ವತಿಯ ಮಾತನ್ನು ಕೇಳಿ ಮತ್ತೆ ಅವಳ ಪ್ರೀತಿಯನ್ನೂ ವಿಶ್ವಾಸವನ್ನೂ ನೋಡಿ ಮುನಿಗಳು ವಿಶೇಷ ಪ್ರಸನ್ನರಾಗಿ ಭವಾನಿಗೆ ಪ್ರಣಾಮ ಮಾಡಿ ಹಿಮಾಚಲನ ಬಳಿಗೆ ತೆರಳಿದರು. ಅಲ್ಲಿ ಅವರು ಹಿಮಾಚಲನಿಗೆ ಈವರೆಗೆ ನಡೆದ ಎಲ್ಲ ವೃತ್ತಾಂತವನ್ನು ಅರುಹಿದರು. ಕಾಮದೇವನು ಭಸ್ಮಿತನಾದ ಸುದ್ದಿಯನ್ನು ಕೇಳಿ, ಹಿಮಾಚಲನು ವಿಶೇಷವಾಗಿ ದುಃಖಿಸಿದನು. ಆದರೆ ರತಿಯ ವರದಾನದ ಮಾತುಗಳನ್ನು ಕೇಳಿ ಮತ್ತೆ ಸುಖಿಯಾದನು.

### ಶಿವನ ಪರಿವಾರ ಮತ್ತು ವಿವಾಹಮಹೋತ್ಸವದ ವರ್ಣನೆ.

ಶಂಭುವಿನ ಪ್ರಭುತ್ವವನ್ನು ಮನಸ್ಸಿನಲ್ಲಿಯೇ ಆಲೋಚಿಸಿ ತಿಳಿದು ಹಿಮಾಚಲನು ಮುನಿಗಳನ್ನು ಸಾದರದಿಂದ ಕರೆಯಿಸಿದನು. ಅವರು ಶುಭದಿನ ಶುಭ ನಕ್ಷತ್ರ ಮತ್ತು ಶುಭ ಘಳಿಗೆಯನ್ನು ನೋಡಿ ವೇದೋಕ್ತ ವಿಧಾನದಿಂದ ಲಗ್ನವು

ಶೀಘ್ರವಾಗಿ ನೆರವೇರುವಂತೆ ನಿಶ್ಚಯಿಸಿದರು. ಅನಂತರ ಹಿಮಾಚಲನು ಲಗ್ನ ಪತ್ರಿಕೆಯನ್ನು ಬರೆದು ಸಪ್ತರ್ಷಿಗಳ ಕೈಯಲ್ಲಿ ಕೊಟ್ಟು, ಅವರ ಪಾದಗಳಿಗೆರಗಿ, ಆ ಪತ್ರಿಕೆಯನ್ನು ಬ್ರಹ್ಮನಿಗೆ ತಲುಪಿಸಬೇಕೆಂದು ಬೇಡಿಕೊಂಡನು. ಬ್ರಹ್ಮನು ಅದನ್ನು ಓದಿಕೊಂಡು ಆನಂದದಿಂದ ಹಿಗ್ಗಿದನು, ಮತ್ತೆ ಆ ಸುದ್ದಿಯನ್ನು ಎಲ್ಲ ದೇವತೆಗಳಿಗೂ ತಿಳಿಯಿಸಿದನು. ಅದನ್ನು ಕೇಳಿ ಎಲ್ಲರೂ ಪ್ರಸನ್ನಚಿತ್ತರಾದರು. ಆಕಾಶದಲ್ಲಿ ಪುಷ್ಪವೃಷ್ಟಿಯಾಯಿತು. ವಿವಿಧ ಮಂಗಲವಾದ್ಯಗಳು ಘೋಷಿಸಿದವು. ದಶದಿಕ್ಕುಗಳಲ್ಲಿಯೂ ಮಂಗಳ ಚಿನ್ಹೆಗಳು ಕಂಡುಬರಲಾರಂಭಿಸಿದವು.

ದೋ॥೧೨೫॥ ದೇವತೆಗಳೆಲ್ಲರೂ ತಂತಮ್ಮ ವಿವಿಧ ವಾಹನಗಳನ್ನು ವಿಮಾನ ಗಳನ್ನೂ ಸಿದ್ಧಗೊಳಿಸಲಾರಂಭಿಸಿದರು. ಶುಭಕರವೂ ಸುಖದಾಯಕವೂ ಆದ ಶಕುನಗಳಾಗುತ್ತಿವೆ. ಮತ್ತೆ ಅಪ್ಸರೆಯರು ಗಾನಮಾಡಲಾರಂಭಿಸಿರುವರು. (ನೋಡಿರಿ) ಶಿವಗಣಗಳು ಶಂಭುವನ್ನು ಅಲಂಕರಿಸುತ್ತಿವೆ. ಜಟೆಯ ಮುಕುಟ ವನ್ನೂ ಸರ್ಪದ ಹಾರವನ್ನೂ ಕಟ್ಟಿದರು. ಶಿವನ ಕಿವಿಯ ಕುಂಡಲ ಮತ್ತು ಕೈಯಲ್ಲಿ ಕಂಕಣಗಳಿಗೆ ಬದಲಾಗಿ ಸರ್ಪವನ್ನು ಸುತ್ತಿದ್ದಾರೆ. ಮೈಗೆಲ್ಲಾ ವಿಭೂತಿ ಯನ್ನು ಹಚ್ಚಿದ್ದಾರೆ. ವಸ್ತ್ರಕ್ಕೆ ಬದುಲಾಗಿ ವ್ಯಾಘ್ರಚರ್ಮವನ್ನು ಹೊದಿಸಿ ದ್ದಾರೆ. ಲಲಾಟದಲ್ಲಿ ಚಂದ್ರನೂ ಶಿರದಲ್ಲಿ ಗಂಗೆಯೂ ಶೋಭಾಯಮಾನರಾ ಗಿರುವರು. ಮತ್ತೆ ಆತನ ಮುಖದಲ್ಲಿ ತ್ರಿನೇತ್ರಗಳು ಶೋಭಿಸುತ್ತಿವೆ. ಉಪವೀ ತಕ್ಕೆ ಬದುಲಾಗಿ ಸರ್ಪವನ್ನು ಸುತ್ತಿದ್ದಾರೆ. ಕಂಠದಲ್ಲಿ ವಿಷ, ಕೊರಳಲ್ಲಿ ಮುಂಡ ಗಳ ಮಾಲೆ. ಆ ಕೃಪಾಳುವಾದ ಶಿವಧಾಮನ ಆ ವೇಷವು ಅಶಿವ ಎಂದರೆ ನೋಡುವುದಕ್ಕೆ ಅಮಂಗಲವಾಗಿದ್ದಿತು. ಕೈಯಲ್ಲಿ ತ್ರಿಶೂಲವೂ ಡಮರುವೂ ವಿರಾಜಿಸುತ್ತಿದ್ದವು ಶಿವನು ಬಸವನ ಮೇಲೆ ಕುಳಿತನು. ಆಗ ವಾದ್ಯಗಳನ್ನು ಬಾರಿಸಿದರು. ಶಿವನನ್ನು ನೋಡಿ ದೇವತಾಸ್ತ್ರೀಯರು ಮಂದಸ್ಮಿತರಾಗಿ, ಈ ವರನಿಗೆ ಯೋಗ್ಯಳಾದ ಕನ್ಯೆಯು ಜಗತ್ತಿನಲ್ಲಿ ಇಲ್ಲವೆಂದುಕೊಂಡರು. ವಿಷ್ಣು ಬ್ರಹ್ಮಾದಿ ದೇವತೆಗಳೆಲ್ಲರೂ ತಂತಮ್ಮ ವಾಹನಗಳ ಮೇಲೂ ವಿಮಾನಗಳ ಲ್ಲಿಯೂ ಕುಳಿತು ಆ ಮೆರವಣಿಗೆಯನ್ನು ಸೇರಿದರು. ದೇವತೆಗಳಾ ಸಮುದಾ ಯವು ಸರ್ವ ಪ್ರಕಾರದಿಂದಲೂ ಮನೋಹರವಾಗಿ ಕಾಣಿಸುತಿತ್ತು. ಆದರೆ ಮೆರವಣಿಗೆಯು ವರನಿಗೆ ಅನುರೂಪವಾಗಿರಲಿಲ್ಲ.

ದೋ॥ ೧೨೬ ॥ ಆಗ ವಿಷ್ಣುವು ದಿಕ್ಪಾಲಕರೆಲ್ಲರನ್ನು ಕರೆದು, ನಗುತ್ತಾ ನೀವೆಲ್ಲರೂ ಬೇರೆಬೇರೆಯಾಗಿ ನಿಮ್ಮನಿಮ್ಮ ಪರಿವಾರದೊಂದಿಗೆ ನಡೆಯಿರಿ. ಈ ಮೆರವಣಿಗೆಯು ವರನಿಗೆ ಅನುರೂಪವಾಗಿಲ್ಲ. ನೀವು ಅನ್ಯರ ಬಳಿಗೆ ಬಂದು ನಗುವುದು ಉಚಿತವಲ್ಲ ಎಂದನು. ವಿಷ್ಣುವಿನ ಮಾತನ್ನು ಕೇಳಿ ದೇವಗಣಗಳು ಮುಗುಳ್ನಗೆಯಿಂದ ತಂತಮ್ಮ ಪರಿವಾರದೊಂದಿಗೆ ಪ್ರತ್ಯೇಕವಾದವು. ಶಿವನು ಮನಸ್ಸಿನಲ್ಲಿಯೇ ನಗುತ್ತಾ ವಿಷ್ಣುವಿನ ವ್ಯಂಗ್ಯವಚನವು ಎಂದಿಗೂ ಹೋಗುವುದಿಲ್ಲ

ಎಂದು ತನ್ನ ಪರಿವಾರಕ್ಕೆ ಬಹು ಮಧುರ ವಚನಗಳನ್ನು ಹೇಳಿ ಶಿವಗಣಗಳನ್ನು ಕರೆತರುವುದಕ್ಕೆ ತನ್ನ ಭೃಂಗೀ ಗಣವನ್ನು ಕಳುಹಿದನು. ಶಿವನ ಆಜ್ಞೆಯನ್ನು ಕೇಳಿದ ಕೂಡಲೇ ಎಲ್ಲರೂ ಹೊರಟುಬಂದರು. ಮತ್ತೆ ತಮ್ಮ ಪ್ರಭುವಿನ ಚರಣ ಕಮಲಗಳಿಗೆರಗಿದರು. ಅವರ ವೇಷಗಳೂ ವಾಹನಗಳೂ ವಿವಿಧವಾಗಿದ್ದವು. ಶಿವನು ತನ್ನ ಗಣಗಳನ್ನು ನೋಡಿ ನಕ್ಕನು. ಅವರಲ್ಲಿ ಕೆಲವರಿಗೆ ಮುಖವೇ ಇರಲಿಲ್ಲ. ಕೆಲವರಿಗೆ ಹಲವು ಮುಖಗಳಿದ್ದವು. ಕೆಲವರಿಗೆ ಕೈಕಾಲುಗಳಿರಲಿಲ್ಲ. ಕೆಲವರಿಗೆ ಹಲವು ಕೈಕಾಲುಗಳು, ಕೆಲವರಿಗೆ ಅನೇಕ ಕಣ್ಣುಗಳು, ಮತ್ತೆ ಕೆಲವರಿಗೆ ಕಣ್ಣುಗಳೇ ಇರಲಿಲ್ಲ. ಕೆಲವರು ವಿಶೇಷ ಹೃಷ್ಟ ಪುಷ್ಟರಾಗಿದ್ದರು. ಕೆಲವರು ದುರ್ಬಲರಾಗಿಯೂ ಕೃಶರಾಗಿಯೂ ಇದ್ದರು. ಕೆಲವರು ಕೇವಲ ಕೃಶರು, ಕೆಲವರು ಕೇವಲ ಕೊಬ್ಬಿದ ಮೈಯುಳ್ಳವರು, ಕೆಲವರು ಪವಿತ್ರ ವೇಷ ಧಾರಿಗಳು, ಮತ್ತೆ ಕೆಲವರು ಅಪವಿತ್ರ ವೇಷಧಾರಿಗಳು. ಅವರ ಭೂಷಣವೂ ಭಯಾನಕವಾಗಿದ್ದಿತು. ಅವರ ಕೈಯಲ್ಲಿ ನವೀನ ರಕ್ತಯುಕ್ತವಾದ ಕಪಾಲ ಗಳಿದ್ದವು. ಅವರಾ ಅಸಂಖ್ಯಾತ ವೇಷಗಳನ್ನು ಎಣಿಸಬಲ್ಲವರಾರು? ಕೆಲವರ ಮುಖಗಳು ಕತ್ತೆಗಳಂತೆ, ಕೆಲವರ ಮುಖಗಳು ನಾಯಿಗಳಂತೆ, ಕೆಲವರ ಮುಖ ಗಳು ಹಂದಿಗಳಂತೆ, ಕೆಲವರವು ನರಿಗಳಂತೆ ಇದ್ದವು. ಮತ್ತೆ ಅನೇಕಾನೇಕ ಭೂತ, ಪ್ರೇತ, ಪಿಶಾಚ, ಯೋಗಿಗಳ ಸಮೂಹವು ಅವರ ಜೆತೆಯಲ್ಲಿದ್ದವು. ಅವುಗಳ ವರ್ಣನೆಯನ್ನು ಮಾಡುವುದಸಾಧ್ಯವು.

ದೋ॥ ೧೧೭ ॥ (ಆ ಮೆರವಣಿಗೆಯನ್ನು ನೋಡಿರಿ!) ಎಲ್ಲಾ ದೊಡ್ಡದೊಡ್ಡ ತರಂಗೀ (ಎಂದರೆ ಮನಸ್ಸಿಗೆ ತೋರಿದದನ್ನು ಮಾಡುವ) ಭೂತಗಳು ಕುಣಿ ಯುತ್ತಾ ಗಾನಮಾಡುತ್ತಾ ಹೋಗುತ್ತಲಿವೆ. ನೋಡುವುದಕ್ಕೆ ಅವುಗಳು ತಲೆ ಕೆಳಗಾಗಿ ಕಾಣಿಸುತ್ತಲಿವೆ. ಮತ್ತೆ ಅವುಗಳು ವಿವಿಧವೂ ವಿಚಿತ್ರವೂ ಆದ ಮಾತುಗಳನ್ನಾಡುತ್ತಿವೆ. ಈ ಮೆರವಣಿಗೆಯು ವರನಿಗೆ ಅನುರೂಪವಾಗಿದ್ದಿತು. ಅದು ಮಾರ್ಗದಲ್ಲಿ ಹೋಗುವಾಗ ವಿವಿಧ ಕೌತುಕಗಳಾಗುತ್ತಿದ್ದವು. ಅತ್ತ ಹಿಮಾಚಲನು ವರ್ಣಿಸಲಸಾಧ್ಯವಾದ ವಿಚಿತ್ರ ಮಂಟಪವನ್ನು ನಿರ್ಮಿಸಿದ್ದನು. ಜಗತ್ತಿನಲ್ಲಿ ಇರುವ ವರ್ಣನಾತೀತವಾದ ಅನೇಕ ದೊಡ್ಡ ಮತ್ತು ಚಿಕ್ಕ ಪರ್ವತ ಗಳು, ವನ, ಸಮುದ್ರ, ನದಿ, ಕೊಳ ಇತ್ಯಾದಿಗಳ ಬಳಿಗೆ ಹಿಮಾಚಲನು ದೂತ ರನ್ನು ಕಳುಹಿಸಿದ್ದನು. ಅವುಗಳು ತಮ್ಮ ತಮ್ಮ ಇಚ್ಛಾನುಸಾರವಾಗಿ ಸುಂದರ ತನುಧಾರಿಗಳಾಗಿ ಅವರವರ ಸುಂದರ ಸ್ತ್ರೀ ಮತ್ತು ಪರಿವಾರಗಳೊಂದಿಗೆ ಹಿಮಾ ಚಲನ ಮನೆಗೆ ಬಂದವು. ಎಲ್ಲರೂ ಸ್ನೇಹದಿಂದ ಮಂಗಳಗೀತಗಳನ್ನು ಹಾಡಿ ದರು. ಇದಕ್ಕೆ ಮೊದಲೇ ಹಿಮಾಚಲನು ಹಲವು ಮಂದಿರಗಳನ್ನು ಸಿದ್ಧಗೊಳಿ ಸಿದ್ದನು. ಅವುಗಳಲ್ಲಿ ಎಲ್ಲರೂ ಇಳಿದುಕೊಂಡು ಯಥಾಯೋಗ್ಯ ಸತ್ಕಾರವನ್ನು ಹೊಂದಿದರು. ಆ ನೂತನ ನಗರದ ಶೋಭೆಯನ್ನು ನೋಡಿ ಬ್ರಹ್ಮನ ಸೃಷ್ಟಿ

ಚಾತುರ್ಯವು ಹೊಾಯವಾಗಿದ್ದಂತೆ ತೋರಿತು. ಆ ನವೀನ ರಚನೆಯ ವನ ಉಪವನ, ಭಾವಿ, ಕೆರೆ, ನದಿ ಇವುಗಳ ಸೌಂದರ್ಯವನ್ನು ವರ್ಣಿಸಬಲ್ಲವರಾರು? ಅಲ್ಲಿ ಪ್ರತಿ ಮನೆಯಲ್ಲಿಯೂ ಮಂಗಲಕರವಾದ ದೊಡ್ಡದೊಡ್ಡ ತೋರಣಗಳೂ ಅನೇಕ ಧ್ವಜಪತಾಕೆಗಳೂ ಶೋಭಿಸುತ್ತಲಿದ್ದವು. ಅಲ್ಲಿದ್ದ ಸುಂದರ ಸ್ತ್ರೀ ಪುರುಷರ ಸೌಂದರ್ಯಾತಿಶಯವನ್ನು ನೋಡಿ ಮುನಿಜನಗಳೂ ಮೋಹಿತರಾಗುತ್ತಿದ್ದರು.

ದೋ॥ ೧೧೮ ॥ (ಸಾಕ್ಷಾತ್) ಜಗದಂಬೆಯಾದ ಪಾರ್ವತಿಯು ಯಾವ ಪುರದಲ್ಲಿ ಅವತರಿಸಿರುವಳೋ ಆ ಪುರದ ಶೋಭೆಯನ್ನು ಮಾತುಗಳಿಂದ ಬಣ್ಣಿಸಲಾಗುವುದೇ? ಅಲ್ಲಿ ನವೀನವಾದ ಋದ್ಧಿ ಸಿದ್ಧಿ ಸಂಪದಗಳು ದಿನದಿನಕ್ಕೆ ಅಭಿವೃದ್ಧಿ ಹೊಂದುತ್ತಲಿದ್ದವು. ಮೆರವಣಿಗೆಯು ನಗರದ ಬಳಿಗೆ ಬಂದ ಕೂಡಲೇ ನಗರದಲ್ಲಿ ಎಲ್ಲೆಲ್ಲಿಯೂ ಆನಂದ ಧ್ವನಿಯು ಘೋಷಿಸಲಾರಂಭಿಸಿತು. ಅದರಿಂದ ಪಟ್ಟಣದ ಶೋಭೆಯು ಹೆಚ್ಚಿತು. ಪುರವಾಸಿಗಳೆಲ್ಲರೂ ತಮ್ಮ ತಮ್ಮ ವಾಹನಗಳೊಂದಿಗೆ ಮೆರವಣಿಗೆಯನ್ನು ಸಾದರದಿಂದ ಸ್ವಾಗತೀಕರಿಸಲು ಹೊರಟರು. ದೇವಗಣಗಳನ್ನು ವಿಷ್ಣುಭಗವಾನನನ್ನು ನೋಡಿ ಎಲ್ಲರೂ ವಿಶೇಷ ಪ್ರಸನ್ನಚಿತ್ತರಾದರು. ಆದರೆ ಶಿವನ ಪರಿವಾರವನ್ನು ನೋಡಿದ ಕೂಡಲೇ ಅವರ ವಾಹನಗಳೆಲ್ಲವೂ ಹೆದರಿ ಓಡಿಹೋದವು. ವಯೋವೃದ್ಧರಾದ ಕೆಲವು ಜನರು ಧೈರ್ಯವನ್ನು ತಳೆದು ಅಲ್ಲಿಯೇ ನಿಂತರು. ಬಾಲಕರೆಲ್ಲರೂ ಪ್ರಾಣಗಳನ್ನುಳಿಸಿಕೊಳ್ಳಲು ತಂತಮ್ಮ ಮನೆಗಳಿಗೆ ಪಲಾಯನಮಾಡಿದರು. ಮನೆಯನ್ನು ಸೇರಿದ ಕೂಡಲೇ ಅವರ ಮಾತಾಪಿತೃಗಳು, "ಏಕೆ ಓಡಿಬಂದಿರಿ?" ಎಂದು ಕಾರಣವನ್ನು ಕೇಳಲು ಭಯದಿಂದ ನಡುಗುತ್ತಿದ್ದ ಆ ಬಾಲಕರು ಇಂತೆಂದರು—ಏನು ಹೇಳೋಣ! ನಮ್ಮ ಬಾಯಲ್ಲಿ ಮಾತೇ ಹೊರಡದು. ಇದು ಮದುವೆಯ ಮೆರವಣಿಗೆಯೋ ಅಥವಾ ಯಮರಾಜನ ಸೇನೆಯೋ? ವರನು ಹುಚ್ಚನಂತಿರುವನು! ಎತ್ತಿನ ಮೇಲೆ ಕುಳಿತಿರುವನು!! ಸರ್ಪ ಕಪಾಲ ಮತ್ತು ಭಸ್ಮಗಳೇ ಅವನ ಅಲಂಕಾರ ವಸ್ತುಗಳು!!! ವರನು ಮೈಗೆ ಬೂದಿಯನ್ನು ಬಡಿದುಕೊಂಡಿರುವನು! ಸರ್ಪ ಮತ್ತು ಕಪಾಲಗಳನ್ನು ಮಾಲೆಯಾಗಿ ಧರಿಸಿರುವನು! ಅವನು ಕೇವಲ ದಿಗಂಬರನೂ ಜಟಾಧಾರಿಯೂ ಭಯಂಕರನೂ ಆಗಿರುವನು! ಅವನ ಜೊತೆಯಲ್ಲಿ ಭೂತ, ಪ್ರೇತ, ಪಿಶಾಚ, ಯೋಗಿನಿ ಮತ್ತು ಭಯಂಕರ ಮುಖಗಳುಳ್ಳ ರಾಕ್ಷಸರೂ ಇರುವರು! ಆ ಮೆರವಣಿಗೆಯನ್ನು ನೋಡಿ ಸಜೀವರಾಗಿ ಉಳಿಯುವವರೇ ಪುಣ್ಯವಂತರು. ಅವರೇ ಪಾರ್ವತಿಯ ವಿವಾಹವನ್ನು ನೋಡುವರು. —ಇತ್ಯಾದಿಯಾಗಿ ಬಾಲಕರು ಮನೆಮನೆಗೂ ಸುದ್ದಿಯನ್ನು ಸಾರಿದರು.

ದೋ॥ ೧೧೯ ॥ ಆ ಬಾಲಕರ ಮಾತಾಪಿತೃಗಳು ಅದು ಮಹಾದೇವನ ಸಮಾಜದ ವರ್ಣನೆ ಎಂದರಿತು ಮಕ್ಕಳನ್ನು ಸಮಾಧಾನಪಡಿಸಿ, "ನೀವು ಹೆದರಬೇಡಿರಿ. ಇದರಲ್ಲಿ ಹೆದರುವ ವಿಷಯವೇನೂ ಇಲ್ಲ" ಎಂದರು. ವರನನ್ನು

ಎದಿರುಗೊಳ್ಳಲು ಹೋದ ಜನರು ಮದುವಣಿಗನ ಪರಿವಾರವನ್ನು ಕರೆದು ಕೊಂಡು ಬಂದು ಎಲ್ಲರನ್ನೂ ಸುಂದರ ನಿವಾಸ ಸ್ಥಾನಗಳಲ್ಲಿ ಇಳಿಸಿದರು. (ಪಾರ್ವತಿಯ ಮಾತೆಯಾದ) ಮೈನಾದೇವಿಯು ಮಂಗಳಾರತಿಯನ್ನು ಬೆಳಗಿ ದಳು. ಅವಳ ಜೊತೆಯಲ್ಲಿ ಸ್ತ್ರೀಯರು ಉತ್ತಮ ಮಂಗಲ ಗೀತೆಗಳನ್ನು ಹಾಡಲಾ ರಂಭಿಸಿದರು. ಅವರಾ ಸುಂದರವಾದ ಕೈಗಳಲ್ಲಿ ಶೋಭಿಸುತ್ತಿದ್ದ ಬಂಗಾರದ ತಟ್ಟೆಯಲ್ಲಿ ಕದಲಾರತಿಯನ್ನು ಹಿಡಿದು ಮಂದಸ್ಮಿತವದನದಿಂದ ಆ ಸ್ತ್ರೀಯರು ಶಿವನ ಬಳಿಗೆ ಆರತಿಯನ್ನು ಬೆಳಗಲು ಬಂದರು. ಆಗ ಮಹಾದೇವನ ಭಯಂಕರ ವಾದ ವೇಷವನ್ನು ನೋಡಿ ಸ್ತ್ರೀಯರ ಹೃದಯದಲ್ಲಿ ಹೆದರಿಕೆಯುಂಟಾಯಿತು. ಆದುದರಿಂದ ಅವರು ಹೆದರಿ ಮನೆಯೊಳಗೆ ಓಡಿಹೋದರು. ಶಿವನು ತನ್ನ ಬಿಡಾರಕ್ಕೆ ತೆರಳಿದನು. (ಇದನ್ನೆಲ್ಲ ನೋಡಿ) ಮೈನಾದೇವಿಗೆ ವಿಶೇಷ ದುಃಖ ವಾಯಿತು. ಆಗ ಅವಳು ಪಾರ್ವತಿಯನ್ನು ಕರೆಯಿಸಿ ವಿಶೇಷ ಪ್ರೇಮದಿಂದ ಅವಳನ್ನು ತೊಡೆಯಮೇಲೆ ಕುಳ್ಳಿರಿಸಿಕೊಂಡು ನೀಲಕಮಲ ಸಮಾನವಾದ ತನ್ನ ಕಣ್ಣುಗಳಲ್ಲಿ ಅಶ್ರುಗಳನ್ನು ಸುರಿಸುತ್ತಾ ಹೇಳಿದಳೇನಂದರೆ—ನಿನಗೆ ಇಂತಹ ಸೌಂದರ್ಯವನ್ನು ಕೊಟ್ಟ ಬ್ರಹ್ಮನು ನಿನಗೋಸ್ಕರ ಇಂತಹ ಮೂರ್ಖ ಮತ್ತು ಹುಚ್ಚ ವರನನ್ನು ಸೃಷ್ಟಿಸಿದನೇಕೆ? ಯಾವ ಫಲವು ಕಲ್ಪವೃಕ್ಷದಲ್ಲಿ ಇರಬೇಕೋ ಅಂತಹದನ್ನು ಬಲಾತ್ಕಾರದಿಂದ ಜಾಲಿಯ ಗಿಡದಲ್ಲಿ ಇಡಬೇಕಾಗಿದೆ. ಈಗ ನಾನು ನಿನ್ನೊಟ್ಟಿಗೆ ಪರ್ವತದಿಂದ ಬಿದ್ದು ಸಾಯುವೆನು, ಅಥವಾ ಬೆಂಕಿಯಲ್ಲಿ ಸಾಯು ವೆನು. ಅಥವಾ ಸಮುದ್ರದಲ್ಲಿ ಮುಳುಗಿ ಸಾಯುವೆನು. ಮನೆಯು ಹಾಳಾಗಲಿ ಅಥವಾ ಸಂಸಾರದಲ್ಲಿ ನನಗೆ ಅಪಯಶಸ್ಸು ಬರಲಿ (ನಾನು ಅದನ್ನು ಲಕ್ಷಿಸು ವುದಿಲ್ಲ) ಆದರೆ ನಾನು ಜೀವದಿಂದಿರುವಾಗ ಈ ವರನೊಂದಿಗೆ ನಿನ್ನ ವಿವಾಹ ವನ್ನು ಬೆಳೆಸುವುದಿಲ್ಲ.

ದೋ॥ ೧೨೦ ॥ ಹಿಮಾಚಲನ ಪತ್ನಿಯು ದುಃಖಿತಳಾದುದನ್ನು ನೋಡಿ ಇತರ ಸ್ತ್ರೀಯರು ವ್ಯಾಕುಲಭರಿತರಾದರು. ಏಕೆಂದರೆ ಅವಳು ತನ್ನ ಮಗಳ ಪ್ರೇಮವನ್ನು ಸ್ಮರಿಸಿಕೊಂಡು ವಿಲಾಪಮಾಡುತ್ತಾ ಹೇಳುತ್ತಿದ್ದಳೇನಂದರೆ— ನಾನು ನಾರದನಿಗೆ ಏನು ಅನ್ಯಾಯಮಾಡಿದೆನು. ಅವನು ನನ್ನ ತುಂಬಿದ ಮನೆಯು ಹಾಳಾಗುವಂತೆ ಮಾಡಿದನಲ್ಲ. ಈ ಹುಚ್ಚವರನಿಗೋಸ್ಕರ ತಪಸ್ಸು ಮಾಡುವುದಕ್ಕೆ ಪಾರ್ವತಿಗೆ ಉಪದೇಶಿಸಿದನೇಕೆ? ನಿಜವಾಗಿಯೂ ಈ ವರನಲ್ಲಿ ಮೋಹವೇ ಇಲ್ಲ. ಇವನಿಗೆ ಮನೆಯಿಲ್ಲ, ಸ್ತ್ರೀ ಇಲ್ಲಾ. ಇವನು ಉದಾಸೀನ ನಾಗಿರುವನು. ಅವನಿಗೆ ಧನವೂ ಇಲ್ಲ. ಇವನು ಕೇವಲ ಪರರ ಮನೆಯನ್ನು ನಾಶಗೊಳಿಸತಕ್ಕವನು. ಇವನಲ್ಲಿ ಲಜ್ಜೆಯೂ ಭಯವೂ ಇಲ್ಲ. ಬಂಜೆಯಾದ ಹೆಂಗಸು ಪ್ರಸವವೇದನೆಯನ್ನು ಹೇಗೆ ತಿಳಿಯಬಲ್ಲಳು?—ಇಂತಾಡುತ್ತಿದ್ದ ಮಾತೆಯ ದುಃಖವನ್ನು ನೋಡಿ ಪಾರ್ವತಿಯು ಜ್ಞಾನ ಪೂರ್ಣವಾದ ತನ್ನ

ಕೋಮಲವಾಣಿಯಿಂದ ಇಂತೆಂದಳು–ಹೇ ಮಾತೇ! ಬ್ರಹ್ಮನ ಬರಹವನ್ನು ತಪ್ಪಿಸುವದು ಯಾರಿಗೂ ಸಾಧ್ಯವಲ್ಲ. ಇದನ್ನು ತಿಳಿದು ನೀನು ಶೋಕವನ್ನು ಬಿಟ್ಟುಬಿಡು. ನನ್ನ ಪ್ರಾರಬ್ಧದಲ್ಲಿ ಹುಚ್ಚನೇ ಪತಿಯಾಗಬೇಕೆಂದು ಬರೆದಿದ್ದರೆ ಅದರ ದೋಷವನ್ನು ಅನ್ಯರ ಮೇಲೇಕೆ ಹೊರಿಸಬೇಕು ಅಮ್ಮಾ, ನೀನು ವಿಧಾತನ ಬರಹವನ್ನು ಮಾರ್ಪಡಿಸಬಲ್ಲೆಯಾ? ವ್ಯರ್ಥವಾಗಿ ಆ ಕಲಂಕವನ್ನು ಹಚ್ಚಿಕೊಳ್ಳಬೇಡ. ಹೇ ಮಾತೇ! ಮೋಹವನ್ನು ಬಿಟ್ಟು ಬಿಡು. ಈ ವಿಚಾರವು ಶೋಕಕರವಾದುದಲ್ಲ. ನನ್ನ ಕರ್ಮಫಲದಿಂದುಂಟಾಗತಕ್ಕ ಸುಖದುಃಖಗಳು ನಾನು ಎಲ್ಲಿಗೆ ಹೋದರೂ ಬಿಡುವದಿಲ್ಲ.—ಹೀಗೆಂದು ಹೇಳಿದ ಪಾರ್ವತಿಯ ನಮ್ರ ಮತ್ತು ಕೋಮಲ ವಚನಗಳನ್ನು ಕೇಳಿ ಸ್ತ್ರೀಯರೆಲ್ಲರೂ ಚಿಂತಾಮಗ್ನರಾಗಿ ಬ್ರಹ್ಮನನ್ನು ಹಲವು ವಿಧವಾಗಿ ನಿಂದಿಸಿ ಕಣ್ಣುಗಳಿಂದ ನೀರು ಸುರಿಸಿದರು.

ದೋ ॥೧೭॥ ಈ ಸಮಾಚಾರವನ್ನು ಕೇಳಿ ಹಿಮಾಚಲನು ಸಪ್ತಋಷಿಗಳನ್ನೂ ನಾರದನನ್ನೂ ಜತೆಯಲ್ಲಿ ಕರೆದುಕೊಂಡು ಮನೆಗೆ ಬಂದನು. ಆಗ ನಾರದನು ಎಲ್ಲರನ್ನೂ ಸಮಾಧಾನ ಪಡಿಸಿ ಪಾರ್ವತಿಯ ಪೂರ್ವವೃತ್ತಾಂತವನ್ನು ಕುರಿತು ಹೀಗೆಂದನು–ಹೇ ಮೈನಾದೇವಿ! ನೀನು ನನ್ನ ಸತ್ಯವಾಣಿಯನ್ನು ಕೇಳು. ನಿನ್ನ ಪುತ್ರಿಯಾದ ಪಾರ್ವತಿಯು ಜಗದಂಬೆಯಾದ ಭವಾನಿಯು. ಇವಳೆಂದಿಗೂ ಜನ್ಮವನ್ನು ಧರಿಸುವದಿಲ್ಲ ಇವಳು ಅನಾದಿಯಾಗಿರುವಳು. ಎಂದಿಗೂ ನಾಶವಾಗದೆ ಇರತಕ್ಕ ಶಕ್ತಿಯೇ ಇವಳು. ಇವಳು ಯಾವಾಗಲೂ ಶಿವನ ಅರ್ಧಾಂಗಿನಿಯಾಗಿರುವಳು. ಇವಳೇ ಜಗತ್ತನ್ನು ಸೃಷ್ಟಿಸುವಳು, ಪಾಲನ ಮಾಡುವಳು, ಮತ್ತೆ ಅದರ ಸಂಹಾರವನ್ನೂ ಮಾಡುವಳು. ಇವಳು ತನ್ನ ಇಚ್ಛಾನುಸಾರವಾಗಿ ಬೇಕಾದ ಶರೀರವನ್ನು ಧಾರಣಮಾಡಬಲ್ಲಳು. ಮೊದಲು ಇವಳು ದಕ್ಷನ ಮನೆಯಲ್ಲಿ ಹುಟ್ಟಿದ್ದಳು ಆಗ ಅವಳ ಹೆಸರು ಸತೀ ಎಂಬದಾಗಿದ್ದಿತು. ಮತ್ತ ಅವಳು ಬಹು ಸುಂದರ ಶರೀರವನ್ನು ಹೊಂದಿದ್ದಳು. ಆಗಲೂ ಸತಿಯು ಶಿವನನ್ನೇ ವರಿಸಿದ್ದಳೆಂಬ ಸಂಗತಿಯು ಜಗತ್ಪ್ರಸಿದ್ಧವಾದುದು. ಒಂದಾನೊಂದು ಸಮಯದಲ್ಲಿ ಇವಳು ಶಿವನೊಂದಿಗೆ ಹೋಗುತ್ತಿದ್ದಾಗ ರಘುಕುಲರೂಪಿಯಾದ ಕಮಲಕ್ಕೆ ಸೂರ್ಯನೆನಿಸಿದ ಶ್ರೀರಾಮಚಂದ್ರನನ್ನು ನೋಡಿದಳು. ಆಗ ಇವಳಲ್ಲಿ ಮೋಹಹುಟ್ಟಿ ಇವಳು ಶಿವನ ಮಾತನ್ನು ಕೇಳದೆ ಭ್ರಮಿತಳಾಗಿ ಸೀತೆಯ ರೂಪವನ್ನು ಧರಿಸಿದಳು ಸತಿಯು ಸೀತೆಯ ರೂಪವನ್ನು ಧರಿಸಿದಳೆಂಬ ಅಪರಾಧದಿಂದ ಮಹಾದೇವನು ಇವಳನ್ನು ತ್ಯಜಿಸಿದ್ದನು. ಶಂಕರನ ವಿಯೋಗ ದುಃಖದಿಂದ ತಪ್ತಳಾದ ಇವಳು ತನ್ನ ಪಿತನ ಯಜ್ಞಸ್ಥಳಕ್ಕೆ ಹೋಗಿ ಅಲ್ಲಿ ಯೋಗಾಗ್ನಿಯಿಂದ ಭಸ್ಮೀಭೂತಳಾದಳು. ಅನಂತರ ಇವಳು ನಿಮ್ಮ ಮನೆಯಲ್ಲಿ ಜನ್ಮವೆತ್ತಿ ತನ್ನ ಪತಿಗೋಸುಗ ಕಠೋರವಾದ

ತಪಸ್ಸನ್ನಾಚರಿಸಿದಳು. ಆದುದರಿಂದ ನೀನು ಇದನ್ನೆಲ್ಲಾ ತಿಳಿದು ನಿನ್ನ ಸಂದೇಹವನ್ನು ದೂರೀಕರಿಸು. ಪಾರ್ವತಿಯು ಸದಾ ಶಂಕರ ಪ್ರಿಯಳಾಗಿರುವಳು.

ದೋ ॥ ೧೨೨ ॥ ನಾರದನ ಈ ಮಾತುಗಳನ್ನು ಕೇಳಿ ಎಲ್ಲರ ದುಃಖವೂ ಮಾಯವಾಯಿತು. ಕ್ಷಣಮಾತ್ರದಲ್ಲಿ ಈ (ಆನಂದದ) ಸುದ್ದಿಯು ನಗರದಲ್ಲೆಲ್ಲಿಯೂ ಹರಡಿಕೊಂಡಿತು. ಆಗ ಮೈನಾದೇವಿಯೂ ಹಿಮಾಚಲನೂ ಪ್ರಸನ್ನಚಿತ್ತರಾಗಿ (ಮನಸ್ಸಿನಲ್ಲಿಯೇ) ಬಾರಿಬಾರಿಗೂ ಪಾರ್ವತಿಯ ಚರಣಗಳಿಗೆ ಪ್ರಣಾಮಮಾಡಿದರು. ಸ್ತ್ರೀ ಪುರುಷ, ಯುವಕ ವೃದ್ಧ ಮತ್ತು ಬಾಲಕರಾದಿಯಾಗಿ ನಗರವಾಸಿಗಳೆಲ್ಲರೂ ಹರ್ಷಮಗ್ನರಾದರು. ನಗರದಲ್ಲಿ ಆನಂದ ಮಂಗಲಗೀತಗಳ ಧ್ವನಿಯು ಕೇಳಿಸಲಾರಂಭಿಸಿತು. ಎಲ್ಲರೂ ವಿವಿಧವಾದ ಸುವರ್ಣ ಕಲಶಗಳನ್ನು ಸಿದ್ಧಗೊಳಿಸಿದರು. ಪಾಕಶಾಸ್ತ್ರ ನಿಯಮಾನುಸಾರವಾಗಿ ವಿವಿಧವಾದ ಪಕ್ವಾನ್ನಗಳು ಸಿದ್ಧವಾದವು. ಯಾವ ಮನೆಯಲ್ಲಿ ಮಾತೆಯಾದ ಭವಾನಿ ಇರುವಳೋ ಅಲ್ಲಿ ಸಿದ್ಧವಾಗತಕ್ಕ ಪಕ್ವಾನ್ನಗಳನ್ನು ಯಾರು ತಾನೇ ವರ್ಣಿಸಬಲ್ಲರು! ಬ್ರಹ್ಮ, ವಿಷ್ಣು, ಮತ್ತು ಎಲ್ಲಾ ದೇವಗಣಗಳ ಪರಿವಾರದವರು ಆದರ ಪೂರ್ವಕವಾದ ಸತ್ಕಾರವನ್ನು ಹೊಂದಿದರು ಮದುವೆಗೆ ಬಂದವರೆಲ್ಲರೂ ಸಾಲುಸಾಲಾಗಿ ಭೋಜನಕ್ಕೆ ಕೂತರು. ಚತುರರಾದ ಅಡುಗೆಯವರು ಬಡಿಸಲಾರಂಭಿಸಿದರು ಸ್ತ್ರೀ ಸಮೂಹದವರು ದೇವತೆಗಳು ಭೋಜನ ಮಾಡುತ್ತಿರುವದನ್ನು ತಿಳಿದು ಕೋಮಲವಾಣಿಯಿಂದ (ಬೀಗರ ಹಾಡುಗಳನ್ನು ಹಾಡುತ್ತಾ) ದೇವತೆಗಳನ್ನು ನಿಂದಿಸಲಾರಂಭಿಸಿದರು. ಸ್ತ್ರೀಯರೆಲ್ಲರೂ ಮಧುರ ಸ್ವರದಲ್ಲಿ ಬೈಯುತ್ತಾ ವಿವಿಧ ವ್ಯಂಗ್ಯವಚನಗಳನ್ನು ನುಡಿಯುತ್ತಿದ್ದರು. ದೇವಗಣದವರು ಮೆಲ್ಲಮೆಲ್ಲಗೆ ಭೋಜನ ಮಾಡುತ್ತಿದ್ದರು. ಮತ್ತು ಸ್ತ್ರೀಯರ ಹಾಸ್ಯ ಧ್ವನಿಯನ್ನು ಕೇಳಿ (ಆನಂದ ಮಗ್ನರಾಗಿ) ಮೌನವನ್ನು ಧರಿಸಿದ್ದರು. ಆ ಭೋಜನ ಸಮಯದಲ್ಲಿ ಉಂಟಾಗಿದ್ದ ಆನಂದವನ್ನು ಕೋಟಿಮುಖಗಳಿಂದಲೂ ವರ್ಣಿಸುವದಸಾಧ್ಯವು. ಭೋಜನವು ಮುಗಿದ ನಂತರ ಎಲ್ಲರೂ ಕೈ ತೊಳೆದುಕೊಂಡು ತಾಂಬೂಲವನ್ನು ತೆಗೆದುಕೊಂಡು ತಮ್ಮ ತಮ್ಮ ಬಿಡಾರಕ್ಕೆ ತೆರಳಿದರು.

ದೋ ॥ ೧೨೩ ॥ ಮುನಿಗಳು ಮತ್ತೆ ಹಿಂತಿರುಗಿ ಬಂದು ಹಿಮಾಚಲನೆದುರಿಗೆ ಲಗ್ನಪತ್ರಿಕೆಯನ್ನು ಓದಿ ವಿವಾಹದ ಸಮಯವನ್ನು ನೋಡಿ ದೇವತೆಗಳನ್ನು ಕರೆ ಕಳುಹಿಸಿದರು. ಮತ್ತೆ ದೇವತೆಗಳೆಲ್ಲರನ್ನು, ಸಾದರದಿಂದ ಕರೆದುಕೊಂಡು ಬಂದು ಎಲ್ಲರಿಗೂ ಉಚಿತಾಸನವನ್ನು ಕೊಟ್ಟರು. ವೇದನಿಯಮಾನುಸಾರವಾಗಿ ವೇದಿಕೆಯನ್ನೂ ರಚಿಸಿದರು. ಸ್ತ್ರೀಯರು ಸುಂದರವಾದ ಮಂಗಲಗೀತೆಗಳನ್ನು ಹಾಡಲಾರಂಭಿಸಿದರು. ಅಲ್ಲಿ ವರ್ಣನಾತೀತವೂ ಬಹುದಿವ್ಯವೂ ಆದ ಸಿಂಹಾಸನವನ್ನಿಟ್ಟಿದ್ದರು. ವಿಪ್ರರಿಗೆ ನಮಸ್ಕರಿಸಿ ಹೃದಯದಲ್ಲಿ

ಶ್ರೀ ತುಳಸೀದಾಸ ರಾಮಾಯಣ:—



ಶ್ರೀ ಉಮಾಮಹೇಶ್ವರರ ವಿವಾಹ.

(ಪುಟ ೮೩)

ತನ್ನ ಸ್ವಾಮಿಯಾದ ರಾಮಚಂದ್ರನನ್ನು ಸ್ಮರಿಸಿ ಶಿವನು ಅದರಮೇಲೆ ಕುಳಿತನು. ಆಗ ಆ ಮುನಿಗಳು ಪಾರ್ವತಿಯನ್ನು ಕರೆಕಳುಹಿಸಿದರು. ಸಖಿಯರು ಅವಳನ್ನು ಸಿಂಗರಿಸಿ ಕರೆತಂದರು. ಪಾರ್ವತಿಯ ರೂಪವನ್ನು ನೋಡಿ ದೇವತೆಗಳೆಲ್ಲರೂ ಮೋಹಿತರಾದರು. ಆಕೆಯ ಆ ಸೌಂದರ್ಯವನ್ನು ವರ್ಣಿಸುವ ಕವಿಯು ಈ ಜಗತ್ತಿನಲ್ಲಾವನಿರುವನು! ಪಾರ್ವತಿಯೇ ಜಗದಂಬೆ ಮತ್ತು ಶಿವನ ಪತ್ನಿ ಎಂದು ತಿಳಿದು ದೇವತೆಗಳೆಲ್ಲರೂ ಮನಸ್ಸಿನಲ್ಲಿಯೇ ಆಕೆಗೆ ಪ್ರಣಾಮಮಾಡಿದರು. ಭವಾನಿಯ ಆ ಸೌಂದರ್ಯವು ಸೀಮಾತೀತವಾಗಿದ್ದಿತು. ಅದರ ವರ್ಣನೆಯು ಕೋಟಿಮುಖಗಳಿಂದಲೂ ಸಾಧ್ಯವಾಗಲಾರದು. ಹೀಗಿರುವಾಗ ಜಗಜ್ಜನನಿಯಾದ ಪಾರ್ವತಿಯ ಆ ಅಧಿಕ ಶೋಭೆಯನ್ನು ವರ್ಣಿಸಬಲ್ಲವನಾರು! ವೇದಗಳೂ ಆದಿಶೇಷನೂ ಅದನ್ನು ವರ್ಣಿಸಲು ಸಂಕೋಚಪಡುತ್ತಿರುವಾಗ ಮಂದಮತಿಯಾದ ತುಲಸೀದಾಸನೆಂಬ ನಾನು ಎಷ್ಟರವನು! ರೂಪರಾಸಿ ಪೂರ್ಣಳಾದ ಭವಾನೀ ಮಾತೆಯು ಮಂಟಪದಲ್ಲಿ ಶಿವನ ಬಳಿಗೆ ಹೋದ ಕೂಡಲೇ ಅವಳು ಲಜ್ಜೆಯಿಂದ ಅವನನ್ನು ನೋಡಲೇ ಇಲ್ಲ ಎಂದರೆ ಅವಳು ಭ್ರಮರ ರೂಪಿಯಾದ ತನ್ನ ಮನಸ್ಸನ್ನು ಕಮಲರೂಪಿಯಾದ ಶಿವನ ಚರಣಗಳಲ್ಲಿ ಇಟ್ಟಳು.

ದೋ ॥೧೦೦॥ ಮುನಿಗಳ ಆಜ್ಞೆಯಿಂದ ಶಿವನೂ ಪಾರ್ವತಿಯೂ ಗಣೇಶಪೂಜೆಯನ್ನು ಮಾಡಿದರು. (ಗಣೇಶನು) ದೇವತೆಗಳಿಗೂ ಅನಾದಿ ಎಂದು ತಿಳಿದು, ಪಿತನು ಪುತ್ರನಪೂಜೆ ಏಕೆ ಮೊದಲು ಮಾಡಿದನೆಂಬ ಸಂಶಯವನ್ನು ಯಾರೂ ಮನಸ್ಸಿನಲ್ಲಿ ಹಿಡಿಯಲಿಲ್ಲ. ವೇದೋಕ್ತ ನಿಯಮಾನುಸಾರವಾಗಿ ದೊಡ್ಡ ದೊಡ್ಡ ಮುನಿಗಳು ಆ ವಿವಾಹ ಮಹೋತ್ಸವವನ್ನು ನೆರವೇರಿಸಿದರು. ಹಿಮಾಚಲನು ತನ್ನ ಕೈಯಲ್ಲಿ ಕುಶವನ್ನೂ ಕನ್ಯೆಯ ಕೈಯನ್ನೂ ಹಿಡಿದುಕೊಂಡು ಅವಳು ಭವಾನಿ ಎಂದು ತಿಳಿದು ಅವಳನ್ನು ಶಿವನಿಗೆ ಅರ್ಪಣೆ ಮಾಡಿದನು. ಶಿವನು ಪಾರ್ವತಿಯ ಪಾಣಿಗ್ರಹಣ ಮಾಡಿದಾಗ ದೇವತೆಗಳೆಲ್ಲರೂ ವಿಶೇಷ ಪ್ರಸನ್ನರಾಗಿ ಶಿವನ ಜೈ ಜೈ ಕಾರವನ್ನು ಮಾಡಿದರು. ಮುನಿವರರು ವೇದಮಂತ್ರಗಳನ್ನು ಘೋಷಿಸಿದರು. ಆಗ ವಿವಿಧ ವಾದ್ಯ ಧ್ವನಿಗಳಾದವು. ಆಕಾಶದಿಂದ ಹಲವು ವಿಧವಾದ ಪುಷ್ಪವೃಷ್ಟಿಗಳಾದವು. ಶಿವಪಾರ್ವತಿಯರ ಆ ವಿವಾಹ ಸಮಯದಲ್ಲಿ ಇಡೀ ಜಗತ್ತು ಆನಂದ ಮಗ್ನವಾಗಿದ್ದಿತು. ದಾಸಿಗಳು, ಸೇವಕರು. ಕುದುರೆ, ರಥ, ಆನೆ, ಗೋವು, ವಸ್ತ್ರ, ಮಣಿ, ಅನೇಕ ಪ್ರಕಾರವಾದ ಸಾಮಾನುಗಳು, ಬಂಗಾರದ ಪಾತ್ರೆಗಳು, ಇತರ ಪಾತ್ರೆಗಳಲ್ಲಿ ತುಂಬಿಕೊಟ್ಟ ಖಾದ್ಯ ವಿಶೇಷ ಪದಾರ್ಥಗಳು ಮತ್ತೆ ಸುವರ್ಣ ಪಾತ್ರೆಗಳಲ್ಲಿ ತುಂಬಿದ್ದ ಅನ್ನ—ಇತ್ಯಾದಿಯಾಗಿ ಕನ್ಯೆಯೊಂದಿಗೆ ಅಳಿಯನಿಗೆ ಬಳುವಳಿಯಾಗಿ ಕೊಟ್ಟ ವಸ್ತುಗಳ ವರ್ಣನೆಯನ್ನು ಮಾಡು

ರೀತಿಯಲ್ಲಿ ಆಶೀರ್ವದಿಸಿದರು. ಪಾರ್ವತಿಯು ಪುನಃ ಪುನಃ ಮಾತೆಯನ್ನು ಹಿಂತಿರುಗಿ ನೋಡುತ್ತ ಹೋಗುತ್ತಿದ್ದಳು ಅನಂತರ ಸಖಿಯರು ಅವಳನ್ನು ಶಿವನ ಬಳಿಗೆ ಕರೆದುಕೊಂಡು ಹೋದರು ಮಹಾದೇವನು ಯಾಚಕರೆಲ್ಲರನ್ನೂ ಸಂತುಷ್ಟಗೊಳಿಸಿ, ಪಾರ್ವತಿಯೊಂದಿಗೆ ಮನೆಗೆ ಹೊರಟನು ಆಗ ದೇವತೆಗಳೆಲ್ಲರೂ ಪ್ರಸನ್ನರಾಗಿ ಆಕಾಶದಲ್ಲಿ ಪುಷ್ಪಗಳನ್ನು ವರ್ಷಿಸುತ್ತ, ಸುಂದರವಾದ ವಾದ್ಯಗಳನ್ನು ಮೊಳಗಿಸಿದರು.

ದೋ॥೧೨೬॥ ಹಿಮಾಚಲನು ಅತ್ಯಂತ ಪ್ರೀತಿಯಿಂದ ಶಿವನನ್ನು ಕಳುಹಿಸುವುದಕ್ಕೆ ಜೊತೆಯಲ್ಲಿ ಬಂದಿದ್ದನು ಶಿವನು ಅವನನ್ನು ಹಲವು ವಿಧವಾಗಿ ಸಮಾಧಾನಪಡಿಸಿ ಅವನಿಗೆ ಅಪ್ಪಣೆ ಕೊಟ್ಟು ಕಳುಹಿಸಿದನು ಕೂಡಲೇ ಹಿಮಾಚಲನು ಮನೆಗೆ ಬಂದನು. ಅವನು ಎಲ್ಲಾ ಪರ್ವತಗಳನ್ನೂ ಮತ್ತು ಸರೋವರಗಳನ್ನೂ ಕರೆಯಿಸಿ, ಎಲ್ಲರಿಗೂ ಆದರದಿಂದ ಭೇಟಿ ಕೊಟ್ಟು, ವಿನಯ ಪೂರ್ವಕ ಸನ್ಮಾನವನ್ನು ಮಾಡಿ, ಕಳುಹಿಸಿದನು. ಶಿವನು ಕೈಲಾಸಪರ್ವತವನ್ನು ಸೇರಿದಾಗ ದೇವತೆಗಳೆಲ್ಲರೂ ತಂತಮ್ಮ ಲೋಕಗಳಿಗೆ ತೆರಳಿದರು ಪಾರ್ವತಿಯೂ ಮಹಾದೇವನೂ ಜಗತ್ತಿನ ಮಾತಾಪಿತೃಗಳಾಗಿರುವುದರಿಂದ ನಾನು ಅವರ ಶೃಂಗಾರ ವರ್ಣನೆಯನ್ನು ಮಾಡುವದಿಲ್ಲ. ಶಿವನೂ ಪಾರ್ವತಿಯೂ ವಿವಿಧ ಭೋಗವಿಲಾಸಗಳಲ್ಲಿ ಮಗ್ನರಾಗಿ, ತಮ್ಮ ಗಣಗಳೊಂದಿಗೆ ಕೈಲಾಸದಮೇಲೆ ವಾಸಿಸಲಾರಂಭಿಸಿದರು. ಸತಿಪತಿಗಳಿಬ್ಬರೂ ನಿತ್ಯವೂ ನವೀನ ವಿಹಾರವನ್ನು ಮಾಡುತ್ತಿದ್ದರು ಈ ರೀತಿಯಾಗಿ ಬಹು ಸಮಯವು ಕಳೆಯಿತು. ಆಗ ಷಣ್ಮುಖನೆನಿಸಿದ (ಕಾರ್ತಿಕಸ್ವಾಮಿ ಎಂಬ) ಪುತ್ರನು ಜನಿಸಿದನು. ಅವನು ಯುದ್ಧದಲ್ಲಿ ತಾರಕಾಸುರನನ್ನು ಸಂಹರಿಸಿದನು. ವೇದ, ಶಾಸ್ತ್ರ, ಮತ್ತು ಪುರಾಣಗಳಲ್ಲಿ ಇವನ ಜನ್ಮ ವೃತ್ತಾಂತವು ಪ್ರಕಟವಾಗಿ ಜಗತ್ಪ್ರಸಿದ್ಧವಾಗಿದೆ. ಕಾರ್ತಿಕಸ್ವಾಮಿಯ ಜನ್ಮ, ಕರ್ಮ ಪ್ರತಾಪ ಮತ್ತು ಮಹಾ ಪುರುಷಾರ್ಥವನ್ನು ಇಡೀ ಜಗತ್ತು ಅರಿತಿರುವುದು. ಆದುದರಿಂದ ನಾನು ಶಿವಪುತ್ರನಾದ "ಕಾರ್ತಿಕಸ್ವಾಮಿಯ" ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳಿರುವೆನು. ಪಾರ್ವತೀ ಮಹಾದೇವರ ವಿವಾಹದ ಈ ಕಥೆಯನ್ನುಬೇರೆಯವರಿಗೆ ಹೇಳುವಂತಹ ಅಥವಾ ಸ್ವಂತವಾಗಿ ಪಠಿಸುವಂತಹ ಸ್ತ್ರೀಪುರುಷರು ಎಲ್ಲಾ ಕಲ್ಯಾಣ ಕಾರ್ಯಗಳಲ್ಲಿಯೂ ವಿವಾಹೋತ್ಸವಗಳಲ್ಲಿಯೂ ಸದಾ ಆನಂದವನ್ನು ಹೊಂದುವರು

ದೋ॥೧೨೭॥ ಗಿರಿಜಾಪತಿಯಾದ ಶ್ರೀ ಮಹಾದೇವನ ಚರಿತ್ರೆಯು ಸಾಗರದಂತಿರುವುದು. ವೇದಗಳಿಗೂ ಅದರ ಕೊನೆಯನ್ನು ತಿಳಿಯುವುದು ಸಾಧ್ಯವಲ್ಲ. ಅಂತಹ ಅಪಾರಚರಿತ್ರೆಯನ್ನು ತುಳಸೀದಾಸನು ಹೇಗೆ ತಾನೆ ಮಾತುಗಳಿಂದ ಬಣ್ಣಿಸಬಲ್ಲನು? ಏಕೆಂದರೆ ಅವನು ಅತಿಮಂದಬುದ್ಧಿಯುಳ್ಳವನೂ ಅನಾಗರಿಕನೂ ಆಗಿರುವನು. ರಸಪೂರ್ಣವೂ ಮನೋಹರವೂ ಆದ ಮಹಾದೇವನ

ವುದಸಾಧ್ಯವು. ಹಿಮಾಚಲನು ಇದನ್ನೆಲ್ಲಾ ಕೊಟ್ಟು, ಕೈಜೋಡಿಸಿ, "ಹೇ ಶಂಕರ! ನೀನು ಪೂರ್ಣಕಾಮನು, ನಾನು ನಿನಗೇನು ಕೊಡಬಲ್ಲೆನು ?" ಎಂದು ನುಡಿದು ಶಿವನ ಪಾದಗಳನ್ನು ಹಿಡಿದುಕೊಂಡನು. ಶಿವನು ಕೃಪಾ ಸಾಗರನು. ಅವನು ತನ್ನ ಮಾವನನ್ನು ಸರ್ವ ಪ್ರಕಾರದಿಂದಲೂ ಸಂತೋಷಪಡಿಸಿದನು. ಅನಂತರ ಪ್ರೇಮಪೂರ್ಣಳಾಗಿ ಮೈನಾದೇವಿಯು ಶಿವನ ಚರಣ ಕಮಲಗಳನ್ನು ಸ್ಪರ್ಶಿಸಿ, ನುಡಿದಳೇನಂದರೆ,—

ದೊ॥೧೨೫॥ ಹೇನಾಥ! ಈ ಉಮೆಯು ನನ್ನ ಪ್ರಾಣ ಸಮಾನಳಾಗಿರುವಳು. ತಾವು ಇವಳನ್ನು ತಮ್ಮ ಮನೆಯದಾಸಿಯನ್ನಾಗಿ ಮಾಡಿಕೊಂಡು ನಮ್ಮ ಅಪರಾಧಗಳನ್ನೆಲ್ಲಾ ಕ್ಷಮಿಸಿ ಪ್ರಸನ್ನರಾಗಿ ವರವನ್ನು ಕೊಡಬೇಕು (ಈ ರೀತಿಯಾಗಿ ಮಾತನಾಡಿದ) ತನ್ನ ಅತ್ತೆಯನ್ನು ಶಿವನು ಬಹುವಾಗಿ ಸಮಾಧಾನಪಡಿಸಿದನು. * ಅವಳು ಶಿವನ ಚರಣಗಳಿಗೆರಗಿ ಮನೆಗೆ ಹೋದಳು ಅಲ್ಲಿ ಮೈನಾದೇವಿಯು (ಮಗಳಾದ) ಪಾರ್ವತೀದೇವಿಯನ್ನು ಕರೆದು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸುಂದರವಾದ ಉಪದೇಶವನ್ನು ಮಾಡಿದಳು. "ಹೇ ಪುತ್ರೀ! ನೀನು ಸದಾಕ್ಕೆ ಶಿವನ ಚರಣಸೇವೆಯನ್ನು ಮಾಡಬೇಕು. ಅದೇ ನಾರಿಯ ಧರ್ಮವು. ಅವಳಿಗೆ ಪತಿಯು ವಿನಾ ಅನ್ಯದೇವತೆಯೇ ಇಲ್ಲ" ಹೀಗೆಂದು ಹೇಳುತ್ತ ಹೇಳುತ್ತ ಅವಳ ಕಣ್ಣುಗಳಲ್ಲಿ ನೀರು ತುಂಬಿತು. ಆಗ ಅವಳು ತನ್ನ ಮಗಳನ್ನು ಎದೆಗಪ್ಪಿಕೊಂಡು ಮತ್ತೆ ಹೇಳಿದಳೇನಂದರೆ—ಬ್ರಹ್ಮನು ಈ ಜಗತ್ತಿನಲ್ಲಿ ನಾರಿಯನ್ನು ಏಕೆ ಸೃಷ್ಟಿಸಿದನು! ಪರಾಧೀನರಾದವರಿಗೆ ಸ್ವಪ್ನದಲ್ಲಿಯೂ ಸುಖ ದೊರೆಯಲಾರದು. ಹೀಗೆಂದು ನುಡಿಯುತ್ತಾ ಪಾರ್ವತಿಯ ಮಾತೆಯು ಅತ್ಯಂತ ಪ್ರೇಮ ವಿಕಲಳಾದಳು. ಆದರೆ (ಹೆಚ್ಚು ಮಾತನಾಡುವದಕ್ಕೆ) ಆ ಸಮಯವು ಸರಿಯಾದುದಲ್ಲವೆಂದರಿತು ಅವಳು ಧೈರ್ಯವನ್ನು ತಳೆದು ಬಾರಿಬಾರಿಗೂ ಪಾರ್ವತಿಯ ಬಳಿಗೆ ಬಂದು ಅವಳ ಚರಣಗಳನ್ನು ಹಿಡಿದುಕೊಳ್ಳುತ್ತಿದ್ದಳು. ಶ್ರೇಷ್ಠವಾದ ಪ್ರೇಮದ ವರ್ಣನೆಯನ್ನು ಮಾಡುವದಸಾಧ್ಯ. ಪಾರ್ವತಿಯು ಎಲ್ಲಾ ಸ್ತ್ರೀಯರಿಗೂ ಭೇಟಿಯಾಗಿ ಬಂದು ಪುನಃ ತನ್ನ ಮಾತೆಯನ್ನು ಎದೆಗಪ್ಪಿಕೊಂಡಳು. ಪಾರ್ವತಿಯು ಅಲ್ಲಿಂದ ಹೊರಡುವಾಗ ಎಲ್ಲರೂ ಅವಳನ್ನು ಯೋಗ್ಯ

---

* ಮೈನಾದೇವಿಯ ಸಮಾಧಾನಕ್ಕಾಗಿ ಈ ಸಂಗತಿಯನ್ನು ತಿಳಿಹಿಸಿದನು.—"ನೀನು ನೋಡುತ್ತಿರುವ ಭಯಂಕರ ಸ್ವರೂಪವು ನನ್ನ ನಿಜವಾದ ಸ್ವರೂಪವಲ್ಲ. ನಾನು ನಿಜವಾಗಿಯೂ ಕಲ್ಯಾಣಸ್ವರೂಪನು ವಿಷ್ಣುವಿನ ಹೇಳಿಕೆಯ ಪ್ರಕಾರ ಅಸುರರ ಮೋಹಕ್ಕಾಗಿ ಈ ರೂಪವನ್ನು ಧರಿಸಿರುವೆನು" ಪದ್ಮ ಪುರಾಣದಲ್ಲಿ ಹೇಳಿರುವುದೇನಂದರೆ—"ವಿಷ್ಣುರುವಾಚ—ತ್ವಂ ಚ ರುದ್ರ ಮಹಾಭಾಗ ಮೋಹನಾರ್ಥಂ ಸುರದ್ವಿಷಾಮ್ । ಪಾಖಂಡಾಚರಣಂ ಧರ್ಮ ಕುರಷ್ವ ಸುರಸತ್ತಮ ॥

ಗಳಲ್ಲಿಯೂ ಪ್ರಸಿದ್ಧವಾದುದು. ಚರಾಚರ, ನಾಗ, ಮನುಷ್ಯ, ದೇವತೆಗಳಾದಿಯಾಗಿ ಎಲ್ಲರೂ ನಿಮ್ಮ ಚರಣಸೇವೆಯನ್ನು ಮಾಡುತ್ತಿರುವರು.

ಮಹಾದೇವ ಪಾರ್ವತಿಯರ ಸಂವಾದ.

ದೋ ॥೧೩೧॥ ನೀವು ಪ್ರಭುಗಳು, ಸಮರ್ಥರು, ಸರ್ವಜ್ಞರು, ಮಂಗಳ ಸ್ವರೂಪರು, ಸಕಲ ಕಲಾಗುಣ ಸಂಪನ್ನರು, ಯೋಗ-ಜ್ಞಾನ-ವೈರಾಗ್ಯನಿಧಿಗಳು, ನಿಮ್ಮ ನಾಮವು ಭಕ್ತರಿಗೆ ಕಲ್ಪ ವೃಕ್ಷದಂತಿರುವುದು. ಹೇ ಆನಂದ ಕಂದ! ತಾವು ನನ್ನ ಮೇಲೆ ಪ್ರಸನ್ನರಾಗಿ, ನಾನು ತಮ್ಮ ನಿಜದಾಸಿಯೆಂದು ತಿಳಿದಿದ್ದರೆ, ಹೇ ಸ್ವಾಮಿಾ, ತಾವು ರಾಮಚಂದ್ರನ ವಿವಿಧ ಕಥೆಗಳನ್ನು ಹೇಳಿ ನನ್ನ ಅಜ್ಞಾನವನ್ನು ನಾಶಗೊಳಿಸಬೇಕು ಹೇ ಪ್ರಭೋ! ಪರಮಾರ್ಥ ತತ್ವ ಜ್ಞಾನಿಗಳಾದ ಮುನಿಗಳು ರಾಮಚಂದ್ರನೇ ಅನಾದಿಬ್ರಹ್ಮನೆಂದು ಹೇಳುವರು. ಶೇಷ, ಸರಸ್ವತಿ, ವೇದ ಮತ್ತು ಪುರಾಣಗಳೆಲ್ಲವೂ ರಾಮಚಂದ್ರನ ಗುಣಗಾನ ಮಾಡುತ್ತಲಿವೆ. ಹೇ ಅನಂಗರಿಪು! ತಾವು ಹಗಲಿರುಳೂ ರಾಮ ನಾಮವನ್ನು ಜಪಿಸುತ್ತಿರುವಿರಿ.

ದೋ ॥೧೩೨॥ ಅಯೋಧ್ಯೆಯ ರಾಜಪುತ್ರನೇ ಆ ರಾಮನೊ? ಅಥವಾ ತನ್ನಗತಿಯನ್ನು ಅಬೋಧವಾಗಿರುವಂತೆ ಮಾಡಿರುವ ಜನ್ಮರಹಿತನೂ ನಿರ್ಗುಣನೂ ಆದ ರಾಮನು ಮತ್ತೊಬ್ಬನಿರುವನೊ? ರಾಜಪುತ್ರನಾದವನು ಹೇಗೆ ಬ್ರಹ್ಮನಾಗಿರಬಲ್ಲನು? ಏಕೆಂದರೆ ಆತನ ಬುದ್ಧಿಯು ಸ್ತ್ರೀವಿರಹದಿಂದ ಕಾತರಗೊಂಡಿತ್ತು. ಆತನ ಚರಿತ್ರೆಯನ್ನೂ ಮಹಿಮೆಯನ್ನೂ ಕೇಳಿ ನನ್ನ ಬುದ್ಧಿಯು ವಿಶೇಷ ಭ್ರಮೆಯಲ್ಲಿ ಸಿಲುಕಿರುವುದು ಇಚ್ಛಾರಹಿತನೂ ವ್ಯಾಪಕನೂ ಆದ ಬ್ರಹ್ಮನು ಬೇರೆ ಇದ್ದರೆ, ಹೇ ನಾಥ! ನನಗೆ ಅದನ್ನು ತಿಳಿಸಬೇಕು, ನಾನು ಮೂರ್ಖಳೆಂದು ತಾವು ನನ್ನ ಮೇಲೆ ಕೋಪಮಾಡಕೂಡದು ನಾನು (ಮೊದಲನೇ ಜನ್ಮದಲ್ಲಿ) ವನದಲ್ಲಿ ಸಂಚರಿಸುತ್ತಿರುವಾಗ ರಾಮಚಂದ್ರನ ಪ್ರಭುತ್ವವನ್ನು ನೋಡಿದ್ದೆನು. ಆಗ ಅತ್ಯಂತ ಭಯದಿಂದ ವ್ಯಾಕುಲಳಾಗಿ ನಾನು ನಿಮಗೆ ಆ ಮಾತನ್ನು ತಿಳುಹಿಸಲು ನನ್ನ ಮಲಿನವಾದ ಮನಸ್ಸಿಗೆ ಚೇತನ ಉಂಟಾಗಲಿಲ್ಲ. ನಾನು ಅದರ ಫಲವನ್ನು ಚನ್ನಾಗಿಯೇ ಭೋಗಿಸಿರುವೆನು. ಹೇ ನಾಥಾ! ಇನ್ನೂ ನನ್ನ ಮನಸ್ಸಿನಲ್ಲಿ ಸ್ವಲ್ಪ ಸಂದೇಹ ಉಳಿದಿದೆ. ತಾವು ಕೃಪೆಮಾಡಬೇಕೆಂದು ಕೈಜೋಡಿಸಿ ಪ್ರಾರ್ಥಿಸುವೆನು. ಹೇ ಪ್ರಭೋ! ತಾವು ಆ ಸಮಯದಲ್ಲಿ ನನ್ನನ್ನು ಹಲವು ವಿಧದಿಂದ ಸಮಾಧಾನ ಪಡಿಸಿದಾಗ್ಯೂ ನನಗೆ ಜ್ಞಾನೋದಯವಾಗಲಿಲ್ಲ. ಹೇ ನಾಥ! ಅದಕ್ಕೋಸ್ಕರ ತಾವು ಕೋಪಿಸಕೂಡದು ಈಗ ನನ್ನ ಮನಸ್ಸಿನಲ್ಲಿ ಮೊದಲಿನ ಅಜ್ಞಾನವು ನಾಶವಾಗಿ ರಾಮನ ಕಥೆಯನ್ನು ಕೇಳಬೇಕೆಂಬ ಅಭಿರುಚಿಯು ಹುಟ್ಟಿರುವದು. ಹೇ ಸರ್ಪರಾಜ

ಭೂಷಣ' ಹೇ ಸುರನಾಥ ! ತಾವು ರಾಮಚಂದ್ರನ ಪವಿತ್ರಗುಣಗಳ ಕಥೆಯನ್ನು ನನಗೆ ಹೇಳಬೇಕು.

ದೋ ॥೧೩೩॥ ನಾನು ನೆಲಕ್ಕೆ ತಲೆಮುಟ್ಟಿಸಿ, ತಮ್ಮ ಚರಣಗಳಿಗೆರಗಿ ಕೈ ಜೋಡಿಸಿ ಪ್ರಾರ್ಥಿಸಿಕೊಳ್ಳುವದೇನಂದರೆ–ತಾವು ವೇದಗಳ ಸಿದ್ಧಾಂತವನ್ನು ವಿಶದೀಕರಿಸಿ ರಾಮಚಂದ್ರನ ನಿರ್ಮಲವಾದ ಯಶೋವರ್ಣನೆಯನ್ನು ಮಾಡಬೇಕು. ಯದ್ಯಪಿ (ಒಬ್ಬ ಸಾಧಾರಣ) ಸ್ತ್ರೀಯು ಈ ವಿಷಯವನ್ನು ಕೇಳುವುದಕ್ಕೆ ಅಯೋಗ್ಯಳಾಗಿದ್ದರೂ ನಾನು ಮನೋವಾಕ್ಕಾಯಗಳಿಂದ ತಮ್ಮ ದಾಸಿಯಾಗಿರುವೆನು ಆರ್ತರು ಅಧಿಕಾರ ಸಂಪನ್ನರಾದಾಗ ಸಾಧುಜನರು ಗೂಢ ತತ್ವಗಳನ್ನು ಮುಚ್ಚಿಡುವದಿಲ್ಲ ಹೇ ದೇವರಾಜ ! ನಾನು ಬಹುದೀನಳಾಗಿ ಬೇಡಿಕೊಳ್ಳುತ್ತಿರುವೆನು. ತಾವು ಕೃಪೆಮಾಡಿ ರಾಮಚಂದ್ರನ ಕಥೆಯನ್ನು ಹೇಳಬೇಕು. ನಿರ್ಗುಣ ಬ್ರಹ್ಮನು ಶರೀರಧಾರಣೆಮಾಡಿ ಸಗುಣನೇಕಾದನೆಂದು ಮೊದಲು ನನಗೆ ತಿಳಿಸಬೇಕು. ಮತ್ತೆ, ಹೇ ನಾಥಾ ! ತಾವು ರಾಮಚಂದ್ರನ ಜನ್ಮ, ಬಾಲ್ಯ, ವಿವಾಹ,–ಇವುಗಳ ಕಥೆಯನ್ನು ಹೇಳಬೇಕು. ಮತ್ತೆ ಯಾವ ದೋಷಕ್ಕಾಗಿ ರಾಜ್ಯವನ್ನು ಬಿಟ್ಟನೆಂಬದನ್ನು ತಿಳಿಸಬೇಕು. ಹೇ ನಾಥಾ ! ಅವನು ವನದಲ್ಲಿ ಸಂಚರಿಸುತ್ತಾ ಮಾಡಿದ ಅನೇಕ ಕೃತ್ಯಗಳು, ರಾವಣನನ್ನು ಹೇಗೆ ಕೊಂದನು, ಮತ್ತೆ ಹೇ ಸುಖಶೀಲಶಂಕರಾ ! ಅವನು ತನ್ನ ರಾಜ್ಯದಲ್ಲಿ ಕುಳಿತುಕೊಂಡು ಪ್ರಜೆಗಳನ್ನು ಹೇಗೆ ಪಾಲಿಸಿದನು, ಇತ್ಯಾದಿಯಾಗಿ ಆತನ ಲೀಲೆಗಳ ಕಥೆಯನ್ನು ನೀವು ಹೇಳಬೇಕು.

ದೋ ॥೧೩೪॥ ಹೇ ದಯಾನಿಧೇ ! ರಾಮನು ಮಾಡಿದ ಕೌತುಕ ಕೃತ್ಯಗಳನ್ನೂ ಮತ್ತು ರಘುಕುಲ ಭೂಷಣನೆನಿಸಿದ ಆತನು ಪ್ರಜಾ ಸಹಿತನಾಗಿ ಹೇಗೆ ವೈಕುಂಠಕ್ಕೆ ಹೋದನೆಂಬುದನ್ನೂ ತಿಳಿಸಬೇಕು. ಹೇ ಪ್ರಭೋ ! ಮತ್ತೆ ಯಾವ ಜ್ಞಾನ ಸಾಗರದಲ್ಲಿ ಜ್ಞಾನಿಗಳೂ ಮುನಿಜನರೂ ಮಗ್ನರಾಗಿರುವರೋ ಆ ತತ್ವದ ವರ್ಣನೆಯನ್ನು ಮಾಡಬೇಕು. ಅನಂತರ ಭಕ್ತಿ, ಜ್ಞಾನ, ವಿಜ್ಞಾನ ಮತ್ತು ವೈರಾಗ್ಯಗಳನ್ನು ವಿಭಾಗಿಸಿ ವರ್ಣಿಸಬೇಕು. ಇಷ್ಟು ಮಾತ್ರವಲ್ಲದೆ ಅತೀ ನಿರ್ಮಲಜ್ಞಾನ ವಿಚಾರಗಳನ್ನೊಳಗೊಂಡಿರುವ ರಾಮಚಂದ್ರನ ಇತರ ಗುಪ್ತ ಚರಿತ್ರೆಗಳನ್ನೂ ವರ್ಣಿಸಬೇಕು. ಹೇ ದಯಾಳು ! ನಾನು ಯಾವದಾದರೂ ವಿಷಯವನ್ನು ಕೇಳದಿದ್ದರೆ ಅದನ್ನು ತಾವು ಗುಪ್ತವಾಗಿಡಕೂಡದು. ವೇದಗಳು ತ್ರಿಲೋಕಗಳಿಗೂ ತಾವೇ ಗುರುವೆಂದು ಸಾರಿರುವವು. ನೀಚ ಜೀವಗಳು ತಮ್ಮ ಮಹಿಮೆಯನ್ನು ಹೇಗೆ ತಿಳಿದಾವು ?–ಹೀಗೆಂದು ನುಡಿದ ಪಾರ್ವತಿಯ ಸರಳವೂ ಸುಂದರವೂ ಕಪಟರಹಿತವೂ ಆದ ಪ್ರಶ್ನೆಗಳನ್ನು ಕೇಳಿ ಶಿವನ ಮನಸ್ಸಿಗೆ ಸಂತೋಷವಾಯಿತು. ಆಗ ಮಹಾದೇವನ ಹೃದಯದಲ್ಲಿ ಎಲ್ಲಾ ರಾಮಚರಿತೆಗಳ ಸ್ಮರಣೆಯುಂಟಾಯಿತು. ಆತನು ಪ್ರೇಮದಿಂದ ಪುಲಕಿತ

ನಾದನು. ಆತನ ಕಣ್ಣುಗಳಲ್ಲಿ ಆನಂದ ಬಾಷ್ಪವು ತುಂಬಿಕೊಂಡಿತು. ಶ್ರೀರಾಮಚಂದ್ರನ ರೂಪ ರೂಪವು ಆತನ ಹೃದಯದಲ್ಲಿ ಮೂರ್ತಿಗೊಂಡು ಅದರಿಂದ ಆತನಿಗೆ ವಿಶೇಷ ಆನಂದವೂ ಸುಖವೂ ಉಂಟಾಯಿತು.

ದೋ ॥೧೩೫॥ ಶಿವನು ಎರಡು ಘಳಿಗೆಗಳ ವರೆಗೆ ಧ್ಯಾನರಸದಲ್ಲಿ ಮಗ್ನನಾಗಿದ್ದು ಆನಂತರ ಧ್ಯಾನವನ್ನು ಬಿಟ್ಟು ಪ್ರಸನ್ನ ಚಿತ್ತದಿಂದ ರಾಮಚರಿತೆಯನ್ನು ವರ್ಣಿಸಲಾರಂಭಿಸಿದನು. ರಜ್ಜುವು ಸರ್ಪವೆಂದು ಭಾಸವಾಗುವಂತೆ ಯಾವನ ಜ್ಞಾನವಿಲ್ಲದೆ ಅಸತ್ಯವು ಸತ್ಯವಾಗಿ ಭಾಸವಾಗುವದೋ, ಯಾವನನ್ನು ತಿಳಿಯುವದರಿಂದ ಜಾಗ್ರತಿಯಾದಾಗ ಸ್ವಪ್ನದ ಭ್ರಮೆಯು ಹೋಗುವಂತೆ ಸಂಸಾರ ದುಃಖವು ದೂರವಾಗುವದೋ ಆ ಬಾಲರೂಪಿಯಾದ ರಾಮಚಂದ್ರನಿಗೆ ವಂದಿಸುವೆನು. ಆತನ ನಾಮಜಪದಿಂದ ಸರ್ವಸಿದ್ಧಿಗಳು ಸಹಜವಾಗಿ ಲಭಿಸುವವು, ಮಂಗಳಭವನನೂ ಅಮಂಗಳಹಾರಿಯೂ ಆದ ದಶರಥನ ಅಂಗಣದಲ್ಲಿ ಆಡತಕ್ಕ ರಾಮಚಂದ್ರನು ನನ್ನ ಮೇಲೆ ಕೃಪೆಯಿಡಲಿ. ಶಿವನು ರಾಮಚಂದ್ರನಿಗೆ ಪ್ರಣಾಮಮಾಡಿ ಅಮೃತ ಸಮಾನವಾದ ವಾಣಿಯಿಂದ ಹೇಳಿದನೇನಂದರೆ—ಹೇ ಗಿರಿರಾಜ ಕುಮಾರಿ ಪಾರ್ವತಿ! ನಿನಗೆ ಧನ್ಯವಾದಗಳು! ನೀನೇ ಧನ್ಯಳು! ನಿನ್ನ ಸಮಾನ ಉಪಕಾರಿಗಳಿಲ್ಲ ಬ್ರಹ್ಮಾಂಡದಲ್ಲಿರುವ ಎಲ್ಲಾ ಲೋಕಗಳನ್ನು ಪವಿತ್ರ ಮಾಡಲು ಗಂಗೆಯಂತಿರುವ ರಾಮಚಂದ್ರನ ಕಥಾ ಪ್ರಸಂಗವನ್ನು ಕುರಿತು ಕೇಳುತ್ತಿರುವಿ. ನೀನು ರಾಮಚಂದ್ರನ ಚರಣಗಳಲ್ಲಿ ಪ್ರೇಮವನ್ನಿಟ್ಟು ಜಗತ್ತಿನ ಹಿತಕ್ಕಾಗಿ ನನ್ನನ್ನು ಪ್ರಶ್ನಿಸಿರುವಿ

ದೋ ॥೧೩೬॥ ಹೇ ಪಾರ್ವತೀ! ನಿನ್ನ ಮೇಲೆ ಶ್ರೀರಾಮಚಂದ್ರನು ಕೃಪೆಯನ್ನಿಟ್ಟಿರುವದರಿಂದ ನಿನ್ನ ಹೃದಯದಲ್ಲಿ ಶೋಕ, ಮೋಹ, ಸಂದೇಹ, ಭ್ರಮೆಗಳಿವೆ ಎಂದು ನಾನು ಸ್ವಪ್ನದಲ್ಲಿಯೂ ತಿಳಿಯಲ್ಲ ಆದಾಗ್ಗೂ ಸರ್ವಪ್ರಾಣಿಗಳ ಹಿತವನ್ನು ಸಾಧಿಸಬೇಕೆಂಬ ಉದ್ದೇಶದಿಂದ ಶಂಕಾರಹಿತಳಾದ ನೀನು ಸಂದೇಹವುಳ್ಳವಳಂತೆ ಪ್ರಶ್ನಿಸಿರುವಿ. * ಭಗವಂತನ ಕಥೆಯನ್ನು ಕೇಳದವನ ಕಿವಿಯು ಸರ್ಪದ ಬಿಲವಂತಿರುವುದು. ಸಂತರನ್ನು ಸಂದರ್ಶಿಸದವನ ಕಣ್ಣುಗಳು ನವಿಲು ಗರಿಗಳ ಮೇಲಿರುವ ಕಣ್ಣುಗಳಂತಿರುವವು ಹರಿ ಮತ್ತು ಗುರುಗಳ ಚರಣಗಳನ್ನು ಸ್ಪರ್ಶಿಸದ ಶಿರವು ಸೋರೆಯ ಬುರುಡೆಗೆ ಸಮಾನವಾದುದು. ಈಶ್ವರ ಭಕ್ತಿ ಇಲ್ಲದ ಹೃದಯವುಳ್ಳ ಪ್ರಾಣಿಯು ಜೀವದಿಂದಿದ್ದರೂ ಪ್ರೇತಕ್ಕೆ ಸಮಾನವಾಗಿರುವದು. ರಾಮಚಂದ್ರನ ಗುಣಗಾನಗಳನ್ನು ಮಾಡದ ನಾಲಿಗೆಯು ಕಪ್ಪೆಯ ನಾಲಿಗೆಗೆ ಸಮಾನವಾದುದು. ಹರಿಚರಿತೆಯನ್ನು ಕೇಳಿ ಪ್ರಸನ್ನವಾಗದ ಹೃದಯವು ವಜ್ರದಂತೆ ಕಠೋರವಾದುದು. ಹೇ ಪಾರ್ವತೀ! ದೇವತೆಗಳಿಗೆ ಹಿತಕರವೂ ದೈತ್ಯರಿಗೆ ಮೋಹಕರವೂ ಆದ ರಾಮಚಂದ್ರನ ಲೀಲೆಗಳನ್ನು ಕೇಳು.

ದೋ ॥೧೩೭॥ ರಾಮಚಂದ್ರನ ಕಥೆಯು ಕಾಮಧೇನು ಸಮಾನವಾದುದು. ಅದರ ಸೇವೆಯನ್ನು ಮಾಡಿದ ಕೂಡಲೇ ಸರ್ವಸುಖಗಳೂ ಲಭಿಸುವವು. ಸತ್ಪುರುಷರ ಸಮಾಜವು ಸುರಲೋಕಕ್ಕೆ ಸಮಾನವಾದುದು ಇದನ್ನರಿತವನಾವನು ತಾನೇ ಅದನ್ನು ಕೇಳಲಿಚ್ಛಿಸುವದಿಲ್ಲ? ಚಪ್ಪಾಳೆಯ ಶಬ್ದದಿಂದ ಪಕ್ಷಿಗಳು ಓಡಿ ಹೋಗುವಂತೆ, ಸುಂದರ ಕರತಾಳ ರೂಪಿಯಾದ ರಾಮಚರಿತೆಯಿಂದ ಸಂದೇಹವೆಂಬ ಪಕ್ಷಿಯು, ಓಡಿ ಹೋಗುವುದು. ಕಲಿಯುಗರೂಪಿ (ಜನನ ಮರಣಗಳೆಂಬ) ವೃಕ್ಷಕ್ಕೆ ರಾಮಚರಿತೆಯು ಕುಠಾರ ಸ್ವರೂಪವಾಗಿರುವುದು; ಆದುದರಿಂದ ನೀನು ಇದನ್ನು ಆದರಪೂರ್ವಕವಾಗಿ ಕೇಳು. ರಾಮನಾಮ ಗುಣಚರಿತೆ, ಜನ್ಮ ಮತ್ತು ಕಾರ್ಯಗಳನ್ನೂ ಕುರಿತು ವೇದಗಳು ಅನೇಕ ವಿಧವಾಗಿ ಗಾನಮಾಡಿರುವವು. ಭಗವಾನ್ ರಾಮಚಂದ್ರನು ಅನಂತನಾಗಿರುವಂತೆಯೇ ಆತನ ಕಥೆಗಳೂ, ಕೀರ್ತಿಯೂ ಮತ್ತೆ ಅವುಗಳ ಗುಣಗಳೂ ಅನಂತವಾಗಿರುವವು ಆದಾಗ್ಗೂ ನಿನ್ನ ಅಸೀಮ ಪ್ರೇಮವನ್ನು ನೋಡಿ, ನನ್ನ ಬುದ್ಧಿಗನುಸಾರವಾಗಿ, ನನಗೆ ತಿಳಿದ ಮಟ್ಟಿಗೆ ಆ ಕಥೆಯನ್ನು ಹೇಳುತ್ತೇನೆ ಕೇಳು. ಹೇ ಪಾರ್ವತಿ! ನಿನ್ನ ಪ್ರಶ್ನೆಯು ಸ್ವಾಭಾವಿಕವಾದುದಾಗಿಯೂ ಸರಳವಾದುದಾಗಿಯೂ ಇರುವುದು. ಅದು ಸುಖದಾಯಕವೂ, ಸಂತಸಮ್ಮತವಾದುದೂ, ನನಗೆ ಕೂಡ ರುಚಿಸತಕ್ಕುದೂ ಆಗಿರುವುದು. ಹೇ ಪಾರ್ವತಿ! ನೀನು ಮೋಹವಶಳಾಗಿ ವೇದಪ್ರಶಂಸಿತನೂ, ಮುನಿಜನಧ್ಯಾನಿಕನೂ ಆದ ರಾಮನು ಮತ್ತೊಬ್ಬನಿರುವನೋ ಎಂದು ಕೇಳಿದ ಮಾತು ನನಗೆ ಸರಿಯೆಂದು ತೋರಲಿಲ್ಲ.

ದೋ ॥೧೩೮॥ ಮೋಹವೆಂಬ ಪಿಶಾಚಿಯು ವಶನಾಗಿರುವವನೂ, ಷಂಡನೆನಿಸಿರುವವನೂ, ಭಗವಚ್ಚರಣದಿಂದ ವಿಮುಖನಾದವನೂ, ಸತ್ಯಾಸತ್ಯದ ಜ್ಞಾನವಿಲ್ಲದವನೂ, ಆದ ಅಧಮ ಮನುಷ್ಯನು ಮಾತ್ರ ಈ ರೀತಿಯಾಗಿ (ಎಂದರೆ ವೇದಪ್ರತಿಪಾದಿತ ರಾಮನು ಬೇರೊಬ್ಬನೆಂದು) ಹೇಳುವನು. ಜ್ಞಾನನೇತ್ರಗಳಿಲ್ಲದ ಅಜ್ಞಾನಿಯೂ, ಮೂರ್ಖನೂ, ನಿರ್ಭಾಗ್ಯನೂ ಮತ್ತೆ ಯಾರ ಮನಸ್ಸೆಂಬ ದರ್ಪಣಕ್ಕೆ ವಿಷಯರೂಪಮಲಿನತೆಯು ಅಂಟಿಕೊಂಡಿರುವುದೋ ಅಂತಹನೂ, ಲಂಪಟನೂ, ಕಪಟಿಯೂ, ದರ್ಪಪೂರ್ಣನೂ, ಸ್ವಪ್ನದಲ್ಲಿಯೂ ಕೂಡ ಸಂತರ ಸಭೆಯನ್ನು ನೋಡದಿರುವವನೂ, ತನ್ನ ಲಾಭಾಲಾಭಗಳ ಜ್ಞಾನವಿಲ್ಲದವನೂ ಆದ ಮಾನವನು ಮಾತ್ರ ಈ ವೇದವಿರುದ್ಧ ವಚನಗಳನ್ನು ಹೇಳುವನು—ಪಾಪ! ಆ ನಿರ್ಭಾಗ್ಯನಿಗೆ ರಾಮನ ರೂಪವು ಹೇಗೆ ತಾನೆ ಗೋಚರವಾಗಬೇಕು? ಯಾವನಲ್ಲಿ ನಿರ್ಗುಣ ಮತ್ತು ಸಗುಣ ವಿವೇಕವಿಲ್ಲವೋ, ಯಾವನು ಮನಸ್ಸಿಗೆ ಬಂದಂತೆ (ವಿಚಾರಶೂನ್ಯನಾಗಿ) ಮಾತನಾಡುತ್ತಿರುವನೋ, ಯಾವನು ಈಶ್ವರನ ಮಾಯೆಗೆ ವಶನಾಗಿ ಸಂಸಾರದಲ್ಲಿ ಭ್ರಮಿಸುತ್ತ

ಲಿರುವನೋ ಅವನು ಆಡುವ ಮಾತಿಗೆ ಬೆಲೆ ಇರಲಾರದು ಏಕೆಂದರೆ ಸನ್ನಿಪಾತ ಪೀಡಿತನಾದವನೂ, ಭೂತಪರವಶನಾದವನೂ, ಮದೋನ್ಮತ್ತನೂ ಮಾತನಾಡುವಾಗ ವಿಚಾರಮಾಡಿ ಮಾತನಾಡುವುದಿಲ್ಲ, ಮಹಾ–ಮೋಹ–ರೂಪಿಯಾದ ಮದಿರೆಯನ್ನು ಪಾನಮಾಡಿರುವವರ ಮಾತಿಗೆ ಕಿವಿಗೊಡಬಾರದು.

ಸೋ ||೧೩೯|| ಇದನ್ನೆಲ್ಲ ತಿಳಿದು ಸಂದೇಹವನ್ನು ಬಿಟ್ಟು, ರಾಮಚಂದ್ರನ ಚರಣಗಳನ್ನು ಭಜಿಸು. ಹೇ ಪಾರ್ವತಿ ! ಕೇಳು, ಸಂದೇಹರೂಪಿಯಾದ ಅಂಧಕಾರವನ್ನು ನಾಶಪಡಿಸಲು ನನ್ನ ವಚನವು ಸೂರ್ಯಕಿರಣ ಸಮಾನವಾಗಿರುವುದು. ಸಗುಣ ಮತ್ತು ನಿರ್ಗುಣ ಬ್ರಹ್ಮನಲ್ಲಿ ಭೇದವೇ ಇಲ್ಲವೆಂದು ಪುರಾಣಗಳೂ, ವೇದಗಳೂ, ಪಂಡಿತರೂ, ಮುನಿಜನರೂ ಸಾರುತ್ತಿರುವರು. ಅದೃಶ್ಯನೂ, ಜನ್ಮರಹಿತನೂ, ರೂಪವಿಲ್ಲದವನೂ ಆದ ನಿರ್ಗುಣ (ಬ್ರಹ್ಮ) ನು ಭಕ್ತಪ್ರೇಮವಶನಾಗಿ ಸಗುಣನಾಗುವನು. ನಿರ್ಗುಣನಾದವನು ಸಗುಣನಾಗುವುದು ಹೇಗೆ ? (ಎಂದು ಕೇಳಬಹುದು). ಆಣಿಕಲ್ಲು ಜಲದಿಂದ ಪ್ರತ್ಯೇಕವಾಗಿರಲಾರದಂತೆಯೇ ಅವೆರಡೂ ಒಂದೇ ಆಗಿರುವವು. ಯಾವನು ಭ್ರಮೆ‌ತಿಮಿರರವಿಯೆನಿಸಿಕೊಂಡಿರುವನೋ ಅಂತಹನಿಗೆ ಮೋಹ ಪ್ರಸಂಗವಾದರೂ ಹೇಗೆ ಸಂಭವಿಸಬೇಕು ? ಶ್ರೀರಾಮಚಂದ್ರನು ಸಚ್ಚಿದಾನಂದನೂ ಸೂರ್ಯನೂ ಆಗಿರುವನು. ಅವನಲ್ಲಿ ಮೋಹರೂಪ ರಾತ್ರಿಯ ಲೇಶಾಂಶವೂ ಇಲ್ಲ. ಭಗವಂತನು ಸ್ವಾಭಾವಿಕವಾಗಿಯೇ ಪ್ರಕಾಶರೂಪನಾಗಿರುವನು, ಆದುದರಿಂದ ಅಲ್ಲಿ ಪುನರಪಿ ಜ್ಞಾನರೂಪಿಯಾದ ಪ್ರಾತಃಕಾಲವಾಗಬೇಕಾಗಿಲ್ಲ (ಎಂದರೆ ಎಲ್ಲಿ ರಾತ್ರಿಯೇ ಇಲ್ಲವೋ ಅಲ್ಲಿ ಪ್ರಾತಃಕಾಲವು ಹೊಸದಾಗಿ ಹೇಗೆ ಒರಬೇಕು ?) ಹರ್ಷವಿಷಾದ, ಜ್ಞಾನ ಅಜ್ಞಾನ, ಅಹಂಕಾರ ಅಭಿಮಾನ–ಈ ಧರ್ಮಗಳೆಲ್ಲವೂ ಜೀವನಿಗೆ ಇರುವವು. ಆದರೆ ರಾಮಚಂದ್ರನು ಪರಮಾನಂದ ಸ್ವರೂಪನು, ಬ್ರಹ್ಮಾದಿಗಳ ಸ್ವಾಮಿಯು ಪುರಾಣ ಪುರುಷನು, ಸರ್ವವ್ಯಾಪಿಯಾದ * ಬ್ರಹ್ಮನು, ಮತ್ತೆ ಇಡೀ ಜಗತ್ತಿನ ಜ್ಞಾನವುಳ್ಳವನು.

---

* ಈ ವಿಷಯದಲ್ಲಿ ಹೇಳಿರುವುದೇನಂದರೆ– "ರಾಮಃಸತ್ಯಪರಂಬ್ರಹ್ಮ ರಾಮಾತ್ಕಿಂಚಿನ್ನವಿದ್ಯತೇ ||" ಎಂದರೆ ರಾಮನು ಸಚ್ಚಿದಾನಂದ ಪರಬ್ರಹ್ಮನು. ರಾಮನಿಲ್ಲದ ವಸ್ತುವೇ ಯಾವುದೂ ಇಲ್ಲ.–ಯಥಾ ಮಹಾ ರಾಮಾಯಣೇ– "ಭೂಮೌಜಲೇ ನಭಸಿ ದೇವನರಾಸುರೇಷು ಭೂತೇಶದೇವಿ ಸಕಲೇಷು ಚರಾಚರೇಷು | ಪಶ್ಯಂತಿ ಶುದ್ಧಮನಸಾ ಖಲುರಾಮರೂಪಂ ರಾಮಸ್ಯ ವೈ ಭುವಿತಲೇ ಸಮುಪಾಸಕಾಶ್ಚ ||" ಎಂದರೆ ಹೇ ದೇವಿ ! ರಾಮನ ಉಪಾಸಕರು ಪೃಥ್ವೀತಲದಲ್ಲಿ ರಾಮಸ್ವರೂಪವನ್ನು ಭೂಮಿ, ಜಲ, ಆಕಾಶ, ದೇವ, ನರ, ಅಸುರ, ಮತ್ತೆ ಸರ್ವ ಚರಾಚರ ಪ್ರಾಣಿಗಳಲ್ಲಿಯೂ ಶುದ್ಧ ಮನಸ್ಸಿನಿಂದ ನೋಡುವರು.

ದೋ॥೧೪೦॥ ಯಾವ ಪುರುಷನು ಸಾಮದಿಂದ ಪ್ರಸಿದ್ಧನಾಗಿರುವನೋ, ಪ್ರಕಾಶನಿಧಿಯಾಗಿರುವನೋ, ಮತ್ತೆ ಯಾವನು ಇಹಲೋಕ ಪರಲೋಕಗಳಿಗೆ ಒಡೆಯನಾಗಿರುವನೋ ಆ ರಘುಕುಲಮಣಿ ಶ್ರೀರಾಮಚಂದ್ರನು ನನ್ನ ಸ್ವಾಮಿ ಯಾಗಿರುವನು—ಎಂದು ಹೇಳಿ ಶಿವನು ತನ್ನ ತಲೆಬಾಗಿಸಿ ಪ್ರಣಾಮಮಾಡಿ (ಮತ್ತೆ ಹೇಳಿದನು) ಅಜ್ಞಾನಿಯು ತನ್ನಲ್ಲಿರುವ ಭ್ರಮೆಯನ್ನರಿಯಲಾರದೆ, ತನ್ನ ಮೂರ್ಖತ್ವದಿಂದ ಭಗವಂತನಲ್ಲಿ ಮೋಹವನ್ನು ಎಣಿಸುವನು. ಹಾಗೆಯೇ ದುರ್ವಿಚಾರದ ಜನರು ಆಕಾಶದಲ್ಲಿ ಮೋಡಗಳು ಕವಿದುದನ್ನು ನೋಡಿ, ಸೂರ್ಯನು ಆಚ್ಛಾದಿತನಾದ (ಮುಚ್ಚಿಕೊಂಡ) ನೆಂದು ಹೇಳುವರು. ತನ್ನ ಕಣ್ಣೆದುರಿಗೆ ಬೆರಳನ್ನು ಹಿಡಿದುಕೊಂಡು (ಚಂದ್ರನನ್ನು) ನೋಡುವವನಿಗೆ ಎರಡು ಚಂದ್ರಬಿಂಬಗಳು ಕಾಣಿಸುವವೆಂಬುದು ಸ್ಪಷ್ಟವಾದುದು ಹೇ ಪಾರ್ವತೀ ! ರಾಮನ ವಿಚಾರದಲ್ಲಿ ಮೋಹದ ಮಾತುಗಳನ್ನು ಹೇಳುವುದೆಂದರೆ, ಅದು ಆಕಾಶ ದಲ್ಲಿ ಧೂಳಿ ಮತ್ತು ಧೂಮದಿಂದ ಅಂಧಕಾರವಾಗುವದೆಂದು ಹೇಳಿದಂತೆಯೇ ಸರಿ. (ಏಕೆಂದರೆ, ಆಕಾಶವು ನಿರ್ಮಲವಾದುದು. ಧೂಳಾಗಲಿ ಹೊಗೆಯಾಗಲಿ ಅಲ್ಲಿಗೆ ಮುಟ್ಟಲಾರವು. ನೋಡುವುದಕ್ಕೆ ಮಾತ್ರ ಅವು ಅಲ್ಲಿಗೆ ಸೇರುವಂತೆ ಕಾಣಿ ಸುವವು. (ಶಬ್ದಾದಿ) ವಿಷಯ, (ದಶ) ಇಂದ್ರಿಯಗಳು, ದೇವತೆಗಳು, ಮತ್ತೆ ಜೀವಗಳು—ಇವುಗಳೆಲ್ಲಾ ಒಂದರಿಂದ ಒಂದು ಚೇತನವನ್ನು ಹೊಂದುವವು. ಇವು ಗಳಿಗೆಲ್ಲಾ ಯಾವನು ಪರಮ ಪ್ರಕಾಶಕನಾಗಿರುವನೋ (ಎಂದರೆ ಯಾವನಿಂದ ಇವುಗಳೆಲ್ಲ ಚೇತನವನ್ನು ಹೊಂದುವವೋ) ಆ ಅನಾದಿ ಬ್ರಹ್ಮನೇ ಅಯೋಧ್ಯಾ ಪತಿಯಾದ ರಾಮಚಂದ್ರನು ಜಗತ್ತು ಪ್ರಕಾಶ್ಯ, ರಾಮಚಂದ್ರನು ಪ್ರಕಾಶಕನು, ಮಾಯೆಯ ಸ್ವಾಮಿಯು, ಜ್ಞಾನಗುಣನಿಧಿಯು ಆತನ ಸತ್ಯದಿಂದ ಮೋಹದ ಸಹಾಯವನ್ನು ಪಡೆದ ಜಡ (ಅಚೇತನ) ಮಾಯೆಯು ಸತ್ಯದಂತೆ ಭಾಸ ವಾಗುವುದು

ದೋ॥೧೪೧॥ ಬೆಳ್ಳಿಯು ಮುತ್ತಿನ ಚಿಪ್ಪಿನಲ್ಲಿಯೂ, ನೀರು ಸೂರ್ಯಕಿರಣ ದಲ್ಲಿಯೂ ಪ್ರತೀತವಾಗುವವು. ಆದರೆ ಈ ವಿಷಯವು ತ್ರಿಕಾಲಗಳಲ್ಲಿ ಅಸತ್ಯ ವಾಗಿದ್ದಾಗ್ಗೂ, ಈ ಭ್ರಮೆಯನ್ನು ಯಾರೂ ನಿವಾರಿಸಲಾರರು. ಈ ಪ್ರಕಾರ ವಾಗಿಯೇ ಭಗವಂತನ ಅಧೀನವಾಗಿರುವ ಈ ಜಗತ್ತು ಅಸತ್ಯವಾಗಿದ್ದರೂ ಅದು ದುಃಖವನ್ನು ಕೊಡುತ್ತಲಿದೆ. ಸ್ವಪ್ನದಲ್ಲಿ ಯಾರಾದರೂ ತಲೆಯನ್ನು ಕತ್ತರಿಸಿ ದರೆ ನಿದ್ರಿತನು ಜಾಗ್ರತನಾಗುವವರೆಗೆ ಅವನ ದುಃಖವು ದೂರವಾಗದು. ಹೇ ಗಿರಿಜೆ ! ಯಾವನ ಕೃಪೆಯಿಂದ ಈ ವಿಧವಾದ ಭ್ರಮೆಯು ನಾಶಗೊಳ್ಳುವುದೋ ಆ ಕೃಪಾಳುವೇ ರಘುರಾಯನು. ಆತನಿಗೆ ಆದಿ, ಅಂತ್ಯಗಳಿಲ್ಲ. ವೇದಗಳು ಆತನ ವಿಚಾರದಲ್ಲಿ ತಮ್ಮ ಬುದ್ಧಿಗನುಸಾರವಾಗಿ ಹೀಗೆಂದು ಗಾನಮಾಡಿರು

ವವು, ಕೇಳು—ಆ ಬ್ರಹ್ಮನು ಕಾಲುಗಳಿಲ್ಲದೇ ನಡೆಯುವನು, * ಕಿವಿಗಳಿಲ್ಲದೇ ಕೇಳುವನು, ಕೈಗಳಿಲ್ಲದೇ ವಿವಿಧ ಕಾರ್ಯಗಳನ್ನು ಮಾಡುವನು, ಮುಖವಿಲ್ಲದೆ ಆತನು ಎಲ್ಲಾ ರಸಗಳನ್ನೂ ಭೋಗಿಸುವನು, ವಾಣಿಯಿಲ್ಲದೆ ಆತನು ಬಹು ದೊಡ್ಡ ವಕ್ತನೂ ಯೋಗಿಯೂ ಆಗಿರುವನು, ಶರೀರವಿಲ್ಲದೇ ಆತನು ಸ್ಪರ್ಶಿಸಬಲ್ಲನು, ಕಣ್ಣುಗಳಿಲ್ಲದೇ ನೋಡಬಲ್ಲನು, ಮೂಗಿಲ್ಲದೆ ವಾಸನೆಯನ್ನು ತಿಳಿಯಬಲ್ಲನು; ಈ ರೀತಿಯಾಗಿ ಆ ಬ್ರಹ್ಮನ ಕಾರ್ಯಗಳೆಲ್ಲ ಅಲೌಕಿಕವಾಗಿರುವವು. ಆತನ ಮಹಿಮೆಯನ್ನು ಮಾತಿನಿಂದ ಬಣ್ಣಿಸಲಾಗುವುದಿಲ್ಲ.

ದೋ॥೧೪೩॥ ಯಾವನ ವಿಷಯವಾಗಿ ವೇದಗಳೂ ಪಂಡಿತರೂ ಈ ಪ್ರಕಾರವಾಗಿ ಗಾನಮಾಡುವರೋ, ಯಾವಾತನನ್ನು ಮುನಿಜನರು ಧ್ಯಾನಮಾಡುವರೋ ಆ ಬ್ರಹ್ಮನು ಭಕ್ತರಿಗೋಸ್ಕರ ಕೋಸಲದೇಶದ ಸ್ವಾಮಿಯಾದ ದಶರಥನ ಪುತ್ರನಾದ ಭಗವಾನ್ ರಾಮಚಂದ್ರನಾಗಿ ಹುಟ್ಟಿದನು. ಹೇ ಪಾರ್ವತಿ, ಯಾರ ನಾಮಬಲದಿಂದ ಕಾಶಿಯಲ್ಲಿ ಸಾಯುವ ಪ್ರಾಣಿಗಳನ್ನು ಶೋಕರಹಿತವಾಗಿರುವಂತೆ ನಾನು ಮಾಡುವೆನೋ ಆ ರಘುವರ ರಾಮಚಂದ್ರನು ಅಂತರ್ಯಾಮಿಯಾಗಿಯೂ, ಚರಾಚರಸ್ವಾಮಿಯಾಗಿಯೂ ಇರುವನು. ಮತ್ತೆ ಅವನೇ ನನ್ನ ಸ್ವಾಮಿಯು, ಮನುಷ್ಯನು ವೈಮರೆತು * ಯಾವನ ನಾಮವನ್ನು † ಉಚ್ಚ

---

* ಶ್ವೇತಾಶ್ವತರೋಪನಿಷದಿ—"ಅಪಾಣಿಪಾದೊ ಜವನೋಗ್ರಹೀತಾ ಪಶ್ಯತ್ಯಚಕ್ಷುಃ ಸಶೃಣೋತ್ಯಕರ್ಣಃ। ಸವೇತ್ತಿ ವೇದ್ಯಂ ನಚ ತಸ್ಯಾಸ್ತಿ ವೇತ್ತಾ ತಮಾಹುರಗ್ರ್ಯಂ ಪುರುಷಂ ಮಹನ್ತಮ್." ಇತಿ॥

* ಆದಿಪುರಾಣೇ ಕೃಷ್ಣವಾಕ್ಯಮ್—"ಶ್ರದ್ಧಯಾ ಹೇಲಯಾ ನಾಮವದನ್ತಿ ಮನುಜಾಭುವಿ। ತೇಷಾಂ ನಾಸ್ತಿ ಭಯಂ ಪಾರ್ಥ ರಾಮನಾಮ ಪ್ರಸಾದತ.॥ ಎಂದರೆ ಯಾವ ಮನುಷ್ಯನು ಶ್ರದ್ಧೆಯಿಂದಾಗಲಿ ಅಶ್ರದ್ಧೆಯಿಂದಾಗಲಿ ಪ್ರಥ್ವಿಯ ಮೇಲೆ ನಾಮವನ್ನುಚ್ಚರಿಸುವನೋ, ಹೇ ಪಾರ್ಥ! ಅವನಿಗೆ ರಾಮನಾಮಪ್ರಭಾವದಿಂದ ಯಾವ ಭಯವೂ ಉಂಟಾಗದು.

† "ಪ್ರಮಾದಾದಪಿ ಸಂಸ್ಪೃಷ್ಟೋ ಯಥಾನಲಕಣೋ ದಹೇತ್। ತಥೌಷ್ಠಪುಟ ಸಂಸ್ಪೃಷ್ಟಂ ರಾಮನಾಮ ದಹೇದಘಮ್॥" ಎಂದರೆ ಪ್ರಮಾದದಿಂದ ಸ್ಪರ್ಶವಾಗಿದ್ದರೂ ಅಗ್ನಿಕಣವು ಹೇಗೆ ದಹಿಸುವುದೋ ಹಾಗೆಯೆ ತುಟಿಗಳನ್ನು ಸ್ಪರ್ಶಿಸಿದ ಕೂಡಲೆ ರಾಮನಾಮವು ಪಾಪವನ್ನು ನಾಶಗೊಳಿಸುವುದು.—ಪದ್ಮಪುರಾಣೇ.—"ಸಕೃದುಚ್ಚಾರಯೇದ್ಯಸ್ತು ರಾಮನಾಮ ಪರಾತ್ಪರಮ್। ಶುದ್ಧಾಂತಃ ಕರಣೋ ಭೂತ್ವಾ ನಿರ್ವಾಣಮಧಿಗಚ್ಛತಿ" ಎಂದರೆ ರಾಮನಾಮವು ಸರ್ವ ಶ್ರೇಷ್ಠವಾದದ್ದು. ಅದನ್ನು ಶುದ್ಧಾಂತಃ ಕರಣದಿಂದ ಒಂದು ಬಾರಿ ಉಚ್ಚರಿಸಿದರೂ ಮೋಕ್ಷಪ್ರಾಪ್ತಿಯಾಗುವುದು.

ರಿಸಿದ ಮಾತ್ರದಿಂದಲೇ ಅವನ ಅನೇಕ ಜನ್ಮಗಳ ಪಾಪ‡ಗಳೆಲ್ಲವೂ ಭಸ್ಮವಾಗುವುದೋ, ಮತ್ತೆ ಮನುಷ್ಯನು ಯಾವನನ್ನು ಆದರಪೂರ್ವಕವಾಗಿ § ಧ್ಯಾನಿಸುವುದರಿಂದ ಈ ಸಂಸಾರರೂಪ ಸಮುದ್ರದಿಂದ ಗೋಪದದಂತೆ ಪಾರಾಗಬಲ್ಲನೋ, ಹೇ ಭವಾನೀ! ಆ ರಾಮಚಂದ್ರನು ಪರಮಾತ್ಮನು. ಆತನ ವಿಚಾರವಾಗಿ ನೀನು ಹೀಗೆ ಭ್ರಮಿಸಿ ಮಾತನಾಡುವುದು ಸರಿಯಲ್ಲ ಇಂತಹ ಸಂದೇಹಗಳು ಮನಸ್ಸಿನಲ್ಲಿ ಹುಟ್ಟಿದ ಕೂಡಲೇ ಜ್ಞಾನ ವೈರಾಗ್ಯಾದಿ ಸರ್ವ ಗುಣಗಳೂ ದೂರವಾಗುವವು —ಈ ವಿಧವಾಗಿ ಭ್ರಮೆಯನ್ನು ನಿವಾರಿಸುವ ಶಿವನ ಮಾತುಗಳನ್ನು ಕೇಳಿ (ಪಾರ್ವತಿಯ) ಕುತರ್ಕವಿಚಾರಗಳೆಲ್ಲವೂ ಮಾಯವಾದವು. (ಆಗ) ಆಕೆಯ ಚಿತ್ತದಲ್ಲಿ ರಾಮಚಂದ್ರನ ಚರಣಗಳಲ್ಲಿ ಪ್ರೀತಿಯೂ, ವಿಶ್ವಾಸವೂ ಹುಟ್ಟಿದವು ಮತ್ತೆ (ರಾಮಚಂದ್ರನು ಈಶ್ವರನಲ್ಲವೆಂಬ) ಕಠಿಣ ಅವಿಶ್ವಾಸವು ಸಡಿಲವಾಗಲಾರಂಭಿಸಿತು.

ದೋ॥೧೪೩॥ (ಆಗ ಪಾರ್ವತಿಯು) ಪತಿಯ ಚರಣಕಮಲಗಳಿಗೆ ಪುನಃ ಪುನಃ ಪ್ರಣಾಮಮಾಡಿ, ಕಮಲರೂಪಿಯಾದ ಕೈಗಳನ್ನು ಜೋಡಿಸಿ, ಬಹು ಮನೋಹರವಾದ ರೀತಿಯಲ್ಲಿ ಪ್ರೇಮರಸಪೂರ್ಣವಾದ ಈ ಮಾತುಗಳನ್ನು ಹೇಳಿದಳು.—ಚಂದ್ರಕಾಂತಿ ಸಮಾನವಾದ ತಮ್ಮ ಮಾತುಗಳಿಂದ ಶರದೃತುವಿನ

---

‡ ಪ್ರಪನ್ನಗೀತೆಯಲ್ಲಿ ಹೇಳಿರುವುದೇನಂದರೆ.—"ನಾರಾಯಣೋನಾಮ ನರೋ ನರಾಣಾಂ ಪ್ರಸಿದ್ಧ ಚೌರಃ ಕಥಿತಃ ಪೃಥಿವ್ಯಾಮ್ । ಅನೇಕ ಜನ್ಮಾರ್ಜಿತ ಪಾಪಸಂಚಯಂ ಹರತ್ಯಶೇಷಂ ಸ್ಮೃತಮಾತ್ರ ಏವ ॥ ಎಂದರೆ ಮನುಷ್ಯರಲ್ಲಿ ನಾರಾಯಣನಾಮವು ಪೃಥ್ವಿಚೌರನೆಂದು ಪ್ರಸಿದ್ಧಗೊಂಡಿದೆ ; ಏಕೆಂದರೆ ಸ್ಮರಣೆಮಾತ್ರದಿಂದಲೇ ಅದು ಅನೇಕ ಜನ್ಮಗಳಿಂದ ಸಂಗ್ರಹಿಸಿದ ಪಾಪವನ್ನು ಹರಣಮಾಡುವುದು.— ಮತ್ತೆ ಹೇಳಿರುವುದೇನಂದರೆ —"ಸಪ್ತಕೋಟಿ ಮಹಾಮಂತ್ರಾಶ್ಚಿತ್ತ ವಿಭ್ರಮಕಾರಕಾಃ । ಏಕ ಏವ ಪರೋಮಂತ್ರೋ ರಾಮ ಇತ್ಯಕ್ಷರ ದ್ವಯಮ್ ॥ ಎಂದರೆ ಏಳುಕೋಟಿ ದೊಡ್ಡ ದೊಡ್ಡ ಮಂತ್ರಗಳು ಭ್ರಮೆಯನ್ನುಂಟುಮಾಡುವವು. ಆದರೆ "ರಾಮ" ಎಂಬೀ ಎರಡಕ್ಷರ ಮಂತ್ರವು ಸರ್ವ ಶ್ರೇಷ್ಠವಾದದ್ದು.

§ ವರಾಹಪುರಾಣೇ— 'ದೈವಾಚ್ಛೂಕರಶಾವಕೇನ ನಿಹತೋಮ್ಲೇಚ್ಛೋ ಜರಾಜರ್ಜರೋ ಹಾರಾಮೇತಿ ಹತೋಸ್ಮಿ ಭೂಮಿಪತಿತೋ ಜಲ್ಪಂಸ್ತನುಂತ್ಯಕ್ತವಾನ' । ತೀರ್ಣೋ ಗೋಪದವದ್ಭವಾರ್ಣವಮಹೋ ನಾಮ್ನಃ ಪ್ರಭಾವಾತ್ ಪುನಃ ಕಿಂ ಚಿತ್ರಂ ಯದಿ ರಾಮನಾಮ ರಸಿಕಾಸ್ತೆ ಯಾಂತಿ ರಾಮಾಸ್ಪದಮ್ ॥ ಎಂದರೆ ದೈವಯೋಗದಿಂದ ಸೂಕರನಿಂದ ಹೊಡೆಯಲ್ಪಟ್ಟ ಮ್ಲೇಚ್ಛನೂ ಕೂಡ ಸಾಯುವ ಸಮಯದಲ್ಲಿ ಹಾ ರಾಮ! ರಾಮ! ಎಂದು ಹೇಳುತ್ತ ಭೂಮಿಯ ಮೇಲೆ ಬಿದ್ದು ಪ್ರಾಣಬಿಟ್ಟರೆ, ಅವನು ರಾಮನಾಮಪ್ರಭಾವದಿಂದ ಸಂಸಾರಸಾಗರವನ್ನು ಗೋಖುರದಂತೆ ಪಾರಾಗುತ್ತಾನೆ. ಇಂಥಾದ್ದರಲ್ಲಿ ರಾಮರಸಿಕರು ರಾಮಪದವನ್ನು ಹೊಂದುವುದರಲ್ಲಿ ಆಶ್ಚರ್ಯವೇನಿದೆ ?

ಬಿಸಿಲಿನಂತಿದ್ದ ನನ್ನ ತಾಪವು ಶಾಂತವಾಯಿತು. ಹೇ ದಯಾಳು, ತಾವು ನನ್ನ ಸಂದೇಹವನ್ನು ದೂರೀಕರಿಸಿದಿರಿ, ನನಗೂ ರಾಮಚಂದ್ರನ ಯಥಾರ್ಥರೂಪ ಜ್ಞಾನವುಂಟಾಯಿತು. ಹೇ ನಾಥ! ತಮ್ಮ ಕೃಪೆಯಿಂದ ನನ್ನ ದುಃಖನಿವಾರಣೆ ಯಾಯಿತು ತಮ್ಮ ಚರಣಪ್ರಸಾದದಿಂದ ನಾನು ಸುಖಿಯಾದೆನು. ಸ್ತ್ರೀಯಾದ ನಾನು ಸ್ವಾಭಾವಿಕವಾಗಿ ಮೂರ್ಖಳೂ ಜ್ಞಾನಹೀನಳೂ ಆಗಿರುವೆನು. ಆದರೆ ಈಗ ನನ್ನನ್ನು ತಮ್ಮದಾಸಿಯೆಂದು ಭಾವಿಸಿ, ನನ್ನ ಮೇಲೆ ಪ್ರಸನ್ನರಾಗಿ ದ್ದರೆ ನಾನು ಕೇಳಿದ ವಿಷಯುವನ್ನು ವಿವರಿಸಬೇಕು. ಶ್ರೀರಾಮಚಂದ್ರನು ಚಿನ್ಮ ಯನೂ, ಅವಿನಾಶಿಯೂ, ಸರ್ವರಹಿತನೂ, ಸರ್ವಾಂತರ್ಯಾಮಿಯೂ ಆಗಿ ದ್ದರೆ, ಹೇ ವೃಷಭಕೇತು! ಆತನು ಮನುಷ್ಯ ಶರೀರವನ್ನೇಕೆ ಧರಿಸಿರುವನೆಂದು ವಿವರವಾಗಿ ತಿಳುಹಿಸಬೇಕು-(ಹೀಗೆಂದ) ಪಾರ್ವತಿಯ ವಿನಯುವಚನಗಳನ್ನೂ ರಾಮಚಂದ್ರನ ಕಥೆಯಲ್ಲಿ ಆಕೆಯ ಪವಿತ್ರ ಪ್ರೇಮವನ್ನೂ ನೋಡಿ,

ದೋ ॥೧೪೪॥ ಕಾಮದೇವನ ಶತ್ರುವೂ, ಜ್ಞಾನಿಯೂ ಕೃಪಾನಿಧಿಯೂ ಆದ ಶಿವನು ವಿಶೇಷ ಪ್ರಸನ್ನನಾಗಿ, ಪಾರ್ವತಿಯನ್ನು ಬಾರಿಬಾರಿಗೂ ಸ್ತುತಿ ಸುತ್ತ ಹೇಳಿದನೇನೆಂದರೆ—

### ರಾಮಾವತಾರದ ಕಾರಣವು.

ಸೋ ॥೧೪೫-೧೪೭॥ ಹೇ ಪಾರ್ವತಿ! ರಾಮಚರಿತ ಮಾನಸದ ಪವಿತ್ರ ಕಥೆಯನ್ನು ಕೇಳು, ಅದನ್ನು ಕಾಗಭುಸುಣ್ಡನು ಪಕ್ಷಿರಾಜನಾದ ಗರುಡನಿಗೆ ಯಥಾಮತಿಯಿಂದ ಹೇಳಿದನು (ಅವರಿಬ್ಬರಾ) ಉತ್ತಮ ಸಂವಾದ ವಿಚಾರ ವನ್ನು ಮುಂದೆ ಹೇಳುವೆನು. ಈಗ ರಾಮಚಂದ್ರನ ಅವತಾರದ ಪರಮ ಸುಂದರವೂ ಪಾಪರಹಿತವೂ ಆದ ಚರಿತೆಯನ್ನು ಕೇಳು. ಹರಿಯ ಗುಣವೂ ನಾಮವೂ ಅಪಾರವಾದವು, ಅವುಗಳ ಕಥೆಗಳೂ ಅನಂತವಾಗಿವೆ. ಹೇ ಉಮೆ! ನನ್ನ ಬುದ್ಧಿಗನುಸಾರವಾಗಿ ಹೇಳುವುದನ್ನು ಆದರದಿಂದ ಕೇಳುವವಳಾಗು. ಹೇ ಗಿರಿಜೆ! ವೇದ ಮತ್ತು ಪುರಾಣಗಳಲ್ಲಿ ಹೇಳಿರುವ ನಿರ್ಮಲವೂ, ವಿಸ್ತೃ ತವೂ, ಸುಂದರವೂ ಆದ ಹರಿಚರಿತವನ್ನು ಕೇಳು, ಹರಿಯ ಅವತಾರವು ಏಕಾ ಗುವುದೆಂಬುದನ್ನು ಸರಿಯಾಗಿ ವರ್ಣಿಸಲಾಗುವುದಿಲ್ಲ. ಹೇ ಭವಾನೀ ರಾಮ ಚಂದ್ರನ ವಿಷಯದಲ್ಲಿ ಬುದ್ಧಿ, ಮನಸ್ಸು ಮತ್ತು ವಾಣಿಗಳಿಂದ ವಿಚಾರಮಾ ಡಲಾಗುವುದಿಲ್ಲ. ಆದಾಗ್ಯೂ ಸಂತಜನರೂ ಮುನಿಗಳೂ, ವೇದಪುರಾಣಗಳೂ ತಂತಮ್ಮ ಬುದ್ಧಿಗನುಸಾರವಾಗಿ ಹೇಳಿರುವುದನ್ನೂ, ಹೇ ಸುಮುಖಿ! ನನಗೆ ತಿಳಿದಿರುವ ಕಾರಣಗಳನ್ನೂ ನಿನಗೆ ಹೇಳುವೆನು, ಕೇಳು—ಧರ್ಮಕ್ಕೆ ಹಾನಿ ಬಂದಾಗ ನೀಚರೂ, ಅಭಿಮಾನಿಗಳೂ ಆದ ರಾಕ್ಷಸರು ಹೆಚ್ಚುವರು ಅವರು ವರ್ಣಿಸಲಸಾಧ್ಯವಾದನ್ಯಾಯ ಅನ್ಯಾಯ ಮಾಡಿದಾಗ, ಬ್ರಾಹ್ಮಣರೂ, ಗೋವು

ಗಳೂ, ದೇವತೆಗಳೂ, ಪೃಥ್ವಿಯೂ ದುಃಖಮಗ್ನರಾಗುವರು. ಆಗ ಕೃಪಾ ನಿಧಿಯಾದ ಭಗವಾನನು ವಿವಿಧ ಶರೀರಗಳನ್ನು ಧರಿಸಿ ಸಜ್ಜನರ ದುಃಖವನ್ನು ನಿವಾರಿಸುವನು.

ದೋ॥೧೨೧॥ (ಆಗ ಆತನು) ರಾಕ್ಷಸರನ್ನು ಸಂಹರಿಸಿ, ದೇವತೆಗಳಿಗೆ ರಾಜ್ಯ ವನ್ನು ಕೊಟ್ಟು, ವೇದಗಳ ಮರ್ಯಾದೆಯನ್ನು ಕಾಪಾಡಿ, ತನ್ನ ನಿರ್ಮಲವಾದ ಯಶಸ್ಸನ್ನು ಜಗತ್ತಿನಲ್ಲಿ ವಿಸ್ತರಿಸುವನು. ಶ್ರೀರಾಮಚಂದ್ರನ ಜನ್ಮಕ್ಕೂ ಇದೇ ಕಾರಣವಾಗಿರುವುದು. ಆತನ ಯಶೋಗಾನವನ್ನು ಮಾಡಿ, ಭಕ್ತಜನರು ಭವ ಸಾಗರದಿಂದ ಪಾರಾಗುವರು. ಕೃಪಾಸಿಂಧುವಾದ ಭಗವಾನನು ಭಕ್ತರ ಹಿತ ಕ್ಕೋಸುಗ ಮನುಷ್ಯ ಶರೀರವನ್ನು ಧರಿಸುವನು. ರಾಮಚಂದ್ರನ ಅವತಾರಕ್ಕೆ ಬೇರೆ ಕಾರಣಗಳಿವೆ; ಅವುಗಳಲ್ಲೊಂದು ಮಾತ್ರ ಅತಿ ವಿಚಿತ್ರವಾಗಿದೆ. ಹೇ, ಸುಮತಿ ಭವಾನೀ! ನಾನು ಆತನ ಒಂದೆರಡು ಅವತಾರಗಳನ್ನು ವರ್ಣಿಸುವೆನು, ಅದನ್ನು ಸಾವಧಾನಚಿತ್ತದಿಂದ ಕೇಳು.—ವಿಷ್ಣುವಿಗೆ ಪ್ರಿಯರಾದ ಜಯವಿಜಯ ರೆಂಬ ಇಬ್ಬರು ದ್ವಾರಪಾಲಕರಿರುವರೆಂಬುದು ಎಲ್ಲರಿಗೂ ತಿಳಿದ ವಿಷಯವು. ಅವರಿಬ್ಬರು ಸೋದರರೂ ವಿಪ್ರಶಾಪದಿಂದ ತಾಮಸ ದೈತ್ಯ ಶರೀರವನ್ನು ಹೊಂದಿ ದರು ಆಗ ಒಬ್ಬನ ಹೆಸರು ಹಿರಣ್ಯಕಶಿಪು, ಮತ್ತೊಬ್ಬನ ಹೆಸರು ಹಿರಣ್ಯಾಕ್ಷ ಎಂದಿತ್ತು. ಸುರಪತಿಗರ್ವನಾಶಕರಾದ ಇವರಿಬ್ಬರೂ ಜಗತ್ಪ್ರಸಿದ್ಧರಾಗಿಯೂ ಸಮರವಿಜಯಿಗಳಾಗಿಯೂ ವಿಖ್ಯಾತವೀರರಾಗಿಯೂ ಇದ್ದರು. (ಭಗವಂತನು) ವರಾಹರೂಪವನ್ನು ಧರಿಸಿ ಒಬ್ಬನನ್ನು (ಹಿರಣ್ಯಾಕ್ಷನನ್ನು) ಸಂಹರಿಸಿದನು. ಮತ್ತೆ ನರಸಿಂಹರೂಪವನ್ನು ಧರಿಸಿ ಮತ್ತೊಬ್ಬನನ್ನು (ಹಿರಣ್ಯಕಶಿಪುವನ್ನು) ಸಂಹ ರಿಸಿ ತನ್ನ ಭಕ್ತನಾದ ಪ್ರಹ್ಲಾದನ ಯಶಸ್ಸನ್ನು ಹೆಚ್ಚಿಸಿದನು.

ದೋ ॥೧೨೨। ಆ ಬಲಿಷ್ಠರೂ ಮಹಾವೀರರೂ ಆದ ದೈತ್ಯರಿಬ್ಬರೂ ಮತ್ತೆ ರಾವಣ ಕುಂಭಕರ್ಣರೆಂಬ ಹೆಸರಿನಿಂದ ಹುಟ್ಟಿ ಯುದ್ಧಪಟುಗಳೂ ಸುರವಿಜಯಿ ಗಳೂ ಆದರೆಂಬುದು ಜಗತ್ತಿಗೆ ತಿಳಿದ ವಿಷಯವು ಭಗವಂತನೇ ಅವರನ್ನು ಸಂಹರಿಸಿದ್ದಾಗ್ಯೂ ಅವರು ಮುಕ್ತಿಯನ್ನು ಪಡೆಯಲಿಲ್ಲ ಏಕೆಂದರೆ ಬ್ರಾಹ್ಮಣ ವಚನಪ್ರಮಾಣವು (ಶಾಪವು) ಮೂರುಜನ್ಮಗಳಿಗೋಸ್ಕರವಾಗಿತ್ತು. ಅವರ ಹಿತಕ್ಕೋಸ್ಕರ ಭಕ್ತವತ್ಸಲನಾದ ಭಗವಂತನು ಮತ್ತೆ ಅವತರಿಸಿದನು. ಆಗ ಮುಂಚೆ ಅವರ ಮಾತಾಪಿತೃಗಳಾಗಿದ್ದ ಅದಿತಿ ಮತ್ತು ಕಶ್ಯಪ–ಇವರೇ ದಶರಥ ಮತ್ತು ಕೌಸಲ್ಯೆ ಎಂಬ ಹೆಸರಿನಿಂದ ಪ್ರಸಿದ್ಧರಾದರು. ಈ ಅವತಾರವಾಗುವು ದಕ್ಕೆ ಒಂದು ಕಲ್ಪವು ಹಿಡಿಯಿತು ಆತನಾ (ಅವತಾರಗಳ) ಚರಿತೆಯಿಂದ ಜಗತ್ತನ್ನು ಪವಿತ್ರೀಕರಿಸಿದನು. ಒಂದು ಕಲ್ಪದಲ್ಲಿ ಜಲಂಧರ (ನೆಂಬ ದೈತ್ಯ) ನಿಂದ ಸೋತು ದುಃಖಿತರಾಗಿದ್ದ ದೇವತೆಗಳನ್ನು ನೋಡಿ, ಶಿವನು ಆ ದೈತ್ಯ ನೊಂದಿಗೆ ಬಹು ಘೋರ ಯುದ್ಧಮಾಡಿದನು. ಆದಾಗ್ಯೂ ಆ ಮಹಾ ಬಲ

ಶಾಲಿಯಾದ ದೈತ್ಯನು ಸಾಯುಲಿಲ್ಲ ಆ ದೈತ್ಯನ ಹೆಂಡತಿಯು ಬಹು ದೊಡ್ಡ ಪತಿವ್ರತೆ * ಯಾಗಿದ್ದಳು. ಅವಳ ಬಲದಿಂದ ಶಿವನು ಆ ದೈತ್ಯನನ್ನು ಜಯಿಸ ಲಾಗಲಿಲ್ಲ.

ದೋ॥ ೧೫೦॥ ಭಗವಂತನು ಕಪಟದಿಂದ † ಆ ದೈತ್ಯಸ್ತ್ರೀಯ ವ್ರತಭಂಗ ಮಾಡಿ ದೇವತೆಗಳ ಕಾರ್ಯವನ್ನು ನೆರವೇರಿಸಿದನು (ಆದರೆ) ಆ ಸ್ತ್ರೀಗೆ ಇದರ (ಕಪಟದ) ಮರ್ಮವು ತಿಳಿದ ಕೂಡಲೆ ಅವಳು ಕ್ರೋಧಭರಿತಳಾಗಿ ಶಾಪವನ್ನು ಕೊಟ್ಟಳು. ಕೌತುಕನಿಧಿಯೂ ಕೃಪಾಳುವೂ ಆದ ಭಗವಂತನು ಅವಳ ಶಾಪ ವನ್ನು ಸ್ವೀಕರಿಸಿದನು. ಆ ಜಲಂಧರನೇ ಮುಂದಿನ ಜನ್ಮದಲ್ಲಿ ರಾವಣನಾಗಿ ಹುಟ್ಟಿದನು. ಶ್ರೀರಾಮನು ಯುದ್ಧದಲ್ಲಿ ಅವನನ್ನು ಸಂಹರಿಸಿ ಅವನಿಗೆ ಪರಮ ಪದವನ್ನು ಕೊಟ್ಟನು. ಶ್ರೀರಾಮಚಂದ್ರನು ಮನುಷ್ಯದೇಹವನ್ನು ಧಾರಣ ಮಾಡುವುದಕ್ಕೆ ಈ ಜನ್ಮವೇ ಒಂದು ಕಾರಣವಾಗಿದ್ದಿತು. ಭಗವಂತನ ಪ್ರತಿ

---

* ಈ ವಿಷಯದಲ್ಲಿ ಹೇಳಿರುವುದೇನೆಂದರೆ—'ಯಸ್ಯ ಪತ್ನೀ ಭವೇತ್ಸಾಧ್ವೀ ಪತಿ ವ್ರತ ಪರಾಯಣಾ। ಸಜಯೀ ಸರ್ವಲೋಕೇಷು ಸ ಸುಖೀ ಸಧನೀ ಪುಮಾನ್ ॥' ಎಂದರೆ ಯಾವನ ಪತ್ನಿಯು ಪತಿವ್ರತೆಯೂ ಪತಿಸೇವಾ ತತ್ಪರಳೂ ಆಗಿರುವಳೋ ಆ ಪುರುಷನಿಗೆ ಸರ್ವಲೋಕಗಳಲ್ಲಿಯೂ ಜಯವಾಗುವುದು ; ಅವನೇ ಸುಖಿಯೂ ಧನವಂತನೂ ಆಗಿರುವನು – ಮತ್ತೆ—"ಕಂಪನ್ತೆ ಸರ್ವತೇಜಾಂಸಿ ದೃಷ್ಟ್ವಾ ಪಾತಿ ವ್ರತಂ ಮಹಃ। ಭರ್ತಾ ಸದಾ ಸುಖಂ ಭುಂಕ್ತೆರಮಮಾಣಃ ಪತಿವ್ರತಾಮ'॥" ಎಂದರೆ ಪತಿವ್ರತೆಯ ತೇಜಸ್ಸಿನೆದುರಿನಲ್ಲಿ ಇತರ ತೇಜಸ್ಸುಗಳು ನಡುಗುವವು, ಮತ್ತೆ ಇಂತಹ ಸ್ತ್ರೀಯನ್ನು ರಮಣಮಾಡುವ ಪುರುಷನು ಸದಾ ಸುಖಿಯಾಗಿರುವನು.

† ವೈಕುಂಠನಾಥನು ಸಾಧುವೇಷವನ್ನು ಧರಿಸಿ ಜಲಂಧರನ ಮನೆಗೆ ಹೋದನು. ಅವನ (ಜಲಂಧರ) ಸತಿಯು ಸನ್ಯಾಸಿಯನ್ನು ಯುದ್ಧದ ವಿಚಾರವಾಗಿ ಪ್ರಶ್ನಿಸು ತ್ತಿರುವಾಗ ಜಲಂಧರನ ಅಂಗಗಳು ಛಿನ್ನಭಿನ್ನವಾಗಿ ಅಲ್ಲಿ ಬಂದುಬಿದ್ದವು. ಅದನ್ನು ನೋಡಿ ಜಲಂಧರನ ಹೆಂಡತಿಯು ಮಹಾ ವಿಲಾಪಮಾಡಲಾರಂಭಿಸಿದಳು. ಆಗ ಸಾಧುರೂಪಿಯಾದ ಭಗವಾನನು ಅವಳನ್ನು ಕುರಿತು "ನೀನು ನಿಜವಾದ ಸತಿಯಾಗಿ ದ್ದರೆ ನಿನ್ನ ಪತಿಯ ಅಂಗಳಗಳನ್ನು ಸರಿಯಾಗಿ ಜೋಡಿಸಿದರೆ ಅವನಿಗೆ ಜೀವ ಬರು ವುದು" ಎಂದು ಹೇಳಲಾಗಿ ಅವಳು ಹಾಗೆ ಮಾಡಿದಳು. ಆಗ ಜಲಂಧರನಿಗೆ ಪ್ರಾಣ ಬಂದಿತು. ಕೂಡಲೆ ಅವನ ಸ್ತ್ರೀಯಿಂದ ವೃಂದೆಯು ಅವನ (ಎಂದರೆ ಕಪಟ ಶರೀರಿ ಯಾದ ಜಲಂಧರನ) ಕಾಲನ್ನೊತ್ತಲಾರಂಭಿಸಿದಳು ಅವಳ ಅಂಗಸ್ಪರ್ಶವಾದ ಕೂಡಲೇ ಅವಳ ಸತೀತ್ವವು ನಷ್ಟವಾಯಿತು. ಆಗ ಅತ್ತ ಯುದ್ಧರಂಗದಲ್ಲಿದ್ದ ಜಲಂ ಧರನನ್ನು ಶಂಕರನು ಸಂಹರಿಸಿದನು ಅವನು ಸತ್ತ ಕೂಡಲೆ ಇತ್ತ ಸಾಧುವೂ ಜಲಂ ಧರನ ಕೃತ್ರಿಮ ಶರೀರವೂ ಮಾಯವಾದವು ಅವನ ಸ್ತ್ರೀಯು ಈ ಕಪಟವನ್ನರಿತು ಭಗವಂತನಿಗೆ "ನೀನು ಸ್ತ್ರೀವಿರಹದಿಂದ ದುಃಖಿಯಾಗುವಿ. ಮತ್ತೆ ಆಗ ನಿನ್ನ ಸ್ತ್ರೀಯನ್ನು ನನ್ನ ಪತಿಯೇ ಹರಣಮಾಡುವನು" ಎಂದು ಶಾಪವನ್ನಿತ್ತಳು

ಯೊಂದು ಅವತಾರದ ಕಥೆಯನ್ನು ಮುನಿಗಳಿಂದ ಕೇಳಿ ಕವಿಗಳು ವಿಸ್ತಾರ ವಾಗಿ ವರ್ಣಿಸಿರುವರು. ಒಂದು ಬಾರಿ ನಾರದ ಮುನಿಯು ಶಾಪಕೊಟ್ಟಿದ್ದ ರಿಂದ ಒಂದು ಕಲ್ಪದಲ್ಲಿ ಅದಕ್ಕೋಸ್ಕರವಾಗಿಯೇ ಭಗವಂತನು ಅವತರಿಸಬೇಕಾ ಯಿತು."—ಎಂಬೀ ಮಾತುಗಳನ್ನು ಕೇಳಿ ಗಿರಿಜೆಯು ಆಶ್ಚರ್ಯಚಕಿತಳಾಗಿ ನುಡಿದಳೇನೆಂದರೆ—"ನಾರದನು ಬಹು ಶ್ರೇಷ್ಠಜ್ಞಾನಿ ಮತ್ತು ವಿಷ್ಣು ಭಕ್ತನು. ಆತನು ಭಗವಂತನಿಗೆ ಯಾವ ಕಾರಣದಿಂದ ಶಾಪವನ್ನಿತ್ತನು ? ಆತನ ಬಳಿ ಭಗವಂತನು ಆವ ಅಪರಾಧವನ್ನು ಮಾಡಿದನು ? ಹೇ ತ್ರಿಪುರಾರಿ, ನಾರದ ಮುನಿಯು ಮೋಹವಶನಾದನೆಂಬದು ಬಹು ಆಶ್ಚರ್ಯಕರವಾದ ವಿಷಯವು. ಈ ಕಥೆಯನ್ನು ನನಗೆ ತಿಳಿಸಬೇಕು."

ದೋ ॥೧೩೧॥ (ಪಾರ್ವತಿಯು ಈ ಮಾತುಗಳನ್ನು ಕೇಳಿ) ಶಿವನು ನಕ್ಕು "ಜ್ಞಾನಿಯಾವನು ? ಮೂರ್ಖನಾವನು ? ಭಗವಾನ್ ! ರಾಮಚಂದ್ರನ ಇಚ್ಛೆ ಯಂತೆಯೇ ಪ್ರತಿಯೊಬ್ಬನೂ ವರ್ತಿಸಬೇಕು" ಎಂದನು॥ ಸೋ ೧೩೨॥ ಹೇ ಭರ ದ್ವಾಜ, ನಾನು ಹೇಳುವ ರಾಮಚಂದ್ರನ ಗುಣಕಥೆಯನ್ನು ನೀನು ಆದರದಿಂದ ಕೇಳು. ಮಾನ ಮತ್ತು ಅಹಂಕಾರವನ್ನು ಬಿಟ್ಟು, ಸಂಸಾರ ಸಾಗರದಿಂದ ಪಾರುಮಾಡಿಸುವ ರಘುನಾಥನನ್ನು ಭಜಿಸಿರೆಂದು ತುಳಸೀದಾಸರು ಹೇಳು ತ್ತಾರೆ.—(ಕೇಳಿರಿ !)

(ನಾರದನು ಮೋಹವಶನಾಗುವುದು)

ಹಿಮಾಚಲದ ಮೇಲೆ ಒಂದು ಅತಿಪವಿತ್ರವಾದ ಗುಹೆಯಿದ್ದಿತು ಅದರ ಪಕ್ಕದಲ್ಲಿಯೇ ಸುಂದರವಾದ ಗಂಗಾನದಿಯು ಹರಿಯುತ್ತಿತ್ತು. ಆ ಪರಮ ಪವಿತ್ರವೂ ಮನೋಹರವೂ ಆದ ಆಶ್ರಮವನ್ನು ನೋಡಿ ನಾರದಮುನಿಯ ಮನಸ್ಸು ಉಲ್ಲಾಸಗೊಂಡಿತು ಪರ್ವತ, ನದಿ, ಮತ್ತೆ ವಿವಿಧ ವನಗಳನ್ನು ನೋಡಿ ನಾರದನ ಪ್ರೇಮವು ಭಗವಂತನ ಚರಣಗಳಲ್ಲಿ ಲೀನವಾಯಿತು. ಭಗ ವಂತನ ಸ್ಮರಣೆ ಮಾತ್ರದಿಂದ ನಾರದ ಮುನಿಗೆ (ದಕ್ಷಬ್ರಹ್ಮನು ಕೊಟ್ಟಿದ್ದ) ಶಾಪದ * ಗತಿಯು ನಷ್ಟವಾಗಿ, ಅವನಾ ನಿರ್ಮಲವಾದ ಮನಸ್ಸು ಸ್ವಾಭಾವಿಕವಾಗಿ ಸಮಾಧಿಯಲ್ಲಿ ಮಗ್ನವಾಯಿತು. ನಾರದಮುನಿಯು (ಸಮಾಧಿ) ಗತಿಯನು

---

* ಪುಟ ... ...ನ್ನು ನೋಡಿರಿ ದಕ್ಷನು ಹೇಳಿದ್ದೇನಂದರೆ—"ತಸ್ಮಾತ್ಕೃಂತನ ಯನ್ನ ಸ್ತ್ವಮಭದ್ರಮಚರಃ ಪುನಃ | ತಸ್ಮಾಲ್ಲೋಕೇಷುತೇ ಮೂಢ ನಭವೇತ್ ಭ್ರಮತಃ ಪದವ್॥" ಎಂದರೆ ಹೇ ಪುತ್ರನಾಶಕ ! ನೀನು ಬಹು ಅಮಂಗಳಾಚರಣೆಯನ್ನು ಮಾಡಿರುವಿ, ಅದಕ್ಕೋ ಸುಗ, ಹೇ ಮೂಢ ! ನೀನು ಲೋಕಸಂಚಾರಿಯಾಗಿರು, ನೀನು ಒಂದೆಡೆಯಲ್ಲಿಯೂ ನಿಲ್ಲ ದಂತಾಗು.—ಈ ಕಥೆಯು ಶ್ರೀಮದ್ಭಾಗವತದ ಆರನೆಯ ಅಧ್ಯಾಯದಲ್ಲಿ ಚೆನ್ನಾಗಿ ವರ್ಣಿತ ವಾಗಿದೆ.

ನೋಡಿ ದೇವೇಂದ್ರನು ಭಯಪಟ್ಟು ಕಾಮದೇವನನ್ನು ಕರೆದು, ಆದರಿಸಿ, ಅವನನ್ನುಕುರಿತು, "ನೀನು ನನ್ನ ಹಿತಕ್ಕೋಸ್ಕರ ನಿನ್ನ ಜೊತೆಗಾರರೊಂದಿಗೆ (ನಾರದ ಮುನಿಯ ಸಮಾಧಿಭಂಗ ಮಾಡುವುದಕ್ಕೆ) ಹೊರಡು" ಎಂದನು. (ಇಂದ್ರನ ಆಜ್ಞೆಯಾದ ಕೂಡಲೆ) ಕಾಮದೇವನು ಹರ್ಷಿತನಾಗಿ ಹೊರಟನು. ದೇವರ್ಷಿಯಾದ ನಾರದನು ನನ್ನ ಲೋಕದ (ಸ್ವರ್ಗದ) ರಾಜ್ಯವನ್ನಪೇಕ್ಷಿಸುತ್ತಿರುವನೆಂದು ಇಂದ್ರನು ಆಲೋಚಿಸಿದ್ದನು. ಯಾರು ಸಂಸಾರದಲ್ಲಿ ಕಾಮಿಗಳಾಗಿಯೂ ಲೋಭಿಗಳಾಗಿಯೂ ಇರುವರೋ ಅವರು ಕುಟಿಲಕಾಕಗಳಂತೆ ಎಲ್ಲರಿಗೂ ಹೆದರುವರು.

ದೋ ॥೧೫೩॥ ಒಣಗಿದ ಎಲುಬನ್ನು ಕಚ್ಚಿಕೊಂಡು, ಸಿಂಹವು ಅದನ್ನು ತನ್ನಿಂದ ಕಿತ್ತುಕೊಳ್ಳಲಾರದೆಂಬ ಭಾವನೆಯಿಂದ ಸಿಂಹವನ್ನು ನೋಡಿ ನಾಯಿಯು ಓಡಿ ಹೋಗುವುದು, ಅದರಂತೆಯೇ (ನಾರದನು ನನ್ನ ಇಂದ್ರಲೋಕವನ್ನು ಕಿತ್ತುಕೊಳ್ಳುವನೆಂದು ಆಲೋಚಿಸಲು) ಇಂದ್ರನಿಗೆ ಲಜ್ಜೆಯುಂಟಾಗಲಿಲ್ಲ. ಕಾಮದೇವನು ಆ (ನಾರದನ) ಆಶ್ರಮಕ್ಕೆ ಹೋಗಿ ಅಲ್ಲಿ ತನ್ನ ಮಾಯೆಯಿಂದ ವಸಂತ ಋತುವನ್ನು ಸೃಷ್ಟಿಸಿದನು (ಆಗ ಅಲ್ಲಿ) ವಿವಿಧ ವೃಕ್ಷಗಳಲ್ಲಿ ಬೇರೆ ಬೇರೆ ಬಣ್ಣಗಳ ಹೂಗಳರಳಿದವು, ಭೃಂಗಗಳು ಝೇಂಕಾರ ಮಾಡಲಾರಂಭಿಸಿದವು, ಕೋಗಿಲೆಗಳು "ಕುಹೂ–ಕುಹೂ" ಎಂದು ಕೂಗಲಾರಂಭಿಸಿದವು. ಕಾಮಾಗ್ನಿಯನ್ನು ಹೆಚ್ಚಿಸುವ ತ್ರಿವಿಧ ಎಂದರೆ ಶೀತಲವೂ ಮಂದವೂ ಸೌಗಂಧಿಕವೂ ಆದ ವಾಯುವು ಸಂಚರಿಸಲಾರಂಭಿಸಿತು. ಕಾಮದೇವನ ವಿಷಮಬಾಣ ಕಲೆಯಲ್ಲಿ ಚತುರೆಯರಾದ ರಂಭಾದಿ ಯುವತಿಯರಾದ ದೇವತಾಸ್ತ್ರೀಯರು ವಿವಿಧ ತಾಳ ರಾಗಗಳಲ್ಲಿ ಗಾನಮಾಡುತ್ತ, ಗುಲಾಬಿ ವರ್ಣದ ತಮ್ಮ ಕೈಗಳಿಂದ ವಿವಿಧ ಕ್ರೀಡೆಗಳನ್ನಾಡಲಾರಂಭಿಸಿದರು ಈ ವಿಧವಾದ ಸಹಾಯವನ್ನು ಪಡೆದು ಕಾಮದೇವನು ಪ್ರಸನ್ನನಾಗಿ ಮತ್ತೆ ಬೇರೆ ಕೃತ್ರಿಮಸೃಷ್ಟಿಯನ್ನು ಮಾಡಿದನು. (ಆದರೆ) ಕಾಮದೇವನ ಮಾಯೆಯ ಪ್ರಭಾವವು ಮುನಿಯ ಮೇಲೆ ಬೀಳಲೇ ಇಲ್ಲ. ಆಗ ಪಾಪಿಯಾದಾ ಕಾಮದೇವನು, "ರಮಾಪತಿಯನ್ನೇ ರಕ್ಷಕನಾಗುಳ್ಳವನ ಮಾನಭಂಗ ಮಾಡುವುದಸಾಧ್ಯ" ವೆಂದರಿತು ಹೆದರಿದನು.

ದೋ ॥೧೫೪॥ ಕೊನೆಗೆ ಕಾಮದೇವನು ಭಯದಿಂದ ತನ್ನ ಪರಿವಾರ ಸಮೇತನಾಗಿ ಸೋತುಹೋಗಿ ನಾರದಮುನಿಯ ಪಾದಗಳನ್ನು ಹಿಡಿದುಕೊಂಡು, ನಮ್ರಭಾವದಿಂದ ಆರ್ತವಚನವನ್ನಾಡಲಾರಂಭಿಸಿದನು. ಆಗ ನಾರದ ಮುನಿಯು ಕೋಪಗೊಳ್ಳದೆ, ಪ್ರೇಮವಚನಗಳಿಂದ ಕಾಮದೇವನನ್ನು ಸಮಾಧಾನ ಪಡಿಸಿದನು. ಅನಂತರ ಕಾಮದೇವನು ಮುನಿಯ ಚರಣಗಳಿಗೆರಗಿ, ಆತನ ಅಪ್ಪಣೆಯನ್ನು ಪಡೆದು ಪರಿವಾರ ಸಮೇತನಾಗಿ ಅಲ್ಲಿಂದ ಇಂದ್ರಸಭೆಗೆ ತೆರಳಿದನು. ಅಲ್ಲಿ ಅವನು ತನ್ನ ಕಾರ್ಯಕಲಾಪವನ್ನೂ, ಮುನಿಯ ಸುಶೀಲ ಸ್ವಭಾವ

ಗಳನ್ನೂ ವರ್ಣಿಸಿದನು. ಅದನ್ನು ಕೇಳಿದವರೆಲ್ಲ ಆಶ್ಚರ್ಯಾನ್ವಿತರಾಗಿ, ನಾರದನನ್ನು ಪ್ರಶಂಸಿಸುತ್ತ ಭಗವಂತನಿಗೆ ಮನಸ್ಸಿನಲ್ಲಿಯೇ ಪ್ರಣಾಮಮಾಡಿದರು. ಇತ್ತ "ನಾನು ಕಾಮನನ್ನು ಸೋಲಿಸಿದೆನು" ಎಂಬ ಅಹಂಕಾರ ಭಾವದಿಂದ ನಾರದನು ಶಿವನ ಬಳಿಗೆ ಹೋಗಿ ಕಾಮದೇವನ ಲೀಲೆಯನ್ನೆಲ್ಲಾ ವರ್ಣಿಸಿದನು. ಮುನಿಯು ತನ್ನ ಪ್ರೇಮಪಾತ್ರನಾದವನೆಂದು ತಿಳಿದು ಶಿವನು ಆತನಿಗೆ ಉಪದೇಶಿಸಿದುದೇನಂದರೆ,-"ಹೇ ಮುನಿಯೇ! ನೀನು ನನ್ನೆದುರಿಗೆ ನಿನ್ನ ಕಥೆಯನ್ನು ಹೇಳಿಕೊಂಡಂತೆ ವಿಷ್ಣುವಿನ ಎದುರಿಗೆ ಎಂದಿಗೂ ಹೇಳಕೂಡದೆಂದು ಬಾರಿಬಾರಿಗೂ ವಿನಂತಿ ಮಾಡಿಕೊಳ್ಳುವೆನು, ಒಂದು ವೇಳೆ ಪ್ರಸಂಗವಾದಾಗ್ಯೂ ಈ ಮಾತನ್ನು ಮುಚ್ಚಿಡಬೇಕು"

ದೋ ॥೧೨೭॥ ಶಿವನು (ನಾರದನ) ಹಿತಕ್ಕೋಸುಗ ಈ ಉಪದೇಶವನ್ನು ಕೊಟ್ಟುದು ನಾರದ ಮುನಿಗೆ ಸರಿದೋರಲಿಲ್ಲ. (ಯಾಜ್ಞವಲ್ಕ್ಯಮುನಿಯು ಹೇಳುತ್ತಾನೆ)—ಹೇ ಭರದ್ವಾಜ! ಈ ಕೌತುಕವನ್ನು ಕೇಳು, ಹರಿಯ ಇಚ್ಛೆಯು ಬಹು ಪ್ರಬಲವಾದುದು, ಶ್ರೀರಾಮನು ಏನು ಮಾಡಬೇಕೆಂದಪೇಕ್ಷಿಸುವನೋ ಅದು ಆಗಿಯೇ ತೀರಬೇಕು. ಆತನ ಇಚ್ಛೆಯನ್ನು ಯಾರೂ ಬದಲಾಯಿಸಲಾರರು. ಶಿವನ ವಾಕ್ಯಗಳು ನಾರದನಿಗೆ ರುಚಿಸಲಿಲ್ಲ ಆತನು ಅಲ್ಲಿಂದ ಬ್ರಹ್ಮಲೋಕಕ್ಕೆ ತೆರಳಿದನು (ಮುಂದೆ) ಒಂದು ಸಮಯದಲ್ಲಿ ಕೈಯಲ್ಲಿ ಸುಂದರವಾದ ವೀಣೆಯನ್ನು ಹಿಡಿದುಕೊಂಡು ಗಾನ ವಿದ್ಯಾಚತುರನಾದ ನಾರದನು ಹರಿಗುಣವನ್ನು ಗಾನಮಾಡುತ್ತ, ವೇದಗಳ ಸ್ವಾಮಿಯಾದ ಭಗವಾನ್ ಶ್ರೀನಿವಾಸನು ಇರುವಂತಹ ಕ್ಷೀರಸಾಗರಕ್ಕೆ ಹೋದನು (ಅಲ್ಲಿ) ದಯಾನಿಧಿಯಾದ ಭಗವಂತನು ಆನಂದದಿಂದೆದ್ದು ಮುನಿಯನ್ನು ಆದರಿಸಿ ಜವನೊಟ್ಟಿಗೆ ಆಸನದ ಮೇಲೆ ಕುಳಿತನು ಅನಂತರ ಚರಾಚರ ಜಗತ್ತಿನೊಡೆಯನಾದ ಸ್ವಾಮಿಯು ನಕ್ಕು, "ಹೇ ಮುನಿಯೆ! (ಇದೇನು ?) ಬಹು ದಿನಗಳ ನಂತರ (ಇತ್ತ) ದಯಮಾಡಿಸಿದೆ ? ಎಂದನು ಶಿವನು ಮೊದಲೇ ಉಪದೇಶಿಸಿ ನಿಷೇಧಿಸಿದ್ದರೂ, ನಾರದನು ಕಾಮದೇವನ ಲೀಲೆಯನ್ನು ಮತ್ತೆ ವಿವರಿಸಿ ಹೇಳಿದನು. ರಘುನಾಥನ ಮಾಯೆಯು ಅತಿ ಪ್ರಚಂಡವಾದುದು ಆ ಮಾಯೆಯಿಂದ ಮೋಹಿತರಾಗದವರು ಈ ಜಗತ್ತಿನಲ್ಲಿ ಯಾರಿರುವರು ?

ದೋ ॥೧೨೮॥ ಭಗವಂತನು ರುಕ್ಷ(?) ವದನನಾಗಿ, ಮೃದುವಚನದಿಂದ, "ಹೇ ಮುನಿರಾಜ! ನಿನ್ನ ಸ್ಮರಣೆಮಾತ್ರದಿಂದಲೇ ಮೋಹವೂ, ಕಾಮದೇವನ ಮದವೂ, ಅಹಂಕಾರವೂ ದೂರವಾಗುವವು ಹೀಗಿರುವಾಗ ನಿನ್ನ ಮೇಲೆ ಅವುಗಳ ಪ್ರಭಾವವು ಹೇಗೆ ಬೀಳಬೇಕು ? ಹೇ ಮುನಿಯೇ ಕೇಳು, ಯಾರ ಹೃದಯದಲ್ಲಿ ಜ್ಞಾನವೂ ವೈರಾಗ್ಯವೂ ಹುಟ್ಟುವುದಿಲ್ಲವೋ ಅಂತಹವರ ಮನಸ್ಸಿನಲ್ಲಿ ಮೋಹವು ಹುಟ್ಟುವುದು. ನೀನಾದರೂ ಧೀರಮತಿಯೂ, ಬ್ರಹ್ಮಚರ್ಯವ್ರತ

ನಿರತನೂ ಆಗಿರುವಿ. ಕಾಮದೇವನು ನಿನಗೇನು ಮಾಡಬಲ್ಲನು ?" ಎಂದನು. (ಭಗವಂತನ ಈ ಮಾತುಗಳನ್ನು ಕೇಳಿ) ನಾರದನು ಅಭಿಮಾನ ಪೂರ್ಣನಾಗಿ, "ಹೇ ಭಗವಂತನೆ! ಇದೆಲ್ಲ ನಿನ್ನ ಕೃಪೆಯು" ಎಂದನು. ಕರುಣಾನಿಧಿಯಾದ ಭಗವಾನನು, "ಈಗ ಇವನ ಮನಸ್ಸಿನಲ್ಲಿ ಅಭಿಮಾನರೂಪವಾದ ದೊಡ್ಡ ಮರವು ಅಂಕುರಿಸಿದೆ. ಇದನ್ನು ನಾನು ಶೀಘ್ರವಾಗಿ ಕತ್ತರಿಸಿ ಹಾಕಬೇಕು. ಏಕೆಂದರೆ ಭಕ್ತರಿಗೆ ಹಿತವನ್ನುಂಟುಮಾಡಬೇಕೆಂಬುದೇ ನನ್ನ ಪ್ರತಿಜ್ಞೆಯಾಗಿದೆ. ಇದರಿಂದ ಮುನಿಯ ಹಿತವೂ, ನನ್ನ ಕೌತುಕವೂ ನೆರವೇರುವುದು. ಅವಶ್ಯವಾಗಿ ನಾನು ಈ ಉಪಾಯವನ್ನೇ ಮಾಡುವೆನು" ಎಂದುಕೊಂಡನು. ಅನಂತರ ನಾರದಮುನಿಯು ಹರಿಚರಣಗಳಿಗೆ ನತಶಿರನಾಗಿ ನಮಿಸಿ, ಅಭಿಮಾನ ಪೂರ್ಣನಾಗಿ ಅಲ್ಲಿಂದ ತೆರಳಿದನು. ಮತ್ತೆ ಭಗವಾನನು ತನ್ನ ಮಾಯೆಯನ್ನು ಪ್ರೇರಿಸಿ ಮಾಡಿದ ಕಠಿಣ ಕಾರ್ಯವಿಚಾರವನ್ನು ಕೇಳು.—

(ನಾರದನು ಶೀಲನಿಧಿರಾಜನ ಮಗಳಲ್ಲಿ ಆಸಕ್ತನಾಗಿ ಮಂಗನರೂಪವನ್ನು ಪಡೆಯುವುದು)

ದೋ ॥೧೨೭॥ ಆತನು ನಾರದನು ಹೋಗುತ್ತಿದ್ದ ಮಾರ್ಗದಲ್ಲಿ ನೂರು ಯೋಜನ ವಿಸ್ತೀರ್ಣವುಳ್ಳ ಒಂದು ಅತಿಸುಂದರವಾದ ನಗರವನ್ನು ನಿರ್ಮಿಸಿದನು. ಆ ಪಟ್ಟಣದ ವಿವಿಧ ರಚನೆಗಳು ಲಕ್ಷ್ಮೀ–ನಿವಾಸವೆನಿಸಿದ ಭಗವಂತನ ವೈಕುಂಠಕ್ಕಿಂತಲೂ ಅಧಿಕಸುಂದರವಾಗಿದ್ದಿತು. ಆ ನಗರದ ನರನಾರಿಯರೆಲ್ಲರೂ ಅನೇಕಾನೇಕ ಕಾಮದೇವ–ರತಿಗಳಂತೆ ತೋರುತ್ತಿದ್ದರು. ಆ ನಗರದಲ್ಲಿ ಶೀಲನಿಧಿಯೆಂಬ ರಾಜನು ವಾಸಿಸುತ್ತಿದ್ದನು. ಅವನ ಬಳಿಯಲ್ಲಿ ಅಸಂಖ್ಯಾತವಾದ ಅಶ್ವ, ಗಜಗಳುಳ್ಳ ಚತುರಂಗ ಬಲವಿದ್ದಿತು. ಆತನ ವೈಭವವಾದರೋ ನೂರು ಇಂದ್ರರ ವೈಭವಕ್ಕೆ ಸಮಾನವಾದುದು ಆರೂಪ, ತೇಜಸ್ಸು, ಬಲ, ನೀತಿ ಇವುಗಳು ಆತನಲ್ಲಿ ಮೂರ್ತಿಮಂತವಾಗಿದ್ದವು. ಆ ರಾಜನಿಗೆ ವಿಶ್ವಮೋಹಿನಿಯೆಂಬ ಮಗಳಿದ್ದಳು ಆಕೆಯ ರೂಪವನ್ನು ನೋಡಿ ಲಕ್ಷ್ಮಿಯೂ ಮೋಹಿತಳಾಗುವಂತಿದ್ದಳು.—ಇವೆಲ್ಲವೂ ಆ ಗುಣಗಣಿಯಾದ ಭಗವಂತನ ಮಾಯೆಯಿಂದ ರಚಿತವಾಗಿತ್ತು. ಅದರ ಶೋಭೆಯನ್ನು ವರ್ಣಿಸಲಾಗುವುದೆ ?–ಆ ಕನ್ಯೆಯ ಸ್ವಯಂವರೋತ್ಸವವು ನಡೆಯುತ್ತಿದೆ. ಅದಕ್ಕೆ ಅನೇಕ ರಾಜರು ಅಲ್ಲಿಗೆ ಬಂದಿದ್ದಾರೆ! ನಾರದನೂ ಕುತೂಹಲದಿಂದ ಆ ನಗರದಲ್ಲಿ ಪ್ರವೇಶಿಸಿ, ಅಲ್ಲಿನ ಸಮಾಚಾರವನ್ನೆಲ್ಲಾ ತಿಳಿದುಕೊಂಡನು. ಅನಂತರ ರಾಜಮಂದಿರದ ಕಡೆಗೆ ತೆರಳಿದನು. ಅಲ್ಲಿ ರಾಜನು ಅವನನ್ನು ಪೂಜಿಸಿ ಆಸನದ ಮೇಲೆ ಕುಳ್ಳಿರಿಸಿದನು.

ದೋ ॥೧೨೮॥ ರಾಜನು ತನ್ನ ಪುತ್ರಿಯನ್ನು ಕರೆತಂದು ನಾರದಮುನಿಗೆ ತೋರಿಸಿ, "ಹೇ ನಾಥ! ಇವಳ ಗುಣದೋಷಗಳನ್ನು ಕುರಿತು ಮನಸ್ಸಿನಲ್ಲಿ ವಿಚಾರಮಾಡಿ ತಾವು ನನಗೆ ತಿಳಿಯಿಸಬೇಕು" ಎಂದು ನಾರದನನ್ನು ಪ್ರಾರ್ಥಿ

ಸಿದನು. ಅವಳಾ ರೂಪವನ್ನು ನೋಡಿದ ಕೂಡಲೇ ಮುನಿಯ ವೈರಾಗ್ಯವು ಓಡಿಹೋಯಿತು ಆಗ ಮುನಿಯು ಬಹು ಸಮಯದವರೆಗೆ ಅವಳ ರೂಪವನ್ನೂ, ಲಕ್ಷಣಗಳನ್ನೂ ನೋಡುತ್ತ ನೋಡುತ್ತ ತನ್ನ ಕರ್ತವ್ಯವನ್ನು ಮರೆತು, ಆನಂದ ಮಗ್ನನಾದನು. ಆಗ ಆತನು ತನ್ನ ಮನಸ್ಸಿನಲ್ಲಿಯೇ ಹೇಳಿಕೊಳ್ಳುತ್ತಿದ್ದುದೇ ನಂದರೆ—"ಇವಳನ್ನು ವರಿಸುವವನು ಅಮರನಾಗುವನು, ಅವನನ್ನು ಯುದ್ಧ ದಲ್ಲಿ ಯಾರೂ ಜಯಿಸಲಾರರು ಇಡೀ ಜಗತ್ತೇ ಈ ಶೀಲನಿಧಿಯ ಕುವರಿ ಯನ್ನು ವರಿಸುವವನ ಸೇವೆಯನ್ನು ಮಾಡುವುದು"—ಈ ರೀತಿಯಾದ ಲಕ್ಷಣ ವಿಚಾರಗಳನ್ನು ಮುನಿಯು ತನ್ನ ಮನಸ್ಸಿನಲ್ಲಿಯೇ ಇಟ್ಟುಕೊಂಡು ರಾಜ ನೆದುರಿಗೆ "ನಿನ್ನ ಪುತ್ರಿಯು ಸುಲಕ್ಷಣಗಳುಳ್ಳವಳು" ಎಂದು ಹೇಳಿದನು ಆದರೆ ನಾರದನ ಮನಸ್ಸು ವಿಚಾರಮಗ್ನವಾಗಿತ್ತು; "ನಾನು ಆವುದಾದರೊಂದು ಉಪಾಯ ದಿಂದ ಇವಳನ್ನು ವರಿಸಬೇಕು" ಎಂದು ಆಲೋಚಿಸುತ್ತ, ತನ್ನ ಜಪತಪ ಗಳನ್ನೆಲ್ಲ, ಮರೆತನು. (ಮತ್ತೆ) "ಹೇ ಬ್ರಹ್ಮನ್! ನನಗೆ ಈ ಕನ್ಯೆಯು ಹೇಗೆ ಲಭಿಸುವಳು?

ದೋ॥ ೧೫೯॥ "ಈ ಸಮಯದಲ್ಲಿ ನನ್ನನ್ನು ನೋಡಿದ ಕೂಡಲೇ ರಾಜ ಕುವರಿಯು ಜಯಮಾಲೆಯನ್ನು ನನ್ನ ಕೊರಳಿನಲ್ಲಿ ಹಾಕುವಂತೆ ನಾನು ವಿಶೇಷ ಶೋಭಾ–ರೂಪ ಪೂರ್ಣನಾಗಬೇಕು ಈ ಸಮಯದಲ್ಲಿ ನಾನು ರೂಪ ವನ್ನು ಬೇಡಿಕೊಳ್ಳಲು ಭಗವಂತನ ಬಳಿಗೆ ಹೋದರೆ ಹೊತ್ತಾಗುವುದು ನನಗೆ ಹರಿಯಂತಹ ಆಪ್ತಮಿತ್ರನು ಮತ್ತೊಬ್ಬನಿಲ್ಲ ಈಗ ಆತನೇ ನನಗೆ ಸಹಾಯ ಮಾಡಬೇಕು," ಹೀಗೆಂದಾಲೋಚಿಸುತ್ತ, ಮುನಿಯು ಭಗವಂತನನ್ನು ಪ್ರಾರ್ಥಿ ಸಿದನು. ಕೌತುಕಿಯೂ ಕೃಪಾಳುವೂ ಆದ ಭಗವಂತನು ಅಲ್ಲಿಯೇ ಪ್ರಕಟ ನಾದನು. ಸ್ವಾಮಿಯನ್ನು ನೋಡಿ, ನಾರದನ ನೇತ್ರಗಳು, ಶೀತಲಗೊಂಡವು. ಇನ್ನು ತನ್ನ ಕೆಲಸವು ನೆರವೇರುವುದೆಂದು ನಾರದನು ವಿಶೇಷ ಪ್ರಸನ್ನನಾಗಿ, ಬಹು ನಮ್ರತೆಯಿಂದ ಎಲ್ಲ ಸಮಾಚಾರಗಳನ್ನೂ ಭಗವಂತನಿಗೆ ತಿಳುಹಿಸಿ, "ಹೇ ನಾಥ! ಈಗ ದಯೆಯಿಟ್ಟು ನನಗೆ ಸಹಾಯಮಾಡಬೇಕು ಹೇ ಸ್ವಾಮಿನ್! ತಾವು ತಮ್ಮ ರೂಪವನ್ನು ನನಗೆ ಕೊಡಬೇಕು. ಆ ಮೇಲೆ ಅವಳು ನನ್ನನ್ನು ಹೇಗೆ ವರಿಸುವುದಿಲ್ಲವೋ ನೋಡುವೆನು ಹೇ ನಾಥ! ನನಗೆ ಕಲ್ಯಾಣಪ್ರದ ವಾದಂತಹ ಕಾರ್ಯವನ್ನು ತಾವು ಶೀಘ್ರವಾಗಿ ಮಾಡಬೇಕು. ನಾನು ತಮ್ಮ ದಾಸನು." ಎಂದು ಪ್ರಾರ್ಥಿಸಿದನು. ತನ್ನ ಮಾಯೆಯ ವಿಶಾಲವಾದ ಬಲ ವನ್ನು ನೋಡಿ ದೀನದಯಾಳುವಾದ ಭಗವಂತನು ಮನಸ್ಸಿನಲ್ಲಿಯೇ ನಗುತ್ತ, ಹೇಳಿದುದೇನಂದರೆ,—

ದೋ॥ ೧೬೦॥ ಹೇ ನಾರದನೆ! ಕೇಳು, ನಿನಗೆ ಪರಮಹಿತವಾದ ಕಾರ್ಯ ವನ್ನೇ ನಾನು ಮಾಡುವೆನು ಅನ್ಯಥಾ ಮಾಡಲಾರೆನು. ಈ ನನ್ನ ವಚ

ನವು ಸತ್ಯವಾದುದು. ಹೇ ಮುನಿ! ಹೇ ಯೋಗೀ! ರೋಗಿಯು ರೋಗದಿಂದ ವ್ಯಾಕುಲನಾಗಿ ಅಪಥ್ಯವನ್ನು ಮಾಡುತ್ತಿರುವಾಗ ವೈದ್ಯನು ಆ ಅಪಥ್ಯಕ್ಕೆ ಅವಕಾಶ ಕೊಡದಿರುವಂತೆ, ನಾನು ನಿನ್ನ ಹಿತವನ್ನೇ ಕುರಿತು ಆಲೋಚಿಸುತ್ತಿರುವೆನು. ಯೋಚಿಸಬೇಡ."—ಇಷ್ಟು ಮಾತುಗಳನ್ನು ಹೇಳಿ ಭಗವಂತನು ಅಂತರ್ಧಾನನಾದನು. ಈಶ್ವರನ ಮಾಯೆಗೆ ವಶನಾಗಿ ಮುನಿಯು ಮೋಹಿತನಾಗಿದ್ದುದರಿಂದ ಭಗವಂತನ ಗೂಢವಾದ ಮಾತುಗಳ ರಹಸ್ಯವನ್ನು ತಿಳಿದುಕೊಳ್ಳಲಾರದೇ ಹೋದನು. ನಾರದನು ಪುನಃ ಸ್ವಯಂವರ ಮಂಟಪಕ್ಕೆ ತೆರಳಿದನು ಅಲ್ಲಿ ರಾಜನು ವಿಶೇಷ ಅಲಂಕಾರಗಳನ್ನು ಮಾಡಿಸಿ, ರಾಜರೆಲ್ಲರನ್ನೂ ತನ್ನ ಮಿತ್ರಮಂಡಲಿಯೊಂದಿಗೆ (ಉಚಿತಾಸನಗಳ ಮೇಲೆ) ಕುಳ್ಳಿರಿಸಿದ್ದನು, ಆಗ ನಾರದ ಮುನಿಯು "ನನ್ನ ರೂಪವು ಬಹು ಸುಂದರವಾಗಿದೆ. ಇನ್ನು ಕನ್ಯೆಯು ನನ್ನನ್ನು ನೋಡಿದ ಮೇಲೆ ಮತ್ತಾರಿಗೂ ಮಾಲೆಯನ್ನು ಹಾಕಲಾರಳು." ಅವಳು ನನ್ನನ್ನೇ ವರಿಸುವಳು" ಎಂದು ತಿಳಿದು ವಿಶೇಷ ಹರ್ಷಿತನಾಗಿದ್ದನು. ಕೃಪಾನಿಧಿಯಾದ ಭಗವಂತನು ಮುನಿಯ ಹಿತಕ್ಕೋಸುಗ, ವರ್ಣಿಸಲಸಾಧ್ಯವಾದಂತಹ ಕುರೂಪವನ್ನು * ಅವನಿಗೆ ಕೊಟ್ಟಿದ್ದನು. ಆದರೆ ಆ ಚರಿತ್ರೆಯು (ನಾರದನ ಕುರೂಪವು) ಯಾರಿಗೂ ತಿಳಿಯದೇ ಎಲ್ಲರೂ ಅವನನ್ನು ಮುಂಚಿನಂತೆಯೇ ನಾರದನೆಂದು ತಿಳಿದು ಪ್ರಣಾಮಮಾಡಿದರು.

ದೋ॥ ೧೬೮ ॥ ಅಲ್ಲಿ ಎರಡು ರುದ್ರಗಣಗಳೂ ಇದ್ದವು. ಅವುಗಳಿಗೆ ಮಾತ್ರ ಎಲ್ಲ ಭೇದವೂ ತಿಳಿಯುತ್ತಿತ್ತು ತಿಳಗೇಡಿಗಳಾದ ಅವುಗಳೆರಡೂ ಬ್ರಾಹ್ಮಣ ರೂಪವನ್ನು ಧರಿಸಿ, ಅಲ್ಲಿ ನಡೆಯುತ್ತಿದ್ದ ಎಲ್ಲ ಕೌತುಕಗಳನ್ನೂ ನೋಡುತ್ತ ತಿರುಗುತ್ತಿದ್ದವು ಮತ್ತೆ (ಆ ರುದ್ರಗಣಕ್ಕೆ ಸೇರಿದ ಕೆಲವು) ತಮ್ಮ ರೂಪದ ಅಹಂಕಾರದಿಂದ ನಾರದನು ಹೋಗಿ ಕುಳಿತಿದ್ದ ಸಮಾಜದಲ್ಲಿ ಬ್ರಾಹ್ಮಣರೂಪವನ್ನು ಧರಿಸಿ ಕುಳಿತಿದ್ದುದರಿಂದ ಅಲ್ಲಿ ಯಾರೂ ಅವುಗಳನ್ನು ಗುರುತಿಸಲಿಲ್ಲ. ನಾರದನ ಮಾತುಗಳನ್ನು ಕೇಳಿ ಅವುಗಳು ನಾರದನನ್ನು ಕುರಿತು ಹಾಸ್ಯಮಾಡುತ್ತ "ಭಗವಂತನು ಇವನಿಗೆ ಒಳ್ಳೆಯ ಸೌಂದರ್ಯವನ್ನು ಕೊಟ್ಟಿರುವನು. ಇವನ ರೂಪವನ್ನು ನೋಡಿ, ರಾಜಕುವರಿಯು ಮೋಹಿತಳಾಗಿ, ಇವನೇ ಹರಿ (ಎಂದರೆ ವಾನರನೆಂದು) ತಿಳಿದು ವರಿಸುವಳು ನಾರದನು ಮೋಹಿತನಾಗಿ ಅವನ ಮನಸ್ಸು ಅನ್ಯರ (ಎಂದರೆ ಮಾಯೆಯ) ವಶದಲ್ಲಿ ಇದ್ದಿತು. ಶಿವಗಣಗಳು ಮುಗುಳ್ನಗೆಯಿಂದ ವಿಶೇಷವಾಗಿ ಹಾಸ್ಯಮಾಡುತ್ತಿದ್ದವು. ಮುನಿಯು ಆ ಹಾಸ್ಯ

---

* ಆಗ ನಾರದನಿಗೆ ಮೂರು ಪ್ರಕಾರವಾದ ರೂಪಗಳು ಪ್ರಾಪ್ತವಾಗಿದ್ದವು.—(೧) ತನ್ನ ರೂಪವು ಭಗವಂತನ ರೂಪದಂತೆಯೆ ಇರುವುದೆಂದು ನಾರದನಿಗೆ ಭಾಸವಾಗಿತ್ತು (೨) ಅಲ್ಲಿ ನೆರೆದಿದ್ದ ರಾಜರಿಗೆ ನಾರದನ ನಿಜರೂಪವೇ ಗೋಚರವಾಗಿತ್ತು (೩) ಆದರೆ ರಾಜಕುವರಿಗೆ ನಾರದನು ಮಂಗನ ಹಾಗೆ ಕಾಣಿಸುತ್ತಿದ್ದನು.

ವಚನಗಳನ್ನು ಕೇಳುತ್ತಿದ್ದರೂ, ಭ್ರಮೆಗೊಂಡಿದ್ದ ಅವನ ಬುದ್ಧಿಗೆ ಅದರ ಮರ್ಮವು ತಿಳಿಯಲಿಲ್ಲ. ಈ ವಿಶೇಷ ಘಟನೆಯನ್ನಾರೂ ನೋಡಲಿಲ್ಲ ಕೇವಲ ರಾಜಪುತ್ರಿಯು ಮಾತ್ರ ಆ ರೂಪವನ್ನು ನೋಡಿದಳು. ಮುನಿಯ ಮುಖವು ಕಪಿಯಂತೆಯೂ, ಶರೀರವೆಲ್ಲ ಭಯಂಕರನಾಗಿಯೂ ಇತ್ತು. ಅವನ್ನು ನೋಡಿದ ಕೂಡಲೆ, ಕನ್ಯೆಯ ಹೃದಯದಲ್ಲಿ ವಿಶೇಷ ಕ್ರೋಧವುಂಟಾಯಿತು.

ದೋ॥೧೬೨॥ ಆಗ ರಾಜಕನ್ಯೆಯು ಕೈಯಲ್ಲಿ ಜಯಮಾಲೆಯನ್ನು ಹಿಡಿದು ಕೊಂಡು ತನ್ನ ಸಖಿಯರೊಂದಿಗೆ ರಾಜಹಂಸದಂತೆ ನಡೆಯುತ್ತ, ಅಲ್ಲ ನೆರ ದಿದ್ದ ಎಲ್ಲ ರಾಜರನ್ನು ನೋಡುತ್ತ ಹೋಗುತ್ತಿದ್ದಳು ಪ್ರಫುಲ್ಲಿತನಾಗಿ ಕುಳಿ ತಿದ್ದ ನಾರದನ ಕಡೆಗೆ ಒಂದು ಬಾರಿಯಾದರೂ ಅವಳು ನೋಡಲೇ ಇಲ್ಲ ನಾರದನು ಬಾರಿಬಾರಿಗೂ ಹಾರುತ್ತ, ಏಳುತ್ತ, ಭ್ರಮೆಗೊಳ್ಳುತ್ತಿದ್ದನು. ಅವನ ಸ್ಥಿತಿಯನ್ನು ನೋಡಿ ಶಿವಗಣಗಳು ನಗುತ್ತಿದ್ದವು. ಭಗವಂತನು ರಾಜನ ರೂಪ ವನ್ನು ಧರಿಸಿಕೊಂಡು ಅಲ್ಲಿಗೆ ಹೋದನು ರಾಜಕುಮಾರಿಯು ಆತನನ್ನು ನೋಡಿದಕೂಡಲೇ ಪ್ರಸನ್ನಳಾಗಿ ಅವನ ಕಂಠದಲ್ಲಿ ಜಯಮಾಲೆಯನ್ನು ಹಾಕಿ ದಳು ಮದುಮಗಳನ್ನು ಕರೆದುಕೊಂಡು ಶ್ರೀನಿವಾಸಭಗವಾನನು ಹೊರಟು ಹೋದನು ಉಳಿದ ರಾಜರೆಲ್ಲರೂ ನಿರಾಶರಾದರು. ಮೋಹದಿಂದ ಬುದ್ಧಿಯು ನಷ್ಟವಾದುದರಿಂದ ನಾರದಮುನಿಯು ಅತ್ಯಂತ ವ್ಯಾಕುಲನಾಗಿದ್ದನು. ತನ್ನ ಗಂಟು ಸಡಿಲವಾಗಿ ಮಣಿಯು ಬಿದ್ದುಹೋಯಿತೆಂದು ತಿಳಿದನು. ಆಗ ಶಿವಗಣ ಗಳೆರಡು ನಕ್ಕು, "ಹೇ ಮುನಿರಾಜ! ಹೋಗು, ಕನ್ನಡಿಯಲ್ಲಿ ನಿನ್ನ ಮುಖವು ಹೇಗಿದೆಯೆಂದು ನೋಡಿಕೊ, ಹೋಗು!" ಎಂದು ಹೇಳಿ ಭಯದಿಂದ ಓಡಿ ಹೋದವು ಮುನಿಯು ಅಲ್ಲಿಂದ ಹೋಗಿ ನೀರಿನಲ್ಲಿ ತನ್ನ ವಾನರ ರೂಪದ ಪ್ರತಿಬಿಂಬವನ್ನು ನೋಡಿ ಕ್ರೋಧಿತನಾಗಿ, ಆ ಎರಡು ಗಣಗಳಿಗೂ ಬಹು ಘೋರವಾದ ಶಾಪವನ್ನು ಕೊಟ್ಟನು.

ದೋ॥ ೧೬೩॥ "ನೀವಿಬ್ಬರೂ ಕಪಟಿಗಳೂ ಪಾಪಿಗಳೂ ಆದ ರಾಕ್ಷಸ ಜನ್ಮ ವನ್ನು ತಾಳಿರಿ, ನನ್ನನ್ನು ಹಾಸ್ಯಕ್ಕೆ ಗುರಿಮಾಡಿದ ಫಲವನ್ನು ಅನುಭವಿಸಿರಿ" ಎಂದು ಶಪಿಸಿದನು ಆಗ (ಕ್ರೋಧದಲ್ಲಿದ್ದ) ಮುನಿಯನ್ನು ನೋಡಿ ಯಾರು ಹಾಸ್ಯಮಾಡು ವರು? ಮುನಿಯು ಆನಂತರ ನೀರಿನಲ್ಲಿ ಮುಳುಗೆದ್ದು ನೋಡಿಕೊಳ್ಳಲು, ತನಗೆ ಪೂರ್ವದ (ಮುನಿಯ) ರೂಪವೇ ಪ್ರಾಪ್ತವಾಗಿತ್ತು. ಆದಾಗ್ಗೂ ಆತನ ಮನ ಸ್ಸಿಗೆ ಸಂತೋಷವಾಗಲಿಲ್ಲ ಆಗ ಕ್ರೋಧಪೂರ್ಣನೂ, ಕಂಪಿಸುತ್ತಿದ್ದ ಅಧರ ವುಳ್ಳವನೂ ಆಗಿ ಶೀಘ್ರವಾಗಿ ವಿಷ್ಣುವಿನ ಬಳಿಗೆ ತೆರಳಿದನು. ಹೋಗುತ್ತ ಮನ ಸ್ಸಿನಲ್ಲಿ 'ನಾನು ಆತನಿಗೆ ಶಾಪಕೊಡುವೆನು, ಇಲ್ಲವೇ ನಾನೇ ಸಾಯುವೆನು. ಆತನು ನನ್ನನ್ನು ಹಾಸ್ಯಕ್ಕೆ ಗುರಿಮಾಡಿದನು" ಎಂದುಕೊಳ್ಳುತ್ತಿದ್ದನು. ಆಗ ಭಗವಂತನು ದಾರಿಯಲ್ಲಿಯೇ ಮುನಿಯೊಂದಿಗೆ ಸೇರಿದನು. ಆತನೊಟ್ಟಿಗೆ

ಆ ರಾಜಕುಮಾರಿಯೂ ಲಕ್ಷ್ಮಿಯೂ ಇದ್ದರು. ಆಗ ದೇವತೆಗಳಿಗೊಡೆಯನಾದ ಭಗವಂತನು ಮಧುರವಾಣಿಯಿಂದ "ಹೇ ಮುನಿಯೇ! ವ್ಯಾಕುಲನಾದ ನೀನು ಎಲ್ಲಿಗೆ ಹೋಗುತ್ತಿರುವಿ?" ಎಂದು ಕೇಳಿದ ಕೂಡಲೆ, ಮಾಯೆಯ ವಶನಾದ ಮುನಿಯು ವಿಶೇಷ ಕೋಪದಿಂದ, ವಿಷ್ಣುವನ್ನು ಕುರಿತು,–"ನೀನು ಅನ್ಯರ ಸಂಪತ್ತನ್ನು ನೋಡಿ ಸಹಿಸಲಾರೆ. ನೀನು ಬಹಳ ಹೊಟ್ಟೆಕಿಚ್ಚಿನವನು, ಕಪಟಿ! ಸಮುದ್ರ ಮಥನಮಾಡಿದಾಗ ಶಿವನನ್ನು ಹುಚ್ಚನಾಗಿ ಮಾಡಿ. ದೇವತೆಗಳ ಮೂಲಕ ಆತನಿಗೆ ವಿಷಪಾನಮಾಡಿಸಿದೆ!

(ನಾರದನು ನಾರಾಯಣನಿಗೆ ಶಾಪಕೊಡುವುದು. ಆದಕ್ಕಾಗಿ ನಾರಾಯಣನು ಅವತರಿಸುವುದು.)

ದೋ||೧೬೪|| "ನೀನು ದೈತ್ಯರಿಗೆ ಮದಿರೆಯನ್ನೂ, ಶಿವನಿಗೆ ವಿಷವನ್ನೂ ಕೊಟ್ಟು ನಿನಗೋಸ್ಕರ ಲಕ್ಷ್ಮಿಯನ್ನೂ ಸುಂದರವಾದ ರತ್ನಗಳನ್ನೂ ಇಟ್ಟುಕೊಂಡೆ. ನೀನು ಸ್ವಾರ್ಥಸಾಧಕನೂ ಕಪಟಿಯೂ ಆಗಿರುವಿ. ನಿನ್ನ ವ್ಯವಹಾರವೆಲ್ಲವೂ ಮೋಸದಿಂದ ತುಂಬಿರುವುದು. ನೀನು ಪರಮಸ್ವತಂತ್ರನು. ನಿನ್ನನ್ನು ಕೇಳುವವರೇ ಇಲ್ಲ. ಆದುದರಿಂದ ನಿನ್ನ ಮನಸ್ಸಿಗೆ ತೋರಿದಂತೆ ಮಾಡುತ್ತಿರುವಿ. ಒಳ್ಳೆಯದನ್ನು ಕೆಟ್ಟದಾಗಿಯೂ, ಕೆಟ್ಟದನ್ನು ಒಳ್ಳೆಯದಾಗಿಯೂ ಮಾಡುವಿ. ಮನಸ್ಸಿಗೆ ಹರ್ಷವನ್ನಾಗಲಿ, ಶೋಕವನ್ನಾಗಲಿ ಹಚ್ಚಿಕೊಳ್ಳುವುದಿಲ್ಲ. ನೀನು ಮೋಸದಿಂದ ಎಲ್ಲವನ್ನೂ ಭೇದಿಸಿರುವಿ. ಮನಸ್ಸಿನಲ್ಲಿ ನೀನು ಯಾವ ಸಂದೇಹವನ್ನೂ ಇಟ್ಟುಕೊಳ್ಳದೆ ಸದಾಪ್ರಸನ್ನನಾಗಿರುವಿ ಶುಭಾಶುಭ ಕರ್ಮಗಳ ಬಾಧೆಯೇ ನಿನಗುಂಟಾಗುವುದಿಲ್ಲ. ಇಂದಿನವರೆಗೆ ನೀನು ಯಾರೊಂದಿಗೂ ಸರಳವಾಗಿ ವರ್ತಿಸಿಲ್ಲ. ಇದರ ಉದಾಹರಣೆಯನ್ನು ಈಗ ನನಗೆ ಚೆನ್ನಾಗಿ ತೋರಿಸಿರುವೆ. ಇದರ ಫಲವನ್ನು ಅನುಭವಿಸುವಿ. ನೀನು ಯಾವ ಶರೀರವನ್ನು ಧಾರಣಮಾಡಿ ನನ್ನನ್ನು ಮೋಸಗೊಳಿಸಿದೆಯೋ ಅದೇ ಶರೀರವನ್ನೇ ನೀನು ಧರಿಸುವವನಾಗು. ನೀನು ನನ್ನನ್ನು ಸುಂದರವಾದ ವಾನರನಾಗಿ ಮಾಡಿದ್ದಿ. ಆದುದರಿಂದ ಕಪಿಗಳೇ ನಿನಗೆ ಸಹಾಯಮಾಡುವಂತಾಗಲಿ. ನೀನು ನನಗೆ ದೊಡ್ಡ ಅಪಕಾರವನ್ನು ಮಾಡಿದುದರಿಂದ ನೀನೂ ಸ್ತ್ರೀ ವಿಯೋಗದಿಂದ ದುಃಖಿತನಾಗುವಿ —ಇದುವೇ ನನ್ನ ಶಾಪವು" ಎಂದನು.

ದೋ||೧೬೫|| ಭಗವಂತನು ಮುನಿಯ ಶಾಪವನ್ನು ಶಿರಸ್ಸಿನಲ್ಲಿ ಧರಿಸಿ ಪ್ರಸನ್ನಚಿತ್ತದಿಂದ ಮುನಿಯನ್ನು ಅನೇಕ ವಿಧವಾಗಿ ಸಮಾಧಾನಪಡಿಸಿದನು. ಮತ್ತೆ ಕೃಪಾಸಿಂಧುವಾದ ಆತನು ತನ್ನ ಮಾಯೆಯ ಪ್ರಭಾವವನ್ನು ಹಿಂದಕ್ಕೆ ತೆಗೆದುಕೊಂಡನು. ಮಾಯೆಯು ದೂರವಾದಾಗ ಅಲ್ಲಿ ಲಕ್ಷ್ಮಿಯಾಗಲಿ, ರಾಜಕನ್ಯೆಯಾಗಲಿ ಇರಲಿಲ್ಲ. ಆಗ ಮುನಿಯು ಬಹು ಭಯಚಕಿತನಾಗಿ ಭಗವಂತನ ಚರಣಗಳನ್ನು ಪಿಡಿದುಕೊಂಡು,—"ಹೇ ಪ್ರಣತ (ನಿನಗೆ ನಮಸ್ಕಾರ ಮಾಡುವವರ ದುಃಖಗಳನು ನಿವಾರಿಸುವವನೆ!) ರಕ್ಷಿಸು, ನನ್ನನ್ನು ರಕ್ಷಿಸು! ಹೇ ಕೃಪಾಳು,

ಹೇ ದೀನದಯಾಳು, ನನ್ನ ಶಾಪವು ಅಸತ್ಯವಾಗಲಿ ! ಇದೇ ನನ್ನ ಅಪೇಕ್ಷೆ. ನಾನು ನಿನ್ನನ್ನು ವಿಶೇಷವಾಗಿ ನಿಂದಿಸಿರುವೆನು. ಈ ನನ್ನ ಪಾಪವು ಹೇಗೆ ನಿವಾರಣೆಯಾದೀತು ?" ಎಂದು ಪ್ರಾರ್ಥಿಸಿದನು. ಆಗ ಭಗವಾನನು ಅವನನ್ನು ಸಮಾಧಾನಪಡಿಸಿ, ' ಹೇ ನಾರದ ! ಹೋಗು, ನೀನು ಶಂಕರನ ಶತನಾಮ ಗಳನ್ನು ಜಪಿಸು. (ಹಾಗೆ ಮಾಡಿದರೆ) ಕೂಡಲೆ ನಿನ್ನ ಹೃದಯದಲ್ಲಿ ಶಾಂತಿ ಯುಂಟಾಗುವುದು. ನನಗೆ ಪ್ರಿಯರಾದವರಲ್ಲಿ ಶಿವನಸಮಾನವಾಗಿರುವವರು ಮತ್ತಾರೂ ಇಲ್ಲ. ಈ (ವಿಶ್ವಾಸದ) ಮಾತನ್ನೆಂದಿಗೂ ಮರೆಯಬೇಡ. ಶಿವನ ಕೃಪೆಗೆ ಪಾತ್ರರಾಗದವರು ನನ್ನಲ್ಲಿ ಭಕ್ತಿಯನ್ನು ಹೊಂದಲಾರರು. ಈ ವಿಚಾರ ವನ್ನು ಮನಸ್ಸಿನಲ್ಲಿ ಧರಿಸಿಕೊಂಡು ನೀನು ಪೃಥ್ವೀಲೋಕದಲ್ಲಿ ಸಂಚರಿಸುವವನಾಗು. ಇನ್ನು ಮಾಯೆಯು ನಿನ್ನ ಬಳಿ ಸುಳಿಯಲಾರದು" ಎಂದನು.

ದೋ॥೧೩೮॥ ಹೀಗೆ ಮುನಿಯನ್ನು ಹಲವು ವಿಧವಾಗಿ ಸಮಾಧಾನಪಡಿಸಿ, ಭಗವಂತನು ಅಂತರ್ಧಾನನಾದನು. ಅನಂತರ ನಾರದನು ರಾಮ–ಗುಣ–ಗಾನ ಮಾಡುತ್ತ ಸತ್ಯಲೋಕಕ್ಕೆ ತೆರಳಿದನು. ಹೀಗೆ ಮುನಿಯು ಮೋಹರಹಿತನೂ ಪ್ರಸನ್ನಚಿತ್ತನೂ ಆಗಿ ಮಾರ್ಗದಲ್ಲಿ ಹೋಗುತ್ತಿರುವುದನ್ನು ಶಿವಗಣಗಳು ನೋಡಿ ದವು; ಮತ್ತೆ (ಮೊದಲುಮಾಡಿದ ಅಪರಾಧದ ದೆಸೆಯಿಂದ) ಆವೆರಡು ಗಣಗಳು ಭಯಪಡುತ್ತ ನಾರದನ ಬಳಿಗೆ ಬಂದು, ಆತನ ಪಾದಗಳನ್ನು ಹಿಡಿದುಕೊಂಡು ಬಹು ದೀನವಾಣಿಯಿಂದ ಪ್ರಾರ್ಥಿಸಿದವೆಂತೆಂದರೆ :—"ಹೇ ಮುನಿರಾಜ. ನಾವು ಶಿವಗಣಗಳು ಬ್ರಾಹ್ಮಣರಲ್ಲ ನಾವು ಬಹು ದೊಡ್ಡ ಅಪರಾಧವನ್ನು ಮಾಡಿ ಅದಕ್ಕೆ ತಕ್ಕುದಾದ ಫಲವನ್ನು ಹೊಂದಿರುವೆವು. ಹೇ ದಯಾಳು, ಈಗ ಕೃಪೆ ಯಿಟ್ಟು ನಮ್ಮ ಶಾಪವಿಮೋಚನೆಗೈಯ್ಯಬೇಕು "—(ಈ ದೀನ ಪ್ರಾರ್ಥನೆಯನ್ನು ಕೇಳಿ) ದೀನದಯಾಳುವಾದ ನಾರದನು, "ನೀವಿಬ್ಬರೂ ಹೋಗಿ ರಾಕ್ಷಸರಾಗಿ ಹುಟ್ಟಿರಿ. ನಿಮ್ಮ ಪ್ರತಾಪವೂ ತೇಜಸ್ಸೂ ಬಲವೂ ವಿಶೇಷವಾಗಿ ಹಬ್ಬುವುದು. ನೀವು ನಿಮ್ಮ ಭುಜಬಲದಿಂದ ಇಡೀ ಪೃಥ್ವಿಯನ್ನು ಗೆದ್ದಾಗ ವಿಷ್ಣುಭಗವಾನನು ಮನುಷ್ಯ ಶರೀರವನ್ನು ಧರಿಸುತ್ತಾನೆ. ಆಗ ಯುದ್ಧದಲ್ಲಿ ಭಗವಂತನ ಕೈಯಿಂದ ನಿಮಗೆ ಮರಣಪ್ರಾಪ್ತಿಯಾಗುವುದು. ಆಗ ನೀವಿಬ್ಬರೂ ಮುಕ್ತರಾಗುವಿರಿ, ಅನಂತರ ನಿಮಗೆ ಸಂಸಾರ ತಾಪತ್ರಯವಿರಲಾರದು," ಎಂದು ಹೇಳಿದನು. ಈ ಮಾತುಗಳನ್ನು ಕೇಳಿದ ಆ ಎರಡು ಗಣಗಳೂ ಮುನಿಚರಣಗಳಿಗೆರಗಿ ತಲೆ ಯನ್ನು ಬಾಗಿ ನಮಸ್ಕರಿಸಿ, ಅಲ್ಲಿಂದ ತೆರಳಿದರು. ಅನಂತರ ಅವರು ರಾಕ್ಷಸ ಜನ್ಮವನ್ನು ತಾಳಿದರು.

ದೋ॥೧೩೯॥ ದೇವತೆಗಳನ್ನು ಪ್ರಸನ್ನಗೊಳಿಸುವವನೂ (ಎಂದರೆ ಸುರರಂ ಜನನೂ), ಸಜ್ಜನ ಸುಖದಾಯಕನೂ, ಭುವಿ–ಭಾರ–ಭಂಜನನೂ (ಎಂದರೆ

ಪೃಥ್ವಿಯ ಭಾರವನ್ನು ನಿವಾರಿಸುವವನೂ) ಆದ ಭಗವಂತನು ಹಿಂದೆ ಹೇಳಿದ ಕಾರಣಗಳಿಗೋಸುಗ ಮನುಷ್ಯಾವತಾರವನ್ನು ಒಂದು ಕಲ್ಪದಲ್ಲಿ ಮಾಡಬೇಕಾಯಿತು. ಆತನ ಜನ್ಮ-ಕರ್ಮಗಳು ಈ ರೀತಿಯಾಗಿ ಬಹು ವಿಚಿತ್ರವೂ, ಸುಖದಾಯಕವೂ ಸುಂದರವೂ ಆದ ಚರಿತ್ರಯುಕ್ತವಾಗಿವೆ. ಪ್ರತಿ ಕಲ್ಪದಲ್ಲಿಯೂ ಭಗವಂತನು ಅವತರಿಸಿ ನಾನಾ ವಿಧವಾದ ಸುಂದರ ಚರಿತ್ರೆಗಳಿಗೆ ಕಾರಣನಾಗುವನು. ಈ ವಿಧವಾದ ಘಟನೆಗಳಾದಾಗಲೆಲ್ಲಾ ಮುನಿಜನರು ಆತನ ಪರಮಪವಿತ್ರ ಚರಿತ್ರೆಯನ್ನು ರಚಿಸಿ ಗಾನಮಾಡುವರು. ಆ ಕಥೆಗಳಲ್ಲಿ ವರ್ಣಿತವಾದ ಹಲವು ಅನುಪಮ ಪ್ರಸಂಗಗಳನ್ನು ಕೇಳಿ ಜ್ಞಾನಿಗಳು ಆಶ್ಚರ್ಯಪಡುವುದಿಲ್ಲ ಹರಿಯು ಅನಂತನು, ಆತನ ಚರಿತ್ರೆಯೂ ಅನಂತವಾದುದು ಅದನ್ನು ಸಂತಜನರು ನಾನಾ ವಿಧವಾಗಿ ವರ್ಣಿಸುವರು ಮತ್ತು ಶ್ರವಣಮಾಡುವರು ರಾಮಚಂದ್ರನ ಚರಿತ್ರಯು ಅನಂತವಾಗಿರುವುದರಿಂದ ಕೋಟ್ಯಾನುಕೋಟಿ ಕಲ್ಪಗಳವರೆಗೆ ಅವುಗಳನ್ನು ಸಂಪೂರ್ಣವಾಗಿ ಸ್ತುತಿಸಲಾಗುವುದಿಲ್ಲ. ಹೇ ಪಾರ್ವತಿ ! ಭಗವಂತನ ಮಾಯೆಯಿಂದ ಜ್ಞಾನಿಗಳಾದ ಮುನಿಗಳೂ ಮೋಹಿತರಾಗುವರೆಂಬ ಈ ಕಥೆಯನ್ನು ನಿನಗೆ ಹೇಳಿದೆನು. ಭಗವಂತನು ಬಹು ಕೌತುಕಯುಕ್ತನೂ ಭಕ್ತರ ಹಿತಕಾರಿಯೂ ಆಗಿರುವನು. ಆತನು ಸೇವಕರಿಗೆ ಸುಲಭಸಾಧ್ಯನೂ, ಸರ್ವ ದುಃಖನಿವಾರಕನೂ ಆಗಿರುವನು

ದೋ॥೧೬೮॥ ಪ್ರಬಲವಾದ ಮಾಯೆಯ ಬಲೆಗೆ ಸಿಲುಕದ ದೇವತೆಯಾಗಲಿ, ಮನುಷ್ಯನಾಗಲಿ, ಮುನಿಯಾಗಲಿ, ಎಲ್ಲಿಯೂ ದೊರೆಯಲಾರನು. ಇದನ್ನು ತಿಳಿದು ಮನಸ್ಸಿನಲ್ಲಿ ಮಾಯೆಯ ಪತಿಯನ್ನು ಭಜಿಸಬೇಕು. ಹೇ ಪಾರ್ವತಿ, ಮತ್ತೊಂದು ಕಾರಣವನ್ನು ಕೇಳು ಯಾವ ಕಾರಣದಿಂದ ಜನ್ಮರಹಿತನೂ ನಿರ್ಗುಣನೂ ರೂಪರಹಿತನೂ ಆದ ಬ್ರಹ್ಮನು ಕೋಸಲದೇಶದ ರಾಜನಾಗಿ ಹುಟ್ಟಿದನೋ ಆ ವಿಚಿತ್ರ ಕಥೆಯನ್ನು ವಿಸ್ತಾರವಾಗಿ ಹೇಳುವೆನು. ಕೇಳು ಹೇ ಭವಾನಿ ! ಯಾವ ಸ್ವಾಮಿಯಾದ (ಶ್ರೀರಾಮನನ್ನು) ನೀನು ವನದಲ್ಲಿ ಸಂಚರಿಸುತ್ತಿರುವಾಗ ದರ್ಶಿಸಿದೆಯೋ ಯಾವನು ತನ್ನ ತಮ್ಮನೊಂದಿಗೆ ಋಷಿ ವೇಷವನ್ನು ಧರಿಸಿದ್ದನೋ ಯಾವನ ಚರಿತ್ರೆಯನ್ನು ನೋಡಿ ನೀನು (ಪೂರ್ವಜನ್ಮದ) ಸತಿಯ ಶರೀರದಲ್ಲಿ ಮೋಹಿತಳಾಗಿದ್ದೆಯೋ, ಮತ್ತೆ ಈಗ್ಗೂ ನಿನ್ನ ಆ ಭ್ರಮೆಯು ಪೂರ್ಣವಾಗಿ ನಾಶವಾಗಿಲ್ಲವೋ, ಅಂತಹ ಆ ಭ್ರಮೆಯೆಂಬ ರೋಗಕ್ಕೆ ಔಷಧ ರೂಪದಂತಿರುವ ಚರಿತ್ರೆಯನ್ನು ಅರ್ಥಾತ್ ಆ ಅವತಾರದಲ್ಲಿ ಆತನು ಮಾಡಿದ ಲೀಲೆಗಳನ್ನೆಲ್ಲಾ ನಾನು ನನ್ನ ಬುದ್ಧಿಗನುಸಾರವಾಗಿ ವರ್ಣಿಸುವೆನು. ಕೇಳು!— (ಈ ರೀತಿಯಾದ ಶಿವಪಾರ್ವತಿಯರ ಸಂವಾದವನ್ನು ವರ್ಣಿಸುತ್ತ) ಯಾಜ್ಞವಲ್ಕ್ಯ ಮುನಿಯು ಹೇಳಿದನೇನೆಂದರೆ—"ಹೇ ಭರದ್ವಾಜ ! ಶಂಕರನ ಮಾತನ್ನು ಕೇಳಿ ಉಮೆಯು ಭಯವಿಹ್ವಲಳೂ ಪ್ರೇಮಪೂರ್ಣಳೂ ಮಂದಸ್ಮಿತವದನೆಯೂ

ಆದಳು. ಅನಂತರ ಶಿವರಾಜನು ಆ ಅವತಾರಕಾರಣದ ವರ್ಣನೆಯನ್ನು ಮಾಡಲಾರಂಭಿಸಿದನು.

(ಸ್ವಾಯಂಭುವ ಮನುವಿನ ಕಥೆಯು)

ದೋ ॥೧೪೯॥ ಹೇ ಭರದ್ವಾಜ, ಮನಸ್ಸಿಟ್ಟು ಕೇಳು. ನಾನು ಆ ಕಥೆಯನ್ನು ಹೇಳುವೆನು. ಶ್ರೀರಾಮಚಂದ್ರನ ಕಥಯು ಕಲಿಮಲವನ್ನು ದೂರೀಕರಿಸುವುದು ; ಅದು ಸುಂದರವೂ, ಮಂಗಳಕರವೂ, ಮನೋಹರವೂ ಆಗಿದೆ. ಮನುಷ್ಯಸೃಷ್ಟಿಗೆ ಮೂಲಕರ್ತರಾದ ಸ್ವಾಯಂಭುವಮನುವು ಮತ್ತೆ ಆತನ ಪತ್ನಿಯಾದ “ಶತರೂಪಾ” ಮಹಾರಾಣಿಯೂ ಬಹು ಶ್ರೇಷ್ಠ ಸದಾಚಾರಿಗಳಾಗಿದ್ದರು ಅವರ ಕೀರ್ತಿಯನ್ನು ಶ್ರುತಿಗಳು ಇನ್ನೂ ಗಾನವಮಾಡುತ್ತಲಿವೆ. ಆ ಸ್ವಾಯಂಭವ ಮನುವಿಗೆ ಉತ್ತಾನ ಪಾದನೆಂಬ ರಾಜಪುತ್ರನು ಹುಟ್ಟಿದನು. ಅವನಿಗೆ ಭಗವದ್ಭಕ್ತನಾದ ಧ್ರುವನೆಂಬ ಮಗನು ಹುಟ್ಟಿದನು. ಆ (ಉತ್ತಾನ ಪಾದ) ರಾಯನ ಕಿರಿಯ ಮಗನ ಹೆಸರು ಪ್ರಿಯವ್ರತನೆಂದಿದ್ದಿತು. ದೇವಹೂತಿಯೆಂಬ (ಅವನ) ಮಗಳೇ ಕರ್ದಮ ಋಷಿಯ ಸಹಧರ್ಮಿಣಿಯಾಗಿದ್ದಳು. ಆಕೆಯ ಗರ್ಭದಲ್ಲಿ ಆದಿದೇವನೂ, ದೀನದಯಾಳುವೂ ಪರಮಾತ್ಮನೂ ಆದ ಕಪಿಲಮಹರ್ಷಿಯು ಜನಿಸಿದನು. ಕಪಿಲ ಬಗವಾನನು ಸಾಂಖ್ಯಶಾಸ್ತ್ರವನ್ನು ನಿರ್ಮಿಸಿದನು. ಆತನು ತತ್ವವಿಚಾರದಲ್ಲಿ ಬಹು ಚತುರನಾಗಿದ್ದನು. ಆ ಸ್ವಾಯಂಭುವನು ಮಹಾರಾಜನು ಬಹು ದಿನಗಳವರೆಗೆ ರಾಜ್ಯವನ್ನಾಳುತ್ತ ಈಶ್ವರನ ಆಜ್ಞೆಗಳನ್ನೆಲ್ಲಾ ಪಾಲಿಸಿದನು.

ಸೋ ॥೧೫೦॥ ಆತನು ಬಹುಕಾಲ ಮನೆಯಲ್ಲಿಯೇ ವಾಸಿಸುತ್ತ ವೃದ್ಧಾವಸ್ಥೆಯನ್ನು ಹೊಂದಿದನು , ಆದರೂ ವಿಷಯಗಳಿಂದ ವೈರಾಗ್ಯವನ್ನು ಹೊಂದಲಿಲ್ಲ. ಆಗ ಅದರಿಂದ ಆತನಿಗೆ ಪಶ್ಚಾತ್ತಾಪವಾಗಿ “ಅಯ್ಯೋ ! ನನ್ನ ಇಡೀ ಆಯುಷ್ಯವೆಲ್ಲಾ ದೈವಭಕ್ತಿರಹಿತವಾಗಿ ಕಳೆದು ಹೋಯಿತಲ್ಲಾ !” ಎಂದುಕೊಂಡು, ತನ್ನ ಮಗನಿಗೆ ರಾಜ್ಯವನ್ನು ವಹಿಸಿ, ತನ್ನ ಸ್ತ್ರೀ ಸಮೇತನಾಗಿ ವನಕ್ಕೆ ತೆರಳಿದನು. ಅಲ್ಲಿ ಅತಿ ಪವಿತ್ರರಿಗೆ ಸಿದ್ಧಿಯನ್ನು ಕೊಡುತ್ತಿದ್ದ ಶ್ರೇಷ್ಠ ತೀರ್ಥನೆನಿಸಿದ ನೈಮಿಷಾರಣ್ಯಾನು ವಾಸಿಸುತ್ತಿದ್ದನು. ಮತ್ತೆ ಅಲ್ಲಿ ಹಲವು ಮಂದಿ ಸಿದ್ಧಮುನಿಗಳೂ ವಾಸಿಸುತ್ತಿದ್ದರು. ಮನುಮಹಾರಾಜನು ಪ್ರಸನ್ನಚಿತ್ತದಿಂದ ಅಲ್ಲಿಗೆ ತೆರಳಿದನು. ಮಾರ್ಗದಲ್ಲಿ ಹೋಗುತ್ತಿರುವಾಗ ಆ ಮತಿಧೀರರಿಬ್ಬರೂ (ಎಂದರೆ ಮನುಮತ್ತು ಶತರೂಪಾ—ಇವರಿಬ್ಬರೂ) ಜ್ಞಾನ ಮತ್ತು ಭಕ್ತಿ—ಇವುಗಳೆರಡೂ ಶರೀರಧಾರಣೆ ಮಾಡಿಕೊಂಡು ಹೋಗುತ್ತಿದ್ದಂತೆ ಶೋಭಿಸುತ್ತ ಧೇನುಮತೀ (ಗೋಮತೀ) ನದಿಯ ತೀರವನ್ನು ಸೇರಿದರು. ಅನಂತರ ಪ್ರಸನ್ನಚಿತ್ತದಿಂದ ಆ ನದಿಯ ನಿರ್ಮಲ ಜಲದಲ್ಲಿ ಸ್ನಾನಮಾಡಿದರು. (ಮನುಮಹಾರಾಜನು)

ಧರ್ಮಧುರಂಧರನಾದ ರಾಜರ್ಷಿಯೆಂದರಿತು ಹಲವುಮಂದಿ ಜ್ಞಾನಿಗಳಾದ ಸಿದ್ಧ ಮುನಿಗಳು ಆತನನ್ನು ಭೇಟಿಯಾಗಲು ಬಂದರು. ಮತ್ತೆ ಮನೋಹರವಾದ ತೀರ್ಥಗಳಿದ್ದೆಡೆಯಲ್ಲೆಲ್ಲಾ ಮುನಿಗಳು ಅವರಿಬ್ಬರನ್ನೂ ಆದರಿಸುತ್ತಿದ್ದರು. (ತಪ ಸ್ಸಿನಾಚರಣೆಯಿಂದ) ಅವರಿಬ್ಬರ ಶರೀರಗಳು ಕೃಶವಾದವು, ಮತ್ತೆ ಅವರಿಬ್ಬರು ಮುನಿಗಳಂತೆ ವಸ್ತ್ರವನ್ನು ಧರಿಸಿ, ನಂತರ ಸಭೆಯಲ್ಲಿ ನಿತ್ಯವೂ ಪುರಾಣ ಕಥೆ ಳನ್ನು ಕೇಳುತ್ತಿದ್ದರು.

ದೋ ॥೧೭೧॥ ಆ ಸ್ತ್ರೀಪುರುಷರಿಬ್ಬರೂ ಬಹು ಭಕ್ತಿಯಿಂದ ದ್ವಾದಶಾ ಕ್ಷರೀ (ಎಂದರೆ "**ಓಂ ನಮೋ ಭಗವತೇ ವಾಸುದೇವಾಯ**" ಎಂಬ ಮಂತ್ರವನ್ನು ಜಪಿಸುತ್ತ ಭಗವಾನ್ ವಾಸುದೇವನ ಚರಣಾರವಿಂದ ಧ್ಯಾನದಲ್ಲಿ ಪೂರ್ಣಮಗ್ನರಾಗಿದ್ದರು. ಮತ್ತೆ ಶಾಕ, ಕಂದಮೂಲ ಫಲಾದಿಗಳನ್ನು ಭುಂಜಿ ಸುತ್ತ ಸಚ್ಚಿದಾನಂದ ಬ್ರಹ್ಮನ ಸ್ಮರಣೆ ಮಾಡುತ್ತಿದ್ದರು. ಉಗ್ರವಾದ ತಪಸ್ಸ ನ್ನಾಚರಿಸುತ್ತ ಕೊನೆಗೆ ಫಲಮೂಲಗಳನ್ನೂ ತ್ಯಜಿಸಿ ಜಲಾಧಾರದಿಂದ ಜೀವ ಧಾರಣೆ ಮಾಡಿಕೊಂಡಿದ್ದರು ಆಗ ಅವರಿಬ್ಬರ ಮನಸ್ಸಿನಲ್ಲಿ ಹುಟ್ಟಿದ ಇಚ್ಛೆ ಯೇನಂದರೆ—"ನಾನು ಆ ನಿರ್ಗುಣನೂ, ಅಖಂಡನೂ, ಅನಂತನೂ, ಅನಾ ದಿಯೂ, ಪರಮಾರ್ಥವಾದಿಗಳ ಧ್ಯೇಯಸ್ವರೂಪನೂ ಆದ ಪರಮಪ್ರಭುವನ್ನು ಈ ಕಣ್ಣುಗಳಿಂದ ಯಾವಾಗ ಹೇಗೆ ನೋಡುವೆನು ? ಯಾವನು ಚಿತ್–ಆನಂದ ಸ್ವರೂಪನೂ, ರೂಪರಹಿತನೂ (ಪ್ರಾಕೃತ ದೇಹರಹಿತನೂ) ಉಪಾಧಿರಹಿತನೂ ಅನುಪಮೇಯನೂ ಆಗಿರುವನೋ, ಯಾವನ ವರ್ಣನೆಯನ್ನು ವೇದಗಳು "**ನೇತಿ ನೇತಿ**"(ಎಂದರೆ ಈಶ್ವರನು ಅದಲ್ಲ, ಅದಲ್ಲ ಅಥವಾ ಹಾಗಿಲ್ಲ ಹಾಗಿಲ್ಲ ಅರ್ಥಾತ್ ಅಪಾರನೂ ಅನಂತನೂ ಅಗಾಧನೂ ಆಗಿರುವನು)ಎಂದು ವರ್ಣಿಸಿರುವವೋ! ಮತ್ತೆ ಯಾವನ ಅಂಶದಿಂದ * ಅನೇಕ ಶಿವ, ವಿಷ್ಣು, ಮತ್ತು ಬ್ರಹ್ಮರು ಉತ್ಪನ್ನರಾಗು ವರೋ ಅಂತಹ ಪ್ರಭುವು ಕೂಡ ತನ್ನ (ಭಕ್ತರೆನಿಸಿದ) ಸೇವಕರ ವಶವರ್ತಿಯಾ ಗಿರುವನು. ಆತನು ತನ್ನ ಭಕ್ತರಿಗೋಸ್ಕರ ಲೀಲೆಯಿಂದ ಶರೀರಧಾರಣೆ ಮಾಡು ವನೆಂಬ ವೇದವಚನವು ಸತ್ಯವಾಗಿದ್ದರೆ ನಮ್ಮ ಆಶೆಯು ಪೂರ್ಣವಾಗುವುದು.

ದೋ॥೧೭೨॥ ಈ ವಿಧವಾಗಿ ಜಲಾಧಾರದಿಂದ ಜೀವಧಾರಣೆ ಮಾಡಿ ಕೊಂಡು ಆರು ಸಾವಿರ ವರ್ಷಗಳನ್ನು ಕಳೆದರು. ಆನಂತರ ಕೇವಲ ವಾಯು

---

*** ಮಹಾರಾಮಾಯಣೇ ಶಿವವಾಕ್ಯಂ-"ಯಸ್ಯಾಂಶೇನ ಸಮುದ್ಭೂತಾ ಬ್ರಹ್ಮಾ ವಿಷ್ಣು-ಮಹೇಶ್ವರಾಃ । ನಾನಾಕೃತಿಧರಾ ಭೂತ್ವಾ ಸರ್ವೇ ಧ್ಯಾಯಂತಿ ತಂ ಸದಾ ॥ ಸ್ಕಾನ್ದಪುರಾಣೇ–ಬ್ರಹ್ಮ ವಿಷ್ಣು ಮಹೇಶಾದ್ಯಾ ಯಸ್ಯಾಂಶೇ ಲಾಭಸಾಧಕಾಃ ॥ ತಮಾದಿ ದೇವಂ ಶ್ರೀರಾಮಂ ವಿಶುದ್ಧಂ ಪರಮಂ ಭಜೆ ॥" ಅರ್ಥವು ಸರಳವಾಗಿ ತಿಳಿಯು ವಂತಿರುವುದು.**

ವಿನ ಆಧಾರದಿಂದ ಏಳು ಸಾವಿರ ವರ್ಷಗಳವರೆಗೆ ತಪಸ್ಸನ್ನಾಚರಿಸಿದರು. ಅನಂತರ (ವಾಯುಸೇವನೆಯನ್ನೂ ಬಿಟ್ಟು) ಹತ್ತುಸಾವಿರ ವರ್ಷಗಳವರೆಗೆ ಅವರಿಬ್ಬರೂ ಒಂಟಿಗಾಲಿನ (ಎಂದರೆ ಒಂದು ಕಾಲಿನ) ಮೇಲೆ ನಿಂತು ತಪಸ್ಸುಮಾಡಿದರು. ಘೋರವಾದ ಅವರಿಬ್ಬರ ತಪಸ್ಸನ್ನು ನೋಡಿ ಬ್ರಹ್ಮ, ವಿಷ್ಣು, ಮಹೇಶ್ವರರು ಹಲವು ಬಾರಿ ಅವರ ಬಳಿಗೆ ಬಂದು, "ವರವನ್ನು ಕೇಳಿಕೊಳ್ಳಿರಿ" ಎಂದು ಹೇಳಿದರು. ಆದರೆ ಅವರಿಬ್ಬರೂ ಪರಮಧೀರರಾಗಿದ್ದುದರಿಂದ ತ್ರಿಮೂರ್ತಿಗಳ ಕೋರಿಕೆಯು ನೆರವೇರಲಿಲ್ಲ. (ತಪಸ್ಸನ್ನಾಚರಿಸುತ್ತ, ಅವರ ಶರೀರದಲ್ಲಿ ಅಸ್ಥಿಪಂಜರವು ಮಾತ್ರ ಉಳಿದಿದ್ದರೂ, ಅದರಿಂದ ಅವರ ಮನಸ್ಸಿಗೆ ಯಾವ ವೇದನೆಯೂ ಆಗಲಿಲ್ಲ. ಸರ್ವಜ್ಞನಾದ ಪರಮಾತ್ಮನು ಸತಿಪತಿಗಳಾದ ಆ ರಾಯನೂ, ಅರಸಿಯೂ ಮಹಾ ತಪಸ್ವಿಗಳೂ, ತನ್ನ ವಿನಾ ಅನ್ಯಗತಿಯನ್ನಪೇಕ್ಷಿಸದಿರುವವರೂ ಆಗಿರುವರೆಂದರಿತು, ದಯಾಪೂರ್ಣವೂ ಅಮೃತಮಯವೂ ಆದ ಬಹು ಗಂಭೀರಸ್ವರದಿಂದ ಆಕಾಶವಾಣಿಯನ್ನು ನುಡಿಸಿದನು.—"ವರವನ್ನು ಬೇಡಿಕೊಳ್ಳಿರಿ ! ವರವನ್ನು ಬೇಡಿಕೊಳ್ಳಿರಿ ! " (ಆ ಆಕಾಶವಾಣಿಯು) ಮೃತರಿಗೆ ಜೀವದಾನಮಾಡುವ ಸುಂದರವಾದ ವಾಣಿಯು ರಾಜನ ಕಿವಿಗಳ ಮೂಲಕ ಹೃದಯವನ್ನು ಸೇರಿದಕೂಡಲೇ ಆತನ ಇಡೀ ದೇಹವು ಬಹು ಸುಂದರವೂ, ಹೃಷ್ಟ-ಪುಷ್ಟವೂ ಆಗಿ, ಆ ರಾಜರಾಣಿಯರಿಬ್ಬರೂ ಆಗ ತಾನೆ ಮನೆಯಿಂದ ಬಂದಿದ್ದಂತೆ ಶೋಭಿಸಲಾರಂಭಿಸಿದರು,

ದೋ॥೧೭೩॥ ಅಮೃತಸಮಾನವಾದ ವಾಕ್ಯಗಳನ್ನು ಕೇಳಿ ಅವರ ಶರೀರಗಳು ಪುಳಕಿತವೂ ಪ್ರಫುಲ್ಲಿತವೂ ಆಗಿ, ಪ್ರೇಮಪ್ರವಾಹವು ಅವರ ಹೃದಯದಿಂದ ಹೊರಸೂಸಿತು. ಆಗ ಅವರಿಬ್ಬರೂ ದಂಡವತ್ಪ್ರಣಾಮಮಾಡಿ ಹೇಳಿದರೇನೆಂದರೆ,—"ಹೇ ಭಕ್ತಜನಕಲ್ಪವೃಕ್ಷನೆ ! ಕಾಮಧೇನುವೆ ! ನಿನ್ನ ಚರಣರಜಗಳಿಗೆ ಬ್ರಹ್ಮ ವಿಷ್ಣು ಮಹೇಶ್ವರರೂ ವಂದಿಸುವರು. ಹೇ ಭಕ್ತಹಿತಕಾರಿ, ಚರಾಚರಗಳ ಸ್ವಾಮಿಯೇ, ನೀನು ಸರ್ವಸುಖದಾಯಕನು ನಿನ್ನ ಸೇವೆ ಮಾಡುವವರಿಗೆ ನೀನು ಸುಲಭಸಾಧ್ಯನು.—ನಮ್ಮ ಪ್ರಾರ್ಥನೆಯನ್ನು ಕೇಳು. ಹೇ ಅನಾಥನಾಥ! ನಿನಗೆ ನಮ್ಮಲ್ಲಿ ಪ್ರೇಮವಿದ್ದರೆ, ಶಿವನ ಮನಸ್ಸಿಗೆ ಗೋಚರವಾಗಿರುವ ನಿನ್ನ ಸ್ವರೂಪವನ್ನು ಎಂದರೆ ನಿನ್ನ ಯಾವ ಸ್ವರೂಪವನ್ನು ನೋಡುವುದಕ್ಕೆ ಮುನಿಜನರು (ವಿವಿಧವಾಗಿ) ಯತ್ನಿಸುವರೋ, ಯಾವುದು ಕಾಗ-ಭುಸುಂಡಿಯ ಮನ-ಮಾನಸಕ್ಕೆ ಹಂಸದಂತಿರುವುದೊ, ಯಾವುದರ ಮಹಿಮೆಯನ್ನು ವೇದಗಳು ಸಗುಣ ಮತ್ತೆ ನಿರ್ಗುಣ ಶಬ್ದಗಳಿಂದ ಮಾಡುತ್ತಿರುವವೋ, ಆ ನಿನ್ನ (ದಿವ್ಯ)ಸ್ವರೂಪವು—ಹೇ ದೀನದುಃಖನಿವಾರಕನೆ !—ನಮ್ಮ ಕಣ್ಣುಗಳಿಗೆ ಗೋಚರವಾಗುವಂತೆ ಅನುಗ್ರಹಿಸು!"—(ಈ ರೀತಿಯಾದ ದಂಪತಿಗಳ ಕೋಮಲವೂ, ನಮ್ರವೂ, ಪ್ರೇಮಪೂರ್ಣವೂ ಆದ ವಚನಗಳನ್ನು ಕೇಳಿ, ಭಕ್ತರ ಹಿತಕಾರಿಯೂ, ಕೃಪಾನಿಧಿಯೂ, ವಿಶ್ವವ್ಯಾಪಿಯೂ ಆದ ಭಗವಂತನು ಪ್ರೀತನಾಗಿ ಪ್ರತ್ಯಕ್ಷ ಪ್ರಕಟನಾದನು.

ದೋ॥೧೭೪॥ ಪರಮಾತ್ಮನ ಆ ದಿವ್ಯ ಶರೀರದ ಶೋಭೆಯನ್ನು ನೋಡಿ ನೀಲಕಮಲಗಳೂ, ನೀಲಮಣಿಗಳೂ ನೀಲ–ನೀರ–ಧರ–ಶ್ಯಾಮನೂ, ನೂರಾರು ಕೋಟಿ ಕಾಮದೇವರೂ ಲಜ್ಜಿತರಾದರು. (ಎಂದರೆ ಆ ದಿವ್ಯ ಶರೀರ ಸೌಂದರ್ಯವು ಎಲ್ಲಿಯೂ ಯಾರಲ್ಲಿಯೂ ಕಂಡು ಬರುವಂತಿರಲಿಲ್ಲ. ಆತನ ಮುಖವು ಶರತ್ಕಾಲದ ಚಂದ್ರನಿಗೆ ಸಮಾನವಾದ ಸೌಂದರ್ಯವುಳ್ಳುದಾಗಿತ್ತು. ಆತನ ಗಲ್ಲ (ಕೆನ್ನೆ) ಗಳೂ, ಗದ್ದವೂ ಸುಂದರವಾಗಿತ್ತು. ಕಂಠವು ಶಂಖದಂತಿದ್ದಿತು. ಆತನಾ ತುಟಿಗಳು ಕೆಂಪಾಗಿಯೂ ದಂತಪಂಕ್ತಿಗಳೂ ನಾಸಿಕವೂ ಸುಂದರವಾಗಿದ್ದವು. ಆತನ ನಗೆಯು ಚಂದ್ರಕಿರಣಗುಚ್ಛಗಳಿಗೆ ನಾಚಿಕೆಯನ್ನುಂಟು ಮಾಡುವಂತಿದ್ದವು. ಆತನ ಕಣ್ಣುಗಳ ಶೋಭೆಯು ನವೀನ ಕಮಲ ಸಮಾನವಾದ ಸೌಂದರ್ಯವುಳ್ಳವುಗಳಾಗಿದ್ದವು. ಆತನ ನೋಟವು ಎಲ್ಲರ ಮನಸ್ಸನ್ನೂ ಹರಣಮಾಡುವಂತಿದ್ದಿತು. ಆತನಾ ಹುಬ್ಬುಗಳು ಕಾಮದೇವನ ಧನುಸ್ಸಿನ ಶೋಭೆಯನ್ನು ಹರಣಮಾಡುವಂತಿದ್ದಿತು. ಮತ್ತೆ ವಿಶಾಲವಾದಾ ಹಣೆಯ ಮೇಲೆ ತಿಲಕವು ಬಹು ಸುಂದರವಾಗಿ ಪ್ರಕಾಶಿಸುತ್ತಿತ್ತು ಕಿವಿಗಳಲ್ಲಿ ಮಕರಾಕೃತಿಯ ಕುಂಡಲಗಳೂ, ತಲೆಯಮೇಲೆ ಮುಕುಟವೂ ಇದ್ದವು ಆತನಾ ಕಪ್ಪಾದ ಗುಂಗುರು ಕೂದಲುಗಳನ್ನು ನೋಡಿದರೆ ಭ್ರಮರಗಳ ಸಮೂಹವೇ ಅಲ್ಲಿ ನೆರೆದಂತಿತ್ತು. ಹೃದಯದಲ್ಲಿ ಶ್ರೀವತ್ಸಚಿನ್ಹೆಯೂ, ಕಂಠದಲ್ಲಿ ಸುಂದರವಾದ ವನಮಾಲೆಯೂ ಮಣಿಹಾರವೂ, ವಿವಿಧಾಭರಣಯುಕ್ತಹಾರಗಳೂ ಶೋಭಿಸುತ್ತಿದ್ದವು. ಸಿಂಹದಂತೆ ಸ್ಕಂಧಗಳಿದ್ದವು ಅವುಗಳ ಮೇಲೆ ಸುಂದರವಾದ ಜನಿವಾರವು ಶೋಭಿಸುತ್ತಿತ್ತು. ಮತ್ತೆ ಭುಜಗಳ ಮೇಲೂ ಸುಂದರವಾದ ಆಭೂಷಣಗಳನ್ನು ಧರಿಸಿದ್ದನು ಆತನ ತೋಳುಗಳು ಆನೆಯ ಸೊಂಡಿಲುಗಳಂತೆ ಸುಂದರವಾಗಿದ್ದವು. ಕಟಿಯಲ್ಲಿ ಅಂಬುಗಳನ್ನೂ ಕೈಯಲ್ಲಿ ಧನುರ್ಬಾಣಗಳನ್ನೂ ಧರಿಸಿದ್ದನು.

ದೋ ॥೧೭೫॥ ಆತನ ಪೀತಾಂಬರದ ಪ್ರಕಾಶವು ವಿದ್ಯುತ್–ಪ್ರಕಾಶಕ್ಕೆ ಲಜ್ಜೆಯನ್ನುಂಟುಮಾಡುವಂತಿತ್ತು. ಆತನ ಹೊಟ್ಟೆಯ ಮೇಲೆ ಮೂರು ರೇಖೆಗಳು ಬಿದ್ದಿದ್ದವು ಆತನ ನಾಭಿಯು ಯಮುನಾತೀರದಲ್ಲಿರುವ ಭ್ರಮರಗಳ ಸೌಂದರ್ಯವನ್ನು ಮುಚ್ಚುವಂತಿದ್ದಿತು. ಮುನಿಗಳ ಮನೋರೂಪಿಯಾದ ಭ್ರಮರಗಳಿಂದ ಮುತ್ತಲ್ಪಟ್ಟಿರುವ ಆತನಾ ಚರಣ ಕಮಲಗಳನ್ನು ವರ್ಣಿಸಲಸಾಧ್ಯವು ಆತನ ಎಡಭಾಗದಲ್ಲಿ ಶೋಭಾರಾಶಿಪೂರ್ಣಳೂ ಜಗತ್ತಿನ ಮೂಲಕಾರಣಳೂ ಆದ ಆದಿಶಕ್ತಿಯು ವಿರಾಜಿಸುತ್ತಿದ್ದಳು. ಆದಿಶಕ್ತಿಸ್ವರೂಪಳಾದ ಯಾವಾಕೆಯ ಅಂಶದಿಂದ ಅನೇಕ ಗುಣಗಣಿಗಳಾದ ಅನೇಕಾನೇಕ ಲಕ್ಷ್ಮಿ, ಪಾರ್ವತಿ, ಮತ್ತೆ ಬ್ರಹ್ಮಾಣಿಯರು, ಉತ್ಪನ್ನವಾಗುವರೋ ಯಾವಾಕೆಯ ಭ್ರೂಯುಗ್ಮಗಳ ವಿಲಾಸಮಾತ್ರದಿಂದಲೆ ಜಗತ್ತು ಅಸ್ತಿತ್ವಕ್ಕೇ ಬರುವುದೋ ಆ ಸೀತಾದೇವಿಯೇ ರಾಮಚಂದ್ರನ ಎಡಪಕ್ಕದಲಿದಳು. ಸೌಂದರ್ಯನಿಧಿಯಾದ ಭಗ

ಂತನ ರೂಪವನ್ನು ನೋಡಿ, ಮನುಮಹಾರಾಯನೂ ಶತರೂಪಾ ದೇವಿಯೂ ವೆಯಿಕ್ಕದೆ ಅಚಲದೃಷ್ಟಿಯುಳ್ಳವರಾದರು. ಪುನಃ ಆ ಅನುಪಮರೂಪವನ್ನು ದರದಿಂದ ನೋಡಿದರು ಮತ್ತೆ ಅಷ್ಟರಿಂದಲೇ ತೃಪ್ತರಾಗದೆ, ಹರ್ಷವಿವಶ ಾಗಿ ಅವರಿಬ್ಬರೂ ತಮ್ಮ ಶರೀರಗಳನ್ನು ಮರೆತು, ತಮ್ಮ ಕೈಯಿಂದ ಭಗ ಂತನ ಪಾದಗಳನ್ನು ಹಿಡಿದುಕೊಂಡು, ಅವುಗಳ ಮೇಲೆ ದಂಡವತ್ ಬಿದ್ದರು. ರುಣಾಪುಂಜನಾದ ಭಗವಂತನು ತನ್ನ ಕಮಲರೂಪ ಕೈಗಳಿಂದ ಅವರ ತಲೆ ಳನ್ನು ಹಿಡಿದೆತ್ತಿದನು.

ದೋ ॥೧೪೮॥ ಅನಂತರ ಕೃಪಾನಿಧಿಯಾದ ಭಗವಾನನು ಅವರನ್ನು ಅರಿತು ಹೇಳಿದುದೇನಂದರೆ.—"(ಹೇ ದಂಪತಿ ಶ್ರೇಷ್ಠರೆ!) ನಾನು ನಿಮ್ಮ ೇಲೆ ಪೂರ್ಣಪ್ರಸನ್ನನಾಗಿರುವೆನೆಂದೂ, ನನ್ನನ್ನು ದಾನವೀರನೆಂದೂ ಭಾವಿಸಿ ಮ್ಮ ಮನಸ್ಸಿಗೆ ಪ್ರಿಯವಾಗಿ ತೋರಿದ ವರವನ್ನು ಬೇಡಿಕೊಳ್ಳಿರಿ" ಈ ರೀತಿ ಯಾದ ಪ್ರಭುವಚನವನ್ನು ಕೇಳಿ ಅರಸನೂ ಅರಸಿಯೂ ಧೈರ್ಯವಂ ತಳೆದು ಜೋಡಿಸಿ ಕೋಮಲವಾಣಿಯಿಂದ—"ಹೇ ನಾಥ! ತಮ್ಮ ಚರಣಕಮಲ ರ್ಶನದಿಂದಲೆ ನಮ್ಮ ಆಶೆಯೆಲ್ಲ ಪೂರ್ಣವಾಯಿತು," ಎಂದರು. ಅನಂತರ ಮನುಮಹಾರಾಯನು, "ಹೇ ಪ್ರಭೊ! ನನ್ನ ಮನಸ್ಸಿನಲ್ಲಿ ಬಹು ದೊಡ್ಡ ಾಲಸೆಯು ಹುಟ್ಟಿದೆ. ಅದು ಸುಗಮವೂ ಆಗಿದೆ, ಮತ್ತೆ ಅಗಮವೂ ಆಗಿದೆ. ದುದರಿಂದ ಅದನ್ನು ಹೇಳಲಾರೆನು. ಹೇ ಸ್ವಾಮಿನ್! ಆ ವರವನ್ನು ಕೊಡು ದು ನಿನಗೆ ಬಹು ಸುಗಮವಾಗಿರುವುದು. ಆದರೆ ನನ್ನ ದೀನಸ್ಥಿತಿಯ ದೆಸೆ ಯಿಂದ ಆ ವರವು ನನಗೆ ದೊರೆಯುವುದು ಬಹು ಕಠಿಣವಾಗಿ ತೋರುವುದು. ರಿದ್ರನು ಕಲ್ಪವೃಕ್ಷವನ್ನು ಹೊಂದಿದಾಗ್ಯೂ ಅದರ (ಕಲ್ಪವೃಕ್ಷದ) ಪ್ರಭಾವ ನ್ನರಿಯದೇ ವಿಶೇಷ ಸಂಪತ್ತನ್ನು ಕೇಳುವುದಕ್ಕೆ ಹೇಗೆ ಸಂಕೋಚಪಟ್ಟು ೊಳ್ಳುವನೊ ಹಾಗೆಯೆ ನನ್ನ ಮನಸ್ಸಿನಲ್ಲಿ (ನಾನು ನಿನ್ನ ಅತುಲ ಪ್ರಭಾವ ನ್ನು ತಿಳಿದುಕೊಂಡಿದ್ದಾಗ್ಯೂ) ನನ್ನ ದೀನ ಸ್ಥಿತಿಯಿಂದ ಸಂದೇಹವು ಹುಟ್ಟಿರು ದು. ಹೇ ಅಂತರ್ಯಾಮಿಯೆ, ನನ್ನ ಮನಸ್ಸಿನಲ್ಲಿರುವುದು ನಿನಗೆ ತಿಳಿದೇ ದೆ. ಆದುದರಿಂದ, ಹೇ ಸ್ವಾಮಿನ್! ನನ್ನ ಮನೋರಥವನ್ನು ಪೂರ್ಣ ಮಾಡು" ಎಂದು ಪ್ರಾರ್ಥಿಸಿದನು. ಆ ಪ್ರಾರ್ಥನೆಯನ್ನು ಕೇಳಿ, ಭಗವಾನನು ರಾಜನ್! ನೀನು ಸಂಕೋಚವನ್ನು ಬಿಟ್ಟು ಕೇಳು. ಏಕೆಂದರೆ ನಾನು ನಿನಗೆ ೊಡಲಾರದ ವಸ್ತುವೇ ಇಲ್ಲ," ಎಂದನು.

ದೋ ॥೧೪೯॥ (ಭಗವಂತನ ಈ ಮಾತುಗಳನ್ನು ಕೇಳಿ) ರಾಯನು ನುಡಿ ದುದೇನಂದರೆ—"ಹೇ ಕೃಪಾನಿಧಿ, ಹೇ ದಾನಶಿರೋಮಣಿ, ಹೇ ನಾಥ ನಾವು ನ್ನೆದುರಿಗೆ ಸತ್ಯವನ್ನೇ ಹೇಳುವೆವು; ಏಕೆಂದರೆ ಸ್ವಾಮಿಯಾದ ನಿನ್ನಿಂದ ನಾವು

ಏನನ್ನು ಮರೆಮಾಚಬಲ್ಲೆವು? ನಮಗೆ ನಿನ್ನಂತಹ ಪುತ್ರನೊಬ್ಬನು ಬೇಕೆಂದು ಅಪೇಕ್ಷಿಸುವೆವು." ಅವರಾ ಭಕ್ತಿಯನ್ನು ನೋಡಿ, ಅವರಾ ಅಮೌಲ್ಯವಾದ ವಚನಗಳನ್ನು ಕೇಳಿ, ಕರುಣಾಸಾಗರನಾದ ಭಗವಂತನು "ಏವಮಸ್ತು (ಹಾಗೆಯೇ ಆಗಲಿ.)ನಾನು ನಿಮ್ಮ ಸಮಾನರಾದ (ಮಾತಾಪಿತೃಗಳನ್ನು) ಎಲ್ಲಿ ಹುಡುಕಲಿ? ಹೇ ರಾಜನ್,ಸ್ವತಃ ನಾನೇ ನಿಮ್ಮ ಪುತ್ರನಾಗಿ ಜನಿಸುತ್ತೇನೆ."ಎಂದು ಹೇಳಿ, ಕರಗಳನ್ನು ಜೋಡಿಸಿಕೊಂಡು ನಿಂತಿದ್ದ ಶತರೂಪ ದೇವಿಯನ್ನು ನೋಡಿ "ಹೇ ದೇವಿ, ನೀನೂ ಬೇಕಾದ ವರವನ್ನು ಕೇಳು," ಎಂದನು. ಆಗ (ಶತರೂಪದೇವಿಯು) ಹೇ ನಾಥ, ಚತುರನಾದ ರಾಜನು ಯಾವ ವರನನ್ನು ಕೇಳಿರುವನೊ, ಹೇ ಕೃಪಾಳು, ಆ ವರವೇ ನನಗೆ ಬಹು ಪ್ರಿಯವಾದುದು. ಹೇ ಪ್ರಭೊ! ಭಕ್ತರಿಗೆ ಹಿತವಾದುದು ನಿನಗೂ ಹಿತಕರವಾಗಿರುವುದು ಆದಾಗ್ಗೂ ನಮ್ಮಂತಹರ ಯಾಚನೆಯು ಬಹು ಅಸಂಬಂದ್ಧವಾಗಿರುವುದು. ಏಕೆಂದರೆ ನೀನು ಬ್ರಹ್ಮಾದಿಗಳ ಸೃಷ್ಟಿಕರ್ತನು, ಜಗತ್ತಿಗೊಡೆಯನು, ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿರುವ ಪರಬ್ರಹ್ಮನು. ನಿನ್ನಾ ಪ್ರಭಾವವನ್ನರಿತು ಮನಸ್ಸಿನಲ್ಲಿ ಸಂದೇಹ ಹುಟ್ಟುತ್ತಿದೆ. ಆದರೆ ನಿನ್ನ ಆ "ಏವಮಸ್ತು" ಎಂಬ ವಾಕ್ಯವೇ (ಸಾಕಾದಷ್ಟು) ಪ್ರಮಾಣವಾಗಿರುವುದು. ಹೇ ನಾಥ, ನಿನ್ನ ನಿಜಭಕ್ತರು ಯಾವ ಸುಖವನ್ನೂ ಯಾವ ಗತಿಯನ್ನೂ ಅಪೇಕ್ಷಿಸುವರೊ,

ದೋ ೧೫೦॥ " ಹೇ ಪ್ರಭೊ! ಅದೇ ಸುಖವೂ, ಅದೇ ಗತಿಯೂ, ಆ ಭಕ್ತಿಯೂ, ಈ ನಿನ್ನ (ಪವಿತ್ರ) ಚರಣಗಳಲ್ಲಿ ಪ್ರೇಮವೂ, ಆ ಜ್ಞಾನವೂ, ಅದೇ ಸ್ಥಿತಿಯೂ ನಮಗೆ ಲಭಿಸುವಂತೆ ದಯೆಯಿಟ್ಟು ಅನುಗ್ರಹಿಸು," ಎಂದಳು. ಈ ರೀತಿಯಾದ ಕೋಮಲವೂ, ಗೂಢವೂ, ರುಚಿರವೂ, ಸುಂದರವೂ ಆದ ವಚನಗಳನ್ನು ಕೇಳಿ ಕೃಪಾಸಾಗರನಾದ ಭಗವಾನನು ಕೋಮಲವಾಣಿಯಿಂದ "ಹೇ ದೇವಿ, ನಿನ್ನಿಂದ ಇಚ್ಛಿತವಾದುದನ್ನೆಲ್ಲ ನಿನಗೆ ಕೊಟ್ಟಿರುವೆನು, ಇದರಲ್ಲಿ ಸಂದೇಹವಿಲ್ಲ. ಹೇ ಮಾತೆ, ನನ್ನ ಕೃಪೆಯಿಂದ ನಿನ್ನ ಅಲೌಕಿಕ ಜ್ಞಾನವೆಂದಿಗೂ ಕ್ಷೀಣವಾಗದು," ಎಂದು ನುಡಿದನು. ಆಗ ಮನುಮಹಾರಾಯನು (ಮತ್ತೊಮ್ಮೆ) ಭಗವಂತನ ಚರಣಗಳಿಗೆ ನಮಿಸಿ, "ಹೇ ಪ್ರಭೊ! ಮತ್ತೊಂದು ನನ್ನ ಪ್ರಾರ್ಥನೆ ಇದೆ. ನನ್ನನ್ನು ಬೇಕಾದವರು ಮಹಾಮೂರ್ಖನೆಂದು ಕರೆದರೂ ಚಿಂತೆಯಿಲ್ಲ. ಆದರೆ ನಿನ್ನ ಚರಣಕಮಲಗಳಲ್ಲಿ ನನಗೆ ಪುತ್ರವಾಂಛಲ್ಯವು (ಪುತ್ರ ಸಂಬಂಧನಾದ ಪ್ರೇಮವು) ಇರಲಿ, ಎಂದರೆ ನಾನು ನಿನ್ನನ್ನು ಪುತ್ರನೆಂತಲೇ ಭಾವಿಸಿ ನಿನ್ನೊಂದಿಗೆ ವುತ್ರಸ್ನೇಹವನ್ನು ಬಳೆಯಿಸುವೆನು ಮತ್ತೆ ಆ ಪ್ರೀತಿಯು, ಮಣಿಯು ವಿನಾ ಸರ್ಪವಿರದಂತೆ, ನೀರಿನ ವಿನಾ ಮೀನು ಇರದಂತೆ, ನಿನ್ನನ್ನಗಲಿ ನಾನಿರಲಾರದಂತೆ ಬೆಳೆಯಲಿ" ಎಂದು ವರವನ್ನು ಕೇಳಿಕೊಂಡು ಆತನು ಪುನಃ ಭಗವಾನನ ಚರಣಗಳನ್ನು ಹಿಡಿದುಕೊಂಡಿದ್ದನು. ಕರುಣಾನಿಧಿ

ಯಾದ ಭಗವಾನನು "ಹಾಗೆಯೆ ಆಗಲಿ! ಈಗ ನೀವು ಇಂದ್ರನ ರಾಜಧಾನಿಗೆ ಹೋಗಿ ಅಲ್ಲಿ ವಾಸಿಸಿರಿ.

ದೋ॥೧೫೨॥ "ಹೇ ತಾತ, ಅಲ್ಲಿ ಕೆಲವು ದಿನಗಳವರೆಗೆ ಶ್ರೇಷ್ಠವಾದ ಭೋಗ ವಿಲಾಸಗಳನ್ನು ಭೋಗಿಸಿರಿ, ಆ ರೀತಿಯಾಗಿ ಕೆಲವು ಕಾಲ ಕಳೆದನಂತರ, ನೀನು ಅಯೋಧ್ಯೆಯ ರಾಜನಾದಾಗ ನಾನು ನಿಮ್ಮ ಪುತ್ರನಾಗಿ ಜನಿಸುವೆನು. ಹೇ ತಾತ! ನಿನ್ನ ಇಚ್ಛೆಯಿಂದ ಮನುಷ್ಯಶರೀರವು ಸಾರ್ಥಕವಾದಂತಾಯಿತು. ನಾನು ನಿಮ್ಮ ಭವನದಲ್ಲಿ ಪ್ರಕಟವಾಗುವೆನು ನಾನು ನನ್ನ ಅಂಶಸಹಿತನಾಗಿ* ದೇಹ ವನ್ನು ಧರಿಸಿ, ಭಕ್ತಜನರಿಗೆ ಸುಖನನ್ನೀಯುವಂತಹ ಘಟನೆಗಳನ್ನು ಮಾಡು ವೆನು. ಆ ಚರಿತ್ರೆಯನ್ನು ಕೇಳಿ ಭಾಗ್ಯಶಾಲಿಗಳಾದ ಜನರು ಮೋಹಮಾಯಾದಿ ಗಳನ್ನು ಬಿಟ್ಟು ಭವಸಾಗರದಿಂದ ಪಾರಾಗುವರು ಯಾರಿಂದ ಇಡೀ ವಿಶ್ವಸೃಷ್ಟಿ ಯಾಗಿರುವುದೊ ಆ ಆದಿಶಕ್ತಿಯು, ಆ ನನ್ನ ಮಾಯೆಯೂ ಆಗ ಅವತರಿಸುವಳು. ನಾನು ನಿನ್ನ ಮನೋರಥವನ್ನು ಪೂರ್ಣಮಾಡುವೆನು ನನ್ನ ಮಾತು ಸತ್ಯ, ಸತ್ಯ, ಎಂಥೆಂದಿಗೂ ಸತ್ಯವಾದುದು," ಎಂದು ಹೇಳುತ್ತ ಕೃಪಾಳುವಾದ ಭಗವಂ ತನು ಅಂತರ್ಧಾನನಾದನು. (ಅನಂತರ) ದಂಪತಿಗಳಿಬ್ಬರೂ ಹೃದಯದಲ್ಲಿ ಭಗ ವದ್ಭಕ್ತಿಪೂರ್ಣರಾಗಿ, ಅದೇ ಆಶ್ರಮದಲ್ಲಿ ಕೆಲವು ದಿನಗಳವರೆಗೆ ಇದ್ದು, ಮುಂದೆ ಸುಸಮಯವನ್ನು ನೋಡಿ ಅನಾಯಾಸದಿಂದ ತಮ್ಮ ಶರೀರಗಳನ್ನು ತ್ಯಜಿಸಿ, ಇಂದ್ರಲೋಕಕ್ಕೆ ಹೋಗಿ ವಾಸಿಸಲಾರಂಭಿಸಿದರು.

(ಪ್ರತಾಪಭಾನು ರಾಯನ ಕಥೆಯು)

ದೋ ॥೧೫೦॥ (ಆಗ ಯಾಜ್ಞವಲ್ಕ್ಯನು ಮತ್ತೆ ಹೇಳಿದುದೇನಂದರೆ) ಹೇ ಭರ ದ್ವಾಜ, ಈ ಅತಿ ಪವಿತ್ರವಾದ ಇತಿಹಾಸವನ್ನು ಮಹಾದೇವನು ಪಾರ್ವತಿಗೆ ಹೇಳಿ ದನು. ಈಗ ರಾಮಜನ್ಮದ ಮತ್ತೊಂದು ಕಾರಣವನ್ನು ಕೇಳು. ಹೇ ಮುನಿಯೆ! ಶಿವನು ಪಾರ್ವತಿಗೆ ಹೇಳಿದ ಮತ್ತೊಂದು ಪವಿತ್ರ ಕಥೆಯನ್ನು ಕೇಳು ಈ ಲೋಕ ದಲ್ಲಿ ಪ್ರಸಿದ್ಧವಾದ ಕೇಕಯವೆಂಬ ದೇಶದಲ್ಲಿ ಸತ್ಯಕೇತುವೆಂಬ ರಾಯನು ಆಳು ತ್ತಿದ್ದನು. ಆತನು ಧರ್ಮಧುರಂಧರನೂ, ನೀತಿನಿಧಿಯೂ, ತೇಜಸ್ವಿಯೂ, ಪ್ರತಾಪಿಯೂ, ಸುಶೀಲನೂ, ಬಲಿಷ್ಠನೂ ಆಗಿದ್ದನು. ಅವನಿಗೆ ಮಹಾ ರಣಧೀ ರರೂ, ಸಕಲ ಗುಣ ಸಂಪನ್ನರೂ ಆದ ಇಬ್ಬರು ವೀರಪುತ್ರರು ಜನಿಸಿದರು.

---

ಸನತ್ಕುಮಾರಸಂಹಿತಾಯಾಂ—"ಶೇಷೋऽಭೂಲ್ಲಕ್ಷ್ಮಣೋ ಲಕ್ಷ್ಮೀರ್ಜಾನಕೀ ಶಂಖ ಚಕ್ರಕೇ। ಜಾತೌ ಭರತಶತ್ರುಘ್ನೌ ದೇವಾಃ ಸರ್ವೇऽಪಿ ವಾನರಾಃ। ತತ್ರ ನರನಾರಾಯಣೋ ದೇವಃ ಶ್ರೀರಾಮ ಇತಿ ವಿಶ್ರುತಃ ॥"—ಅಧ್ಯಾತ್ಮರಾಮಾಯಣೇ ಚ—"ಯೋಗಮಾಯಾಪಿ ಸೀತೇತಿ ಜನಕಸ್ಯಗೃಹೇ ತದಾ। ಉತ್ಪತ್ಸ್ಯತೇ ತಯಾ ಸಾರ್ಧಂ ಸರ್ವಂ ಸಂಪಾದಯಾಮ್ಯ ಹಮ್ ॥" ಇತಿ.

ರಾಜ್ಯಕ್ಕೆ ಅಧಿಕಾರಿಯಾದ ಹಿರಿಯ ಮಗನ ಹೆಸರು ಪ್ರತಾಪಭಾನು, ಎರಡನೆಯ ವನ ಹೆಸರು ಅರಿಮರ್ದನ. ಅವರಿಬ್ಬರೂ ಅತುಲ ಭುಜಬಲ ಪರಾಕ್ರಮಶಾಲಿಗಳಾಗಿ ಯುದ್ಧದಲ್ಲಿ ಅಚಲರಾಗಿರುತ್ತಿದ್ದರು. ಮತ್ತೆ ಅವರಿಬ್ಬರು ಸೋದರರಲ್ಲಿಯೂ ಪರಸ್ಪರ ಪ್ರೇಮವು ದೋಷ ಮತ್ತು ಛಲರಹಿತವಾಗಿದ್ದಿತು. ರಾಜನು ತನ್ನ ಹಿರಿಯಮಗನಿಗೆ ಪಟ್ಟವನ್ನು ಕಟ್ಟಿ ತಾನು ಹರಿಚಿಂತನೆಯಲ್ಲಿ ಮಗ್ನನಾಗಿರಲು ವನಕ್ಕೆ ಹೋದನು.

ದೋ॥೧೫೧॥ ಪ್ರತಾಪಭಾನುರಾಯನು ರಾಜನಾದಾಗ ತನ್ನ ರಾಜ್ಯದಲ್ಲೆಲ್ಲ ಸಂಚರಿಸಿ, ವೇದವಿಧಿಯಿಂದ ಪ್ರಜಾಪರಿಪಾಲನೆ ಮಾಡಲಾರಂಭಿಸಿದನು. (ಆಗ) ಪಾಪವೆಂಬ ಹೆಸರೇ ಇರಲಿಲ್ಲ. ಆ ರಾಯನಿಗೆ ಹಿತಕಾರಿಯಾದ ಶುಕ್ರಸಮಾನನಾದ ಧರ್ಮರುಚಿ ಎಂಬ ಬಹು ಚತುರ ಮಂತ್ರಿಯಿದ್ದನು. ಆ ರಾಯನು ಸ್ವತಃ ರಣಧೀರನೂ, ಬಹು ಪ್ರತಾಪಶಾಲಿಯೂ ಆಗಿದ್ದನು. ಅವನ ಮಂತ್ರಿಯು ಕಾರ್ಯದಕ್ಷನಾಗಿದ್ದನು. ತಮ್ಮನು ಶೂರವೀರನು. ಆ ರಾಯನ ಬಳಿಯಲ್ಲಿ ಚತುರಂಗ ಸೇನಾಬಲವು ಅಪಾರವಾಗಿಯೂ, ಶೂರವೀರರೂ ರಣಧೀರರೂ ಆದ ಭಟರು ಅಗಣಿತರಾಗಿಯೂ ಇದ್ದರು. ಈ ಪ್ರಕಾರವಾದ ಸೇನಾಬಲಯುಕ್ತನಾದ ರಾಯನು ಬಹು ಪ್ರಸನ್ನನಾಗಿ ಮೆರೆಯುತ್ತಿದ್ದನು. ದಿಗ್ವಿಜಯಕ್ಕೋಸುಗ ಅವನು ತನ್ನ ಸೇನೆಯನ್ನು ಸಜ್ಜುಗೊಳಿಸಿಕೊಂಡು, ಒಂದು ದಿನ ಶುಭಮುಹೂರ್ತದಲ್ಲಿ ಜಯಭೇರಿಯನ್ನು ಹೊಡೆಯಿಸಿ ಹೊರಟನು. ಆಗ ಹಲವೆಡೆಗಳಲ್ಲಿ ಯುದ್ಧಗಳಾಗಿ, ಅವನು ಅನೇಕ ರಾಜರನ್ನು ಸೋಲಿಸಿದನು. ಈ ರೀತಿಯಾಗಿ ತನ್ನ ಭುಜಬಲದಿಂದ ಸಪ್ತದ್ವೀಪಗಳನ್ನೂ ತನ್ನ ಸ್ವಾಧೀನಪಡಿಸಿಕೊಂಡು ಎಲ್ಲ ರಾಜರಿಂದಲೂ ಕಪ್ಪಕಾಣಿಕೆಗಳನ್ನು ತೆಗೆದುಕೊಂಡು, ರಾಜ್ಯಗಳನ್ನು ಆಯಾ ರಾಜರಿಗೆ ಹಿಂತಿರುಗಿ ಕೊಟ್ಟುಬಿಟ್ಟನು. ಆ ಸಮಯದಲ್ಲಿ ಇಡೀ ಪೃಥ್ವಿಮಂಡಲಕ್ಕೆ ಪ್ರತಾಪಭಾನುವೊಬ್ಬನೇ ರಾಜನಾಗಿದ್ದನು.

ದೋ ॥೧೫೩॥ ಈ ರೀತಿಯಾಗಿ ಇಡೀ ಜಗತ್ತನ್ನು ತನ್ನ ಭುಜಪರಾಕ್ರಮದಿಂದ ಸ್ವಾಧೀನಪಡಿಸಿಕೊಂಡು, ಪ್ರತಾಪಭಾನುರಾಯನು ಹಿಂತಿರುಗಿ ತನ್ನ ನಗರವನ್ನು ಪ್ರವೇಶಿಸಿ, ಕಾಲಕ್ರಮೇಣ ಅರ್ಥ, ಧರ್ಮ, ಕಾಮಾದಿಗಳನ್ನು ಭೋಗಿಸಲಾರಂಭಿಸಿದನು. ಆ ರಾಯನ ಬಲಸಹಾಯದಿಂದ ಪೃಥ್ವಿಯು ಕಾಮಧೇನುವಿನಂತೆ ಸುಖದಾಯಕವಾಯಿತು : ಪ್ರಜೆಗಳೆಲ್ಲರೂ ದುಃಖರಹಿತರಾಗಿ ಸುಖದಿಂದ ವಾಸಿಸುತ್ತಿದ್ದರು. ಸ್ತ್ರೀ ಪುರುಷರೆಲ್ಲರೂ ಧರ್ಮಾತ್ಮರಾಗಿಯೂ ಸೌಂದರ್ಯವುಳ್ಳವರಾಗಿಯೂ ಇದ್ದರು. ಆ ರಾಯನ ಮಂತ್ರಿಯು ಈಶ್ವರಭಕ್ತನು; ಅವನು ರಾಜನ ಹಿತಕ್ಕೋಸುಗ ಯಾವಾಗಲೂ ನೀತಿಯನ್ನು ಬೋಧಿಸುತ್ತಿದ್ದನು. ಗುರು, ದೇವತೆಗಳು, ಸಂತರು, ಹಿರಿಯರು, ಪೂಜ್ಯರು,—ಇವರುಗಳ ಸೇವೆಯಲ್ಲಿ ರಾಜನು ಸದಾ ಮಗ್ನನಾಗಿರುತ್ತಿದ್ದನು. ವೇದೋಕ್ತವಾದ ರಾಜಧರ್ಮಗಳನ್ನು ರಾಯನು

ಬಹು ಆದರದಿಂದಲೂ ಉಲ್ಲಾಸದಿಂದಲೂ ಅನುಷ್ಠಾನಕ್ಕೆ ತರುತ್ತಿದ್ದನು. ಆತನು ಪ್ರತಿನಿತ್ಯವೂ ದಾನಧರ್ಮಗಳನ್ನು ಮಾಡುತ್ತ, ವೇದ ಮತ್ತು ಪುರಾಣ ಗಳ ಶ್ರವಣಮಾಡುತ್ತಿದ್ದನು. ಮತ್ತೆ ಅನೇಕ ಕೆರೆ, ಕಟ್ಟೆ, ಬಾವಿ, ಸರೋವರ, ಉದ್ಯಾನವನ, ಹೂದೋಟಗಳನ್ನೂ ಬ್ರಾಹ್ಮಣರ ವಾಸಕ್ಕೋಸುಗ ಮನೆಗಳನ್ನೂ, ಹಲವು ತೀರ್ಥಸ್ಥಳಗಳಲ್ಲಿ ಸುಂದರವಾದ ದೇವಾಲಯಗಳನ್ನೂ ಕಟ್ಟಿಸಿದನು.

ದೋ॥೧೮೩॥ ಮತ್ತೆ ಪುರಾಣ ಮತ್ತು ವೇದೋಕ್ತವಾದ ಸರ್ವ ವಿಧವಾದ ಯಜ್ಞಗಳನ್ನೂ ಆ ರಾಯನು ಬಹು ಆದರದಿಂದ ಸಾವಿರ ಸಾವಿರ ಬಾರಿ ಮಾಡಿದನು. ರಾಜನು ಬಹು ದೊಡ್ಡ ಜ್ಞಾನಿಯೂ, ಬುದ್ಧಿವಂತನೂ ಆಗಿದ್ದುದರಿಂದ ಆತನು ತಾನು ಮಾಡಿದ ಕರ್ಮಫಲಾಪೇಕ್ಷೆಯನ್ನು ಮನಸ್ಸಿನಲ್ಲಿ ಧರಿಸಲೇ ಇಲ್ಲ. ಆತನು ಮನೋವಾಕ್ಕಾಯಗಳಿಂದ ಆಚರಿಸುತ್ತಿದ್ದ ಧರ್ಮಕರ್ಮಗಳನ್ನೆಲ್ಲ ವಾಸುದೇವನಿಗೆ ಅರ್ಪಿಸುತ್ತಿದ್ದನು. ಒಂದಾನೊಂದು ದಿನ ರಾಜನು ತನ್ನ ಸುಂದರವಾದ ಕುದುರೆಯನ್ನು ಹತ್ತಿ, ಬೇಟೆಯ ಸಾಮಗ್ರಿಗಳ ಸಮೇತ, ವಿಂಧ್ಯಾಚಲದ ದಟ್ಟವಾದ ಅಡವಿಯನ್ನು ಪ್ರವೇಶಿಸಿದನು. ಅಲ್ಲಿ ಹಲವು ಪವಿತ್ರ ಹರಿಣಗಳನ್ನು ಸಂಹರಿಸಿ, ಕೊನೆಗೆ ಅಲ್ಲಲ್ಲಿ ಸಂಚರಿಸುತ್ತ ಒಂದು ಸೂಕರವನ್ನು ನೋಡಿದನು. ಆ ಮೃಗವು ನೋಡುವುದಕ್ಕೆ ಚಂದ್ರನನ್ನು ಗ್ರಾಸವಾಗಿ ಸ್ವೀಕರಿಸುವ ರಾಹುವಿನಂತೆ ಕಾಣಿಸುತ್ತಿತು ; ಮತ್ತೆ ಚಂದ್ರನು ಅದರ ಬಾಯಿಗಿಂತಲೂ ದೊಡ್ಡವನಾಗಿದ್ದುದರಿಂದ ಅದರ ಬಾಯೊಳಗೆ ಹಿಡಿಸಲಾರದೆ ಹೊರಕ್ಕೆ ನುಸಿದುಕೊಳ್ಳುತಿರುವಂತೆಯೂ, ಆ ಮೃಗವು ಕ್ರೋಧದಿಂದ ಅವನನ್ನು ತನ್ನ ಬಾಯಲ್ಲಿ ಹಿಡಿದಿರುವಂತೆಯೂ ಕಾಣಿಸುತಿತ್ತು ; ಅರ್ಥಾತ್ ಚಂದ್ರನು ಶ್ವೇತವರ್ಣನು, ರಾಹುವು ಕೃಷ್ಣವರ್ಣನು. ಆ ಕಾಳರಾಹುವಿನ (ಸೂಕರದ) ಮುಖದಲ್ಲಿ ಗುಂಡಾದ ದಾಡೆಗಳು ಶ್ವೇತಚಂದ್ರನಂತೆ ಹೊಳೆಯುತ್ತಿದ್ದವು. ಆ ಭಯಂಕರ ದಂತಗಳಿಂದ ಶೋಭಿಸುತ್ತಿದ್ದ ಆ ಮೃಗದ ಶರೀರವು ವಿಶಾಲವಾಗಿಯೂ. ಎತ್ತರವಾಗಿಯೂ ಇದ್ದಿತು. ಕುದುರೆಯು ಬರುತ್ತಿರುವ ಶಬ್ದವನ್ನು ಕೇಳಿ, ಅದು ಗರ್ಜಿಸಿ, ಕಿವಿಗಳನ್ನೆತ್ತಿ, ಆಶ್ಚರ್ಯದಿಂದ ನೋಡುತ್ತ ನಿಂತಿತು.

ದೋ ॥೧೮೪॥ ನೀಲಪರ್ವತ ಶಿಖರಕ್ಕೆ ಸಮಾನವಾದ ಆ ದೊಡ್ಡ ಸೂಕರವನ್ನು ನೋಡಿ ರಾಜನು ತನ್ನ ಕುದುರೆಯನ್ನು ವೇಗವಾಗಿ ಓಡಿಸಿದನು. ಕುದುರೆಯ ಖುರಧ್ವನಿಯು ಸಮೀಪದಲ್ಲಿ ಆಗುತ್ತಿರುವುದನ್ನು ಕೇಳಿದ ಕೂಡಲೆ ಆ ಕಾಡುಹಂದಿಯು ವಾಯುವೇಗದಿಂದ ಓಡಿಹೋಯಿತು. ತಕ್ಷಣದಲ್ಲಿ ರಾಜನು ಬಾಣಗಳನ್ನು ಬಿಟ್ಟನು. ಬಾಣಗಳನ್ನು ನೋಡಿದ ಕೂಡಲೆ ಆ ಮೃಗವು ನೆಲದ ಮೇಲೆ ಮಲಗಿಕೊಂಡುಬಿಟ್ಟಿತು ಆನಂತರ ರಾಜನು ಗುರಿಯಿಟ್ಟು ಎಷ್ಟು ಬಾಣಗಳನ್ನೆಸೆದರೂ ಆ ಮೃಗವು ತಪ್ಪಿಸಿ

ಕೊಳ್ಳುತ್ತ ಮೋಸದಿಂದ ತನ್ನ ಶರೀರವನ್ನು ಪೆಟ್ಟಿನಿಂದ ರಕ್ಷಿಸಿಕೊಳ್ಳುತ್ತ, ಕೆಲವು ಸಮಯದಲ್ಲಿ ಕಾಣಿಸಿಕೊಳ್ಳುತ್ತ, ಮತ್ತೆ ಕೆಲವು ಸಮಯದಲ್ಲಿ ಅಡಗಿಕೊಳ್ಳುತ್ತ ಓಡಿ ಹೋಯಿತು. ರಾಜನೂ ಕ್ರೋಧಪೂರ್ಣನಾಗಿ ಅದರ ಹಿಂದೆಯೇ ಓಡಿದನು. ಆ ಸೂಕರವು ಓಡುತ್ತ ಓಡುತ್ತ, ಕುದುರೆಯಾಗಲಿ ಆನೆಯಾಗಲಿ ಪ್ರವೇಶಿಸಲಾಗದಂತಹ ದಟ್ಟವಾದ ಕಾಡಿನೊಳಗೆ ಪ್ರವೇಶಿಸಿ ಬಿಟ್ಟಿತು. ಆಗ ರಾಜನೂ ಒಬ್ಬಂಟಿಗನಾದಾಗ್ಯೂ, ಬಹು ಕಷ್ಟಗಳನ್ನು ಸಹಿಸುತ್ತ ಆ ಮೃಗದ ಹಿಂದೆಯೆ ಹೋದನು. ಅವನು ಧೈರ್ಯದಿಂದ ಮುಂದುವರಿದುದನ್ನು ನೋಡಿ ಆ ಸೂಕರವು ಅಲ್ಲಿದ್ದ ಪರ್ವತದ ಗಹನವಾದ ಗುಹೆಯೊಂದರಲ್ಲಿ ಪ್ರವೇಶಿಸಿತು. ಆಗ ಅಲ್ಲಿಗೆ ಹೋಗಲು ಮಾರ್ಗವನ್ನರಿಯದೇ, ರಾಜನು ಪಶ್ಚಾತ್ತಾಪದಿಂದ, ಹಿಂದಿರುಗಿದನು.

(ಕಪಟ ಮುನಿಯ ಚರಿತ್ರೆ)

ದೋ ॥೧೫೫॥ ಆನಂತರ ರಾಜನು ದುಃಖಿತನಾಗಿ ಆಯಾಸದಿಂದಲೂ, ಹಸಿವೆಯಿಂದಲೂ, ಬಾಯಾರಿಕೆಯಿಂದಲೂ ಬಳಲಿ, "ನದಿಯಾಗಲಿ, ಕೆರೆಯಾಗಲಿ ಸಿಕ್ಕರೆ ಸಾಕೆಂದು" ಹುಡುಕುತ್ತ ಸಂಚರಿಸುತ್ತಿರುವಾಗ ಒಂದು ಆಶ್ರಮವನ್ನು ಕಂಡನು. ಅಲ್ಲಿ ಒಬ್ಬ ರಾಜನು ಕಪಟದಿಂದ ಮುನಿಯಂತೆ ವೇಷವನ್ನು ಧರಿಸಿ ವಾಸಿಸುತ್ತಿದ್ದನು. ಆ ರಾಯನ ರಾಜ್ಯವನ್ನು ಇವನು (ಪ್ರತಾಪ ಭಾನುವು) ಅಪಹರಿಸಿದ್ದನು. ಆ ರಾಯನು ಯುದ್ಧದಲ್ಲಿ ಸೋತು ಸೈನ್ಯಸಮೇತನಾಗಿ ಓಡಿಹೋಗಿ, ಅಭಿಮಾನದಿಂದ ತನ್ನ ಊರಿಗೆ ಹಿಂತಿರುಗದೇ, "ಇದು ಪ್ರತಾಪ ಭಾನುವಿಗೆ ಕಾಲವು, ಇನ್ನು ನನಗೂ ಒಳ್ಳೆಯ ಕಾಲವು ಬಂದೀತು" ಎಂದುಕೊಂಡು, ಕಪಟದಿಂದ ಮುನಿವೇಷವನ್ನು ಧರಿಸಿ ವನವಾಸಿಯಾಗಿದ್ದನು. ಪ್ರತಾಪಭಾನುರಾಜನು ಅವನ ಬಳಿಗೆ ಹೋದಕೂಡಲೆ ಕಪಟಮುನಿಯು ಅವನನ್ನು ಗುರುತಿಸಿದನು. (ಆದರೆ) ರಾಜನು ಬಾಯಾರಿ ಬಳಲಿದ್ದುದರಿಂದ ಮುನಿಯ ವೇಷವನ್ನು ಕಂಡು, ಅವನು ಮಹಾ ಮುನಿಯಾಗಿರಬೇಕೆಂದು ಭಾವಿಸಿ, ಕುದುರೆಯಿಂದಿಳಿದು, ಕಪಟ ಮುನಿಗೆ ಪ್ರಣಾಮ ಮಾಡಿದನು. ಆದರೆ ಚತುರನಾದ ಕಪಟ ಮುನಿಯು ತನ್ನ ಹೆಸರನ್ನು ಹೇಳಲಿಲ್ಲ.

ದೋ ॥೧೫೬॥ ತೃಷಿತನಾದ ರಾಜನಿಗೆ ಮುನಿಯು ಒಂದು ಸರೋವರವನ್ನು ತೋರಿಸಿದನು. ರಾಜನು ಅಶ್ವಸಮೇತನಾಗಿ ಅಲ್ಲಿಗೆ ಹೋಗಿ ಸ್ನಾನ, ಜಲಪಾನಾದಿಗಳನ್ನು ಮಾಡಿದನು. ದಣಿವಾರಿಸಿಕೊಂಡು ರಾಜನು ಪ್ರಸನ್ನಚಿತ್ತನಾದನಂತರ, ಅವನನ್ನು ಮುನಿಯು ತನ್ನ ಆಶ್ರಮಕ್ಕೆ ಕರೆದುಕೊಂಡು ಬಂದು, ಆಗ ಸೂರ್ಯಾಸ್ತ ಸಮಯವಾದುದರಿಂದ ಕುಳಿತುಕೊಳ್ಳುವುದಕ್ಕೆ ಅವನಿಗೆ (ರಾಜನಿಗೆ) ಆಸನವನ್ನು ಕೊಟ್ಟು ಕೋಮಲವಾಣಿಯಿಂದ,– "ಅಯ್ಯಾ! ನೀನಾರು? ಒಬ್ಬನೇ ವನದಲ್ಲೇಕೆ ಸಂಚರಿಸುತ್ತಿರುವಿ? ಸುಂದರನೂ ಯುವ

ಕನೂ ಆದ ನೀನು ಏಕೆ ಕಷ್ಟಕ್ಕೊಳಗಾಗಿರುವೆ ? ನಿನ್ನ ಮುಖದಲ್ಲಿರುವ ರಾಜ ಲಕ್ಷಣಗಳನ್ನು ನೋಡಿ ನಿನ್ನಲ್ಲಿ ಕರುಣೆಯುಂಟಾಗಿದೆ" ಎಂದು ನುಡಿದನು. (ಆಗ) ರಾಜನು– "ಹೇ, ಮುನೀಶ ! ನಾನು ಪ್ರತಾಪಭಾನುವೆಂಬ ರಾಜನ ಮಂತ್ರಿಯು. ಮೃಗಬೇಟೆಗಾಗಿ ಬಂದ ನಾನು ದಾರಿ ತಪ್ಪಿದೆನು. ನನ್ನ ಪುಣ್ಯ ಬಲದಿಂದ ತಮ್ಮ ದರ್ಶನ ಲಾಭವಾಯಿತು. ಮಹಾಶಯ, ನಮ್ಮಂತಹರಿಗೆ ತಮ್ಮ ದರ್ಶನವಾಗುವುದು ದುರ್ಲಭವು. ನನಗೆ ಪ್ರಾಪ್ತವಾದ ದರ್ಶನವು ಮುಂದಾಗುವ ಶುಭಸೂಚನೆಯಾಗಿದೆ" ಎಂದನು. ಆಗ ಮುನಿಯು–" ಹೇ ಮಿತ್ರ ! ಈಗ ರಾತ್ರಿಯಾಗಿದೆ. ನಿನ್ನ ನಗರವು ಇಲ್ಲಿಂದ ಎಪ್ಪತ್ತು ಯೋಜನ ದೂರದಲ್ಲಿರುವುದು.

ದೋ ॥೧೬೭॥ "ಹೇ ಚತುರ, ಈ ರಾತ್ರಿಯಲ್ಲಿ ಕತ್ತಲು ಕವಿದಿದೆ. ಈ ಕಾಡು ದಟ್ಟವಾಗಿದೆ. ಇಲ್ಲಿ ಕಾಲುದಾರಿಯ (ಗುರುತೂ) ಇಲ್ಲ. ಆದುದರಿಂದ ಈ ರಾತ್ರಿ ಇಲ್ಲಿಯೆ ಇದ್ದು ಬೆಳಕು ಹರಿಯುತ್ತಲೆ ಮನೆಗೆ ತೆರಳಬಹುದು" ಎಂದನು. (ಪ್ರಿಯಪಾಠಕರೆ !) ಶ್ರೀ ತುಳಸಿ ದಾಸರು ಹೇಳುತ್ತಾರೆ (ಕೇಳಿರಿ) ಯಾವುದು ಆಗಬೇಕಾಗಿರುವುದೊ ಅದಕ್ಕೆ ಬೇಕಾದ ಸಹಾಯವು (ಸಹಜವಾಗಿ) ಸಿಕ್ಕುವುದು. ಯಾವ ಕಾರ್ಯವು ಎಲ್ಲಿ ಆಗಬೇಕೊ ಅಲ್ಲಿಗೆ ವಿಧಿಯು ಮನುಷ್ಯನನ್ನು ಕೊಂಡೊಯ್ಯುವುದು.– ಮುನಿಯ ಮಾತಿಗೆ ರಾಜನು ಒಪ್ಪಿಕೊಂಡು ಕುದುರೆಯನ್ನು ಒಂದು ಮರದಡಿಯಲ್ಲಿ ಕಟ್ಟಿ, ತಾನು ಮುನಿಯ ಬಳಿಯಲ್ಲಿ ಅಂಜಲೀ ಬದ್ಧನಾಗಿ ಕುಳಿತು, ಕೋಮಲವಾಣಿಯಿಂದ–" ಹೇ ಮುನೀಶ ! ತಾವು ನನ್ನ ಪಿತೃ ಸಮಾನರೆಂದು ಭಾವಿಸಿರುವೆನು. ತಾವು ನನ್ನನ್ನು ಪುತ್ರ ಅಥವಾ ಸೇವಕನೆಂದು ಭಾವಿಸಿ ತಮ್ಮ ಹೆಸರನ್ನು ಹೇಳಬೇಕು" ಎಂದನು. ರಾಜನು ಮುನಿಯನ್ನ ಗುರುತಿಸದಿದ್ದರೂ, ಮುನಿಯು ಅವನನ್ನು ಗುರುತಿಸಿದ್ದನು. ರಾಜನ ಹೃದಯವು ನಿರ್ಮಲವಾಗಿದ್ದುದು, ಮುನಿಯು ಚತುರನೂ ಕಪಟಿಯೂ ಆಗಿದ್ದನು. ಒಂದು ರೀತಿಯಿಂದ ಮುನಿಯು ರಾಯನ ಶತ್ರು, ಇದರ ಜತೆಗೆ ಅವನು ಕ್ಷತ್ರಿಯನು, ರಾಜನು. ಆದುದರಿಂದ ಕಾಪಟ್ಯಬಲದಿಂದ ತನ್ನ ಕಾರ್ಯಸಿದ್ಧಿಯನ್ನು ಮಾಡಿಕೊಳ್ಳಲು ಅವನು (ಮುನಿಯು) ಹವಣಿಸುತ್ತಿದ್ದನು. ಆ ಶತ್ರುವು ರಾಜ್ಯಸುಖವಂ ಸ್ಮರಿಸಿಕೊಂಡು ದುಃಖಿತನಾದನು, ಅವನ ಎದೆಯಲ್ಲಿ ಉರಿಯೆದ್ದಿತು. ರಾಜನ ಸರಳವೂ ಮೃದುವೂ ಆದ ವಚನಗಳನ್ನು ಕೇಳಿ, ಹಿಂದಣ ತನ್ನ ವೈರಭಾವವನ್ನು ಸ್ಮರಿಸಿಕೊಂಡು, ಮನಸ್ಸಿನಲ್ಲಿಯೆ ಪ್ರಸನ್ನನಾದನು.

ದೋ ॥೧೬೮॥ (ಅನಂತರ) ಅವನು (ಮುನಿಯು) ಕಪಟಯುಕ್ತಿ ಪೂರ್ಣವಾದ ಕೋಮಲ ವಚನಗಳಿಂದ "ನನ್ನ ಹೆಸರು ಭಿಕ್ಷುಕ, ನನ್ನಲ್ಲಿ ಧನವಿಲ್ಲ, ನನಗೆ ಮನೆಯಿಲ್ಲ" ಎಂದು ನುಡಿದನು. (ಅದನ್ನು ಕೇಳಿ) ರಾಜನು. "ಜ್ಞಾನಿಗಳು ನಿಮ್ಮಂತೆ ನಿರಭಿಮಾನಿಗಳಾಗಿ, ಸದಾ ಗುಪ್ತರಾಗಿರುವರು. ಅವರ ದೀನ

ವೇಷದಿಂದಲೆ ಅವರಿಗೆ ಕಲ್ಯಾಣವಾಗುವುದು, ಅಥವಾ ಅವರು ಚತುರರಾಗಿದ್ದರೂ, ಕುವೇಷದಲ್ಲಿಯೆ ಕಾಲ ಕಳೆಯುವರು. ಆದುದರಿಂದ ಭಕ್ತರು ಭಗವಂತನಿಗೆ ಪ್ರಿಯರೆಂದು ವೇದಗಳೂ ಸಂತರೂ ಸಾರುತ್ತಿರುವರು. ನಿಮ್ಮಂತಹ ಭಿಕ್ಷುಕ ಮತ್ತು ಮನೆಬಾಗಿಲುಗಳಿಲ್ಲದ ಜನರನ್ನು ನೋಡಿ ಬ್ರಹ್ಮರುದ್ರಾದಿಗಳಿಗೆ ಕೂಡ ಸಂದೇಹವುಂಟಾಗುವುದು. (ಏಕೆಂದರೆ ನಿಮ್ಮಲ್ಲಿ ಅತುಳ ಶಕ್ತಿಯಿರುವುದು) ತಾವು ಯಾರೇ ಇರಲಿ, ನಿಮ್ಮ ಚರಣಗಳಿಗೆ ನಾನು ವಂದಿಸುವೆನು. ಹೇ ಸ್ವಾಮಿನ್, ತಾವು ಈಗ ನನ್ನ ಮೇಲೆ ಅನುಗ್ರಹವಿಡಬೇಕು" ಎಂದನು. ಈ ರೀತಿಯಾದ ರಾಜನ ಸ್ವಾಭಾವಿಕ ಪ್ರೀತಿಯನ್ನೂ ವಿಶ್ವಾಸವನ್ನೂ ನೋಡಿ, ಅವನನ್ನು ಸಂಪೂರ್ಣವಾಗಿ ಸ್ವಾಧೀನಪಡಿಸಿಕೊಳ್ಳಬೇಕೆಂಬ ಉದ್ದೇಶದಿಂದ ಅಧಿಕ ಪ್ರೇಮವನ್ನು ನಟಿಸುತ್ತಿದ್ದ ಮುನಿಯು ಅವನನ್ನು ಕುರಿತು,— "ಹೇ ರಾಜನ್! ಕೇಳು, ನಾನು ಸತ್ಯವನ್ನೇ ನುಡಿಯುವೆನು. ಬಹು ಕಾಲದಿಂದ ನಾನು ಇಲ್ಲಿಯೆ ವಾಸಿಸುತ್ತಿರುವೆನು.

ದೋ॥ ೧೬೦ ॥ "ಈವರೆಗೆ ಇಲ್ಲಿ ನಾನಾವ ನರಪ್ರಾಣಿಯನ್ನೂ ನೋಡಿಲ್ಲ. ನನ್ನ ರಹಸ್ಯವನ್ನಾರಿಗೂ ಹೇಳಿಲ್ಲ. ಏಕೆಂದರೆ ಸಂಸಾರ ಪ್ರತಿಷ್ಠೆಯು ಅಗ್ನಿಯಂತಿರುವುದು, ಅದು ತಪೋರೂಪಿಯಾದ ವನವನ್ನು ಭಸ್ಮಮಾಡಿಬಿಡುವುದು."— (ಮತ್ತೆ) ತುಳಸೀದಾಸರು ಹೇಳುತ್ತಾರೆ, ಕೇಳಿರಿ—ಮೇಲೆ ಹೇಳಿದಂತಹ ಬಹಿರಂಗ ವೇಷವನ್ನು ನೋಡಿ ಮೂರ್ಖರು ಮೋಸಹೋಗುವರು, ಜಾಣರು ಮೋಸಕ್ಕೊಳಗಾಗಲಾರರು. ನವಿಲು ಎಂತಹ ಮಧುರವಾಣಿಯನ್ನಾಡುವುದು, ಆದರೆ ಅದು ಹಾವನ್ನು ತಿನ್ನುವುದು.—(ಆ ಮುನಿಯು ಮತ್ತೆ ಹೇಳಿದುದೇನಂದರೆ)—"ಅದಕ್ಕೋಸುಗ ನಾನು ಸಂಸಾರದಿಂದ ಅಲಿಪ್ತನಾಗಿ, ಗುಪ್ತನಾಗಿ ವಾಸಿಸುತ್ತಿರುವೆನು. ದೇವರನ್ನುಳಿದು ಮತ್ತಾರೊಂದಿಗೂ ನನ್ನ ಸಂಬಂಧವಿರುವುದಿಲ್ಲ. ಭಗವಂತನು ಮಾತ್ರ ಯಾವ ಸಾಹಾಯವನ್ನೂ ಅಪೇಕ್ಷಿಸದೇ ಎಲ್ಲವನ್ನೂ ತಾನಾಗಿ ಅರಿತುಕೊಳ್ಳುವನು. (ನಾನು) ಸಂಸಾರವನ್ನು ಪ್ರೀತಿಸುವುದರಿಂದಾವ ಸಿದ್ಧಿಯಾಗುವುದು? ನೀವು ಪವಿತ್ರರು, ಸುಂದರರು, ನನಗೆ ಪ್ರಿಯರು. ನೀವು ನನ್ನಲ್ಲಿ ಪ್ರೀತಿಯನ್ನೂ ವಿಶ್ವಾಸವನ್ನೂ ಇಟ್ಟಿರುವಿರಿ. ನಿಮ್ಮಿಂದ ನನ್ನ ವಿಷಯವನ್ನು ಗುಪ್ತವಾಗಿಟ್ಟರೆ ದೋಷಬರುವುದು" ಈ ರೀತಿಯಾದ ಮುನಿಯ ವೈರಾಗ್ಯದ ಮಾತುಗಳನ್ನು ಕೇಳುತ್ತ ಕೇಳುತ್ತ ರಾಜನ ವಿಶ್ವಾಸವು ವೃದ್ಧಿಯಾಗುತ್ತ ಬಂದಿತು. ಆ ಕಪಟ ವೇಷಧಾರಿಯಾದ ಮುನಿಯು ಎಲ್ಲ ವಿಧದಿಂದಲೂ ರಾಜನು ತನ್ನ ವಶನಾದನೆಂದು ತಿಳಿದ ಕೂಡಲೆ,—"ಭ್ರಾತೃವೆ! ನನ್ನ ಹೆಸರು ಏಕತನು (ಏಕಶರೀರ)" ಎಂದನು. ಅದನ್ನು ಕೇಳಿ ರಾಜನು ತಲೆವಾಗಿ, "ಮುನೀಶ, ನಾನು ತಮ್ಮ ಕೇವಲ ವಿಧೇಯನಾದ ಸೇವಕನೆಂದು ಭಾವಿಸಿ ಈ ಹೆಸರಿನ ಅರ್ಥವನ್ನು ಹೇಳಬೇಕು", ಎಂದನು.

ದೋ ॥೧೯೩॥ (ಆಗ ಮುನಿಯು)—"ಹೇ ರಾಜನ್! ಎಲ್ಲಕ್ಕೂ ಮೊದಲಾದ ಸೃಷ್ಟಿಯ ಸಮಯದಲ್ಲಿಯೆ ನಾನು ಹುಟ್ಟಿದೆನು. ಅನಂತರ ನಾನು ಎರಡನೆಯ ಶರೀರವನ್ನು ಧರಿಸದಿದ್ದುದರಿಂದ ನನಗೆ ಏಕತನುವೆಂಬ ಹೆಸರು ಬಂದಿತು. ಹೇ ಪುತ್ರ, ಇದನ್ನು ಕೇಳಿ ಆಶ್ಚರ್ಯ ಪಡಬೇಡ. ತಪಸ್ಸಿಗೆ ಅಸಾಧ್ಯವಾದುದಾವುದೂ ಇಲ್ಲ. ತಪೋಬಲದಿಂದಲೆ ಬ್ರಹ್ಮನು ಜಗತ್ತನ್ನು ಸೃಷ್ಟಿಸಿರುವನು, ಮತ್ತೆ ತಪೋಬಲದಿಂದಲೇ ವಿಷ್ಣುವು ಜಗತ್ತನ್ನು ಪಾಲಿಸುತ್ತಿರುವನು, ತಪೋಬಲದಿಂದಲೇ ಶಿವನು ಸಂಸಾರ ಸಂಹಾರವಂ ಮಾಡುತ್ತಿರುವನು." ಎಂದನು. ಅದನ್ನು ಕೇಳಿ ರಾಜನಲ್ಲಿ ಪ್ರೀತಿಯು ಮತ್ತಷ್ಟು ಹೆಚ್ಚಾದುದನ್ನರಿತು ಆ ಮುನಿಯು ತನ್ನ ಹಿಂದಣ ಕಥೆಯನ್ನು ಮುಂದುವರಿಸಿ, ಅನೇಕ ಕರ್ಮ, ಧರ್ಮ, ಇತಿಹಾಸ, ವೈರಾಗ್ಯ, ಮತ್ತು ನಿವೃತ್ತಿಮಾರ್ಗ ವಿಚಾರವರ್ಣನೆಗಳನ್ನೂ ಜಗತ್ತಿನ ಉತ್ಪತ್ತಿ, ಸ್ಥಿತಿ, ಪ್ರಳಯಗಳ ಆಶ್ಚರ್ಯಪೂರ್ಣವಾದ ಕಥೆಗಳನ್ನೂ ಹೇಳಿದನು. ಇವುಗಳ ಶ್ರವಣಮಾತ್ರದಿಂದ ರಾಜನು ಮುನಿವಶನಾದನು. ಆಗ ಮುನಿಯು, "ಅಯ್ಯಾ! ನೀನು ರಾಜನೆಂದು ನನಗೆ ಮೊದಲೇ ಗೊತ್ತಿತ್ತು. ಮೊದಲು ಆ ವಿಷಯವನ್ನು ಮರೆಮಾಚಿದ್ದರೂ ನಿನ್ನಲ್ಲಿ ನನಗೆ ಪ್ರೀತಿಯುಂಟಾಗಿದೆ.

ಸೋ॥೧೯೪॥ "ಹೇ ರಾಜನ್, ರಾಜರು ಪರಿಚಯವಿಲ್ಲದ ಸ್ಥಳದಲ್ಲಿ ತಮ್ಮ ಹೆಸರನ್ನು ಹೇಳದಿರುವುದು ನೀತಿಶಾಸ್ತ್ರ ಸಮ್ಮತವಾದುದು. ನಿನ್ನ ಚಾತುರ್ಯವನ್ನು ಕಂಡು ನಾನು ಬಹು ಪ್ರಸನ್ನನಾಗಿರುವೆನು ನಿನ್ನ ಹೆಸರು ಪ್ರತಾಪಭಾನು, ನಿನ್ನ ತಂದೆಯ ಹೆಸರು ಸತ್ಯಕೇತುರಾಜನು. ಹೇ ರಾಜನ್! ಶ್ರೀ ಗುರುಕೃಪೆಯಿಂದ ನನಗೆ ಎಲ್ಲವೂ ತಿಳಿದಿರುವುದು ಆದರೆ ನಾನು ಸಿದ್ಧಪುರುಷನಾಗಿ ಸ್ವಂತ ಹಾನಿಯನ್ನುಂಟುಮಾಡಿಕೊಳ್ಳಬಾರದೆಂದು ತಿಳಿದು ಆರೊಂದಿಗೂ ಮಾತನಾಡುವುದಿಲ್ಲ. ಅಯ್ಯಾ! ನಿನ್ನ ಸರಳಸ್ವಭಾವವನ್ನೂ, ಸ್ನೇಹವನ್ನೂ, ವಿಶ್ವಾಸವನ್ನೂ, ನೀತಿಚಾತುರ್ಯವನ್ನೂ ನೋಡಿ, ನಿನ್ನ ವಿಚಾರದಲ್ಲಿ ಮಮತೆಯು ಹುಟ್ಟಿರುವುದು. ಆದುದರಿಂದ ನಿನ್ನ ಕೋರಿಕೆಯಂತೆ ನನ್ನ ಕಥೆಯನ್ನು ಹೇಳುತ್ತಿರುವೆನು. ಹೇ ರಾಜನ್! ನಾನು ನಿಸ್ಸಂದೇಹವಾಗಿ ನಿನ್ನ ಮೇಲೆ ಪ್ರಸನ್ನನಾಗಿರುವೆನು. ಈಗ ಬೇಕಾದ ವರವನ್ನು ಬೇಡು!" ಎಂದು ನುಡಿದ ಕೂಡಲೆ ರಾಯನು ಮುನಿಯ ಚರಣಗಳಂ ಪಿಡಿದು, "ಹೇ ಕೃಪಾಸಾಗರ! ಹೇ ಮುನಿ! ತಮ್ಮ ದರ್ಶನದಿಂದ ಧರ್ಮ ಅರ್ಥ, ಕಾಮ, ಮೋಕ್ಷವೆಂಬ (ಚತುರ್ವಿಧ) ಪುರುಷಾರ್ಥಗಳು ನನ್ನ ಕೈಸೇರಿದಂತಾದವು. ಆದಾಗ್ಯೂ ತಾವು ಪ್ರಸನ್ನರಾಗಿರುವುದರಿಂದ ಒಂದು ವರವನ್ನು ಕೇಳಿ ನಾನು ಶೋಕರಹಿತನಾಗುತ್ತೇನೆ. (ಹೇ ಮುನಿರಾಜ!) ನನ್ನ ಶರೀರಕ್ಕೆ ವೃದ್ಧಾಪ್ಯವೂ ಮರಣದುಃಖವೂ ಬಾರದಿರುವಂತೆ ಎಂದರೆ ನಾನು ಅಮರನಾಗುವಂತೆಯೂ, ಯುದ್ಧದಲ್ಲಿ ನನ್ನನ್ನು ಯಾರೂ ಗೆಲ್ಲಲಾರದಂತೆಯೂ ನೂರು ಕಲ್ಪಗಳವರೆಗೆ ಶತ್ರುಹೀನನಾಗಿ ಪೃಥ್ವಿಯ

ಮೇಲೆ ನನ್ನ ಏಕಛತ್ರಾಧಿಪತ್ಯವನ್ನು ಮೆರೆಯಿಸುವಂತೆಯೂ ವರವನ್ನು ಅನುಗ್ರಹಿಸಬೇಕು." ಎಂದನು. ಅದನ್ನು ಕೇಳಿ ಮುನಿಯು, 'ಹೇ ರಾಜನ್ ! ಹಾಗೆಯೆ ಆಗಲಿ. ಆದರೆ ಇದರಲ್ಲಿ ಒಂದು ಆತಂಕವಿರುವುದು. ಅದನ್ನೂ ಕೇಳಿಕೊ. ಬ್ರಾಹ್ಮಣ ಕುಲವೊಂದನ್ನು ಮಾತ್ರ ಬಿಟ್ಟು, ಕಾಲಪುರುಷನೂ ನಿನ್ನಡಿಗಳ ಮೇಲೆ ಶಿರವಿಟ್ಟು ವಂದಿಸಬಹುದು. (ಆದರೆ ಬ್ರಾಹ್ಮಣಕುಲವು ನಿನ್ನ ವಶವಾಗಲಾರದು.) ಏಕೆಂದರೆ ಬ್ರಾಹ್ಮಣರು * ತಪೋಬಲದಿಂದ ಸದಾ ಶಕ್ತಿಯುತರಾಗಿರುವರು. ಅವರ ಕೋಪಕ್ಕೆ ಪಾತ್ರರಾಗಿ ಯಾರೂ ಬದುಕಲಾರರು, ಹೇ ರಾಜನ್, ನೀನು ಬ್ರಾಹ್ಮಣರನ್ನು ವಶಪಡಿಸಿಕೊಂಡರೆ ಬ್ರಹ್ಮ, ವಿಷ್ಣು ಮಹೇಶ್ವರರೂ ವಶರಾಗುವರು. ಬ್ರಾಹ್ಮಣ ಕುಲ(ಬಲ)ದೆದುರಿನಲ್ಲಿ ಯಾವ ಬಲವೂ ನಿಲ್ಲಲಾರದು. ಈ ಮಾತು ಸತ್ಯ ಸತ್ಯವೆಂದು ಸಾರುವೆನು ಹೇ ರಾಜನ್, ಬ್ರಾಹ್ಮಣ ಶಾಪದ ವಿನಾ ನಿನ್ನ ನಾಶವೆಂದಿಗೂ ಆಗಲಾರದು" ಎಂದನು. ಇದನ್ನು ಕೇಳಿ ರಾಜನು ವಿಶೇಷ ಪ್ರಸನ್ನನಾಗಿ, "ಹೇ ನಾಥ, ಇನ್ನು ನನ್ನ ನಾಶವಾಗಲಾರದು. ಹೇ ಕೃಪಾನಿಧಿ, ಹೇ ಪ್ರಭೊ, ತಮ್ಮ ಪ್ರಸನ್ನತೆಯಿಂದ ನನಗೆ ಸದಾ ಮಂಗಳವುಂಟಾಗುವುದು" ಎಂದು ಹೇಳಿದನು. ಆಗ ಕಪಟಮುನಿಯು "ಹಾಗೆಯೆ ಆಗಲಿ ! ಆದರೆ ನೀನು ವನದಲ್ಲಿ ದಾರಿ ತಪ್ಪಿ, ನನ್ನನ್ನು ಸಂದರ್ಶಿಸಿದ ಸುದ್ದಿಯನ್ನಾರಿಗೂ ತಿಳುಹಿಸಬಾರದು. ತಿಳುಹಿಸಿದರೆ ಅದರಿಂದುಂಟಾಗುವ ಪರಿಣಾಮಕ್ಕೆ ನಾನು ಪಾತ್ರನಲ್ಲ. ಆದುದರಿಂದ ನಾನು ಮೊದಲೇ ನಿನ್ನನ್ನು ಎಚ್ಚರಿಸಿರುವೆನು. ನನ್ನ ಮಾತು ಸತ್ಯವಾದುದು. ಇದು ಅನ್ಯರ ಕಿವಿಗೆ ಬಿದ್ದರೆ ನಿನ್ನ ಕೆಲಸವು ಕೆಡುವುದು. ಹೇ ಪ್ರತಾಪಭಾನು ! ಈ ಮಾತು ಪ್ರಕಟವಾಗುವುದರಿಂದ ಅಥವಾ ಬ್ರಾಹ್ಮಣ ಶಾಪದಿಂದ ನಿನ್ನ ನಾಶವಾಗುವುದು. ಮತ್ತಾವುದರಿಂದಲೂ, ವಿಷ್ಣು ರುದ್ರಾದಿಗಳ ಕೋಪದಿಂದಲೂ ನಿನ್ನ ನಾಶವಾಗದು." ಎಂದುಸುರಿದನು. ಆಗ ರಾಯನು ಮತ್ತೆ ಮುನಿಯ ಪಾದಯುಗ್ಮವಂ ಪಿಡಿದು, "ತಾವು ಹೇಳಿದುದು ಸತ್ಯವು. ಬ್ರಾಹ್ಮಣ

---

* ಬ್ರಾಹ್ಮಣ ಲಕ್ಷಣಗಳ ವಿಚಾರವಾಗಿ ಮಹಾಭಾರತ, ಶಾಂತಿಪರ್ವ, ಅಧ್ಯಾಯ ೧೮೯ ರಲ್ಲಿ ಹೇಳಿರುವುದೇನಂದರೆ—"ಜಾತಕರ್ಮಾದಿಭಿರ್ಯಸ್ತು ಸಂಸ್ಕಾರೈಃ ಸಂಸ್ಕೃತಃ ಶುಚಿಃ । ವೇದಾಧ್ಯಯನ ಸಂಪನ್ನಃ ಷಟ್ಸು ಕರ್ಮಸ್ವವಸ್ಥಿತಃ ॥ ಶೌಚಾಚಾರಸ್ಥಿತಃ ಸಮ್ಯಕ್ ವಿಘಸಾಶೀ ಗುರುಪ್ರಿಯಃ । ನಿತ್ಯವ್ರತೀ, ಸತ್ಯಪರಃ ಸವೈ ಬ್ರಾಹ್ಮಣ ಉಚ್ಯತೆ ॥ ಸತ್ಯಂ ದಾನಮಥಾಽದ್ರೋಹಃ ಆನೃಶಂಸ್ಯಂ ತ್ರಪಾಘೃಣಾ । ತಪಶ್ಚ ದೃಶ್ಯತೆ ಯತ್ರಸ ಬ್ರಾಹ್ಮಣ ಇತಿ ಸ್ಮೃತಃ ॥ "—ಭವಿಷ್ಯ ಪುರಾಣೆ—"ಸದ್ಗುಣೊ ಬ್ರಾಹ್ಮಣೋ ವರ್ಣಃ । "—ಮನುಸ್ಮೃತಿಯಲ್ಲಿ—"ನಲೋಕವೃತ್ತಂ ವರ್ತೇತ ವೃತ್ತಿ ಹೇತೋಃ ಕಥಂಚನ । ಅಜಿಹ್ಮಾಮಶಠಾಂ ಶುದ್ಧಾಂ ಜೀವೇದ್ಬ್ರಾಹ್ಮಣ ಜೀವಿಕಾಮ್॥"—ಮತ್ತೆ ಹಾರೀತ ಸಂಹಿತೆಯಲ್ಲಿ—"ಕೃಷ್ಣ ಸಾರೊಮೃಗೋ ಯತ್ರ ಸ್ವಭಾವೇನ ಪ್ರವರ್ತತೆ । ತಸ್ಮಿನ್ ದೇಶೆ ವಸೇದ್ಧರ್ಮಃ । ಸಿಧ್ಯತಿ ದ್ವಿಜಸತ್ತಮಃ॥"

ಮತ್ತು ಗುರುಜನರ ಕೋಪದಿಂದ ರಕ್ಷಿಸುವವರಾರು ? ಬ್ರಹ್ಮನ ಕೋಪವನ್ನು ಗುರುವು ತಡೆಯಬಲ್ಲನು, ಆದರೆ ಗುರುವು ವಿರೋಧಿಸಿದರೆ ಅಂತಹನನ್ನು ಜಗತ್ತಿನಲ್ಲಿ ಮತ್ತಾರೂ ರಕ್ಷಿಸಲಾರರು. ತಾವು ಅಪ್ಪಣೆಯಿತ್ತಂತೆ ನಾನು ವರ್ತಿಸದಿದ್ದರೆ ಅವಶ್ಯವಾಗಿ ನನ್ನ ನಾಶವಾಗಲಿ, ಅದರಿಂದ ನನಗೆ ದುಃಖವುಂಟಾಗದು. ಹೇ ಸ್ವಾಮಿಯೆ, ಘೋರವಾದ ಬ್ರಾಹ್ಮಣ ಶಾಪಕ್ಕಾಗಿ ನನ್ನ ಮನಸ್ಸಿನಲ್ಲಿ ಹೆದರಿಕೆಯುಂಟಾಗಿದೆ.

ದೋ॥೧೬೬॥ "ಯಾವ ಉಪಾಯದಿಂದ ಬ್ರಾಹ್ಮಣರು ನನ್ನ ವಶರಾಗುವರೆಂಬುದನ್ನು ನನ್ನಲ್ಲಿ ದಯೆಯಿಟ್ಟು ಹೇಳಬೇಕು. ಹೇ ದೀನದಯಾಳು ! ನಿಮ್ಮನ್ನುಳಿದು ನನಗೆ ಮತ್ತಾರೂ ಹಿತಚಿಂತಕರಿಲ್ಲವೆಂದು ಭಾವಿಸಿರುತ್ತೇನೆ." ಎಂದನು. (ಆಗ) ಮುನಿಯು ನುಡಿದುದೇನಂದರೆ—"ಹೇ ರಾಜನ್, ಕೇಳು ಜಗತ್ತಿನಲ್ಲಿ ಅನೇಕ ಉಪಾಯಗಳಿವೆ. ಆದರೆ ಅವುಗಳೆಲ್ಲವೂ ಕಷ್ಟಸಾಧ್ಯವಾದವು. ಆದರೆ ಒಂದು ಉಪಾಯವು ಮಾತ್ರ ಸುಗಮವಾಗಿದ್ದರೂ ಸ್ವಲ್ಪ ತೊಂದರೆಯುಳ್ಳದಾಗಿದೆ. ಅದರ ಯುಕ್ತಿಯು ನನಗೆ ಗೊತ್ತಿದೆ. ಆದರೆ ನಾನು ನಿನ್ನ ನಗರವನ್ನು ಪ್ರವೇಶಿಸಲಾರೆನು. (ಏಕೆಂದರೆ) ನಾನು ಹುಟ್ಟಿದಂದಿನಿಂದ ಇಂದಿನವರೆಗೆ ಯಾರ ಮನೆಗಾಗಲಿ ಊರಿಗಾಗಲಿ ಹೋದವನಲ್ಲ. ಆದರೆ ನಾನು ಬಾರದಿದ್ದರೆ ನಿನ್ನ ಕೆಲಸವು ಕೆಡುವುದು, ಈಗ ಉಭಯ ಸಂಕಟಗಳೊದಗಿವೆ." (ಮುನಿಯ ಈ ಮಾತುಗಳನ್ನು ಕೇಳಿ) ರಾಜನು ಕೋಮಲವಾಣಿಯಿಂದ, "ಹೇ ನಾಥ ! ಶಾಸ್ತ್ರವು ಈ ವಿಷಯದಲ್ಲಿ ಹೇಳುವುದೇನಂದರೆ–'ಘನವಂತರು ದೀನರನ್ನು ಪ್ರೀತಿಸುವರು. ಪರ್ವತವು ಹುಲ್ಲನ್ನು ಸದಾ ತನ್ನ ಶಿರದಲ್ಲಿ ಧರಿಸಿರುವುದು: ಸಮುದ್ರವು ನೊರೆಯನ್ನು ತನ್ನ ಶಿರದಲ್ಲಿ ಧರಿಸುವುದು, ಪೃಥ್ವಿಯು ಧೂಳನ್ನು ತನ್ನ ಶಿರದಲ್ಲಿ ಧಾರಣಮಾಡಿರುವುದು.

ದೋ॥೧೬೭॥ "ಹೇ ಸ್ವಾಮಿ, ನನ್ನ ಮೇಲೆ ಅನುಗ್ರಹವಿಟ್ಟು, ಹೇ ಸಜ್ಜನ, ಹೇ ದೀನದಯಾಳು, ನನಗೋಸ್ಕರ ತಾವು ಕಷ್ಟವನ್ನು ಸಹಿಸಬೇಕು" ಎಂದು ಕಾಲಿಗೆರಗಿ ಬೇಡಿಕೊಂಡನು (ಆಗ) ರಾಜನು ಸಂಪೂರ್ಣವಾಗಿ ತನ್ನ ವಶನಾದನೆಂದರಿತು, ಆ ಕಪಟಿಯಾದ ತಪಸ್ವಿಯು, "ಹೇ ರಾಜನ್, ಕೇಳು. ಈ ಜಗತ್ತಿನಲ್ಲಿ ನನಗೆ ಅಸಾಧ್ಯವಾದುದಾವುದೂ ಇಲ್ಲ. ನಾನು ನಿನ್ನ ಕೆಲಸವನ್ನು ಅವಶ್ಯವಾಗಿ ಮಾಡುವೆನು; ಏಕೆಂದರೆ ನೀನು ತನು, ಮನ, ವಚನಗಳಿಂದ ನನ್ನ ಭಕ್ತನಾಗಿರುತ್ತಿ. ಯೋಗಯುಕ್ತಿಯೂ, ತಪಸ್ಸೂ ಮಂತ್ರಗಳೂ ರಹಸ್ಯವಾಗಿರುವಾಗ ಮಾತ್ರ ಫಲಿಸುವವು, ಹೇ ರಾಜನ್, ನಾನು ಅಡುಗೆ ಮಾಡುವೆನು, ನೀನು ಬಡಿಸುವವನಾಗಬೇಕು. ಆ ಆಹಾರವನ್ನು ತಿನ್ನುವವರೆಲ್ಲರೂ ನಿನ್ನ ವಶರಾಗುತ್ತಾರೆ. (ಮತ್ತೆ) ಹೇ ರಾಜನ್ ! ನೀನು (ಊರಿಗೆ) ಹೋಗಿ ಒಂದು ವರ್ಷದವರೆಗೆ ಮುಂದೆ ಹೇಳುವ ಸಂಕಲ್ಪವನ್ನೂ ಉಪಾಯವನ್ನೂ ಮಾಡು.

ದೋ||೧೯೮|| "ಪ್ರತಿದಿನವೂ ನೂರು ಸಾವಿರ ಬ್ರಾಹ್ಮಣ ಪರಿವಾರಗಳನ್ನು ಸೇರಿಸಿ (ಭೋಜನಮಾಡಿಸು). ನಾನು ನಿನ್ನ ಮನೋರಥವು ಈಡೇರುವಂತೆ ನಿತ್ಯವೂ ಅಡುಗೆ ಮಾಡುತ್ತಿರುವೆನು. ಈ ರೀತಿಯಾಗಿ ಅಲ್ಪಾಯಾಸದಿಂದ ಬ್ರಾಹ್ಮಣರೆಲ್ಲರೂ ನಿನ್ನ ವಶರಾಗುವರು. ಮತ್ತೆ ಆ ಬ್ರಾಹ್ಮಣರು ಹೋಮುಗಳನ್ನೂ ಯಜ್ಞಗಳನ್ನೂ ಮಾಡಿದರೆ ಅವುಗಳ ಪ್ರಭಾವದಿಂದ ದೇವತೆಗಳೆಲ್ಲರೂ ಸಹಜವಾಗಿ ನಿನ್ನ ವಶರಾಗುವರು, ನಾನು (ಮಾತ್ರ) ಈ ವೇಷದಲ್ಲಿ ನಿನ್ನೊಟ್ಟಿಗೆ ಬರಲಾರೆನು. ನಾನು ನನ್ನ ಮಾಯಾಶಕ್ತಿ ಪ್ರಭಾವದಿಂದ ನಿನ್ನ ಪುರೋಹಿತನನ್ನು ಕರೆದುಕೊಂಡು ಬರುವೆನು. ತಪೋಬಲದಿಂದ ಅವನನ್ನು ನನ್ನಂತೆಯೆ ಮಾಡಿ ಇಲ್ಲಿ ಒಂದುವರ್ಷದವರೆಗೆ ಇಡುವೆನು. (ಆ ಸಮಯದಲ್ಲಿ) ನಾನು ನಿನ್ನ ಕೆಲಸಗಳನ್ನೆಲ್ಲ ಮಾಡಿ ಕೊಡುವೆನು. ಹೇ ರಾಜನ್, ಈಗ ರಾತ್ರಿ ಹೆಚ್ಚು ಸಮಯವಾಯಿತು. ಇನ್ನು ನನ್ನ ಭೇಟಿಯು ಮೂರುದಿನಗಳನಂತರವಾಗುವುದು. ನೀನು ಮಲಗಿರುವಾಗಲೆ ನಿನ್ನನ್ನು ಕುದುರೆಯ ಸಹಿತ ನಿನ್ನ ಮನಗೆ ಮುಟ್ಟಿಸುವೆನು,

ದೋ ||೧೯೯|| "ನಾನು (ನಿನ್ನ ಪುರೋಹಿತನ) ವೇಷವನ್ನು ಧರಿಸಿ ನಿನ್ನಲ್ಲಿಗೆ ಬಂದು, ನಿನಗೆ ಏಕಾಂತದಲ್ಲಿ ಎಲ್ಲ ಸಮಾಚಾರವನ್ನೂ ತಿಳಿಯಿಸಿದ ನಂತರ ನೀನು ನನ್ನನ್ನು ಗುರ್ತಿಸಬೇಕು." ಎಂದನು. ಆನಂತರ ಮುನಿಯ ಅಪ್ಪಣೆಯನ್ನು ಪಡೆದು ರಾಯನು ಮಲಗಿದನು. ಆ ಕಪಟ ಜ್ಞಾನಿಯು ತನ್ನ ಆಸನದ ಮೇಲೆ ಕುಳಿತನು, ರಾಯನು ದಣಿದಿದ್ದುದರಿಂದ ಅವನಿಗೆ ವಿಶೇಷ ನಿದ್ರೆ ಬಂದಿತು. ಆದರೆ ಅಧಿಕ ಚಿಂತೆಯ ದೆಸೆಯಿಂದ ಆ ಕಪಟಮುನಿಗೆ ನಿದ್ರೆಯು ಹೇಗೆ ಬರಬೇಕು? ಆ ಸಮಯದಲ್ಲಿ ಶೂಕರರೂಪವನ್ನು ಧರಿಸಿ ರಾಜನಿಗೆ ದಾರಿ ತಪ್ಪಿಸಿದ್ದ ಕಾಲಕೇತುವೆಂಬ ರಾಕ್ಷಸನು ಅಲ್ಲಿಗೆ ಬಂದನು. ಆ ರಾಕ್ಷಸನು ವೇಷಧಾರಿಯಾದ ರಾಜನ (ಕಪಟ ಮುನಿಯ) ಪರಮ ಮಿತ್ರನಾಗಿದ್ದನು. ಅವನು ಅನೇಕ ಕಪಟ ಜಾಲರಚನೆಯಲ್ಲಿ ಚತುರನಾಗಿದ್ದನು. ಅವನಿಗೆ ನೂರು ಮಂದಿ ಮಕ್ಕಳೂ, ಹತ್ತುಜನ ಸೋದರರೂ ಇದ್ದರು. ಅವರೆಲ್ಲರೂ ಬಹು ದುಷ್ಟರೂ, ಜಯಿಸಲಸಾಧ್ಯರೂ, ದೇವತೆಗಳಿಗೆ ದುಃಖ ಕೊಡುವವರೂ ಆಗಿದ್ದರು. ಬ್ರಾಹ್ಮಣರು ದೇವತೆಗಳು ಮತ್ತು ಸಂತಜನರ ದುಃಖವನ್ನು ನೋಡಿ, ರಾಜನು ಮೊದಲೊಮ್ಮೆ ಅವರನ್ನು ಯುದ್ಧದಲ್ಲಿ ಹೊಡೆದೋಡಿಸಿದ್ದನು. ಆ ದುಷ್ಟ ಕಾಲಕೇತುವು ತನ್ನ ಹಿಂದಣ ವೈರವಂ ಸ್ಮರಿಸಿ, ಆ ತಾಪಸಿರಾಯನೊಂದಿಗೆ ಸೇರಿ, ಶತ್ರುನಾಶಕ್ಕೆ ಉಪಾಯವನ್ನು ಸೂಚಿಸಿದ್ದನು. ಭವಿಷ್ಯವಶನಾಗಿದ್ದ ಪ್ರತಾಪಭಾನುರಾಯನಿಗೆ ಈ ಭೇದವು ಹೇಗೆ ತಿಳಿಯಬೇಕು?

ದೋ ||೨೦೦|| ತೇಜಸ್ವಿಯಾದ ಶತ್ರುವು ಏಕಾಂಗಿಯಾಗಿದ್ದರೂ ಅವನು ಚಿಕ್ಕವನೆಂದು (ಲಘುವಾಗಿ) ತಿಳಿಯಬಾರದು. ಶಿರವು ಕತ್ತರಿಸಿ ಹೋದಾಗ್ಯೂ

ಮುಂಡರೂಪದಿಂದಿರುವ ರಾಹುವು ಇಂದಿಗೂ ಸೂರ್ಯಚಂದ್ರರಿಗೆ ದುಃಖವ ನ್ನುಂಟುಮಾಡುತ್ತಿರುವನು. ಆ ತಪಸ್ವಿಯಾದ ರಾಜನು ತನ್ನ ಮಿತ್ರನಾದ ರಾಕ್ಷಸನನ್ನು ನೋಡಿದ ಕೂಡಲೆ ವಿಶೇಷ ಪ್ರಸನ್ನನೂ, ಸುಖಿಯೂ ಆದನು. ಎಲ್ಲ ಕಥೆಯನ್ನು ಹೇಳಿದನು. ಅದನ್ನು ಕೇಳಿ ರಾಕ್ಷಸನು ಆನಂದದಿಂದ, "ಹೇ ರಾಜನ್, ನೀನು ನನ್ನ ಮಾತನ್ನು ಕೇಳುವುದಾದರೆ, ನಾನು ಶತ್ರುತ್ವವನ್ನು ಚೆನ್ನಾಗಿ ಸಾಧಿಸಿ ಕೊಳ್ಳುವೆನು, ಇನ್ನು ನೀನು ನಿಶ್ಚಿಂತನಾಗಿರಬಹುದು. ಈಗ ವಿಧಾತನು ಔಷಧವಿಲ್ಲದೆ ವ್ಯಾಧಿಯನ್ನು ಹೋಗಲಾಡಿಸಿರುವನು. (ಇನ್ನು) ಶತ್ರುಗಳನ್ನು ಕುಲಸಮೇತವಾಗಿ ನಾಶಪಡಿಸಿ ನಾಲ್ಕನೆಯ ದಿನ ನಾನು ನಿನ್ನ ಭೇಟಿ ತೆಗೆದುಕೊಳ್ಳುವೆನು" ಎಂದು ಹೇಳಿ ಆ ಕಪಟಿಯೂ ಕೋಪಿಷ್ಠನೂ ಆದ ರಾಕ್ಷಸನು ತಪಸ್ವಿಯಾದ ರಾಜನಿಗೆ ಸಮಾಧಾನ ಪಡಿಸಿ ಹೊರಟು ಹೋದನು. (ಅನಂತರ) ಅವನು ಅಶ್ವಸಹಿತ ಪ್ರತಾಪಭಾನು ರಾಜನನ್ನು ಕ್ಷಣ ಮಾತ್ರದಲ್ಲಿ ಅವನ ಅರಮನೆಗೆ ಕರೆತಂದು, ಅವನನ್ನು ರಾಣಿಯ ಹತ್ತಿರ ಮಲಗಿಸಿ, ಕುದುರೆಯನ್ನು ಅಶ್ವಶಾಲೆಯಲ್ಲಿ ಕಟ್ಟಿದನು.

ದೋ ॥೨೦೧॥ ಅನಂತರ ರಾಜನ ಪುರೋಹಿತನನ್ನು ಅಪಹರಿಸಿಕೊಂಡು ಅವನನ್ನು ಒಂದು ಪರ್ವತದ ಗುಹೆಯೊಳಗಿಟ್ಟು, ತನ್ನ ಮಾಯೆಯಿಂದ ಅವನ ಬುದ್ಧಿಯನ್ನು ಭ್ರಮೆಗೊಳಿಸಿದನು. ತಾನು (ರಾಕ್ಷಸನು) ಪುರೋಹಿತನ ವೇಷ ವನ್ನು ಧರಿಸಿ, ಅವನಾ ಸುಂದರವಾದ ಶಯ್ಯೆಯ ಮೇಲೆ ಮಲಗಿದನು. ಬೆಳಗಿನ ಜಾವದಲ್ಲಿ ರಾಜನು (ಪ್ರತಾಪಭಾನುವು) ಎಚ್ಚೆತ್ತು ತನ್ನ ಮಂದಿರವಂ ನೋಡಿ ಆಚ್ಚರಿಗೊಂಡು, ಆ ಮುನಿಯ ಮಹಿಮೆಯನ್ನೇ (ಸ್ಮರಿಸುತ್ತ, ರಾಣಿಗೆ ತಿಳಿಯದಂತೆ ಹೊರಗೆದ್ದು ಬಂದು) ಕುದುರೆಯನ್ನೇರಿ, ಪುರವಾಸಿಗಳಾರಿಗೂ ಗೊತ್ತಾಗದಂತೆ ವನಕ್ಕೆ ಹೋದನು. ಅನಂತರ ಎರಡು ಪ್ರಹರಗಳಾದ ಮೇಲೆ ರಾಯನು ಹಿಂತಿರುಗಿ ಬಂದಕೂಡಲೆ, ಎಲ್ಲರ ಮನೆಗಳಲ್ಲಿಯೂ ಆನಂದೋತ್ಸವವಾಗಲಾರಂಭವಾಯಿತು. ರಾಯನು ಪುರೋಹಿತನನ್ನು ನೋಡಿದ ಕೂಡಲೆ ಚಕಿತನಾದನು. ಆಗ ಅವನ ಕಾರ್ಯವನ್ನು ಸ್ಮರಿಸಿಕೊಂಡನು. ಅನಂತರ ಮೂರು ದಿನಗಳನ್ನು ಮೂರು ಯುಗಗಳಂತೆ ಕಳೆದನು. ಆ ಮೂರು ದಿನಗಳ ಸಮಯ ರಾಯನು ಆ ಕಪಟಿ ಮುನಿಯ ಚರಣಗಳನ್ನೇ ಸ್ಮರಿಸುತ್ತಿದ್ದನು. ಅನಂತರ ಪುರೋಹಿತನು ಅವನ ಬಳಿಗೆ ಬಂದು ಪೂರ್ವ ಸಂಕೇತಾನುಸಾರ ವಾಗಿ ರಾಜನಿಗೆ ಕಥೆಯನ್ನು ಹೇಳಿದನು. (ಆಗ) ರಾಜನು ಗುರುವನ್ನು ಗುರ್ತಿಸಿ, ಪ್ರಸನ್ನನಾಗಿ, ಭ್ರಮೆಗೊಂಡು ಜ್ಞಾನಹೀನನಾಗಿ, ನೂರುಸಾವಿರ ಜನ ಬ್ರಾಹ್ಮಣರಿಗೆ ಕುಟುಂಬ ಸಮೇತವಾಗಿ ಬರಬೇಕೆಂದು ಆಮಂತ್ರಣವನ್ನಿತ್ತನು. ಪುರೋಹಿತನು ಶಾಸ್ತ್ರಾನುಸಾರವಾಗಿ ಷಡ್ರಸಗಳ (ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯವೆಂಬ) ನಾಲ್ಕು ವಿಧ ಭೋಜನವಂ ತನ್ನ ರಾಕ್ಷಸೀಮಾಯೆಯಿಂದ ಸಿದ್ಧಪಡಿಸಿ

ದನು. ಆ ಅಡುಗೆಯಲ್ಲಿದ್ದ ಅಧಿಕ ವ್ಯಂಜನ ಪದಾರ್ಥಗಳ ಸಂಖ್ಯೆಯೇ ಅಪಾರವಾಗಿದ್ದಿತು. ಆ ದುರುಳನು ವಿವಿಧಪಶುಗಳ ಮಾಂಸವನ್ನೂ ಬ್ರಾಹ್ಮಣರಮಾಂಸವನ್ನೂ ಸೇರಿಸಿ ಅಡುಗೆ ಮಾಡಿದ್ದನು. ರಾಯನು ಬ್ರಾಹ್ಮಣರೆಲ್ಲರನ್ನೂ ಭೋಜನಕ್ಕೆ ಕರೆದು ಕಾಲ್ತೊಳೆದು ಸರ್ವರನ್ನೂ ಸಾದರದಿಂದ ಕುಳ್ಳಿರಿಸಿದನು. ಅನಂತರ ಅವನು ಬಡಿಸುವುದಕ್ಕಾರಂಭಿಸಿದಾಗ, ಮೇಲಣಿಂದ "ಹೇ ಬ್ರಾಹ್ಮಣರೆ, ನೀವೆಲ್ಲರೂ ಎದ್ದು ನಿಂನಿಮ್ಮ ಮನೆಗಳಿಗೆ ತೆರಳಿರಿ. ಈ ಅನ್ನವನ್ನು ಮುಟ್ಟಬೇಡಿರಿ. ಇದನ್ನು ತಿನ್ನುವುದರಿಂದ ವಿಶೇಷ ಹಾನಿಯು ಸಂಭವಿಸುವುದು. ಈ ಭೋಜನದಲ್ಲಿ ಬ್ರಾಹ್ಮಣರ ಮಾಂಸವು ಸೇರಿದೆ" ಎಂದು ಆಕಾಶವಾಣಿಯಾಯಿತು ಆ ವಾಣಿಯಲ್ಲಿ ವಿಶ್ವಾಸವಿಟ್ಟು ಬ್ರಾಹ್ಮಣರೆಲ್ಲರೂ ಎದ್ದು ನಿಂತರು. ಅದನ್ನು ನೋಡಿ ರಾಜನು ವಿಕಲಮತಿ ಮೋಹದಿಂದ ಗಾಬರಿಗೊಂಡನು. (ವಿಧಿಲಿಪಿಯಂತೆ) ಆಗಬೇಕಾಗಿದ್ದುದರಿಂದ ಅವನ ಮುಖದಿಂದ ಮಾತುಗಳೇ ಹೊರಡಲಿಲ್ಲ!

ದೋ ||೨೦೩|| ಆ ಸಮಯ ಬಾಹ್ಮಣರೆಲ್ಲರೂ ಯಾವ ವಿಚಾರವನ್ನೂ ಮಾಡದೆ, ಕ್ರೋಧಾವೇಶದಿಂದ "ಹೇ ಮೂರ್ಖ ರಾಜನೆ! ನೀನು ಕುಟುಂಬ ಸಹಿತ ರಾಕ್ಷಸನಾಗು! ನೀನು ಬ್ರಾಹ್ಮಣರನ್ನು ಕರೆದು, ಎಲ್ಲರನ್ನೂ ಕುಲಭ್ರಷ್ಟರಾಗಿ ಮಾಡಲೆಳಸಿದೆ. ಈಶ್ವರನು ನಮ್ಮ ಧರ್ಮವನ್ನು ರಕ್ಷಿಸಿದನು. ನಿನ್ನ ಕುಟುಂಬ ಸಹಿತ ನೀನು ನಾಶವಾಗು. ಇನ್ನು ಒಂದು ವರ್ಷದೊಳಗಾಗಿ ನಿನ್ನ ನಾಶವಾಗಿ, ನಿನ್ನ ಕುಲದಲ್ಲಿ ಆರೂ ಉಳಿಯದಂತಾಗುವುದು" ಎಂದು (ಶಾಪ) ವಚನಗಳಂ ಹೇಳಲು ರಾಜನು ಹೆದರಿದನು. ಇಷ್ಟರಲ್ಲಿ ಮತ್ತೆ ಆ ಕಾಶವಾಣಿಯು, "ಹೇ ಬ್ರಾಹ್ಮಣರೆ, ನೀವು ವಿಚಾರಮಾಡಿ ಶಾಪಕೊಡಲಿಲ್ಲ ರಾಜನು ಯಾವ ಅಪರಾಧವನ್ನೂ ಮಾಡಿಲ್ಲ" ಎಂದು ನುಡಿಯಲು ಅದನ್ನು ಕೇಳಿ ಬ್ರಾಹ್ಮಣರೆಲ್ಲರೂ ಚಕಿತರಾದರು. ರಾಜನು ಪಾಕಶಾಲೆಗೆ ಹೋಗಿ ನೋಡಲು ಅಲ್ಲಿ ಅಡುಗೆಯ ಬ್ರಾಹ್ಮಣರಾಗಲಿ, ಭೋಜನ ಸಾಮಗ್ರಿಯಾಗಲಿ ಇರಲಿಲ್ಲ (ಆಗ) ರಾಜನು ಅಪಾರವಾಗಿ ಚಿಂತಿಸುತ್ತ ಹಿಂತಿರುಗಿ ಬಂದು, ಬ್ರಾಹ್ಮಣರಿಗೆ ತನ್ನ ಕಥೆಯೆಲ್ಲವನ್ನರುಹಿ ಭಯದಿಂದ ಬೆದರಿ, ಬವಳಿಗೊಂಡು ಭೂಮಿಯ ಮೇಲೆ ಬಿದ್ದನು.

ದೋ ||೨೦೪|| ಆಗ ಬ್ರಾಹ್ಮಣರು, "ಹೇ ರಾಜನ್! ಇದರಲ್ಲಿ ನಿನ್ನ ಅಪರಾಧವಿಲ್ಲದಿದ್ದಾಗ್ಯೂ ವಿಧಿಲಿಪಿಯು ತಪ್ಪುವಂತಿಲ್ಲ. ಬ್ರಾಹ್ಮಣ ಶಾಪವು ಬಹು ಘೋರವಾದುದು, ಅದು ಅನ್ಯಥಾ ಆಗಲಾರದು" ಎಂದು ಹೇಳಿ ಹೊರಟು ಹೋದರು. ಈ ಸುದ್ದಿಯು ಪುರವಾಸಿಗಳೆಲ್ಲರಿಗೂ ತಿಳಿಯಿತು. ಆಗ ಅವರು ಚಿಂತಿಸುತ್ತ, "ಸುಮ್ಮನೆ ತಿರುಗುತಿದ್ದ ಹಂಸವನ್ನು ಕಾಗೆಯಾಗಿ ಮಾಡಿದ" ನೆಂದು ವಿಧಾತನನ್ನು ನಿಂದಿಸಲಾರಂಭಿಸಿದರು. ಆ ರಾಕ್ಷಸನು ಪುರೋಹಿತನನ್ನು ಅವನ

ಮನೆಗೆ ಕರೆತಂದು ಬಿಟ್ಟು, ಕಪಟಿಯಾದ ತಾಮಸಿಗೆ ಎಲ್ಲ ಸಮಾಚಾರಗಳನ್ನೂ ತಿಳುಹಿಸಿದನು. ಆ ದುರುಳನು ಎಲ್ಲಾ ಕಡೆಗಳಿಗೂ (ರಾಜರ ಬಳಿಗೆ) ಓಲೆಗಳನ್ನು ಬರೆಯಿಸಿ ಕಳುಹಿಸಿದನು. ಕೂಡಲೆ ರಾಜರೆಲ್ಲರೂ ತಂತಮ್ಮ ಸೈನ್ಯಗಳನ್ನು ತೆಗೆದುಕೊಂಡು ಯುದ್ಧಕ್ಕೆ ಬಂದರು. ಅವರು ರಣಭೇರಿಯಂ ಹೊಡೆಯಿಸಿ ರಾಜಧಾನಿಯಂ ಮುತ್ತಿದರು. ನಿತ್ಯವೂ ಅನೇಕ ವಿಧವಾಗಿ ನವೀನ ಯುದ್ಧಗಳಾಗಿ, ವೀರರೆಲ್ಲರೂ ತಂತಮ್ಮ ಶೌರ್ಯವಂ ತೋರುತ್ತ ರಣಾಂಗಣದಲ್ಲಿ ಮಲಗಿದರು. ರಾಜನೂ ಸೋದರರೊಟ್ಟಿಗೆ ಭೂಗತನಾದನು. ಸತ್ಯಕೇತುವಿನ ಕುಲದಲ್ಲಾರೂ ಉಳಿಯಲಿಲ್ಲ. ಬ್ರಾಹ್ಮಣರ ಶಾಪವು ಅಸತ್ಯವಾಗುವದೆಂತು? ರಾಜರೆಲ್ಲರೂ ಸೇರಿ, ಶತ್ರುವಂ ಜಯಿಸಿ, ನಗರವನ್ನು ವಶಪಡಿಸಿಕೊಂಡು, ವಿಜಯಿಗಳಾಗಿ, ಕೀರ್ತಿಪಡೆದು ತಂತಮ್ಮ ರಾಜ್ಯಗಳಿಗೆ ತೆರಳಿದರು.

(ರಾವಣ ಕುಂಭಕರ್ಣಾದಿಗಳ ಜನ್ಮವೂ, ಅವರ ತಪಸ್ಸೂ, ಬ್ರಹ್ಮನ ವರದಾನವೂ)

॥೨೦೫॥ ಹೇ ಭರದ್ವಾಜ, ದೈವವು ವಿರೋಧವಾದಾಗ ಧೂಳಿನಕಣವು ಸುಮೇರು ಪರ್ವತದಂತೆಯೂ, ಪಿತನು ಯಮನಂತೆಯೂ, ಹಗ್ಗವೂ ಹಾವಿನಂತೆಯೂ ಆಗುವುದು ಹೇ ಮುನಿ! ಕೇಳು, ಮುಂದೆ ತನ್ನ ಸಮಯವನ್ನು ಕಾದಿದ್ದು ಆ ರಾಜನು ಕುಟುಂಬ ಸಮೇತ ರಾಕ್ಷಸ ಜನ್ಮವನ್ನು ತಾಳಿದನು. ಅವನಿಗೆ ಹತ್ತು ತಲೆಗಳೂ ಇಪ್ಪತ್ತು ಭುಜಗಳೂ ಇದ್ದವು ಅವನು ರಾವಣನೆಂಬ ಹೆಸರನ್ನು ಪಡೆದು ಬಹು ಶೂರವೀರನಾಗಿದ್ದನು ಅವನ ತಮ್ಮನಾಗಿದ್ದ "ಅರಿಮರ್ದನ"ನು ಬಹು ಬಲಿಷ್ಟನಾದ ಕುಂಭಕರ್ಣನಾಗಿ ಜನಿಸಿದನು. 'ಧರ್ಮರುಚಿ' ಎಂಬ ಮಂತ್ರಿಯು ವಿಭೀಷಣನೆಂಬ ಹೆಸರಿನಿಂದ ಹುಟ್ಟಿದನು. ಅವನ ಹೆಸರು ಜಗತ್ಪ್ರಸಿದ್ಧವಾಗಿದೆ. ಅವನು ಭಗವದ್ಭಕ್ತನೂ, ಜ್ಞಾನಸಾಗರನೂ ಆಗಿದ್ದನು. ಆ (ಪ್ರತಾಪಭಾನು) ರಾಜನ ಪುತ್ರರೂ, ಸೇವಕರೂ ಬಹು ಘೋರರಾಕ್ಷಸರಾದರು. ಅವರೆಲ್ಲರೂ ಮನಬಂದಂತೆ ವೇಷವನ್ನು ಧರಿಸುತ್ತ, ಮಾಯಾವಿಗಳೂ, ಭಯಂಕರರೂ ವಿಚಾರಹೀನರೂ, ಕ್ರೂರರೂ, ಹಿಂಸಕರೂ, ಪಾಪಿಗಳೂ ಆಗಿದ್ದರು. ಲೋಕಕಂಟಕವಾಗಿದ್ದ ಅವರ ಕೃತಿಗಳನ್ನು ವರ್ಣಿಸಲಾಗದು.

ದೋ ॥೨೦೬॥ ಅವರು ಪವಿತ್ರನೂ ನಿರ್ಮಲನೂ, ಅನುಪಮನೂ ಆದ ಪುಲಸ್ತ್ಯ * ಕುಲದಲ್ಲಿ ಹುಟ್ಟಿದ್ದಾಗ್ಯೂ ಬ್ರಾಹ್ಮಣ ಶಾಪದ ದೆಸೆಯಿಂದ (ಅವರು)

---

* ಬ್ರಹ್ಮನ ಮಗನಾದ ಪುಲಸ್ತ್ಯ ಮುನಿಯು ಮೇರುಪರ್ವತದ ಮೇಲೆ ತೃಣಬಿಂದುವಿನ ಆಶ್ರಮದಲ್ಲಿ ತಪಸ್ಸನ್ನು ಮಾಡುತ್ತಿದ್ದನು ಆ ಸಮಯ ಅನೇಕ ಜನ ದೇವಕನ್ಯೆಯರು ಅಲ್ಲಿಗೆ ಬರುತ್ತಿದ್ದರು ಅದರಿಂದ ಪೌಲಸ್ತ್ಯಮುನಿಯ ಮನಸ್ಸು ಸಡಿಲವಾಗಲು, ಮುನಿಯು ಕನ್ನೆಯರನ್ನು ಕುರಿತು ಇನ್ನು ಮುಂದೆ ನನ್ನಿದಿರಿನಲ್ಲಿ ಬರುವ ಕನ್ಯೆಗೆ ಗರ್ಭವು ನಿಲ್ಲುವು

ಪಾಪದ ಅವತಾರದಂತಿದ್ದರು. ಆ ಮೂವರು ಸೋದರರಾದ ರಾವಣ, ಕುಂಭಕರ್ಣ, ವಿಭೀಷಣರು ವರ್ಣಿಸಲಸಾಧ್ಯವಾದ ಕಠಿಣ ತಪಸ್ಸನ್ನಾಚರಿಸಿದರು. † ಅವರ (ಘೋರ) ತಪಸ್ಸನ್ನು ನೋಡಿ ಬ್ರಹ್ಮದೇವನು ಅವರ ಬಳಿಗೆ ಬಂದು, "ಮಕ್ಕಳೆ, ನಾನು ಪ್ರಸನ್ನನಾಗಿರುವೆನು ಬೇಕಾದ ವರವನ್ನು ಬೇಡಿರಿ" ಎಂದನು. ರಾವಣನು ಬ್ರಹ್ಮನ ಚರಣಂಗಳಂ ಪಿಡಿದು, 'ಹೇ ಜಗದೀಶ, ಮನುಷ್ಯರು ಮತ್ತು ಕಪಿಗಳನ್ನು ಬಿಟ್ಟು ಉಳಿದ ಆರಿಂದಲೂ ನನಗೆ ಮರಣವಾಗದಂತೆ ಅನುಗ್ರಹಿಸು" ಎಂದು ಕೇಳಿಕೊಂಡನು ಬ್ರಹ್ಮನು "ಹಾಗೆಯೆ ಆಗಲಿ. ನೀನು ವಿಶೇಷ ತಪಸ್ಸನ್ನು ಮಾಡಿರುವೆ ನಾನೂ ಮಹಾದೇವನೂ ಸೇರಿ ನಿನಗೆ ವರದಾನ ಮಾಡಿರುವೆವು" ಎಂದು ಹೇಳಿ, ಕುಂಭಕರ್ಣನ ಬಳಿಗೆ ಹೋದನು. ಅವನನ್ನು ನೋಡಿ ಬ್ರಹ್ಮನು ಒಹು ಆಶ್ಚರ್ಯದಿಂದ, "ಈ ದುರು

---

ದೆಂದು ಹೆದರಿಸಿದನು, ಅನಂತರ ದೇವಕನ್ನೆಯರು ಅಲ್ಲಿಗೆ ಬರುವುದನ್ನು ಬಿಟ್ಟುಬಿಟ್ಟರು ಒಂದು ದಿನ ತೃಣಬಿಂದುವಿನ ಮಗಳು ಮರೆತು ಅಲ್ಲಿಗೆ ಬಂದು ಗರ್ಭವತಿಯಾದಳು ತೃಣಬಿಂದುವು ಅವಳನ್ನು ಪುಲಸ್ತ್ಯನಿಗೆ ದಾನಮಾಡಿದನು ಅವಳಲ್ಲಿ ವಿಶ್ರವಸು ಹುಟ್ಟಿದನು. ಅವನಿಗೆ ಭರದ್ವಾಜನು ತನ್ನ ಮಗಳನ್ನು ಕೊಟ್ಟನು ಅವಳಲ್ಲಿ ಕುಬೇರನು ಹುಟ್ಟಿದನು ಅವನು ತಪಸ್ಸನ್ನಾಚರಿಸಿ, ಬ್ರಹ್ಮನನ್ನು ಪ್ರಸನ್ನಮಾಡಿಕೊಂಡು, ಪುಷ್ಪಕ ವಿಮಾನವನ್ನೂ ದೇವತೆಗಳ ಕೋಶಾಧ್ಯಕ್ಷ ಪದವಿಯನ್ನೂ ಹೊಂದಿದನು ಇದನ್ನು ಕೇಳಿ ಅವನ ತಂದೆಯು ಅವನಿಗೆ ಲಂಕೆಯನ್ನು ಕೊಟ್ಟನು ಆಗ ರಾಕ್ಷಸರೆಲ್ಲರೂ ಪಾತಾಳಲೋಕಕ್ಕೆ ತೆರಳಿದ್ದುದರಿಂದ ಲಂಕಾಪುರಿಯು ನಿರ್ಜನವಾಗಿದ್ದಿತು ಸುಮಾಲಿಯೆಂಬ ರಾಕ್ಷಸನು ತನ್ನ ಮಗಳಾದ ಳಾದ ಕೇಕಸಿಯೆಂಬವಳನ್ನು ಕರೆದುಕೊಂಡು ಬಂದು, ಕುಬೇರನ ಸೌಂದರ್ಯಕ್ಕೆ ಮರುಳಾಗಿ, ಅವಳನ್ನು ಅವನ (ವಿಶ್ರವಸುವಿನ) ಬಳಿಗೆ ಕಳುಹಿಸಿದನು ಅವನು ಅವಳ ಅಭಿಪ್ರಾಯವಂ ತಿಳಿದು ಶಾಪವಂ ಕೊಟ್ಟನೆಂತೆನೆ.—"ನೀನು ಸಂಧ್ಯಾ ಸಮಯದಲ್ಲಿ ಪುತ್ರಕಾಮನೆಯಿಂದ ನನ್ನ ಬಳಿ ಬಂದುದರಿಂದ ನಿನ್ನ ಮಕ್ಕಳು ರಾಕ್ಷಸರಾಗಲಿ" ಆಗ ಶಾಪವನ್ನು ಕೇಳಿ, ಕನ್ನೆಯು "ನಿಮ್ಮಂತಹ ಮಹಾತ್ಮರಿಂದ ರಾಕ್ಷಸಪುತ್ರರು ಜನ್ಮಿಸುವುದು ಹೇಗೆ" ಎಂದು ಕೇಳಿದಳು ಆಗ ಅವನು "ನಿನ್ನ ಮೂರನೆಯ ಮಗನು ಧರ್ಮಾತ್ಮಾನಾಗುವನು" ಎಂದನು ಈ ರೀತಿಯಾಗಿ ಕೇಕಸಿಯಿಂದ ರಾವಣಾದಿ ಮೂವರು ಸೋದರರೂ, ಶೂರ್ಪಣಖಿಯೂ ಹುಟ್ಟಿದರು

† ಒಂದು ದಿನ ಕುಬೇರನು ಅವನ ಪಿತನಾದ ವಿಶ್ರವಸುವಿನ ಬಳಿಗೆ ಬಂದಾಗ, ರಾವಣನು ಅವನನ್ನು ಕುರಿತು ಇವನು (ಕುಬೇರನು) ಯಾರೆಂದು ಕೇಳಲು, "ಇವನು ನಿನ್ನ ಅಣ್ಣನು, ತಪೋಬಲದಿಂದ ದೇವತೆಯಾಗಿರುವನು ನೀನು ವ್ಯಥಾ ಸಮಯವನ್ನು ಕಳೆಯುತ್ತಿರುವೆ" ಎಂದನು ಅದನ್ನು ಕೇಳಿ ರಾವಣನು ಲಜ್ಜಿತನಾಗಿ ತನ್ನ ಸೋದರರಿಬ್ಬರನ್ನೂ ಕರೆದುಕೊಂಡು ತಪಸ್ಸನ್ನಾಚರಿಸಲು ಹೊರಟುಹೋದನು.

ಳನು ನಿತ್ಯವೂ ಭೋಜನ ಮಾಡುತ್ತಿದ್ದರೆ, ಇಡೀಜಗತ್ತು ನಿರ್ಮೂಲವಾಗುವುದು." ಎಂದಾಲೋಚಿಸಿ, ಕೂಡಲೆ ಸರಸ್ವತಿಯನ್ನು ಪ್ರೇರಿಸಿ, ಅವನ (ಕುಂಭಕರ್ಣನ) ಬುದ್ಧಿ ಪಲ್ಲಟವಾಗುವಂತೆ ಮಾಡಿದನು. ಆಗ ಕುಂಭಕರ್ಣನು ಆರು ತಿಂಗಳ ನಿದ್ರೆಯ ವರವನ್ನು ಕೇಳಿಕೊಂಡನು.

ದೋ ॥ ೨೦೭ ॥ ಅನಂತರ ಬ್ರಹ್ಮನು ವಿಭೀಷಣನ ಬಳಿಗೆ ಹೋಗಿ "ಪುತ್ರನೆ, ವರವನ್ನು ಕೇಳಿಕೊ" ಎಂದನು. ಅವನು ಭಗವಂತನ ಚರಣ ಕಮಲಗಳಲ್ಲಿ ಸದಾ ನಿರ್ಮಲ ಪ್ರೇಮವೂ ಭಕ್ತಿಯೂ ಇರಬೇಕೆಂದು ಕೇಳಿಕೊಂಡನು. ಈ ರೀತಿಯಾದ ವರಗಳನ್ನು ಕೊಟ್ಟು ಬ್ರಹ್ಮನು ಹೊರಟು ಹೋದನು ಅವರೂ ಪ್ರಸನ್ನರಾಗಿ ತಮ್ಮ ಮನೆಯ ಕಡೆ ತೆರಳಿದರು ಮಯನೆಂಬ ದೈತ್ಯನಿಗೆ ಮಂಡೋದರಿಯೆಂಬ ಒಬ್ಬ ಪರಮ ಸುಂದರಿಯಾದ ಮಗಳಿದ್ದಳು. ರಾವಣನು ರಾಕ್ಷಸರ ರಾಜನಾಗುವನೆಂದರಿತು ಅವನಿಗೆ ಮಯನು ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದನು. ಸುಂದರಿಯಾದ ಸ್ತ್ರೀಯನ್ನು ಪಡೆದು ರಾವಣನೂ ವಿಶೇಷ ಪ್ರಸನ್ನನಾದನು. ಅನಂತರ ಅವನು ತನ್ನ ಸೋದರರಿಗೂ ಮದುವೆ ‡ ಮಾಡಿದನು. (ರಾವಣಸಿದ್ಧೆಡೆಯಲ್ಲಿ) ಸಮುದ್ರ ತೀರದಲ್ಲಿ ತ್ರಿಕೂಟವೆಂಬ ಒಂದು ಪರ್ವತವು ಬ್ರಹ್ಮನಿಂದ ಸೃಷ್ಟಿತವಾಗಿದ್ದಿತು. ಅದು ಬಹು ದುರ್ಗಮವಾಗಿಯೂ ದೊಡ್ಡದಾಗಿಯೂ ಇತ್ತು. ಮಯದೈತ್ಯನು ಅದನ್ನು ಕಡಿದು ಸುಧಾರಿಸಿ ಸುಂದರವಾಗಿ ಮಾಡಿ, ಅದರ ಮೇಲೆ ಸುವರ್ಣಮಯವಾದೊಂದು ದೊಡ್ಡ ಕೋಟೆಯನ್ನು ಕಟ್ಟಿದನು ಸರ್ಪಗಳಿಗೆ ವಸತಿ ಸ್ಥಾನವಾದ ಭೋಗವತಿಗಿಂತಲೂ, ಇಂದ್ರನ ವಾಸಸ್ಥಾನವಾದ ಅಮರಾವತಿಗಿಂತಲೂ ಅಧಿಕ ರಮಣೀಯವಾಗಿ ಆ ನಗರವು ಲಂಕಾಪುರಿಯೆಂಬ ಹೆಸರಿನಿಂದ ಜಗತ್ತಿನಲ್ಲಿ ಪ್ರಸಿದ್ಧಿಗೊಂಡಿತು.

ದೋ ॥ ೨೦೮-೯ ॥ ಆ ಲಂಕಾಪುರಿಯ ಕೋಟೆಯು ಬಹು ದೃಢವಾಗಿದ್ದಿತು ಅದರ ಸುತ್ತಲೂ ಆಳವಾದ ಸಮುದ್ರ ತೀರದಲ್ಲಿ ಸುವರ್ಣಮಯವಾದ ಕೋಟೆಯ ಗೋಡೆ. ಅದು ಅಲ್ಲಲ್ಲಿ ರತ್ನಮಣಿಗಳಿಂದ ಜಡಿತವಾಗಿದ್ದಿತು. ಒಟ್ಟಿನಲ್ಲಿ ಅದರ ರಚನೆಯನ್ನು ವರ್ಣಿಸಲಸಾಧ್ಯವು. ಭಗವಂತನ ಇಚ್ಛೆಯಿಂದ, ಯಾವ ಕಲ್ಪದಲ್ಲಿ ರಾಕ್ಷಸರಲ್ಲೊಬ್ಬನು ರಾಜನಾಗುವನೊ ಆ ಪ್ರತಾಪಿಯೂ, ಶೂರವೀರನೂ, ಮಹಾ ಬಲಿಷ್ಠನೂ ಆದ ರಾಕ್ಷಸನು ತನ್ನ ಸೇನಾದಳ ಸಮೇತನಾಗಿ ಆ ನಗರದಲ್ಲಿ ವಾಸಿಸುವನು. ಮೊದಲು ಅಲ್ಲಿದ್ದ ಪ್ರಬಲರಾದ ವೀರ

‡ ಕುಂಭಕರ್ಣನು ವೈರೋಚನ ಧೇವತೀ ವಜ್ರಜ್ವಾಲೆಯನ್ನೂ ವಿಭೀಷಣನು ಶೈಲೂಷನೆಂಬ ಗಂಧರ್ವನ ಮಗಳಾದ ಸರಮಾ ಎಂಬವಳನ್ನೂ ಮದುವೆ ಮಾಡಿಕೊಂಡರು.

ರಾಕ್ಷಸರೆಲ್ಲರನ್ನೂ ದೇವತೆಗಳು ಯುದ್ಧದಲ್ಲಿ ಸಂಹರಿಸಿದ್ದರು. ಈಗ ಅಲ್ಲಿ ಇಂದ್ರನ ಆಜ್ಞಾನುಸಾರವಾಗಿ ಕುಬೇರನ ಒಂದು ಕೋಟಿ ಯಕ್ಷ ಸೈನಿಕರು ಆ ಲಂಕೆಯಲ್ಲಿ ರಕ್ಷಕರಾಗಿ ವಾಸಿಸುತ್ತಿದ್ದರು. ರಾವಣನಿಗೆ ಈ ಸುದ್ದಿಯು ಹೇಗೋ ತಿಳಿಯಿತು. ಅವನು ಸೇನೆಯೊಂದಿಗೆ ಬಂದು ಕೋಟೆಗೆ ಮುತ್ತಿಗೆ ಹಾಕಿದನು. ಅವನಾ ಭಯಂಕರ ಭಟರ ಸೇನೆಯನ್ನು ನೋಡಿ ಯಕ್ಷರೆಲ್ಲರೂ ಜೀವದಾಶೆಯಿಂದ ಓಡಿ ಹೋದರು. ಆಗ ರಾವಣನು ಕೋಟೆಯಲ್ಲೆಲ್ಲ ಸುತ್ತಿ, ಪ್ರಸನ್ನನಾಗಿ, ಈ ನಗರವು ಅತಿ ಸುಂದರವೂ, ಸುಲಭವಾಗಿ ದೊರೆತುದೂ, ಶತ್ರುಗಳಿಗೆ ದುರ್ಗಮವೂ ಆಗಿರುವುದೆಂದರಿತು ಅದನ್ನೇ ಅವನು ತನ್ನ ರಾಜಧಾನಿಯಾಗಿ ಮಾಡಿಕೊಂಡನು. ಅನಂತರ ಅವನು ತನ್ನವರಲ್ಲಿ ಎಲ್ಲರಿಗೂ ಅವರವರಿಗೆ ಯೋಗ್ಯವಾದ ನಿವಾಸ ಸ್ಥಾನಗಳನ್ನು ಕೊಟ್ಟು, ಅವರವರು ಸುಖಿಗಳಾಗಿರುವಂತೆ ಮಾಡಿದನು. ಮುಂದೆ (ಸ್ವಲ್ಪಕಾಲದ ನಂತರ) ಅವನು ಕುಬೇರನ ಮೇಲೆ (ದಂಡೆತ್ತಿ ಹೋಗಿ) ಅವನ ಪುಷ್ಪಕ ವಿಮಾನವನ್ನು ಕಿತ್ತುಕೊಂಡು ಬಂದನು.

ದೋ ॥೨೧೦॥ ಒಂದು ಬಾರಿ ಅವನು ಕೈಲಾಸ ಪರ್ವತಕ್ಕೆ ಹೋಗಿ ಅದನ್ನು ಸುಲಭವಾಗಿ ಎತ್ತಿ ತನ್ನ ಭುಜಬಲದಿಂದ (ಶಿವನನ್ನು) ಮೆಚ್ಚಿಸಿ, ಪ್ರಸನ್ನನಾಗಿ ಬಂದನು. (ರಾವಣನ) ಸುಖ, ಸಂಪತ್ತು, ಪುತ್ರ, ಸೈನ್ಯ, ಸಹಾಯಕರು, ಜಯ, ಪ್ರತಾಪ, ಬಲ, ಬುದ್ಧಿ, ಮತ್ತು ದೊಡ್ಡಸ್ತಿಕೆ—ಇವುಗಳು, ಲಾಭವು ಅಧಿಕವಾದಂತೆ ಲೋಭವು ಹೆಚ್ಚಾಗುವಂತೆ, ಅಭಿವೃದ್ಧಿಯನ್ನೈದುತ್ತಿದ್ದವು. ಅವನ ತಮ್ಮನಾದ ಕುಂಭಕರ್ಣನಿಗೆ ಸಮಾನನಾದ ಶೂರವೀರನು ಈ ಜಗತ್ತಿನಲ್ಲಿಯೆ ಇರಲಿಲ್ಲ. ಅವನು ಮದಿರೆಯನ್ನು ಸೇವಿಸಿ ಆರು ತಿಂಗಳವರೆಗೆ ನಿದ್ರಿಸುತ್ತಿದ್ದನು. ಅನನು ಎಚ್ಚೆತ್ತಕೂಡಲೆ ಮೂರು ಲೋಕಗಳೂ ನಡುಗುತ್ತಿದ್ದವು. ಅವನು ನಿತ್ಯವೂ ಭೋಜನ ಮಾಡುತ್ತಿದ್ದರೆ ಇಡೀ ಜಗತ್ತೇ ನಾಶವಾಗುತ್ತಿತ್ತು. ಅವನು ಯುದ್ಧದಲ್ಲಿ ಬಹು ಧೀರನಾಗಿದ್ದನು ಅವನಂತೆಯೆ ಇನ್ನೂ ಹಲವು ಜನ ಬಲಿಷ್ಟ ಭಟರಿದ್ದರು. ರಾವಣನಿಗೆ ಮೇಘನಾದನೆಂಬ ಮಗನಿದ್ದನು. ಅವನು ಶೂರವೀರರಲ್ಲಿ ಅಗ್ರಗಣ್ಯನಾಗಿದ್ದನು. ಅವನನ್ನು ಎದುರಿಸಲಾರಿಗೂ ಆಗುವಂತಿರಲಿಲ್ಲ. ಆದುದರಿಂದ ದೇವತೆಗಳು ನಿತ್ಯವೂ ಸೋಲಿಗೆ ಗುರಿಯಾಗುತ್ತಿದ್ದರು.

ದೋ ॥ ೨೧೧ ॥ ಕುಮುಖ, ಅಕಂಪನ, ವಜ್ರದನ್ತ, ಧೂಮಕೇತು ಮತ್ತು ಅತಿಕಾಯ—ಇವರುಗಳಲ್ಲಿ ಪ್ರತಿಯೊಬ್ಬನೂ ಇಡೀ ಜಗತ್ತನ್ನು ಜಯಿಸುವಂತಿದ್ದನು. ಇಂತಹ ವೀರರು (ರಾವಣನ ಸೇನೆಯಲ್ಲಿ) ಅಸಂಖ್ಯಾತರಾಗಿದ್ದರು. ಆ ರಾಕ್ಷಸರೆಲ್ಲರೂ ಕಾಮರೂಪಿಗಳು ಎಂದರೆ ಮನಸ್ಸಿಗೆ ತೋರಿದ ವೇಷಗಳನ್ನು ಧರಿಸಬಲ್ಲಮಾಯೆಯ ವಿದ್ಯೆಯನ್ನರಿತವರಾಗಿದ್ದರು. ದಯಾಧರ್ಮಗಳನ್ನು ಅವರು ಸ್ವಪ್ನದಲ್ಲಿಯೂ ಕೂಡ ಕಂಡರಿಯರು. ಒಂದು ದಿನ

ರಾವಣನು ಸಭೆಯಲ್ಲಿ ಕುಳಿತು ತನ್ನ ಪರಿವಾರದವರನ್ನೆಲ್ಲ ನೋಡಿದನು. ಆ ಸಭೆಯಲ್ಲಿ ಅವನ ಮಕ್ಕಳು, ನೆಂಟರಿಷ್ಟರಾದಿಯಾಗಿ ಅಸಂಖ್ಯಾತ ಜನ ರಿದ್ದರು. ರಾವಣನು ಸ್ವಭಾವತಃ ಅಭಿಮಾನಶಾಲಿ. ಅವನು ತನ್ನ ಸೇನೆಯನ್ನು ನೋಡಿದ ಕೂಡಲೆ ಕ್ರೋಧ ಮತ್ತು ಅಹಂಕಾರ ಪೂರ್ಣನಾಗಿ ನುಡಿದನೆಂತೆನೆ: – " ಹೇ ರಾಕ್ಷಸರೆ, ಕೇಳಿರಿ ! ನಮ್ಮ ಶತ್ರುಗಳಾದ ದೇವತೆಗಳು ನಮ್ಮೆದುರಿ ನಲ್ಲಿ ನಿಂತು ಯುದ್ಧಮಾಡಲಾರರು. ಬಲಿಷ್ಠ ಶತ್ರುಗಳಾದ ನಮ್ಮನ್ನು ನೋಡಿದ ಕೂಡಲೆ ಪಲಾಯನ ಮಾಡುವರು. ಅವರ ಮರಣಕ್ಕೆ ಒಂದೇ ಒಂದು ಉಪಾಯವಿದೆ. ಅದು ನನಗೆ ಗೊತ್ತಿದೆ. ಈಗ ಅದನ್ನೆ ನಿಮಗೆ ಹೇಳುವೆನು, ಕೇಳಿರಿ ! ಎಲ್ಲೆಲ್ಲಿ ಬ್ರಾಹ್ಮಣರ ಭೋಜನವೂ, ಯಜ್ಞಗಳೂ ಹೋಮಗಳೂ ಶ್ರಾದ್ಧಾದಿಗಳೂ ನಡೆಯುತ್ತಿರುವವೊ ಅಲ್ಲಿಗೆ ನೀವು ಹೋಗಿ. ವಿಘ್ನಗಳನ್ನುಂಟು ಮಾಡಬೇಕು.

ದೊ ॥೨೧೨॥ (ಆಗ) ಹಸಿವಿನಿಂದ ಕ್ಷೀಣರೂ ಬಲಹೀನರೂ ಆದ ದೇವತೆ ಗಳು ನಮ್ಮೊಂದಿಗೆ ಸೇರುವರು (ಆಗ) ನಾನು ಅವರನ್ನು ಹೊಡೆದು ಹಾಕು ವೆನು, ಅಥವಾ ನನ್ನ ಸ್ವಾಧೀನಪಡಿಸಿಕೊಳ್ಳುವೆನು " – ಅನಂತರ ಅವನು ತನ್ನ ಮಗನಾದ ಮೇಘನಾದನನ್ನು ಕರೆದು, ಅವನಿಗೆ ಶಿಕ್ಷಣವನ್ನು ಕೊಟ್ಟು, ದೇವತೆಗಳ ಮೇಲೆ ಅವನ ದ್ವೇಷವು ಹೆಚ್ಚುವಂತೆ ಮಾಡಿ, ಉಪದೇಶಿಸಿದನೇ ನಂದರೆ– " ದೇವತೆಗಳಲ್ಲಾವನು ಬಲಿಷ್ಠನಾಗಿಯೂ, ಸಮರ ಶೂರನಾಗಿಯೂ, ಯುದ್ಧ ಪ್ರಿಯನಾಗಿಯೂ ಇರುವನೋ,– ಹೇ ಪುತ್ರ, ನೀನು ಪಿತನ ಆಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿ– ಆ ದೇವತೆಯನ್ನು ಯುದ್ಧದಲ್ಲಿ ಗೆದ್ದು, ಹಿಡಿದುಕೊಂಡು ಬಾ, ಏಳು ! " ಇದೇ ರೀತಿಯಾಗಿ ಎಲ್ಲರಿಗೂ ಆಜ್ಞಾಪಿಸಿ ತನ್ನ ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಹೊರಟನು. ಆಗ ಪೃಥ್ವಿಯು ನಡುಗುತ್ತಿತ್ತು. ಅವನಾ ಗರ್ಜನೆಯಿಂದ ದೇವಾಂಗನೆಯರ ಗರ್ಭವು ಕಳಚಿ ಬೀಳುತ್ತಿತ್ತು. ಕ್ರೋಧಯುಕ್ತನಾದ ರಾವಣನು (ತಮ್ಮ ಮೇಲೆ ಸಾಗಿ ಬರುತ್ತಿರುವ ಸುದ್ದಿ ಯನ್ನು ಕೇಳಿ, ದೇವತೆಗಳು ಸುಮೇರು ಪರ್ವತದ ಗುಹೆಗಳಲ್ಲಿ ಅಡಗಿಕೊಂಡರು. ರಾವಣನು ದಿಕ್ಪಾಲಕರ ಸುಂದರವಾದ ಲೋಕಗಳನ್ನೆಲ್ಲ ಲೂಟಿ ಮಾಡುತ್ತ, ಬಾರಿಬಾರಿಗೂ ಸಿಂಹದಂತೆ ಗರ್ಜಿಸುತ್ತ, ದೇವತೆಗಳನ್ನು ಬಹುವಾಗಿ ನಿಂದಿಸ ಲಾರಂಭಿಸಿದನು. ಮತ್ತೆ ಅವನು ರಣಮತ್ತನಾಗಿ, ಜತೆಯಲ್ಲಿ-ಭಟರನ್ನು ಕರೆದು ಕೊಂಡು, ಸಮಗ್ರ ಜಗತ್ತಿನಲ್ಲಿ ಓಡುತ್ತ (ಸಿಕ್ಕಿದುದನ್ನು) ನಾಶಪಡಿಸುತ್ತ ಹುಡು ಕುತ್ತ ತಿರುಗಾಡಿದರೂ ಎಲ್ಲಿಯೂ ಯಾರೂ ಅವನನ್ನು ಸಂಧಿಸಲಿಲ್ಲ. ಸೂರ್ಯ, ಚಂದ್ರ, ವಾಯು, ವರುಣ, ಕುಬೇರ, ಅಗ್ನಿ, ಕಾಲ, ಯಮ ಇತ್ಯಾದಿ ಅಧಿ ಕಾರಿಗಳೂ, ಕಿನ್ನರ, ಸಿದ್ಧ, ಮನುಷ್ಯ ಮತ್ತು ನಾಗ– ಇವರುಗಳ ಹಿಂದೆ

ರಾವಣನು ಓಡಿದನು. ಆಗ ಬ್ರಹ್ಮನ ಸೃಷ್ಟಿಯಲ್ಲಿ ಶರೀರ ಧಾರಿಗಳಾಗಿದ್ದ ಸ್ತ್ರೀಪುರುಷರೆಲ್ಲರೂ ರಾವಣನ ವಶವಾದರು ಪ್ರಾಣಿ ಮಾತ್ರವೆಲ್ಲವೂ ಭಯಭ್ರಾಂತಿಯಿಂದ ರಾವಣನ ಆಜ್ಞೆಯನ್ನು ಪಾಲಿಸುತ್ತ, ನಿತ್ಯವೂ ಎಲ್ಲರು ಒಂದು ನಮ್ರತೆಯಿಂದ ಅವನ ಚರಣಗಳಿಗೆರಗುತ್ತಿದ್ದರು.

ದೋ ॥ ೨೯-೨೧೪ ॥ (ಈ ರೀತಿಯಾಗಿ) ರಾವಣನು ಯಾರ ಸ್ವಾತಂತ್ರ್ಯವನ್ನೂ ಉಳಿಯಿಸದೆ ಸಮಗ್ರ ವಿಶ್ವವನ್ನೆ ತನ್ನ ಭುಜಬಲಾಧೀನವಾಗಿ ಮಾಡಿಕೊಂಡು, ಚಕ್ರವರ್ತಿಯಾಗಿ, ಮಂತ್ರಾಲೋಚನೆಯಿಲ್ಲದೆ. ತಾನೇ ರಾಜ್ಯವನ್ನಾಳಲಾರಂಭಿಸಿದನು. ದೇವ ಯಕ್ಷ ಗಂಧರ್ವ ಮಾನವ ಕಿನ್ನರ ನಾಗಾದಿಗಳ ಕನ್ನೆಯರನ್ನೂ ಮತ್ತೆ ಅನೇಕ ಸುಂದರಿಯರನ್ನೂ ತನ್ನ ಬಾಹುಬಲದಿಂದ ಗೆದ್ದು ರಾವಣನು ಅವರೊಂದಿಗೆ ತನ್ನ ವಿವಾಹವನ್ನು ಬೆಳಸಿದನು. ಅವನು ಇಂದ್ರಜಿತುವಿಗೆ ಹೇಳಿದುದನ್ನೆಲ್ಲ ಅವನು ಮೊದಲೆ ಮಾಡಿಟ್ಟಿದ್ದನು. ಅವನಿಗೆ ಮೊದಲು ಆಜ್ಞೆಯನ್ನಿತ್ತವರಾರು ? ಮುಂದೆ ಅವನೇನು ಮಾಡಿದನು ? ಎಂಬುದನ್ನು ಕೇಳಿರಿ.—ದೇವತೆಗಳಿಗೆ ಸಂತಾಪವನ್ನುಂಟು ಮಾಡುವ, ನೋಡುವುದಕ್ಕೆ ಭಯಂಕರವಾದ ಪಾಪಿಗಳ ರೂಪವನ್ನು ತಮ್ಮ ಮಾಯಾ ಬಲದಿಂದ ನಾನಾ ವಿಧವಾಗಿ ಧರಿಸಿ ದೈತ್ಯರು ಉಪದ್ರವುಂಟುಮಾಡಲಾರಂಭಿಸಿದರು. ಧರ್ಮವು ನಿರ್ಮೂಲವಾಗುವಂತೆ ಅವರು ವೇದ ವಿರುದ್ಧವಾದ ಕಾರ್ಯಗಳನ್ನು ಮಾಡುತ್ತ, ಎಲ್ಲೆಲ್ಲಿ ಗೋವುಗಳೂ ಬ್ರಾಹ್ಮಣರೂ ಇದ್ದರೊ ಅಂತಹ ನಗರ, ಗ್ರಾಮ ಮತ್ತು ಪಟ್ಟಣಗಳಿಗೆ ಅವರು ಬೆಂಕಿ ಹತ್ತಿಸುತ್ತಿದ್ದರು. (ಅವರ ಭಯದಿಂದ) ಎಲ್ಲಿಯೂ ಶುಭಾಚರಣೆಗಳು ನಡೆಯುತ್ತಿರಲಿಲ್ಲ. ಗುರು, ದೇವ, ಬ್ರಾಹ್ಮಣರನ್ನಾರೂ ಸನ್ಮಾನಿಸುತ್ತಿರಲಿಲ್ಲ ; ಆಗ ಹರಿಭಕ್ತಿ, ಯಜ್ಞ, ಜಪ, ದಾನಾದಿ (ಸತ್ಕಾರ್ಯ) ಗಳು ಮಾಯವಾದವು. ವೇದ ಪುರಾಣ ಶ್ರವಣವು ಸ್ವಪ್ನದಲ್ಲಿ ಕೂಡ ಕಂಡು ಬರುತ್ತಿರಲಿಲ್ಲ ಜಪ, ಯೋಗ, ವೈರಾಗ್ಯ, ತಪಸ್ಸು, ಯಜ್ಞ, ಇವೇ ಮೊದಲಾದವುಗಳ ಸಮಾಚಾರವನ್ನು ತಿಳಿದ ಕೂಡಲೆ ರಾವಣನು ಅಲ್ಲಿಗೆ ತಕ್ಷಣವೇ ಹೋಗಿ ಕ್ರೋಧದಿಂದ ಅಲ್ಲಿ ನೆರೆದವರನ್ನು ಚದರಿಸುತ್ತಿದ್ದನು ಎಲ್ಲರೂ ತಮ್ಮ ನಿವಾಸ ಸ್ಥಾನಗಳನ್ನು ಬಿಟ್ಟು ಪಲಾಯನ ಮಾಡುತ್ತಿದ್ದರು. ಆಗ ಧರ್ಮವೆಂಬ ಹೆಸರು ಕಿವಿಗಳಿಗೂ ಕೇಳಿಸದಂತೆ ಸಮಗ್ರ ಜಗತ್ತಿನಲ್ಲಿ ಭ್ರಷ್ಟಾಚಾರಗಳುಂಟಾದವು. ವೇದ, ಪುರಾಣಗಳನ್ನೋದುತ್ತಿದ್ದವರೆಲ್ಲರನ್ನೂ ರಾವಣನು ಹಿಂಸೆಪಡಿಸಿ, ದೇಶದಿಂದ ಹೊರಗೆ ತಳ್ಳಿಬಿಡುತ್ತಿದ್ದನು.

**(ಪೃಥ್ವಿಯು ಗೋರೂಪವನ್ನು ಧರಿಸಿ ಋಷಿ ಮತ್ತು ದೇವತೆಗಳೊಂದಿಗೆ ಬ್ರಹ್ಮನ ಬಳಿಗೆ ಹೋಗುವುದು)**

ಸೋ ॥ ೨೧೫ ॥ ಕ್ರೂರರಾದಾ ರಾಕ್ಷಸರ ಅತ್ಯಾಚಾರಗಳನ್ನು ವರ್ಣಿಸುವುದಸಾಧ್ಯವು. ಹಿಂಸೆಯನ್ನೆ ಪ್ರೀತಿಸುವವರ ಪಾಪಕ್ಕೆ ಮಿತಿಯಿಲ್ಲ. ಪರಧನ,

ಪರಸ್ತ್ರೀಯರನ್ನು ಹರಣಮಾಡುತ್ತಿದ್ದ ಲಂಪಟರು, ಚೋರರು, ದುಷ್ಟರು, ದ್ಯೂತಗಾರರು– ಇವರ ಸಂಖ್ಯೆಯು ಹೆಚ್ಚಿತು. ಅವರು ತಮ್ಮ ಸ್ವಂತ ತಾಯ್ತಂದೆಗಳನ್ನೂ ದೇವತೆಗಳನ್ನೂ ಲಕ್ಷಿಸದೇ ಸಾಧುಗಳನ್ನೂ ಹಿಂಸಿಸುತ್ತಿದ್ದರು. ಹೇ ಭವಾನಿ, ಈ ದುರಾಚರಣೆಗಳನ್ನು ಆಚರಿಸುವವರೆಲ್ಲರೂ ರಾಕ್ಷಸರೆಂದು ತಿಳಿ. ಈ ವಿಧವಾದ ಧರ್ಮಗ್ಲಾನಿಯನ್ನು ನೋಡಿ ಪೃಥ್ವೀ ದೇವಿಯು ಬಹು ಭಯದಿಂದ ವ್ಯಾಕುಲಳಾದಳು. ಆಗ ಆಕೆಯು " ನನಗೆ ಪರ್ವತ, ನದಿ ಮತ್ತು ಸಮುದ್ರಗಳ ಭಾರವು * ದ್ರೋಹಿಗಳಷ್ಟು ಭಾರವೆನಿಸದು ನಾನು ಅಧರ್ಮಗಳನ್ನೆ ನೋಡುತ್ತಿದ್ದಾಗ್ಗೂ ರಾವಣನ ಭಯದಿಂದ ಯಾವ ಮಾತನ್ನೂ ಉಸಿರಲಾರೆನು " ಎನ್ನುತ್ತಿದ್ದಳು. (ಅನಂತರ ಹೀಗೆಯೆ ಆಲೋಚಿಸಿ ಗೋರೂಪವನ್ನು ಧರಿಸಿ ಮುನಿಸಹಿತರಾಗಿದ್ದ ದೇವತೆಗಳ ಬಳಿಗೆ ಹೋದಳು. ಅಲ್ಲಿ ಕಂಬನಿಗಳನ್ನು ಸುರಿಸುತ್ತ ತನ್ನ ದುಃಖವನ್ನೆಲ್ಲ ಹೇಳಿಕೊಂಡಳು. ಆದರೆ ಅದರಿಂದ ಏನೂ ಪ್ರಯೋಜನವಾಗಲಿಲ್ಲ. (ಅವರು ಎಂದರೆ) ಸುರಮುನಿ ಗಂಧರ್ವರು ಭಯದಿಂದಲೂ ಶೋಕದಿಂದಲೂ ವ್ಯಾಕುಲಳಾಗಿ ಧೇನುರೂಪವನ್ನು ತಳೆದಿದ್ದ ಪೃಥ್ವಿಯನ್ನು ಕರೆದುಕೊಂಡು ಬ್ರಹ್ಮಲೋಕಕ್ಕೆ ಹೋದರು. ಬ್ರಹ್ಮನು ಅವರ ಬಿನ್ನಹಗಳನ್ನು ಕೇಳಿಕೊಂಡು, ಇಂತೆಂದನು.–" ಈ ಕಾರ್ಯದಲ್ಲಿ ನನ್ನಿಂದಾವ ಸಹಾಯವೂ ಆಗಲಾರದು. ಹೇ ಭೂದೇವಿ, ನೀನು ಯಾವನ ದಾಸಿಯಾಗಿರುವೆಯೊ ಆ ಅವಿನಾಶಿಯಾದ ಪರಮಾತ್ಮನು ನಿನ್ನ ಮತ್ತು ನಮ್ಮ ಸಹಾಯಕನು ".

ಸೋ ॥ ೨೧೬ ॥ " ಹೇ ಪೃಥ್ವೀದೇವಿ, ನೀನು ಮನಸ್ಸಿನಲ್ಲಿ ಧೈರ್ಯವನ್ನು ಧರಿಸಿ, ಭಗವಚ್ಚರಣ ಧ್ಯಾನವನ್ನು ಮಾಡು, ಆ ಪ್ರಭುವು ತನ್ನ ಭಕ್ತರ ದುಃಖಗಳನ್ನೆಲ್ಲ ಅರಿತವನು, ಆತನು ನಿನ್ನೀ ದೊಡ್ಡ ಕಷ್ಟವನ್ನು ದೂರೀಕರಿಸುವನು. " (ಬ್ರಹ್ಮದೇವನ ಈ ಮಾತುಗಳನ್ನು ಕೇಳಿ) ದೇವತೆಗಳು ಭಗವಂತನನ್ನು ಕರೆಯಲು ಈಗ ಆತನೆಲ್ಲಿದ್ದಾನೆಂದು ಆಲೋಚಿಸಲಾರಂಭಿಸಿದರು. ಕೆಲವರು ವೈಕುಂಠಕ್ಕೆ ಹೋಗೋಣವೆಂದರು. ಮತ್ತೆ ಕೆಲವರು ಭಗವಂತನು ಕ್ಷೀರಸಾಗರದಲ್ಲಿರುವನೆಂದರು. ಅವರವರ ಭಕ್ತಿಪ್ರೀತ್ಯಾನುರೂಪನಾಗಿ ಪ್ರಭುವು ಅವರಿದ್ದೆಡೆಯೆಲ್ಲಿಯು ಪ್ರಕಟನಾಗುವನು. ಹೇ ಪಾರ್ವತಿ, ಆಗ ನಾನೂ ಅಲ್ಲಿದ್ದೆನು.

---

* ಪ್ರಸನ್ನಗೀತೆಯಲ್ಲಿ ಆದಿಶೇಷನೂ ಹೀಗೆ ಹೇಳಿರುವನು.—" ನ ಭೂಮಿಃಪರ್ವತಾನಾಂ ಚ ನಮೋ ಭಾರೋವನಸ್ಪತೇಃ । ವಿಷ್ಣುಭಕ್ತಿ ವಿಹೀನಸ್ಯ ತಸ್ಯಃ ಭಾರಃ ಸದಾ ಮಮ ॥ ೧ ॥ " ಎಂದರೆ " ನನಗೆ ಭೂಮಿ, ಪರ್ವತ, ವನಸ್ಪತಿಗಳನ್ನು ಹೊರುವುದು ಭಾರವೆನಿಸದು. ಆದರೆ ವಿಷ್ಣುಭಕ್ತಿ ರಹಿತನಾದ ಮನುಷ್ಯನ ಭಾರವು ಭಾರವೆನಿಸುವುದು. "

ಆ ಸಮಯದಲ್ಲಿ ನಾನು ಅವರನ್ನು ಕುರಿತು "ಭಗವಂತನು ಎಲ್ಲ ಸ್ಥಳಗಳಲ್ಲಿಯೂ ಸಮಾನ ರೂಪದಿಂದ ವ್ಯಾಪಕನಾಗಿರುವನು. ಆತನು ಪ್ರೇಮದಿಂದ ಪ್ರಕಟನಾಗುವನು. ಆವ ದಿಕ್ಕಿನಲ್ಲಿ, ಆವ ಸ್ಥಳದಲ್ಲಿ, ಆವ ಸಮಯದಲ್ಲಿ † ಆತನಿಲ್ಲವೊ ತೋರಿಸಿರಿ ! ಚರಾಚರವಸ್ತುಗಳೆಲ್ಲದರಲ್ಲಿಯೂ ಪರಮಾತ್ಮನಿರುವನು. ಆತನು ಎಲ್ಲ ವಸ್ತುಗಳಿಂದ ಪ್ರತ್ಯೇಕನಾಗಿಯೂ ವಿರಕ್ತನಾಗಿಯೂ ಇರುವನು. ಕಾಷ್ಠಗಳಲ್ಲಿ ಗುಪ್ತವಾಗಿರುವ ಅಗ್ನಿಯು ಘರ್ಷಣದಿಂದ ಪ್ರಕಟವಾಗುವಂತೆ ಗುಪ್ತನಾದ ಪರಮಾತ್ಮನು ಪ್ರಕಟವಾಗುವನು ಎಂದು ಹೇಳಿದೆನು. ನನ್ನ ಮಾತುಗಳು ಎಲ್ಲರ ಮನಸ್ಸಿಗೂ ನಾಟಿತು. ಬ್ರಹ್ಮನು "ಭಳಿರೆ! ಭಳಿರೆ!" ಎನ್ನುತ್ತ ನನ್ನ ಮಾತನ್ನು ಪ್ರಶಂಸಿದನು.

ದೋ ॥ ೨೧೭ ॥ ಶಿವನ ಉಪದೇಶವನ್ನು ಕೇಳಿ ಬ್ರಹ್ಮನ ಮನಸ್ಸು ವಿಶೇಷ ಹರ್ಷವನ್ನು ತಳೆದಿತು. ದೇಹವು ಪುಳಕಿತವಾಯಿತು. ಕಣ್ಣುಗಳಿಂದ ಆನಂದಾಶ್ರುಗಳುದರಿದವು. ಆಗ ಆತನು ಶಾಂತಭಾವವನ್ನು ತಳೆದು ದೃಢಚಿತ್ತದಿಂದ ಕರಗಳನ್ನು ಜೋಡಿಸಿ (ಭಗವಂತನನ್ನು) ಸ್ತುತಿಸಲಾರಂಭಿಸಿದನು. – "ಹೇ ದೇವತೆಗಳ ಸ್ವಾಮಿಯೆ, ಭಕ್ತಸುಖದಾಯಕನೆ, ಪ್ರಣತಪಾಲ ಭಗವಂತನೆ! ನಿನಗೆ ಜಯವಾಗಲಿ! ಹೇ ಗೋಬ್ರಾಹ್ಮಣ ಹಿತಕರನೆ, ಅಸುರಾರಿಯೆ, ಸಿಂಧುಸುತಳಿಗೆ ಪ್ರಿಯನಾದ ಭಗವಂತನೆ! ನಿನಗೆ ಜಯವಾಗಲಿ! ಹೇ ದೇವ ಪಾಲಕನೆ! ಭೂದೇವಿ ಸಂರಕ್ಷಕನೆ! ನಿನ್ನ ಕಾರ್ಯಗಳೆಲ್ಲವೂ ಅದ್ಭುತವಾದವು. ನಿನ್ನ ರಹಸ್ಯಗಳನ್ನು ಭೇದಿಸಲಾರಿಗೆ ಸಾಧ್ಯವು? ನೀನು ಕೃಪಾಳುವೂ ದೀನದಯಾಳುವೂ ಆಗಿರುವೆ ನಮ್ಮ ಮೇಲೆ ಅನುಗ್ರಹವಿಡು. ಹೇ ಅವಿನಾಶೀ, ಹೇ ಅಂತರ್ಯಾಮಿ, ಹೇ ಸರ್ವವ್ಯಾಪಕ, ಹೇ ಪರಮಾನಂದ ಸ್ವರೂಪ! ನಿನಗೆ ಜಯವಾಗಲಿ. ಹೇ ಪರಮಾನನ್ದ! ನಿನ್ನ ಪವಿತ್ರಚರಿತೆಯನ್ನು ಇಂದ್ರಿಯಗಳಿಂದರಿಯುವುದಸಾಧ್ಯವು. ಮುಕುಂದನೆ, ನೀನು ಮಾಯಾರಹಿತನು. ಮೋಕ್ಷದಾಯಕನು. ನಿನಗೋಸ್ಕರ ಮುನಿಗಳು ಮೋಹಕ ವಸ್ತುಗಳನ್ನೆಲ್ಲ ತ್ಯಜಿಸಿ ವಿರಕ್ತರಾಗಿ, ನಿನ್ನಲ್ಲಿಯೇ ಅನುರಾಗವಿಟ್ಟು ಹಗಲಿರುಳು ನಿನ್ನ ಧ್ಯಾನವನ್ನೂ ಗುಣಗಣಗಾನವನ್ನೂ ಮಾಡುತ್ತಿರುವರು. ಸಚ್ಚಿದಾನಂದನಾದ ಭಗವಂತನೇ, ನಿನಗೆ ಜಯವಾಗಲಿ, ಆವನು ಅನ್ಯರ ಸಹಾಯಾರ್ಥವಾಗಿ ಈ ಮೂರು ತೆರನಾದ ಸೃಷ್ಟಿಗಳನ್ನು ಮಾಡಿದನೊ ಆ ಪಾಪನಾಶಕನಾದ ಪ್ರಭುವು ನಮ್ಮ ಕ್ಷೇಮಚಿಂತನೆಯನ್ನು ಮಾಡಲಿ. ನಮಗೆ ಭಕ್ತಿವಿಧಾನಗಳೂ ಪೂಜೆಯ ವಿಧಿಯೂ ಗೊತ್ತಿಲ್ಲ. ಸಂಸಾರ ಭಯನಿವಾರಕನೂ, ಮುನಿಗಳ ಮನಸ್ಸಿಗೆ

---

† "ಜಲೇವಿಷ್ಣು ಸ್ಥಲೇವಿಷ್ಣುರ್ವಿಷ್ಣುಃ ಪರ್ವತಮಸ್ತಕೆ। ಜ್ವಾಲಮಾಲಾಕುಲೇ ವಿಷ್ಣುಃ ಸರ್ವಂ ವಿಷ್ಣುಮಯಂ ಜಗತ್ ॥ ೧ ॥"

ಆನಂದವನ್ನುಂಟು ಮಾಡುವವನೂ ವಿಪತ್ಸಮೂಹನಾಶಕನೂ, ಮನೋವಾಕ್ಕರ್ಮಗಳಿಂದ ಶರಣಾಗತರಾಗಿ ಬಂದ ದೇವತೆಗಳಿಗೆ ತನ್ನ ಅಡಿದಾವರೆಗಳಲ್ಲಿ (ಆಶ್ರಯವೀಯುವವನೂ) – ಸರಸ್ವತಿ, ವೇದ, ಆದಿಶೇಷ ಮತ್ತು ಋಷಿಗಳಿಂದಲೂ ಕೂಡ ಅರಿಯಲಸಾಧ್ಯನಾದವನೂ ವೇದಗಳಲ್ಲಿ ದೀನನಾಥನೆಂಬ ನಾಮದಿಂದ ಕರೆಯಲ್ಪಟ್ಟವನೂ ಆದ ಭಗವಂತನು ನಮ್ಮ ಮೇಲೆ ಪ್ರಸನ್ನನಾಗಲಿ. (ಹೇ ಭಗವಂತನೆ!) ಸಂಸಾರ ರೂಪವಾದ ಸಮುದ್ರಕ್ಕೆ ಮಂದರಾಚಲನಾಗಿರುವೆ. ನೀನು ಸರ್ವಸುಂದರನೂ, ಗುಣನಿಧಿಯೂ, ಸುಖಪುಂಜನೂ ಆಗಿರುವೆ. ಹೇ ನಾಥ, ಈ ಮುನಿಗಳೂ ಸಿದ್ಧರೂ ದೇವತೆಗಳೂ ಬಹು ಭಯಭೀತರಾಗಿ ನಿನ್ನ ಅಡಿದಾವರೆಗಳಿಗೆ ನಮಿಸುತ್ತಿರುವರು

(ಭಗವಂತನು ಪ್ರಸನ್ನನಾಗಿ ಅಭಯದಾನ ಮಾಡುವುದು ಮತ್ತು ದಶರಥನಂದನನಾಗಿ ಅವತರಿಸಲು ಸಂಕಲ್ಪಿಸುವುದು.)

ದೋ ॥ ೨೧೮ ॥ ದೇವತೆಗಳು, ಭೂದೇವಿ, ಮತ್ತು ಮುನಿಗಳು ಭಯಭೀತರಾಗಿರುವುದನ್ನು ನೋಡಿ, ಅವರ ಪ್ರೇಮವಚನಗಳನ್ನು ಕೇಳಿ, ಶೋಕಸಂದೇಹ ನಾಶಕನಾದ (ಭಗವಂತನು) ಆಕಾಶವಾಣಿಯಲ್ಲಿ ಇಂತೆಂದು ನುಡಿದನು.–"ಹೇ ಮುನಿಗಳೇ! ಹೇ ಸಿದ್ಧರೆ! ಹೇ ದೇವತೆಗಳೇ! ನೀವು ಭಯಪಡಬೇಡಿರಿ. ನಿಮಗಾಗಿ ನಾನು ಮನುಷ್ಯ ಶರೀರವನ್ನು ಧರಿಸುವೆನು. ನಾನು ನನ್ನ ಅಂಶಗಳ ಸಹಿತನಾಗಿ ಉದಾರವಾದ ಸೂರ್ಯವಂಶದಲ್ಲಿ ಮನುಷ್ಯನಾಗಿ ಅವತರಿಸುವೆನು. ಕಶ್ಯಪನೂ * ಅದಿತಿಯೂ ಮುಂಚೆ ಮಹಾ ತಪಸ್ಸನ್ನಾಚರಿಸಿದ್ದರು. ನಾನು ಅವರಿಗೆ ವರದಾನವನ್ನು ಕೊಟ್ಟಿರುವೆನು. ಅವರಿಬ್ಬರು ಕೋಸಲಪುರದಲ್ಲಿ ದಶರಥ ಮತ್ತು ಕೌಸಲ್ಯ ಎಂಬ ಹೆಸರಿನಿಂದ ರಾಜರಾಣಿಯರಾಗಿ ಬಾಳುತ್ತಿರುವರು. ನಾವು ನಾಲ್ವರೂ ಅಣ್ಣತಮ್ಮಂದಿರಾಗಿ ಅವರ ಮನೆಯಲ್ಲಿ ಅವತರಿಸುವೆವು. ಏಕೆಂದರೆ ಆ ರಾಜನು ರಘುಕುಲತಿಲಕನಾಗಿರುವನು. ನಾನು ನಾರದನ ವಚನಗಳನ್ನು ಸತ್ಯವಾಗಿ ನಡೆಯಿಸುವೆನು. ನಾನು ನನ್ನ ಪರಮ

---

* ಅಧ್ಯಾತ್ಮರಾಮಾಯಣೇ — "ಕಶ್ಯಪಸ್ಯ ವರೋದತ್ತ ಸ್ತಪಸಾ ತೋಷಿತೇನ ಮೇ। ಯಾಚಿತಃ ಪುತ್ರಭಾವಾಯ ತಥೇತ್ಯಂಗೀ ಕೃತಂ ಮಯಾ ॥ ೧ ॥

ಸ ಇದಾನೀಂ ದಶರಥೋಭೂತ್ವಾ ತಿಷ್ಠತಿ ಭೂತಲೇ। ತಸ್ಯಾಹಂ ಪುತ್ರತಾಮೇತ್ಯ ಕೌಶಲ್ಯಾಯಾಂ ಶುಭೇದಿನೇ ॥ ೨ ॥

ಚತುರ್ಧಾತ್ಮಾನಮೇವಾಹಂ ಸೃಜಾಮೀತರಯೋಃ ಪೃಥಕ್। ಯೋಗಮಾಯಾಽಪಿ ಸೀತೇತಿ ಜನಕಸ್ಯ ಗೃಹೇ ತದಾ ॥ ೩ ॥

ಉತ್ಪತ್ಸ್ಯತೇ ತಯಾ ಸಾರ್ಧಂ ಸರ್ವಂ ಸಂಪಾದಯಾಮ್ಯಹಮ್ ॥– ಇದರ ಸಂಕ್ಷಿಪ್ತಾರ್ಥವು ಮೇಲಿನಚೌಪದಿಗಳ ಅರ್ಥದಲ್ಲಿ ಬಂದಿರುವುದರಿಂದ ಸ್ಪಷ್ಟವಾಗಿದೆ.

ಶಕ್ತಿ ಸಮೇತನಾಗಿ ಅವತರಿಸುವೆನು. ಹೇ ದೇವತೆಗಳೇ ನೀವು ನಿರ್ಭಯರಾಗಿರಿ. ನಾನು ಭೂದೇವಿಯ ಭಾರವನ್ನು ನಿಗ್ರಹಿಸುವೆನು." ಈ ಪರಿಯಾಗಿ ಆಕಾಶದಲ್ಲುಂಟಾದ ಪರಬ್ರಹ್ಮವಾಣಿಯನ್ನು ಕೇಳಿ ದೇವತೆಗಳ ಹೃದಯವು ಶಾಂತವಾಯಿತು. ಬಳಿಕ ಅವರು ಹಿಂದಿರುಗಿದರು. ಬ್ರಹ್ಮನು ಪೃಥ್ವೀದೇವಿಯನ್ನು ಸಂತೈಸಿದನು. ಆಕೆಗೂ (ಆಕಾಶವಾಣಿಯಲ್ಲಿ) ವಿಶ್ವಾಸವುಂಟಾಗಿ, ನಿರ್ಭೀತಳಾದಳು.

ದೋ ॥೨೧೯॥ (ಬಳಿಕ) ಬ್ರಹ್ಮದೇವನು ದೇವತೆಗಳನ್ನು ಕುರಿತು, "ನೀವು ಪೃಥ್ವಿಯಲ್ಲಿ ಕಪಿ ರೂಪದಿಂದ ಅವತರಿಸಿ ಭಗವಚ್ಚರಣ ಸೇವೆಯನ್ನು ಮಾಡುತ್ತಿರಿ, ಹೋಗಿರಿ!" ಎಂದು ಹೇಳಿ ತನ್ನ ಲೋಕಕ್ಕೆ ತೆರಳಿದನು. ಭೂದೇವಿಯೊಂದಿಗೆ ದೇವತೆಗಳೆಲ್ಲರು ನಿಶ್ಚಿಂತರಾಗಿ ತಂತಮ್ಮ ಸ್ಥಾನಗಳಿಗೆ ತೆರಳಿದರು. ಅನಂತರ ಅವರು ಪ್ರಸನ್ನ ಚಿತ್ತದಿಂದ ಬ್ರಹ್ಮದೇವನ ಆಜ್ಞೆಯನ್ನು ತಡವಿಲ್ಲದೆ ಅನುಸರಿಸಿದರು. ದೇವತೆಗಳೆಲ್ಲರೂ ಭೂಮಿಯ ಮೇಲೆ ವಾನರ ಶರೀರಗಳನ್ನು ಧರಿಸಿದರು. ಆ ವಾನರರಲ್ಲಿ ಅತುಳ ಬಲ ಪ್ರತಾಪಗಳು ನೆಲೆಗೊಂಡವು ಪರ್ವತಗಳೂ, ವೃಕ್ಷಗಳೂ, ಶಾಖೆಗಳೂ ಅವರ ಅಸ್ತ್ರಗಳಾದುವು. ಧೀರಮತಿಗಳಾದವರೆಲ್ಲರೂ ಭಗವಂತನ ಆಗಮನವನ್ನೇ ನಿರೀಕ್ಷಿಸಲಾರಂಭಿಸಿದರು. ಅಲ್ಲಲ್ಲಿ ಸುಂದರವಾದ ತಂತಮ್ಮ ದೊಡ್ಡ ಸೈನ್ಯಗಳನ್ನು ಸೇರಿಸಿ ವನಗಳಲ್ಲಿಯೂ ಪರ್ವತಗಳ ಮೇಲೂ ಆ ವಾನರರು ವಾಸಿಸಲಾರಂಭಿಸಿದರು. ಅನಂತರ ಮುಂದಾದ ಸಂಗತಿಗಳನ್ನೂ ಕೇಳಬೇಕು! ಕೇಳಿರಿ! ಅಯೋಧ್ಯಾ ನಗರದಲ್ಲಿ ರಘುಕುಲಮಣಿಯಾದ ದಶರಥನ ಹೆಸರು ವೇದಗಳಲ್ಲಿಯೂ ವಿದಿತವಾಗಿರುವುದು. ಅವನು ಬಹು ಧರ್ಮಧುರಂಧರನೂ, ಗುಣನಿಧಿಯೂ ಜ್ಞಾನಿಯೂ ಆಗಿದ್ದನು ಸಾರಂಗಪಾಣಿಯಾದ ಈಶ್ವರನನ್ನು ಅವನು ವಿಶೇಷ ಭಕ್ತಿಯಿಂದ ಪೂಜಿಸುತ್ತಿದ್ದನು.

(ದಶರಥರಾಯನು ಯಜ್ಞಮಾಡಿಸುವುದೂ ಅಗ್ನಿದೇವನು ಪ್ರತ್ಯಕ್ಷನಾಗಿ ಪಾಯಸವನ್ನು ಕೊಡುವುದೂ)

ದೋ ॥೨೨೦॥ ಆತನಿಗೆ ಪ್ರಿಯರಾದ ಕೌಸಲ್ಯಾದಿ ರಾಣಿಯರೂ ಸದಾಚಾರಿಣಿಯರಾಗಿದ್ದರು. ಅವರು ಯಾವಾಗಲೂ ಪತಿಯ ಆಜ್ಞೆಯಲ್ಲಿ ನಿರತರಾಗಿಯೂ ನಮ್ರರಾಗಿಯೂ ಈಶ್ವರನ ಚರಣಕಮಲಗಳಲ್ಲಿ ದೃಢಭಕ್ತಿಯುಳ್ಳವರಾಗಿಯೂ ಇದ್ದರು. ತನಗೆ ಮಕ್ಕಳಾಗಲಿಲ್ಲವೆಂದು ಒಂದು ದಿನ ದಶರಥರಾಯನು ವಿಶೇಷ ವ್ಯಥೆಹೊಂದಿದವನಾಗಿ ಕೂಡಲೆ ತನ್ನ ಗುರುವಾದ ವಸಿಷ್ಠನ ಸನ್ನಿಧಿಯನ್ನೈದಿ, ಆತನ ಚರಣಗಳಿಗೆರಗಿ ತನ್ನ ದುಃಖವನ್ನು ಗುರುವಿಗರುಹಿದನು. ವಸಿಷ್ಠ ಋಷಿಯು ರಾಜನನ್ನು ಸಂತೈಸಿ ದಶರಥನೆ, ಧೈರ್ಯವನ್ನು ತಳೆ. ತ್ರೀಲೋಕ ವಿಖ್ಯಾತರೂ ಭಕ್ತಜನರ ಭೀತಿನಾಶಕರೂ ಆದಂತಹ ನಾಲ್ವರು

ಪುತ್ರರು ನಿನಗೆ ಹುಟ್ಟುವರು, ಎಂದು ಹೇಳಿದನು. ಬಳಿಕ ವಸಿಷ್ಠನು ಶೃಂಗೀ * ಋಷಿಯನ್ನು ಕರೆಯಿಸಿ ಶುಭವಾದ ಪುತ್ರಕಾಮೇಷ್ಟಿ ಯಜ್ಞವನ್ನು ಮಾಡಿಸಿದನು. ಆಗ ಮುನಿಗಳು ಬಹು ಭಕ್ತಿಯಿಂದ ಅಗ್ನಿಗೆ ಆಹುತಿಯನ್ನರ್ಪಿಸಿದರು. ಅಗ್ನಿ ದೇವನು ಕೈಯ್ಯಲ್ಲಿ ಚರುವನ್ನು ಧರಿಸಿ ಪ್ರಕಟನಾಗಿ, ದಶರಥರಾಜನನ್ನು ಕುರಿತು "ವಸಿಷ್ಠನ ಮನಸ್ಸಿನಲ್ಲಿರುವಂತೆ ನಿನ್ನ ಕಾರ್ಯಗಳೆಲ್ಲ ಸಿದ್ಧಿಸುವುವು. ಹೇ ರಾಜನ್! ನೀನು ಈ ಹವಿಸ್ಸನ್ನು ಯೋಗ್ಯ ರೀತಿಯಿಂದ ಭಾಗಮಾಡಿ ರಾಣಿಯ ರೆಲ್ಲರಿಗೂ ಹಂಚು" ಎಂದು ಹೇಳಿದನು.

ದೋ ॥೨೨॥ ಬಳಿಕ ಅಗ್ನಿದೇವನು ಅಲ್ಲಿದ್ದ ಸಭೆಯವರಿಗೆ ಎಲ್ಲ ಸಂಗತಿ ಗಳನ್ನೂ ತಿಳುಹಿ ಅಂತರ್ಧಾನನಾದನು. ದಶರಥರಾಯನು ಮೇರೆಯಿಲ್ಲದ ಪರಮಾನಂದದಲ್ಲಿ ಮಗ್ನನಾಗಿ ತನ್ನ ಪ್ರಿಯ ರಾಣಿಯರನ್ನು ಕರೆಯಿಸಿ ಆ ಪವಿತ್ರ ಪ್ರಸಾದದಲ್ಲಿ ಅರ್ಧಭಾಗವನ್ನು ಕೌಸಲ್ಯಾದೇವಿಗೂ, ಉಳಿದರ್ಧದಲ್ಲಿ ಅರ್ಧವನ್ನು ಕೈಕೇಯಿಗೂ, ಶೇಷಾರ್ಧವನ್ನು ಕೌಸಲ್ಯೆಯಿಂದಲೂ ಕೈಕೇಯಿಂದಲೂ ಮುಟ್ಟಿಸಿ ಸುಮಿತ್ರಾದೇವಿಗೂ ಕೊಟ್ಟನು. (ಬಳಿಕ) ರಾಣಿಯರು ಗರ್ಭವತಿಯ

---

* ಋಷ್ಯಶಂಗನು ವಿಭಾಂಡಕ ಋಷಿಯ ಪುತ್ರನು ಕಶ್ಯಪ ಋಷಿಯ ಪೌತ್ರನು. ಅಂಗದೇಶದ ರಾಜನಾದ ರೋಮಪಾದನು ತನ್ನ ಪ್ರಜೆಗಳ ಮೇಲೆ ಅತ್ಯಾಚಾರ ವನ್ನು ನಡೆಯಿಸಲು, ಅವನ ರಾಜ್ಯದಲ್ಲಿ ಮಳೆಯು ಬರುವುದೇ ನಿಂತು ಹೋಯಿತು. ಆಗ ರಾಜನು ಭಯದಿಂದ ವೇದಜ್ಞರಾದ ವಿದ್ವಾಂಸರನ್ನು ಕರೆಯಿಸಿ, ತನ್ನ ರಾಜ್ಯ ದಲ್ಲಿ ಮಳೆ ಬರುವಂತೆ ಉಪಾಯವನ್ನು ಸೂಚಿಸಬೇಕೆಂದು ಪ್ರಾರ್ಥಿಸಿದನು. ಆಗ ಅವರು ಅವನನ್ನು ಕುರಿತು ಶೃಂಗೀ ಋಷಿಯನ್ನು ಕರೆಯಿಸಿ, ವೇದ ವಿಧಿಯಿಂದ ಶಾಂತಾ ಎಂಬ ನಿನ್ನ ಮಗಳನ್ನು ಆತನಿಗೆ ಕೊಟ್ಟು ವಿವಾಹವನ್ನು ಮಾಡಿದರೆ ಮಳೆ ಬರುವುದು ಎಂದರು. ಈ ಕಾರ್ಯವನ್ನು ರಾಜನು ತನ್ನ ಮಂತ್ರಿಗಳಿಗೆ ಒಪ್ಪಿಸಿದನು ಅವರು ಶೃಂಗೀಋಷಿಯು ಆಜನ್ಮ ಬ್ರಹ್ಮಚಾರಿಯಾಗಿರುವುದರಿಂದ ನಾವು ಕರೆದರೆ ಬರಲಾರನೆಂದಾಲೋಚಿಸಿ, ಅವನ ಬಳಿಗೆ ಲೋಕಸುಂದರಿಯರಾದ ವೇಶ್ಯೆಯರನ್ನು ಕಳುಹಿಸಿದರು. ವೇಶ್ಯಾಸ್ತ್ರೀಯರು ಹಲವು ವಿಧವಾದ ಭಕ್ಷ್ಯಗಳನ್ನೂ ಫಲಗಳನ್ನೂ ತೆಗೆದುಕೊಂಡು, ವಿಭಾಂಡಕ ಋಷಿಯು ಆಶ್ರಮದಲ್ಲಿಲ್ಲದ ಸಮಯದಲ್ಲಿ ಅಲ್ಲಿಗೆ ಹೋಗಿ, ಆಶ್ರಮದ ಬಳಿ ನರ್ತಿಸಲಾರಂಭಿಸಿದರು ಆಗ ದೈವಯೋಗದಿಂದ ಶೃಂಗಿ ಋಷಿಯು ಅಲ್ಲಿಗೆ ಬಂದು ವಾರಾಂಗನೆಯರನ್ನು ನೋಡಿ ಚಕಿತನಾದನು. ಅವರನ್ನು ತನ್ನ ಆಶ್ರಮದೊಳಗೆ ಕರೆದುಕೊಂಡು ಹೋಗಿ ಕಂದಮೂಲ ಫಲಗಳನ್ನು ಕೊಟ್ಟನು. ಆ ಸ್ತ್ರೀಯರೂ ಅವನಿಗೆ ಮೋದಕಾದಿ ಖಾದ್ಯಗಳನ್ನು ಕೊಟ್ಟು, ತಮ್ಮ ಹಾವಭಾವ ಗಳಿಂದ ಅವನನ್ನು ವಶಪಡಿಸಿಕೊಂಡು ಅಂಗದೇಶಕ್ಕೆ ಕರೆದುಕೊಂಡು ಬಂದ ಕೂಡಲೆ ಮಳೆ ಸುರಿಯಲಾರಂಭಿಸಿತು. ರಾಜನು ಋಷಿಯನ್ನು ಬಹುವಾಗಿ ಆದರಿಸಿ ಸತ್ಕರಿಸಿ ತನ್ನ ಮಗಳನ್ನು ಕೊಟ್ಟು ವಿವಾಹ ಮಾಡಿದನು ಇದರ ಸಂಪೂರ್ಣ ಕಥೆಯು ವಾಲ್ಮೀಕಿಯ ರಾಮಾಯಣದಲ್ಲಿರುವುದು.

ರಾಗಿ ಹರ್ಷದಿಂದ ಪರಮ ಪ್ರಸನ್ನಚಿತ್ತರಾದರು. ಭಗವಂತನು ಗರ್ಭವನ್ನು ಪ್ರವೇಶಿಸಿದಂದಿನಿಂದಲೇ ಸಕಲ ಪ್ರಜೆಗಳ ಸುಖ ಸಂಪದಭಿವೃದ್ಧಿಯಾಗಲಾರಂಭಿಸಿತು. ಶೀಲಾಲಂಕಾರ ತೇಜಸ್ಸುಗಳ ನಿಧಿಗಳಾದ ರಾಣಿಯರು ಅಂತಃಪುರದಲ್ಲಿ ಸುಖದಿಂದ ಕಾಲವನ್ನು ಕಳೆಯುತ್ತ ಶ್ರೀಹರಿಯು ಪ್ರಕಟವಾಗುವ ದಿನವನ್ನು ನಿರೀಕ್ಷಿಸುತ್ತಿದ್ದರು.

( ಶ್ರೀರಾಮ ಜನ್ಮ )

ದೋ ॥೨೨॥ ಶ್ರೀರಾಮಚಂದ್ರನ ಸುಖದಾಯಕವಾದ ಜನ್ಮ ಸಮಯದಲ್ಲಿ ಯೋಗ, ಲಗ್ನ, ಗ್ರಹ, ವಾರ, ತಿಥಿ ಇವುಗಳೆಲ್ಲವೂ ಶುಭಕರವಾಗಿದ್ದವು. ಆಗ ಚರಾಚರ ವಸ್ತುಗಳೆಲ್ಲ ಪರಮ ಪ್ರಸನ್ನಭಾವವನ್ನು ತಳೆದವು. ಆದೇಕೆಂದರೆ ಶ್ರೀರಾಮಚಂದ್ರನ ಜನ್ಮವೇ ಸುಖಕ್ಕೆ ಮೂಲಕಾರಣವಾಗಿತ್ತು. ಪವಿತ್ರವಾದ ಚೈತ್ರಮಾಸ, ಶುಕ್ಲಪಕ್ಷ, ನವಮೀ ತಿಥಿಯಲ್ಲಿ ಭಗವಂತನಿಗೆ ಪ್ರಿಯಕರವಾದ ಅಭಿಜಿತ್ ಮುಹೂರ್ತದಲ್ಲಿ ದಿನದ ಮಧ್ಯಭಾಗ (ಎಂದರೆ ಮಧ್ಯಾಹ್ನ) ವಾಗಿತ್ತು. ಆಗ ಚಳಿಯಾಗಲಿ ಬಿಸಿಲಿನ ತಾಪವಾಗಲಿ ವಿಶೇಷವಾಗಿರಲಿಲ್ಲ. ಆ ಸಮಯವು ಬಹು ಪವಿತ್ರವೂ ಸಮಸ್ತ ಲೋಕಗಳಿಗೂ ವಿಶ್ರಾಂತಿದಾಯಕವಾದುದೂ ಆಗಿದ್ದಿತು (ಅಗ ದಿಕ್ಕುಗಳೆಲ್ಲವೂ ಶೋಭಿಸಿದವು. ಕೆರೆ ತೊರೆ ಮೊದಲಾದವುಗಳ ಜಲಗಳು ತಿಳಿಯಾದವು). ಶೀತಲವೂ ಸುಗಂಧಿತವೂ ಆದ ಮಂದಮಾರುತವು ಬೀಸಿತು. ದೇವತೆಗಳು ಪ್ರಸನ್ನಚಿತ್ತರಾದರು. ಸಂತರು ಪ್ರಫುಲ್ಲಿತರಾದರು. ವನದಲ್ಲಿ ವೃಕ್ಷಗಳು ಪುಷ್ಪಿಸಿದವು. ಪರ್ವತಗಳ ಮೇಲೆ ಮಣಿಗಣಿಗಳುದಯಿಸಿದವು. ನದಿಗಳಲ್ಲಿ ಅಮೃತಧಾರೆಯು ಪ್ರವಹಿಸಿತು. ಆಗ ಬ್ರಹ್ಮನೂ, ವಿಮಾನಗಳನ್ನೇರಿದ ದೇವತೆಗಳೂ ಒಟ್ಟಾಗಿ ಸೇರಿ ಅಯೋಧ್ಯಾನಗರಕ್ಕೆ ಹೊರಟರು. ನಿರ್ಮಲವಾದ ಆಕಾಶದಲ್ಲಿ ದೇವತೆಗಳ ಗುಂಪು ಸೇರಿತು ಗಂಧರ್ವ ಸಮೂಹವು ಆನಂದದಿಂದ (ಭಗವಂತನ) ಗುಣಗಾನವನ್ನು ಮಾಡಿದುದು. ದೇವತೆಗಳು ಅಂಜಲಿಗಳಲ್ಲಿ ಹೂಗಳನ್ನು ತುಂಬಿಕೊಂಡು ಪುಷ್ಪವೃಷ್ಟಿಗೈದರು. ಆಕಾಶದಲ್ಲಿ ಮಂಗಳವಾದ್ಯಗಳು ಮೊಳಗಿದವು. ನಾಗಲೋಕದವರೂ, ಮುನಿಗಳೂ ದೇವತೆಗಳೂ ಸ್ತುತಿಗೈದರು.

(ಶ್ರೀರಾಮನು ಕೌಸಲ್ಯೆಗೆ ತನ್ನ ವಿರಾಟ್ ರೂಪವನ್ನು ತೋರಿಸುವುದು)

ದೋ ॥ ೨೩ ॥ ಆಗ ಸಕಲ ಜಗತ್ತಿಗೂ ವಿಶ್ರಾಂತಿದಾಯಕನಾದ ಜಗನ್ನಿವಾಸನೆನಿಸಿದ ಶ್ರೀರಾಮಚಂದ್ರ ಪ್ರಭುವು ಪ್ರಕಟನಾದನು. ದೇವತೆಗಳೆಲ್ಲರೂ ಅವನನ್ನು ಸ್ತುತಿಸಿ ಸ್ವಸ್ಥಾನಗಳಿಗೆ ತೆರಳಿದರು. ಕೌಸಲ್ಯೆಗೆ ಹಿತಕರನೂ ಪರಮದಯಾಳುವೂ ಕೃಪಾಳುವೂ ಆದ ಭಗವಂತನು ಪ್ರಕಟಗೊಂಡಾಗ ಮುನಿಜನರ ಮನಸ್ಸನ್ನು ಹರಣಮಾಡುವಂತಹ ಆತನ ಅದ್ಭುತ ರೂಪವನ್ನು ನೋಡಿ

ಮಾತೆಯಾದ ಕೌಸಲ್ಯೆಯು ಹರ್ಷಿತಳಾದಳು. ಆತನ ನೇತ್ರಗಳು ಸುಂದರವಾಗಿಯೂ ಶರೀರವು ಶ್ಯಾಮಸುಂದರವಾಗಿಯೂ ಇದ್ದವು. ನಾಲ್ಕು ಕೈಗಳಲ್ಲಿ ಶಂಖ, ಚಕ್ರಗದಾ ಪದ್ಮಗಳನ್ನು ಧರಿಸಿದ್ದನು. ಕಂಠದಲ್ಲಿ ವನಮಾಲೆಯು ಭೂಷಿಸುತ್ತಿತ್ತು. ನೇತ್ರಗಳು ವಿಶಾಲವಾಗಿದ್ದವು (ಈ ಬಗೆಯಾಗಿ) ಅಸುರಾರಿಯಾದ ಭಗವಂತನ (ರೂಪವು) ಶೋಭೆಯ ಸಮುದ್ರವೋ ಎಂಬಂತಿದ್ದಿತು. ಕೌಸಲ್ಯೆಯು ಆತನಿದಿರಿನಲ್ಲಿ ಕರಗಳನ್ನು ಜೋಡಿಸಿ " ಹೇ ಅನಂತ! ನಾನು ನಿನ್ನನ್ನು ಸ್ತುತಿಸಲಾರೆನು, ವೇದಗಳೂ ಪುರಾಣಗಳೂ ನಿನ್ನ ಮಾಯೆಯು ಗುಣ ಮತ್ತು ಜ್ಞಾನಗಳಿಂದ ಅತೀತವಾಗಿರುವುದೆಂದು ಸಾರುತ್ತಿರುವವು. ನೀನು ಕರುಣಾಸಿಂಧುವೆಂದೂ ಸುಖಸಾಗರನೆಂದೂ, ಗುಣನಿಧಿಯೆಂದು ವೇದಗಳೂ ಸಂತಜನರೂ ಹೊಗಳುತ್ತಿರುವರು. (ಭಕ್ತ) ಜನಾನುರಾಗಿಯೂ ಲಕ್ಷ್ಮೀಪತಿಯೂ ಆದ ನೀನು ನನ್ನ ಹಿತಕ್ಕೋಸ್ಕರ ಪ್ರಕಟವಾಗಿರುವೆ. ನಿನ್ನ ಮಾಯೆಯಿಂದ ರಚಿತವಾದ ಅನಂತಕೋಟಿ ಬ್ರಹ್ಮಾಂಡಗಳು * ನಿನ್ನ ರೋಮರೋಮಗಳಲ್ಲಿಯೂ ನೆಲೆಗೊಂಡಿವೆಯೆಂದು ವೇದಗಳು ಘೋಷಿಸುತ್ತಿವೆ. ಅಂತಹ ನೀನು ನನ್ನ ಉದರವನ್ನು ಪ್ರವೇಶಿಸಿರುವೆ, "– ಎನ್ನುತ್ತ ವಿಸ್ಮಿತಳಾದಳು. ಈ ನಗೆಯ ಮಾತುಗಳನ್ನು ಕೇಳಿ ಧೀರಮತಿಗಳು ಸ್ಥಿರರಾಗಿರಲಾರರು. ಮಾತೆಗೆ ಎಚ್ಚರವಾದಾಗ ಭಗವಂತನು ಮುಗುಳ್ನಗೆಯನ್ನು ಪ್ರಕಟಿಸುತ್ತಿದ್ದನು. ಏಕೆಂದರೆ ಆತನು ಇನ್ನೂ ಹಲವು ಬಗೆಯ ಚರಿತ್ರೆಗಳನ್ನು ಉಂಟುಮಾಡಬೇಕೆಂದಿರುವನು. ಆತನು ಮನೋಹರವಾದ ಮುಂಚಿನ ಚರಿತ್ರೆಯನ್ನು ಹೇಳಿ ತಾಯಿಯನ್ನು ಸಮಾಧಾನ ಪಡಿಸಿದನು. ಆಗ ಮಾತೆಯಲ್ಲಿ ಪುತ್ರಪ್ರೇಮ ಪ್ರೇರಣೆಯಾಯಿತು. ಆಕೆಯ ಬುದ್ಧಿಯು ಬದಲಾಯಿತು. ಆಗ ಅವಳು " ಎಲೌ ಪುತ್ರನೆ ! ನಿನ್ನೀ ರೂಪವನ್ನು ತ್ಯಜಿಸು (ನನಗೆ) ವಿಶೇಷ ಪ್ರಿಯಕರವಾದ ನಿನ್ನ ಬಾಲಲೀಲೆಯನ್ನು ತೋರಿಸು. ಆ ಸುಖವು ನನಗೆ ಪರಮಾನಂದವನ್ನುಂಟು ಮಾಡುವುದು " ಎಂದ ಕೂಡಲೆ ದೇವತೆಗಳೊಡೆಯನಾದ ಭಗವಂತನು ಬಾಲಕ ರೂಪವನ್ನು ಧರಿಸಿ ಅಳಲಾರಂಭಿಸಿದನು. ಈ (ರಾಮಜನ್ಮ) ಚರಿತೆಯನ್ನು ಪಾಡುವವರು † ಸಂಸಾರ ಕೂಪದಲ್ಲಿ ಬೀಳದೆ ಪರಮಪದವನ್ನೈದುವರು.

---

* ಅಧ್ಯಾತ್ಮರಾಮಾಯಣೇ— " ಜಠರೇ ತವ ದೃಶ್ಯಂತೇ ಬ್ರಹ್ಮಾಂಡಾಃ ಪರಮಾಣವಃ । ತ್ವಂ ಮಮೋದರ ಸಂಭೂತ ಇತಿ ಲೋಕಾನ್ ವಿಡಂಬಸೇ "

† ಭಗವದ್ಗೀತೆಯಲ್ಲಿ ಹೇಳಿರುವುದೇನಂದರೆ— " ಜನ್ಮ ಕರ್ಮ ಚ ಮೇ ದಿವ್ಯಮೇವಂ ಯೋ ವೇತ್ತಿ ತತ್ವತಃ । ತ್ಯಕ್ತ್ವಾ ದೇಹಂ ಪುನರ್ಜನ್ಮ ನೈತಿ ಮಾಮೇತಿ ಸೋಽರ್ಜುನ ॥ "

ದೋ ॥ ೨೨೪ ॥ ಭಗವಂತನು ಮಾಯೆ, ಗುಣ ಮತ್ತು ಇಂದ್ರಿಯ ಗಳಿಂದ ದೂರನಾಗಿದ್ದರೂ, ಕೇವಲ ತನ್ನ ಇಚ್ಛಾ ಮಾತ್ರದಿಂದ, ಬ್ರಾಹ್ಮಣ, ಗೋಮಾತೆ, ದೇವತೆಗಳು ಮತ್ತು ಸಾಧುಗಳ ಹಿತಕ್ಕೋಸ್ಕರವಾಗಿಯೆ ಆತನು ದೇಹಧಾರಣೆ ಮಾಡಿದನು ‡ ಮಗುವಿನ ಪ್ರಿಯಕರವಾದ ಅಳುವಿನ ಧ್ವನಿ ಯನ್ನು ಕೇಳಿ ಅರಸಿಯರೆಲ್ಲರೂ ಚಕಿತರಾಗಿ ಓಡಿಬಂದರು. ದಾಸಿಯರು ಸಡಗರದಿಂದ ಅತ್ತಿತ್ತ ಓಡಾಡಲಾರಂಭಿಸಿದರು. ಆನಂದದ ಸುದ್ದಿಯನ್ನು ಕೇಳಿ ಪುರಜನರೆಲ್ಲರೂ ಉತ್ಸವದಲ್ಲಿ ಮಗ್ನರಾದರು. ಪುತ್ರಜನ್ಮವಾರ್ತೆಯನ್ನು ಕೇಳಿದ ದಶರಥರಾಯನಿಗೆ ಬ್ರಹ್ಮಾನಂದದಷ್ಟು ಸಂತೋಷವುಂಟಾಯಿತು. ಪರಮ ಪ್ರೇಮದಿಂದ ಅವನ ಮನಸ್ಸು ಪೂರ್ಣವಾಗಿ ಆತನ ಶರೀರವು ಪುಳಕಿತ ವಾಯಿತು. ' ಯಾರ ಹೆಸರು ಕೇಳಿದವರಿಗೆ ಕಲ್ಯಾಣವನ್ನುಂಟು ಮಾಡುವುದೋ ಆ ಭಗವಂತನೇ ನನ್ನ ಮನೆಗೆ ಬಂದಿರುವನೆಂದು ' ರಾಯನ ಮನಸ್ಸು ಪರ ಮಾನಂದಭರಿತನಾಗಿ, ವಾದ್ಯದವರನ್ನು ಕರೆಯಿಸಿ, ಮಂಗಳ ವಾದ್ಯಗಳನ್ನು ಮಾಡಿಸಿರೆಂದು (ಸೇವಕರಿಗೆ) ಆಜ್ಞಾಪಿಸಿದನು. ಗುರುವಾದ ವಶಿಷ್ಠನಿಗೂ ಹೇಳಿಕಳುಹಿಸಿದನು. (ಈ ಆನಂದ ವಾರ್ತೆಯನ್ನು ಕೇಳಿದ ಕೂಡಲೆ) ಬ್ರಾಹ್ಮಣ ರೊಂದಿಗೆ ವಶಿಷ್ಠನು ರಾಜದ್ವಾರದಲ್ಲಿ ಬಂದು ನಿಂತನು. ಆತನು ವರ್ಣನಾ ತೀತವಾದ ರೂಪರಾಶಿಯನ್ನೂ ಗುಣನಿಧಿಯನ್ನೂ ಉಳ್ಳ ಅನುಪಮ ಬಾಲಕ ರನ್ನು ನೋಡಿದನು.

ದೋ ॥ ೨೨೫ ॥ ಆಗ ರಾಜನು ನಾಂದೀಮುಖ ಶ್ರಾದ್ಧವನ್ನಾಚರಿಸಿ ಜಾತಕರ್ಮ ಸಂಸ್ಕಾರಗಳನ್ನು ನೆರವೇರಿಸಿ, ಬ್ರಾಹ್ಮಣರಿಗೆ ಸುವರ್ಣ, ವಸ್ತ್ರ, ಮಣಿ ಮತ್ತು ಗೋದಾನಗಳನ್ನು ಕೊಟ್ಟನು. ಧ್ವಜ ಪತಾಕೆಗಳಿಂದಲೂ ತಳಿರು ತೋರಣಗಳಿಂದಲೂ ಅಯೋಧ್ಯಾನಗರವು ತುಂಬಿಹೋಯಿತು. ಆಕಾಶದಿಂದ ಪುಷ್ಪವೃಷ್ಟಿಯು ಸುರಿಯಲಾರಂಭಿಸಿತು. ಪ್ರಜೆಗಳೆಲ್ಲರೂ ಆನಂದ ಮಗ್ನರಾದರು. ಸ್ತ್ರೀಯರೆಲ್ಲರೂ ಸಿಂಗರಿಸಿಕೊಂಡು ಗುಂಪುಗುಂಪಾಗಿ ಬಂಗಾರದ ಕಲಶಗಳಲ್ಲಿಯೂ ಪಾತ್ರೆಗಳಲ್ಲಿಯೂ ಮಂಗಳವಸ್ತುಗಳನ್ನಿಟ್ಟು ಕೊಂಡು ಹೊರಟು ದಶರಥರಾಜನ ಅಂತಃಪುರವನ್ನು ಹೊಕ್ಕರು. ಆ ಸ್ತ್ರೀಯರು ಮಗುವಿಗೆ ಆರತಿಯನ್ನೆತ್ತಿ ರಕ್ಷೆಯನ್ನಿಟ್ಟು ಬಾರಿಬಾರಿಗೂ ಪಾಲಕನ ಕಾಲಿಗೆ

---

‡ ಭಗವದ್ಗೀತೆ—" ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾ ಮ್ । ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ । (ಎಂದರೆ ಸಾಧುಜನರ ರಕ್ಷಣೆಗೂ, ದುರ್ಜನರ ನಾಶಕ್ಕಾಗಿಯೂ, ಧರ್ಮಸ್ಥಾಪನೆಗೋಸ್ಕರ ವೂ ನಾನು ಯುಗಯುಗದಲ್ಲಿಯೂ ಅವತರಿಸುವೆನು.)

ಎರಗುತ್ತಿದ್ದರು. ಮಾಗಧಿಗಳೂ * ಸೂತರೂ † ವಂದಿಜನರೂ ‡ ಗುಣಗಾಯ ಕರೂ × ಶ್ರೀರಾಮಚಂದ್ರನ ಪವಿತ್ರಗುಣಗಳನ್ನು ಗಾನಮಾಡಲಾರಂಭಿಸಿದರು. ಎಲ್ಲರೂ ತಮ್ಮ ಸರ್ವಸ್ವವನ್ನೂ ದಾನಮಾಡಿದರು. ಆದಾನಗಳನ್ನು ಪಡೆದವರೂ ಅವುಗಳನ್ನು ಬೇರೆಯವರಿಗೆ ದಾನಮಾಡಿಬಿಟ್ಟರು. ಕಸ್ತೂರಿ, ಚಂದನ ಕೇಸರ ಗಳ ಗಂಧವು ಎಲ್ಲರ ಕಂಠದಲ್ಲಿಯೂ ಶೋಭಿಸಿತು.

ದೋ ॥ ೨೨೬ ॥ ಮನೆಮನೆಗಳಲ್ಲಿಯೂ ಮಂಗಳವಾದ್ಯಗಳು ಮೊಳಗುತ್ತಿರು ವಾಗ ಭಗವಂತನು ಪ್ರಕಟನಾದನು. ನಗರದಲ್ಲಿ ಎಲ್ಲಿ ನೋಡಿದರಲ್ಲಿ ಸ್ತ್ರೀ ಪುರು ಷರ ಗುಂಪು ಹರ್ಷದಿಂದ ಪ್ರಫುಲ್ಲಿತವಾಗಿ ಕಾಣುತ್ತಿತ್ತು. ಕೈಕೇಯಿಯೂ ಸುಮಿ ತ್ರೆಯೂ (ಲೋಕೈಕ) ಸುಂದರರಾದ ಮಕ್ಕಳನ್ನು ಪ್ರಸವಿಸಿದರು. ಆ ಸಮಯದ ಸಮಾಜದ ಸುಖಸಂಪತ್ತನ್ನು ಸರಸ್ವತಿಯೂ ಆದಿಶೇಷನೂ ಕೂಡ ವರ್ಣಿಸಲಾ ರರು. ಆ ಸಮಯದಲ್ಲಿ ರಾಮಚಂದ್ರನನ್ನು ದರ್ಶಿಸುವುದಕ್ಕೆ ರಾತ್ರಿಯು ಬಂದು, ಸೂರ್ಯನನ್ನು ನೋಡಿ, (ಸಂಕೋಚದಿಂದ ಹಿಂಜರಿದು) ನಿಂತಿದ್ದರಿಂದ ಸಂಧ್ಯಾ ಕಾಲವು ಆಗಿದೆಯೊ ಎಂಬಂತೆ ಶೋಭಿಸುತ್ತಿತ್ತು. ಆಗ ಅಗರುಬತ್ತಿಯ ಹೊಗೆಯು ವಿಶೇಷವಾಗಿದ್ದುದರಿಂದ (ಸ್ವಲ್ಪ) ಕತ್ತಲಾಗಿಯೂ (ಎರಚುತ್ತಿದ್ದ) ಗುಲಾಲಿನ ಧೂಳಿನಿಂದ ಸಾಯಂಕಾಲವು ಕೆಂಪಾಗಿಯೂ ಕಾಣಿಸುತ್ತಿದ್ದಿತು. ಅರಮನೆ ಯೊಳಗಿನ ಮಣಿಗಳು (ದಾನದಿಂದ ಸೂರೆಯಾಗಿ) ನಕ್ಷತ್ರಗಳಂತೆಯೂ, ರಾಜ ಭವನದ ಮೇಲಣ ಸುವರ್ಣ ಕಲಶವು ಚಂದ್ರನಂತೆಯೂ ಪ್ರಕಾಶಿಸುತ್ತಿದ್ದವು. ಅರಮನೆಯಲ್ಲಿ ಕೋಮಲವೂ ಮಧುರವೂ ರಸಭರಿತವೂ ಆದ ವಾಣಿಯಿಂದ ಉಂಟಾಗುತ್ತಿದ್ದ ವೇದಧ್ವನಿಯು ಹಕ್ಕಿಗಳು ಸಮಯಾನುಕೂಲವನ್ನರಿತು ಗಿಜಗುಟ್ಟುವಂತಿದ್ದಿತು. ಈ ಕೌತುಕವನ್ನು ನೋಡಿ ಸೂರ್ಯನುಕೂಡ ಒಂದು ತಿಂಗಳವರೆಗೆ ಮೆಯ್ಮರೆತು ಸ್ಥಿರವಾಗಿ ನಿಂತುಬಿಟ್ಟನು.

ದೋ ॥ ೨೨೭ ॥ ಈ ಪ್ರಕಾರವಾಗಿ ಒಂದು ತಿಂಗಳು ಒಂದು ದಿನವಾಗಿ ಪರಿಣಮಿಸಿತು. ಇದರ ರಹಸ್ಯವು ಯಾರಿಗೂ ತಿಳಿಯಲಿಲ್ಲ. ರಥವನ್ನು ನಿಲ್ಲಿಸಿ ಸೂರ್ಯನೇ ನಿಂತು ಬಿಟ್ಟರೆ ರಾತ್ರಿ ಹೇಗೆ ಆಗಬೇಕು ? ಸೂರ್ಯನಾರಾಯಣನು (ರಾಮಚಂದ್ರನ) ಗುಣಗಾನಮಾಡುತ್ತ ಮುಂದಡಿಯಿಟ್ಟನು ಈ ಮಹೋತ್ಸವ ವನ್ನು ನೋಡಿ ದೇವತೆಗಳೂ, ಮುನಿಗಳೂ, ನಾಗಲೋಕದವರೂ ತಮ್ಮ ಭಾಗ್ಯ ವನ್ನು ಬಣ್ಣಿಸಿಕೊಳ್ಳುತ್ತ ಸ್ವಸ್ಥಾನಗಳಿಗೆ ತೆರಳಿದರು. ಶಿವನು ಪಾರ್ವತಿಗೆ ಹೇಳುತ್ತಾನೆ.—ಹೇ ಪಾರ್ವತಿ, ನಿನ್ನ ಬುದ್ಧಿಯು ಬಹು ಪಕ್ವವಾಗಿದೆ. ಕೇಳು, ನಾನು ಮತ್ತೊಂದು ಚೋರತನದ ಕಥೆಯನ್ನು ಹೇಳುತ್ತೇನೆ. ಕಾಗಭು

---

* ರಾಜವಂಶ ಪಾರಂಪರ್ಯದಿಂದ ಜೀವಿಸುತ್ತಿದ್ದ ಸೇವಕರು † ಪುರಾಣ ವೃತ್ತಿ ಯವರು ‡ ಸ್ತುತಿಪಾಠಕರು × ಸಂಗೀತಗಾರರು.

ಶುಂಡಿ ಮತ್ತು ನಾನು (ಇಬ್ಬರೂ) ಮನುಷ್ಯ ಶರೀರವನ್ನು ಧರಿಸಿ ಆ ಉತ್ಸವ ದಲ್ಲಿ ಸೇರಿಕೊಂಡಿದ್ದೆವು. ಇದಾರಿಗೂ ಗೊತ್ತಿರಲಿಲ್ಲ. ಆನಂದದಿಂದಲೂ ಪ್ರೇಮ ಸುಖದಿಂದಲೂ ಉಬ್ಬಿದ ನಾವು ತಲ್ಲೀನರಾಗಿ ಬೀದಿಬೀದಿಗಳಲ್ಲಿ ತಿರು ಗುತ್ತಿದ್ದೆವು. ಅಹಹಾ! ರಾಮಚಂದ್ರನ ಕೃಪೆಯುಳ್ಳವನು ಮಾತ್ರ ಈ ಶುಭ ಚರಿತ್ರೆಯನ್ನು ತಿಳಿಯಬಲ್ಲನು. ಆಗ ದಶರಥರಾಜನು ಮನಸ್ಸಿಗೆ ಬಂದುದೆಲ್ಲ ವನ್ನೂ ದಾನಮಾಡಿದನು. (ಅನೇಕರಿಗೆ) ಆನೆ, ಕುದುರೆ, ರಥ, ಧನ, ಕನಕ, ರತ್ನ, ಗೋವು, ವಸ್ತ್ರ ಮೊದಲಾದ ಅನೇಕ ವಸ್ತುಗಳನ್ನು ಕೊಟ್ಟು ಬಿಟ್ಟನು.

(ನಾಮಕರಣ ಸಂಸ್ಕಾರ)

ದೋ ॥ ೨೦೮ ॥ (ಇದರಿಂದ) ಎಲ್ಲರ ಮನಸ್ಸಿಗೂ ಸಂತೋಷವುಂಟಾಗಿ ಆಶೀರ್ವದಿಸಲಾರಂಭಿಸಿದರು (ಈ ಪ್ರೇಮದಿಂದ ಮತ್ತನಾದ ತುಳಸೀದಾಸನೂ) 'ಹೇ ತುಳಸೀದಾಸನ ಸ್ವಾಮಿಯೆ! ಎಲ್ಲಾ ಮಕ್ಕಳೂ ಚಿರಜೀವಿಗಳಾಗಲಿ' ಎಂದು ಆಶೀರ್ವದಿಸುವನು. ಈ ಸಂಭ್ರಮದಲ್ಲಿ ಹಗಲಿರುಳು ಗೊತ್ತಾಗದೇ ಕೆಲವು ದಿನಗಳು ಕಳೆದ ನಂತರ (೧೦ ದಿನಗಳಾದ ನಂತರ) ಆ ಬಾಲಕರ ನಾಮಕರಣ ಸಂಸ್ಕಾರ ಸಮಯವನ್ನರಿತು ರಾಜನು ಜ್ಞಾನಿಗಳಾದ ಮುನಿ ಗಳನ್ನು ಕರೆಯಿಸಿದನು. ಅವರನ್ನು ಕುರಿತು 'ಹೇ ಮುನಿಗಳೆ, ತಾವು ಚೆನ್ನಾಗಿ ಇವರ ಗುಣಗಳನ್ನರಿತು ಇವರಿಗೆ ಹೆಸರುಗಳನ್ನಿಡಬೇಕು,' ಎಂದು ಹೇಳಿದನು. ಅದಕ್ಕೆ (ವಶಿಷ್ಠಮುನಿಯು)– 'ಹೇ ರಾಜನ್, ಇವರ ಹೆಸರು ಗಳು ಅನೇಕವಾಗಿಯೂ ಅನುಪಮವಾಗಿಯೂ ಇವೆ. ನನ್ನ ಬುದ್ಧಿಗನುಸಾರ ವಾಗಿ ಹೇಳುವೆನು, ಕೇಳು. ಆವನು ಆನಂದಸಾಗರನೂ, ಸುಖನಿಧಿಯೂ ಆಗಿರುವನೊ ಆವನ ಕೃಪಾಕಣದಿಂದ ಮೂರು ಲೋಕಗಳೂ ಸುಖಿಗಳಾಗಿರು ವುವೊ, ಆವನು ಸುಖಧಾಮನಾಗಿ ಅಖಿಲ ಲೋಕಕ್ಕೂ, ಸುಖದಾಯಕನಾಗಿ ರುವನೋ ಅವನ ಹೆಸರು "ರಾಮ" ನೆಂದೂ; ಆವನು ಸಮಗ್ರವಿಶ್ವದ ಪಾಲನ ಪೋಷಣೆಗಳನ್ನು ಮಾಡುವನೊ ಅವನ ಹೆಸರು "ಭರತ" ನೆಂದೂ, ಆವನ ಸ್ಮರಣೆಯಿಂದ ಶತ್ರುಗಳು ನಾಶವಾಗುವರೊ ಅವನ ಹೆಸರು ವೇದಗಳಲ್ಲಿ ಪ್ರಕಾ ಶಿತವಾದ "ಶತ್ರುಘ್ನ" ನೆಂದೂ.

ದೋ ॥ ೨೦೯ ॥ ಆವನು ಸಕಲ ಲಕ್ಷಣಸಂಪನ್ನನೂ ರಾಮನಿಗೆ ಪ್ರಿಯನೂ ಸರ್ವಜಗದಾಧಾರನೂ ಆಗಿರುವನೊ ಅವನ ಉದಾರವಾದ ಹೆಸರು "ಲಕ್ಷ್ಮಣ" ನೆಂದೂ ಇರಲಿ," ಎಂದು ಹೇಳಿದನು. ಈ ರೀತಿಯಾಗಿ ಮುನಿಯು ಮನ ಸ್ಸಿನಲ್ಲಿ ವಿಚಾರಮಾಡಿ ಎಲ್ಲರಿಗೂ ನಾಮಕರಣವನ್ನು ಮಾಡಿ, "ಹೇ ರಾಜ ನ್! ನಿನ್ನ ನಾಲ್ವರು ಮಕ್ಕಳೂ ವೇದಗಳ ತತ್ವಸ್ವರೂಪರು ಎಂದರೆ ಮಹಾಜ್ಞಾನಿ ಗಳು. ಇವರೆಲ್ಲರೂ ಮುನಿಧನರು, ಶಿವನಿಗೆ ಪ್ರಿಯರು. ಪರಮಾತ್ಮನು ಬಾಲ

ಲೀಲೆಯ ಆನಂದರಸವೆ ಸುಖವೆಂದು ಭಾವಿಸಿರುವನು ' ಎಂದು ಹೇಳಿದನು. ಲಕ್ಷ್ಮಣನು ಬಾಲ್ಯದಿಂದಲೇ ರಾಮಚಂದ್ರನು ತನ್ನ ಹಿತೈಷಿಯಾದ ಸ್ವಾಮಿ ಯೆಂದರಿತು ಅವನ ಚರಣಗಳಲ್ಲಿ ಪ್ರೇಮವನ್ನರ್ಪಿಸಿದನು. ಭರತ ಶತ್ರುಘ್ನರಿಬ್ಬ ರಲ್ಲಿಯೂ ಸ್ವಾಮಿ ಭೃತ್ಯರಂತೆ ಪ್ರೀತಿಯು ಬೆಳೆಯಿತು. ಶ್ಯಾಮ ಮತ್ತು ಗೌರಾಂಗ ರಾದಾ ಮಕ್ಕಳ ಸೌಂದರ್ಯವನ್ನು ನೋಡಿ, ಅವರ ಮಾತೆಯರೇ (ಆಶ್ಚರ್ಯ ದಿಂದ) ಎವೆಯಿಕ್ಕದೆ ಅವರನ್ನು (ದೃಷ್ಟಿತಾಕದಂತೆ) ನೋಡುತ್ತಿದ್ದರು. ಅಲ್ಲದೇ ನಾಲ್ವರು ಸೋದರರೂ ಶೀಲವಂತರೂ ಸುಗುಣನಿಧಿಗಳೂ ಆಗಿದ್ದರು. ಆದಾಗ್ಯೂ ಸುಖಸಾಗರನಾದ ರಾಮನ ಪ್ರತಿಭೆಯು ಅಧಿಕವಾಗಿದ್ದಿತು. (ಆ ಮಕ್ಕಳ) ಹೃದ ಯದಲ್ಲಿ ಕೃಪೆಯೆಂಬ ಚಂದ್ರನು ಪ್ರಕಾಶಿಸುತ್ತ ಮನೋಹರವಾದ ಹಾಸ (ನಗು) ವೆಂಬ ಕಿರಣಗಳಿಂದ ಪ್ರಕಟಗೊಳ್ಳುತ್ತಿದ್ದನು. ಅವರನ್ನು ಮಾತೆಯರು ಕೆಲವು ವೇಳೆ ತೊಡೆಯ ಮೇಲೆ ಮಲಗಿಸಿಕೊಳ್ಳುತ್ತ, ಮತ್ತೆ ತೊಟ್ಟಿಲುಗಳಲ್ಲಿ ಮಲ ಗಿಸಿ ಜೋಗುಳವನ್ನು ಪಾಡುತ್ತ, ' ನನ್ನ ಮಗು ! ಮುದ್ದು ! ರತ್ನ ! ಕಂದ ' ಇವೇ ಮುಂತಾದ ಮಾತುಗಳಿಂದ ಆಡಿಸುತ್ತಿದ್ದರು.

(ಬಾಲಲೀಲೆ)

ದೋ || ೨೩೦ || ಸರ್ವವ್ಯಾಪಕನೂ, ನಿರಂಜನನೂ, ನಿರ್ಗುಣನೂ, ಹರ್ಷ ಶೋಕರಹಿತನೂ, ಜನ್ಮರಹಿತನೂ ಆದ ಪರಬ್ರಹ್ಮನು ಭಕ್ತಿ ಪ್ರೇಮವಶನಾಗಿ ಕೌಸಲ್ಯೆಯ ತೊಡೆಯಮೇಲೆ ಆಡುತ್ತಿರುವನು. ಅವನಶರೀರವು ಕೋಟಿ ಕಾಮ ದೇವರಿಗಿಂತಲೂ ಸುಂದರವಾಗಿಯೂ ನೀಲಕಮಲ ಮತ್ತು ಗಂಭೀರವಾದ ಮೇಘದಂತೆ, ಶ್ಯಾಮಲವಾಗಿಯೂ, ಕೆಂದಾವರೆಯಂತಿದ್ದ ಅವರ ಚರಣಗಳ ನಖ ಜ್ಯೋತಿಯು ಕಮಲದಳಗಳಿಗೆ ಮುತ್ತುಗಳನ್ನು ಕಟ್ಟಿದಂತೆಯೂ ವಿರಾಜಿಸುತ್ತಿದ್ದಿತು. ಅಂಗಾಲಿನಲ್ಲಿ ವಜ್ರ, ಧ್ವಜ ಮತ್ತು ಅಂಕುಶಾದಿ ರೇಖೆಗಳು ಶೋಭಿ ಸುತ್ತಿದ್ದವು. ಅವನ ಪದನೂಪುರದ ಧ್ವನಿಯನ್ನು ಕೇಳಿ ಮುನಿಮನವೂ ಮೋಹಿತ ವಾಗುತ್ತಿದ್ದಿತು ಕಟಿಯಲ್ಲಿ ಕಿಂಕಿಣಿಯೂ ಉದರದಮೇಲೆ ಮೂರು (ತ್ರಿಬಲಿ) ರೇಖೆಗಳೂ ಇದ್ದವು. ಆ ನಾಭಿಯ ಗಾಂಭೀರ್ಯವು * ನೋಡಿದವರಿಗೆ ವಿನಾ ಅನ್ಯರಿಗೆ ತಿಳಿಯಲಾರವು. ಅವನ ಭುಜಗಳು ವಿಶೇಷ ವಿಶಾಲವಾಗಿಯೂ ವಿವಿಧಾಲಂಕಾರಗಳಿಂದ ಭೂಷಿತವಾಗಿಯೂ ಇದ್ದಿತು. ಎದೆಯಮೇಲೆ ಸಿಂಹದ ಉಗುರಿನ ಶೋಭೆಯೂ ಮನೋಹರವಾಗಿದ್ದಿತು. † ಅದುಮಾತ್ರವಲ್ಲದೆ

---

* ಆ ನಾಭಿಕಮಲದಿಂದ ಬ್ರಹ್ಮನು ಉತ್ಪತ್ತಿಯಾದುದರಿಂದ ಅದು ಗಹನ ವಾದುದು.

† ತಾಯಂದಿರು ಮಕ್ಕಳಿಗೆ ಯಾವ ಪೀಡೆಯೂ ಬರಬಾರದೆಂದು ರಕ್ಷೆಗೋಸ್ಕರ ಹುಲಿಯ ಉಗುರನ್ನು ಕಟ್ಟುವರು.

ಹೃದಯದ ಮೇಲೆ ಹಲವು ರತ್ನಮಣಿ ಮಾಲೆಗಳು ಶೋಭಿಸುತ್ತಿದ್ದವು. ಮತ್ತೆ ಅಲ್ಲಿದ್ದ ಬ್ರಾಹ್ಮಣಚರಣಚಿಹ್ನೆ (ಭೃಗುಲತಾ) ‡ ಯನ್ನು ನೋಡಿ ಮನಸ್ಸು ಮೋಹಿತವಾಗುವುದು. ಶಂಖದಂತಿರುವ ಕಂಠ, ಸುಂದರವಾದ ಕದಪು (ಗದ್ದ), ಅನಂತ ಕಾಮದೇವರ ಸೌಂದರ್ಯವನ್ನು ಪ್ರಕಟಿಸುವ ಮುಖ, (ಆಗತಾನೆ ಹುಟ್ಟುತ್ತಿದ್ದ) ಎರಡುಹಲ್ಲುಗಳಸಾಲು, ಕೆಂದುಟಿ, ಮೂಗಿನಮೇಲಿನ ತಿಲಕ ಸುಂದರವಾದ ಕಿವಿಗಳೂ ಮೃದುವಾದ ಗಲ್ಲ (ಕೆನ್ನೆ) ಗಳೂ ಇವುಗಳ ವರ್ಣನೆ ಯನ್ನುಮಾಡಿ, ಯಾರು ಪಾರಾಗುವರು ? ಅವನ ತೊದಲ್ನುಡಿಗಳು ಪ್ರಿಯ ವಾಗಿಯೂ ಮಧುರವಾಗಿಯೂ ಇದ್ದವು. ಮೃದುವಾದ ಅವನ ಕಪ್ಪುಗುಂಗುರು ಕೂದಲನ್ನು ಮಾತೆಯು ಬಾಚಿ ಅಲಂಕರಿಸಿದ್ದಳು. ಶರೀರದಲ್ಲಿ ಪೀತಾಂಬರದ ಅಂಗಿಯನ್ನು ತೊಡಿಸಿದ್ದರು. (ಅಹಾ !) ಅವನಾ ಅಂಬೆಗಾಲಿನಿಂದ ನಡೆಯು ವುದು ಎಷ್ಟು ಶೋಭಾಯಮಾನವಾಗಿರುವುದು ! ಆ ರೂಪನ್ನು ವರ್ಣಿಸುವುದು

---

‡ ಒಂದಾನೊಂದು ಕಾಲದಲ್ಲಿ ಹಲವು ಜನ ಋಷಿಗಳುಸೇರಿ ಸರಸ್ವತೀ ನದಿಯ ತೀರದಲ್ಲಿ ತಪಸ್ಸನ್ನು ಮಾಡುತ್ತಿದ್ದರು. ಆಗ ಅವರಲ್ಲಿ ಬ್ರಹ್ಮ ವಿಷ್ಣು ಮಹೇಶ್ವರರಲ್ಲಿ ದೊಡ್ಡವರಾರು ? ಎಂಬ ಚರ್ಚೆಯು ಹುಟ್ಟಿತು ಹಲವರು ಹಲವು ಮಾತುಗಳನ್ನಾ ಡಿದರು ಆಗ “ ಈ ವಿಚಾರವನ್ನಾರು ಪರೀಕ್ಷಿಸಿಕೊಂಡು ಬರುವರೊ ಅವರ ಮಾತ ನ್ನು ನಾವು ನಂಬುವೆವು ” ಎಂದು ರಾಜರ್ಷಿಗಳು ಮಹರ್ಷಿಗಳೂ ಹೇಳಿದರು. ಬ್ರಹ್ಮಪುತ್ರನಾದ ಭೃಗುಮುನಿಯು ತ್ರಿಮೂರ್ತಿಗಳನ್ನು ಪರೀಕ್ಷಿಸಲು ಹೊರಟನು ಅವನು ಮೊದಲು ಬ್ರಹ್ಮಲೋಕದಲ್ಲಿರುವ ಬ್ರಹ್ಮನ ಸಭೆಗೆ ಹೋಗಿ, ಅಲ್ಲಿ ಬ್ರಹ್ಮನಿಗೆ ನಮಸ್ಕಾರವನ್ನೂ ಅವನ ಸ್ತುತಿಯನ್ನೂ ಮಾಡದೆ ನಿಂತು ಬಿಟ್ಟನು ಅದನ್ನು ನೋಡಿ ಬ್ರಹ್ಮನಿಗೆ ಕೋಪಬಂದಿತು. ರಜೋಗುಣಭರಿತನಾದ ಬ್ರಹ್ಮನನ್ನು ನೋಡಿ ಭೃಗುವು ಕೈಲಾಸಕ್ಕೆ ತೆರಳಿದನು ಇವನನ್ನು ನೋಡಿದ ಕೂಡಲೆ ಶಿವನು ಎದ್ದುನಿಂತನು. ಭೃಗುವು ಮುಂದೆ ಬಂದು, ಶಿವನಿಗೆ ನಮಸ್ಕರಿಸದೆ ಕುಳಿತು ಬಿಟ್ಟನು ಆಗ ಶಂಕ ರನು ಕ್ರೋಧಾವೇಶದಿಂದ ಮುನಿಯನ್ನು ಸಂಹರಿಸಲು ತನ್ನ ತ್ರಿಶೂಲವನ್ನೆತ್ತಿದ್ದನು. ಪಾರ್ವತಿದೇವಿಯು ತಡೆದು ಮುನಿಯನ್ನು ರಕ್ಷಿಸಿದಳು. ಆಗ ಮಹದೇವನು ತಮೋಗುಣದಲ್ಲಿ ಲೀನನಾಗಿರುವನೆಂದು ತಿಳಿದು, ಭೃಗುಮುನಿಯು ವೈಕುಂಠಕ್ಕೆ ತೆರಳಿ ದನು. ಅಲ್ಲಿ ಸುವರ್ಣಮಂಚಿಕೆಯ ಮೇಲೆ ಪುಷ್ಪಶಯ್ಯೆಯಲ್ಲಿ ಲಕ್ಷ್ಮೀಸಮೇತನಾಗಿ ಭಗವಂತನು ನಿದ್ರಿಸುತ್ತಿದ್ದನು ಆಗ ಭೃಗುಮುನಿಯು, ಭಗವಂತನ ಎದೆಗೆ ಬಲವಾಗಿ ಒದ್ದನು. ಅದರಿಂದ ಅವನ ನಿದ್ರಾಭಂಗವಾಗಿ, ಕಣ್ತೆರೆದೆದ್ದು ಭಗವಂತನು ಭೃಗು ಮುನಿಯ ಪಾದಗಳನ್ನೊತ್ತುತ್ತ “ಮುನಿವರ, ನನ್ನ ಅಪರಾಧವನ್ನು ಕ್ಷಮಿಸಬೇಕು ನನ್ನ ಹೃದಯವು ಬಹುಕಠಿಣವಾಗಿರುವದು. ಅದರಿಂದ ಕಮಲದಂತೆ ಕೋಮಲ ವಾಗಿರುವ ತಮ್ಮ ಕಾಲುಗಳಿಗೆ ನೋವಾಗಿರಬಹುದು” ಎಂದು ಹೇಳಿದನು ಅದನ್ನು ಕೇಳಿ ಭೃಗುಮುನಿಯು ಅವನನ್ನು ಸ್ತುತಿಸುತ್ತ ಸರಸ್ವತೀ ತೀರಕ್ಕೆ ಬಂದು ದೇವತೆಗಳ ಭೇದವನ್ನು ಋಷಿಗಳಿಗೆ ತಿಳಿಸಿದನು. ಅಂದಿನಿಂದ ಭೃಗು ಚರಣಚಿಹ್ನೆಯು ವಿಷ್ಣುವಿನ ಹೃದಯದ ಮೇಲಿರುವುದೆಂದು ಪುರಾಣಗಳು ಘೋಷಿಸುತ್ತಿವೆ.

ವೇದಗಳಿಗೂ ಆದಿಶೇಷನಿಗೂ ಅಸಾಧ್ಯವಾಗಿರುವುದು. ಸ್ವಪ್ನದಲ್ಲಿಯಾದರೂ ಒಂದು ಬಾರಿ ನೋಡಿದವರಿಗೆ ಮಾತ್ರ ಆ ರೂಪರಹಸ್ಯವು ತಿಳಿಯುವುದು.

ದೋ ॥ ೨೩೧ ॥ ಸುಖನಿಧಿಯೂ, ಮೋಹರಹಿತ ಜ್ಞಾನವಾಗಿಂದ್ರಿಯ ಗಳಿಂದ ತಿಳಿಯಲ್ಪಡುವವನೂ ಆದ ಭಗವಂತನು ಆ ದಂಪತಿಗಳಿಬ್ಬರ (ಕೌಸಲ್ಯೆ ಮತ್ತುದಶರಥರ) ಪ್ರೇಮಕ್ಕೆ ವಶನಾಗಿ ವಿವಿಧವಾದ ಪವಿತ್ರ ಬಾಲಲೀಲೆಗಳನ್ನು ಮಾಡುತ್ತಿರುವನು. ಜಗತ್ಪಿತನಾದ ರಾಮಚಂದ್ರನು ಈ ರೀತಿಯಾಗಿ ಅಯೋಧ್ಯ ನಿವಾಸಿಗಳಿಗೆ ಸುಖವನ್ನು ಕೊಡಲಾರಂಭಿಸಿದನು ಹೇ ಪಾರ್ವತಿ, ರಾಮ ಚಂದ್ರನ ಚರಣಕಮಲಗಳಲ್ಲಿ ಪ್ರೀತಿಯನ್ನಿಡುವವರಿಗೆ ಈ ಫಲವು ದೊರೆವುದು. ಎಂದರೆ ಕೌಸಲ್ಯೆ ಮತ್ತು ದಶರಥನು ಪೂರ್ವಜನ್ಮದಿಂದಲೂ ಆ ಪವಿತ್ರ ಚರಣ ಗಳಲ್ಲಿ ಪ್ರೀತಿಯನ್ನಿಟ್ಟಿದ್ದುದರಿಂದ ಅವರಿಗೆ ಈ ಜನ್ಮದಲ್ಲಿ ಭಗವಂತನು ಪುತ್ರ ನಾಗಿ ಜನಿಸಿದನು ರಾಮಚಂದ್ರನಿಂದ ವಿಮುಖನಾದ ಆವ ಮಾನವನೂ ಕೋಟ್ಯಾಂತರ ಪ್ರಯತ್ನಗಳಿಂದಲೂ ಸಂಸಾರದ ಬಂಧನದಿಂದ ಮುಕ್ತನಾಗ ಲಾರನು. ಚರಾಚರ ಜೀವಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವ ಮಾಯೆ ಯು ಭಗವಂತನಿಗೆ ಹೆದರುವುದು. ಆದುದರಿಂದ ಮಾಯೆಯನ್ನು ತನ್ನ ಭ್ರುಕುಟಿ ವಿಲಾಸದಿಂದ (ಕಟಾಕ್ಷವಿಲಾಸದಿಂದ) ನರ್ತಿಸುವಂತೆ ಮಾಡುವ ಪ್ರಭುವನ್ನು ಬಿಟ್ಟು ಮತ್ತಾರನ್ನು ಭಜಿಸಬೇಕು? ಮನೋವಾಕ್ಕಾಯಗಳಿಂದ ವಂಚನೆ ಯಿಲ್ಲದೆ ಭಜಿಸುವ ಭಕ್ತರಿಗೆ ಭಗವಂತನು ಪ್ರಸನ್ನನಾಗುವನು. ಈ ರೀತಿಯಾಗಿ, ಬಾಲಕ್ರೀಡೆಯಿಂದ ಅಯೋಧ್ಯಾ ನಿವಾಸಿಗಳೆಲ್ಲರಿಗೂ ಸುಖವನ್ನುಂಟುಮಾಡಿದನು. ಅವನ ಮಾತೆಯು ಕೆಲವು ವೇಳೆ ಅವನನ್ನು ತೊಡೆಯಮೇಲೆ ಆಡಿಸುತ್ತಲೂ, ಕೆಲವು ವೇಳೆ ತೊಟ್ಟಿಲಲ್ಲಿ ಮಲಗಿಸಿ ತೂಗುತ್ತಲೂ ಇದ್ದಳು

ಶ್ರೀರಾಮನು ಕೌಸಲ್ಯೆಗೆ ವಿಶ್ವರೂಪ ದರ್ಶನ ಮಾಡಿಸುವುದು.

ದೋ ॥೨೩೨॥ ಈ ರೀತಿಯಾಗಿ ಪ್ರೇಮ ಮಗ್ನಳಾದ ಕೌಸಲ್ಯೆಗೆ ಹಗಲಿರು ಳೆಂಬುದೇ ಗೊತ್ತಾಗುತ್ತಿರಲಿಲ್ಲ. ಪುತ್ರಸ್ನೇಹವಶಳಾಗಿ ಅವಳು ಯಾವಾಗಲೂ ಶ್ರೀರಾಮಚಂದ್ರನ ಬಾಲಚರಿತ್ರೆಯನ್ನೇ ಹಾಡುತ್ತಿದ್ದಳು. ಒಂದು ದಿನ ಮಗು ವನ್ನು ಸ್ನಾನಮಾಡಿಸಿ, ಅಲಂಕರಿಸಿ, ತೊಟ್ಟಿಲಲ್ಲಿ ಮಲಗಿಸಿ, ತಾನು ತನ್ನ ಇಷ್ಟ ದೇವತೆಯ ಪೂಜೆಮಾಡುವುದಕ್ಕಾಗಿ ಸ್ನಾನ ಮಾಡಿದಳು. (ಅನಂತರ) ಪೂಜೆ ಯನ್ನು ಮುಗಿಸಿ ನೈವೇದ್ಯವನ್ನು ದೇವರ ಮುಂದಿರಿಸಿ, ಅಡಿಗೆ ಮನೆಯೊಳಕ್ಕೆ ಹೋದಳು. (ಅಲ್ಲಿಂದ) ಹಿಂದಿರುಗಿ ಬಂದು ನೋಡುವಾಗ ತನ್ನ ಪುತ್ರನು ನೈವೇದ್ಯವನ್ನು ತಿನ್ನುತ್ತಿರುವುದನ್ನು ನೋಡಿದಳು. ಆಗ ಭಯದಿಂದ (ತೊಟ್ಟಿಲಲ್ಲಿ ಮಲಗಿಸಿದ್ದ ಮಗುವು ಇಲ್ಲಿಗೆ ಹೇಗೆ ಬಂದಿತು ಎಂದು ಆಲೋಚಿಸುತ್ತ) ತೊಟ್ಟಿಲ ಬಳಿ ಹೋಗಿ ನೋಡಲಾಗಿ ಅಲ್ಲಿ ಮಗುವು ಮಲಗಿಕೊಂಡಿತ್ತು. ಮತ್ತೆ ಬಂದು

ಭೋಜನ ಮಾಡುತ್ತಿರುವ ಮಗುವನ್ನು ನೋಡಿ, ಅವಳಾ ಹೃದಯವು ನಡುಗಲಾರಂಭಿಸಿತು, ಮನಸ್ಸಿನಲ್ಲಿ ಹೆದರಿಕೆಯುಂಟಾಯಿತು. ಆಗ ಕೌಸಲ್ಯೆಯು "ಈಗ ನಾನು ತೊಟ್ಟಿಲಲ್ಲಿ ಒಂದು ಮಗುವನ್ನು ನೋಡಿದೆನು. ಇಲ್ಲಿ ಭೋಜನ ಮಾಡುತ್ತಿರುವ ಮತ್ತೊಂದು ಮಗುವನ್ನು ನೋಡಿದೆನು. ಇದೇನು ನನ್ನ ಭ್ರಮೆಯೊ ಅಥವಾ ಮಗುವಿನ ಮಹಿಮೆಯೊ?" ಎಂದಾಲೋಚಿಸಲಾರಂಭಿಸಿದಳು. ಗಾಬರಿಗೊಂಡ ಮಾತೆಯನ್ನು ನೋಡಿ ಶ್ರೀರಾಮಚಂದ್ರನ ಮುಖವು ಮುಗುಳು ನಗೆಯಿಂದ ಅರಳಿದಂತಾಯಿತು.

ದೋ ॥೨೩೩॥ ಅನಂತರ ಅವನು ಕೌಸಲ್ಯೆಗೆ ತನ್ನ ಅಖಂಡವೂ ಅದ್ಭುತವೂ ಆದ ರೂಪವನ್ನು ತೋರಿಸಿದನು. ಅದರಲ್ಲಿ ಪ್ರತಿಯೊಂದು ರೋಮಕೂಪದಲ್ಲಿಯೂ ಅನೇಕ ಕೋಟಿ ಬ್ರಹ್ಮಾಂಡಗಳೂ ಅಸಂಖ್ಯ ಸೂರ್ಯ ಚಂದ್ರರೂ ಮಹಾದೇವ ಬ್ರಹ್ಮಾದಿ ದೇವತೆಗಳೂ, ಸಾವಿರಾರು ಪರ್ವತಗಳೂ ನದಿಗಳೂ ಸಮುದ್ರಗಳೂ, ಪೃಥ್ವಿಗಳೂ, ವನಗಳೂ, ಕೌಸಲ್ಯೆಯು ಎಂದೂ ನೋಡದಿದ್ದಂತಹ ಕಾಲ ಕರ್ಮ ಗುಣ ಜ್ಞಾನ ಸ್ವಭಾವವುಳ್ಳ ಹಲವು ಬಗೆಯ ಪದಾರ್ಥಗಳೂ ಕಾಣುತ್ತಿದ್ದವು ಮತ್ತೆ ಶ್ರೀರಾಮಚಂದ್ರನಿದಿರಿನಲ್ಲಿ ಭಯದಿಂದ ಕೈಜೋಡಿಸಿ ನಿಂತಿದ್ದ ಪ್ರಬಲಳಾದ ಮಾಯೆಯು ಅಲ್ಲಿ ನಿಂತಿದ್ದುದನ್ನು ಕೌಸಲ್ಯೆಯು ಕಂಡಳು. ಅಲ್ಲಿ ಮಾಯೆಯು (ತನ್ನ ಪಾಶದಲ್ಲಿರುವ) ಜೀವಗಳನ್ನಾಡಿಸುತ್ತಿರುವುದನ್ನೂ, ಮಾಯೆಯ ಪಾಶದಿಂದ ಜೀವಗಳನ್ನು ಬಿಡಿಸುತ್ತಿರುವ ಭಕ್ತಿಯನ್ನೂ ಅವಳು ನೋಡಿದಳು. ಅದನ್ನು ನೋಡಿ ಮಾತೆಯಾದ ಕೌಸಲ್ಯೆಯ ಶರೀರವು ಪುಲಕಿತವಾಯಿತು, ಬಾಯಿಯಿಂದ ಮಾತೇ ಹೊರಡದು. (ಆಗವಳು) ತನ್ನ ಕಣ್ಣುಗಳನ್ನು ಮುಚ್ಚಿ ತಲೆಯನ್ನು ಶ್ರೀರಾಮನ ಪಾದಗಳ ಮೇಲಿಟ್ಟಳು. ತನ್ನ ತಾಯಿಯು ವಿಸ್ಮಿತಳಾದುದನ್ನು ನೋಡಿ ಅಸುರಾರಿಯಾದ ಭಗವಂತನು ಮತ್ತೆ ಬಾಲಕ ರೂಪವನ್ನು ತಾಳಿದನು. ಕೌಸಲ್ಯೆಯು ಭಗವಂತನ ಸ್ತುತಿಯನ್ನು ಕೂಡ ಮಾಡಲಿಲ್ಲ. "ಜಗತ್ಪಿತನನ್ನು ನನ್ನ ಪುತ್ರನೆಂದು ತಿಳಿದುಕೊಂಡೆನಲ್ಲ" ಎಂದು ಹೆದರಿದಳು. ಭಗವಂತನು ಮಾತೆಯನ್ನು ಬಹು ವಿಧವಾಗಿ ಸಮಾಧಾನಪಡಿಸಿ, "ಅಮ್ಮಾ, ಈ ಸಮಾಚಾರವನ್ನು ಯಾರಿಗೂ ತಿಳಿಸಬೇಡ" ಎಂದು ಹೇಳಿದನು.

ದೋ ॥೨೩೪॥ ಕೌಸಲ್ಯೆಯು ಮತ್ತೆ ಮತ್ತೆ ಕರಗಳನ್ನು ಜೋಡಿಸಿ "ಹೇ ಪ್ರಭು ! ನಿನ್ನ ಮಾಯೆಯು ನನ್ನನ್ನು ವ್ಯಾಪಿಸದಿರಲಿ." ಎಂದು ಪ್ರಾರ್ಥಿಸುತ್ತಿದ್ದಳು. ಭಗವಂತನು ಹಲವು ಬಗೆಯಿಂದ ತನ್ನ ಬಾಲಲೀಲೆಯನ್ನು ತೋರುತ್ತ ಸೇವಕರನ್ನು ಸಂತೋಷಗೊಳಿಸುತ್ತಿದ್ದನು. ಹೀಗೆ ಕೆಲ ಕಾಲವು ಕಳೆದ ನಂತರ ರಾಜಸಂಸಾರಕ್ಕೆ ಸುಖವನ್ನು ಕೊಡುವಂತಹ ನಾಲ್ವರು ಸೋದರರೂ ದೊಡ್ಡವರಾದರು. ಗುರುವಾದ ವಶಿಷ್ಠನು ಬಂದು ಅವರ ಚೌಲಕರ್ಮ

ಗಳನ್ನು ಮಾಡಿಸಿದನು. ಆಗ ಮತ್ತೆ ಬ್ರಾಹ್ಮಣರಿಗೆ ವಿಪುಲವಾಗಿ ದಕ್ಷಿಣೆಯು ಸಿಕ್ಕಿತು. ಮನೋವಾಕ್ಯಮಾರ್ಗಗಳಿಗೆ ಅಗೋಚರನಾದ ರಾಮಚಂದ್ರ ಪ್ರಭುವು ದಶರಥನ ಅಂಗಳದಲ್ಲಿ ನಲವಿನಿಂದ ಆಟವಾಡುತ್ತ ಸುಳಿದಾಡುತ್ತಿರುವನು. ಭೋಜನಮಾಡುವಾಗ ಮಹಾರಾಜನು ಅವನನ್ನು ಕರೆದಾಗ ಅವನು ಮಕ್ಕಳ ಗುಂಪನ್ನು ಬಿಟ್ಟು ಬರುವುದಿಲ್ಲ. ಕೌಸಲ್ಯಾದೇವಿಯು ಅವನನ್ನು ಕರೆಯುವುದಕ್ಕೆ ಹೋದಾಗ ಬೇಗಬೇಗನೆ ಪುಟ್ಟಡಿಗಳನ್ನಿಡುತ್ತ ಹೋಗುವನು. ಯಾವನ ಅಂತವನ್ನು ತಿಳಿಯದೇ ವೇದಗಳು ಕೊನೆಗೆ 'ನೇತಿ' ಎಂಬ ವರ್ಣನೆಯಿಂದ ಸ್ತಬ್ಧವಾದವೊ, ಯಾವನ ಆಳವನ್ನು ಶಿವನೇ ತಿಳಿಯಲಿಲ್ಲವೊ ಅವನನ್ನು ಕೌಸಲ್ಯಾ ಮಾತೆಯು ಓಡಿಹೋಡಿ ಹಿಡಿದುಕೊಳ್ಳುವಳು, ಮತ್ತೆ ಧೂಳಿನಲ್ಲಿ ಹೊರಳಾಡಿ ಬಂದಾಗ ದಶರಥರಾಯನು ನಗುತ್ತ ಅವನನ್ನು ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುತ್ತಿದ್ದನು.

ದೋ ॥೨೦೩॥ ನಾಲ್ವರು ಸೋದರರೂ ಭೋಜನ ಮಾಡುವಾಗ (ಏನಾದರೂ ಶಬ್ದವಾದ ಕೂಡಲೆ) ಚಂಚಲ ಚಿತ್ತರಾಗಿ, ಮೊಸರನ್ನವನ್ನು ಬಾಯಿಗೆ ಬಳಿದುಕೊಂಡು, ಕಿಲಕಿಲನೆ ನಗುತ್ತ ಅತ್ತಿತ್ತ ಓಡುವರು. ಇಂತಹ ಬಹು ಸರಳವೂ ಮನೋಹರವೂ ಸುಂದರವೂ ಆದ ಬಾಲಚರಿತೆಯನ್ನು ವೇದಗಳೂ ಸರಸ್ವತೀದೇವಿಯೂ, ಆದಿಶೇಷನೂ, ಮಹಾದೇವನೂ, ಗಾನಮಾಡಿರುವರು. ಯಾರ ಚಿತ್ತವು ಈ ಚರಿತ್ರೆಯಲ್ಲಿ ಮಗ್ನವಾಗುವುದಿಲ್ಲವೊ ಅವರು ಭಗವಂತನಿಂದ ವಂಚಿತರಾಗಿರುವರು. ಎಂದರೆ ಅವರ ಮಾನವಜನ್ಮವು ವ್ಯರ್ಥವೇ ಸರಿ ಸೋದರರು ನಾಲ್ವರೂ ಕೌಮಾರ್ಯಾವಸ್ಥೆಗೆ ಬರಲು ವಶಿಷ್ಠ ಗುರುವೂ ಮಾತಾಪಿತೃಗಳೂ ಸೇರಿ ಅವರ ಉಪನಯನ ಸಂಸ್ಕಾರವನ್ನು ನೆರವೇರಿಸಿದರು ಅನಂತರ ರಾಮಚಂದ್ರನು ಗುರುಕುಲವಾಸಕ್ಕೆ ಹೊರಟನು. ಅಲ್ಲಿ ಅತ್ಯಲ್ಪಕಾಲದಲ್ಲಿಯೆ ಅವನು ಎಲ್ಲ ವಿದ್ಯೆಗಳನ್ನೂ ಕಲಿತುಬಿಟ್ಟನು. ಯಾರ ಸ್ವಾಭಾವಿಕ ಶ್ವಾಸವೇ ನಾಲ್ಕು ವೇದಗಳಾಗಿವೆಯೊ ಅಂಥಾ ಪರಮಾತ್ಮನು ವಿದ್ಯೆಯನ್ನು ಕಲಿತನೆಂದು ಹೇಳ್ಕುವುದು ಆಶ್ಚರ್ಯವಲ್ಲವೆ! ರಾಜಕುಮಾರರೆಲ್ಲರೂ ವಿದ್ಯಾವಿನಯ ನೀತಿ ನಿಪುಣರೂ ಸಚ್ಛೀಲರೂ ಆಗಿ, ಅವರು ಆಡುವಾಗಲೆಲ್ಲ ರಾಜಲೀಲೆಯನ್ನೇ ಆಡುತ್ತಿದ್ದರು. ಅವರ ಕೈಯ್ಯಲ್ಲಿ ಧನುರ್ಬಾಣಗಳು ಚೆನ್ನಾಗಿ ಶೋಭಿಸುತ್ತಿದ್ದವು. ಅವರ ರೂಪವನ್ನು ನೋಡಿ ಸಮಗ್ರ ಜಗತ್ತೇ ಮೋಹಿತವಾಗುತ್ತಿದ್ದಿತು. ಅವರಾಡುತ್ತಿದ್ದ ಬೀದಿಯ ಜನರೆಲ್ಲರೂ ಅವರನ್ನು ನೋಡಿ ಆಶ್ಚರ್ಯ ಚಕಿತರಾಗುತ್ತಿದ್ದರು

ದೋ ॥೨೦೪॥ ಅಯೋಧ್ಯಾ ನಿವಾಸಿಗಳಾದ ಸ್ತ್ರೀ ಪುರುಷರು, ಮುದುಕರು, ಬಾಲಕರಾದಿಯಾಗಿ ಸರ್ವರೂ ದಯಾಳುವಾದ ರಾಮಚಂದ್ರನನ್ನು ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸುತ್ತಿದ್ದರು. ನಾಲ್ವರು ಸೋದರರು ಇಷ್ಟ ಮಿತ್ರರೊಂದಿಗೆ ವನಕ್ಕೆ ಹೋಗಿ ಬೇಟೆಯಾಡುತ್ತಿದ್ದರು .ಅಲ್ಲಿ(ತಮ್ಮಕೈಯಿಂದ ಹತವಾಗಿ

ವೈಕುಂಠಕ್ಕೆ ತೆರಳಲು) ಯಾವ ಮೃಗವು ಪವಿತ್ರವೆಂಬದನ್ನು ತಿಳಿದು, ಅದನ್ನು ವಧಿಸಿ ತಂದು ರಾಜನಿಗೆ ತೋರಿಸುತ್ತಿದ್ದರು. ರಾಮಚಂದ್ರನ ಬಾಣದಿಂದ ಮೃತಿಯನ್ನೈದಿದ ಮೃಗವು ತನ್ನಶರೀರವನ್ನು ಬಿಟ್ಟು ಸ್ವರ್ಗಕ್ಕೆ ಹೋಗುತ್ತಿದ್ದಿತು. ರಾಮಚಂದ್ರನು ತನ್ನ ತಮ್ಮಂದಿರು ಮತ್ತು ಇಷ್ಟಮಿತ್ರರೊಂದಿಗೆ ಭೋಜನ ಮಾಡುತ್ತ ತಂದೆತಾಯಿಗಳ ಆಜ್ಞೆಯಂತೆ ನಡೆದುಕೊಳ್ಳುತ್ತಿದ್ದನು. ಕೃಪಾ ಸಾಗರನಾದ(ಅವನು ಯಾವಾಗಲೂ) ಅಯೋಧ್ಯಾವಾಸಿಗಳಿಗೆ ಸುಖವಾಗುವಂತಹ ಆಚರಣೆಗಳನ್ನೇ ಮಾಡುತ್ತಿದ್ದನು ವೇದ ಪುರಾಣೇತಿಹಾಸಗಳನ್ನು ಅವನು ಮನಸ್ಸಿಟ್ಟು ಕೇಳಿ, ಅದನ್ನು ತನ್ನ ತಮ್ಮಂದಿರಿಗೆ ತಿಳಿಯುವಂತೆ ಹೇಳುತ್ತಿದ್ದನು. ನಿತ್ಯವೂ ಬೆಳಿಗ್ಗೆ ಎದ್ದು ತಂದೆ ತಾಯಿಗಳಿಗೂ ಗುರುವಿಗೂ ನಮಸ್ಕರಿಸುತ್ತಿದ್ದನು. ಅನಂತರ ಅವರಪ್ಪಣೆಯನ್ನು ಕೇಳಿ ನಗರದ ಕೆಲಸವನ್ನು ಮಾಡುತ್ತಿದ್ದನು. ಅವನಾ ಪವಿತ್ರ ಚರಿತ್ರೆಯನ್ನು ನೋಡಿ ದಶರಥ ಮಹಾರಾಯನು ವಿಶೇಷ ಸಂತುಷ್ಟನಾಗುತ್ತಿದ್ದನು.

## ವಿಶ್ವಾಮಿತ್ರನ ಯಜ್ಞಭಂಗ

ದೊ ॥೨೦೭॥ ಸರ್ವವ್ಯಾಪಿಯೂ, ಕಲಾರಹಿತನೂ, ಇಚ್ಛಾಹೀನನೂ, ಅಜನೂ, ನಿರ್ಗುಣನೂ, ನಾಮರೂಪರಹಿತನು ಆದ ಭಗವಂತನು ಭಕ್ತರ ಹಿತಕ್ಕೋಸುಗ ವಿಚಿತ್ರ ಲೀಲೆಗಳನ್ನು ತೋರುತ್ತಿದ್ದನು. ಶ್ರೀ ಶಂಕರನು ಹೇಳುತ್ತಾನೆ.— ಹೇ ಪಾರ್ವತಿ! ಈ ಚರಿತ್ರೆಯನ್ನೆಲ್ಲ ನಾನು ಗಾನಮಾಡಿರುವೆನು. ಇನ್ನು ಮುಂದಿನ ಚರಿತ್ರೆಯನ್ನು ಮನಸ್ಸಿಟ್ಟು ಕೇಳು. ಮಹಾಜ್ಞಾನಿಯಾದ ವಿಶ್ವಾಮಿತ್ರ ಮಹಾ ಮುನಿಯು ಕಾಡಿನಲ್ಲಿ ಒಂದು ಶುಭವಾದ ಆಶ್ರಮದಲ್ಲಿ ವಾಸಿಸುತ್ತಿದ್ದನು. ಅಲ್ಲಿ ಋಷಿಗಳು ಜಪತಪ ಯಜ್ಞ ಯೋಗಸಾಧನೆಗಳನ್ನು ಮಾಡುತ್ತಿದ್ದರು. ಆದರೆ ಅವರು ಮಾರಿಚ, ಸುಬಾಹು ಮೊದಲಾದ ರಾಕ್ಷಸರಿಗೆ ಹೆದರುತ್ತಿದ್ದರು. ಯಜ್ಞಕುಂಡಲವನ್ನು ನೋಡಿದಕೂಡಲೆ ರಾಕ್ಷಸರು ಓಡಿಬಂದು ಉಪದ್ರವವನ್ನುಂಟುಮಾಡಿ, ಋಷಿಗಳನ್ನು ಪೀಡಿಸುತ್ತಿದ್ದರು. (ಅದನ್ನು ನೋಡಿ) ಗಾಧೀತನಯನಾದ (ವಿಶ್ವಾಮಿತ್ರನ) ಮನಸ್ಸಿನಲ್ಲಿ ಚಿಂತೆಯುಂಟಾಯಿತು. ಭಗವಂತನ ವಿನಾ ಮತ್ತಾರೂ ಈ ಪಾಪಿಗಳಾದ ರಾಕ್ಷಸರನ್ನು ಸಂಹರಿಸಲಾರರು. ಪ್ರಭುವು ಪೃಥ್ವಿಯ ಭಾರವನ್ನಿಳಿಸುವುದಕ್ಕೋಸ್ಕರ ಈಗ ಭೂಲೋಕದಲ್ಲಿ ಅವತರಿಸಿರುವನು. ಇದೊಂದು ನೆಪಮಾತ್ರದಿಂದ ನಾನು ಹೋಗಿ ಅವನ ಚರಣಕಮಲಗಳ ದರ್ಶನಮಾಡುವೆನು. ಅಲ್ಲಿ ರಾಜನಿಗೆ ಬಿನ್ನವಿಸಿಕೊಂಡು, ಅಣ್ಣ ತಮ್ಮಂದಿರಿಬ್ಬರನ್ನೂ ಕರೆತರುವೆನು. ಜ್ಞಾನ ವೈರಾಗ್ಯಾದಿ ಸಕಲ ಗುಣನಿಧಿಯಾದ ಪ್ರಭುವನ್ನು ಕಣ್ಣು ದಣಿಯುವಂತೆ ನೋಡುತ್ತೇನೆ.

# ಶ್ರೀ ತುಳಸೀದಾಸ ರಾಮಾಯಣ:—



ಶ್ರೀರಾಮಲಕ್ಷ್ಮಣರನ್ನು ಕಳುಹಿಸೆಂದು ವಿಶ್ವಾಮಿತ್ರನು ಕೇಳುವುದು.

(ಪುಟ ೧೪೯)

### ವಿಶ್ವಾಮಿತ್ರನು ದಶರಥನ ಬಳಿಗೆಬಂದು ಯಜ್ಞರಕ್ಷಣಾರ್ಥವಾಗಿ ರಾಮನನ್ನು ಕಳುಹಿಸೆಂದು ಕೇಳುವುದು.

ದೋ ||೨೩೮|| ಇಂತೆಂದು ಹಲವು ಬಗೆಯ ಆಲೋಚನೆಗಳನ್ನು ಮಾಡುತ್ತ ಬಹಳ ಬೇಗ ಅಯೋಧ್ಯೆಗೆ ಬಂದು, ಸರಯೂನದಿಯಲ್ಲಿ ಸ್ನಾನಮಾಡಿ ದಶರಥ ರಾಯನ ಓಲಗಕ್ಕೆ ಚಿತ್ತೈಸಿದನು. ಮಹಾರಾಜನು ಮುನಿಯ ಆಗಮನವನ್ನು ತಿಳಿದು ಬ್ರಾಹ್ಮಣರೊಂದಿಗೆ ಬಂದು ಅವನನ್ನು ಎದುರ್ಗೊಂಡನು. ಮುನಿಗೆ ಸಾಷ್ಟಾಂಗವೆರಗಿ, ಸಮ್ಮಾನಪೂರ್ವಕವಾಗಿ ಕರೆತಂದು ತನ್ನ ರಾಜಸಿಂಹಾಸನದ ಮೇಲೆ ಕುಳ್ಳಿರಿಸಿದನು. ಅನಂತರ ಅವನ ಪಾದಪೂಜೆಯನ್ನು ಮಾಡಿ, "ಇಂದು ನೀವೇ ನನಗೆ ದೇವರು" ಎಂದು ಹೇಳಿ ನಾನಾವಿಧವಾದ ಆಹಾರಗಳನ್ನು ಭೋಜನ ಮಾಡಿಸಿದನು. (ಅದರಿಂದ) ಮುನಿವರನಾದ ವಿಶ್ವಾಮಿತ್ರನು ವಿಶೇಷವಾಗಿ ಸಂತೋಷಪಟ್ಟನು. ಮಹಾರಾಜನು ಆಗ ತನ್ನ ನಾಲ್ವರು ಮಕ್ಕಳನ್ನೂ ಕರೆಯಿಸಿ, ವಿಶ್ವಾಮಿತ್ರನ ಚರಣಗಳಿಗೆರಗಿಸಿದನು. ಶ್ರೀರಾಮಚಂದ್ರನನ್ನು ನೋಡಿದಕೂಡಲೆ ವಿಶ್ವಾಮಿತ್ರನು ತನ್ನ ದೇಹವನ್ನೇ ಮರೆತುಬಿಟ್ಟನು. ಚಕೋರ ಪಕ್ಷಿಯು ಚಂದ್ರನನ್ನು ನೋಡಿ ಮೋಹಗೊಳ್ಳುವಂತೆ ರಾಮಚಂದ್ರನ ಮುಖಾರ ವಿಂದಸೌಂದರ್ಯವನ್ನು ನೋಡಿ ಮುನಿಯು ಮೋಹಿತನಾದನು. ಆಗ, ರಾಯನು ಪ್ರಸನ್ನಚಿತ್ತದಿಂದ "ಮುನಿರಾಜ, ನೀವು ಎಂದೂ ನನ್ನ ಮೇಲೆ ಹೀಗೆ ಅನುಗ್ರಹವಿಟ್ಟಿರ ಲಿಲ್ಲ. ಈಗ ಈ ದಾಸನಿಂದ ಆವಸೇವೆಯನ್ನು ಮಾಡಿಸಿಕೊಳ್ಳಬೇಕೆಂದು ಬಂದಿರುವಿ ರಿ. ಅಪ್ಪಣೆಯಾಗಲಿ! ಅದರಂತೆ ನಾನು ನಡೆದುಕೊಳ್ಳುವೆನು" ಎಂದನು. (ಅದ ಕ್ಕೆ) ವಿಶ್ವಾಮಿತ್ರನು "ಹೇ ರಾಜನ್, ರಾಕ್ಷಸರು ನನ್ನಯಜ್ಞಕ್ಕೆ ಭಂಗವನ್ನುಂಟು ಮಾಡುತ್ತಿರುವರು. ಆದುದರಿಂದ ನಿನ್ನ ಸಹಾಯವನ್ನಪೇಕ್ಷಿಸಿ ನಾನಿಲ್ಲಿಗೆ ಬಂದಿರುವೆನು. ನೀನು ರಾಮಚಂದ್ರನನ್ನೂ ಅವನ ಅನುಜನಾದ ಲಕ್ಷ್ಮಣನನ್ನೂ ಕಳುಹಿಸಿದರೆ ಅವರಿಂದ ರಾಕ್ಷಸರ ವಧೆಯೂ ನನ್ನ ಯಜ್ಞಕಾರ್ಯವೂ ಸಂಪೂರ್ತಿಯಾಗುವವು.

ದೋ ||೨೩೯|| "ಹೇ ರಾಜನ್! ನೀನು ಮೋಹವನ್ನೂ ಅಜ್ಞಾನವನ್ನೂ ತ್ಯಜಿಸಿ ಪ್ರಸನ್ನಚಿತ್ತದಿಂದ ಅವರಿಬ್ಬರನ್ನು ಕಳುಹಿಸಿಕೊಡು. ಇದರಿಂದ ನಿನ್ನ ಧರ್ಮವೂ ಯಶಸ್ಸೂ ಅಭಿವೃದ್ಧಿಗೊಳ್ಳುವವು. ಮತ್ತೆ ಅದರಿಂದ ಇವರಿಬ್ಬರಿಗೂ ಕಲ್ಯಾಣ ವಾಗುವುದು," ಎಂದು ಹೇಳಿದನು. ಈ ದಾರುಣವೂ ಅಪ್ರಿಯವೂ ಆದ ವಾಕ್ಯಗಳನ್ನು ಕೇಳಿ, ದಶರಥರಾಯನ ಹೃದಯವು ನಡುಗಲಾರಂಭಿಸಿತು, ಮುಖದ ಕಾಂತಿಯು ಕುಂದಿತು. ಆಗ ಅವನು "ಹೇ ಮುನೀಶ್ವರ! ಈ ನನ್ನ ನಾಲ್ಕನೆಯ ಅವಸ್ಥೆಯಲ್ಲಿ (ಎಂದರೆ ವೃದ್ಧಾವಸ್ಥೆಯಲ್ಲಿ) ಈ ಪುತ್ರಪ್ರಾಪ್ತಿಯಾಗಿ ರುವುದು. ನೀವು ಇದನ್ನಾಲೋಚಿಸದೇ ಹೀಗೆ ಮಾತಾಡಿದಿರಿ. ಬೇಕಾದರೆ ನೀವು ಭೂಮಿಯನ್ನೂ ಗೋವುಗಳನ್ನೂ ಧನಕನಕ ವಸ್ತುಗಳನ್ನೂ ಹೇರಳವಾಗಿ

ಕೊಡುವಂತೆ ಹೇಳಿರಿ. "ನನ್ನ ಮನಃಪೂರ್ವಕವಾಗಿ ಸರ್ವವನ್ನೂ ಕೊಡುವೆನು. ನನ್ನ ದೇಹ ಮತ್ತು ಪ್ರಾಣಗಳಿಗಿಂತಲೂ ಅಧಿಕ ಪ್ರಿಯವಾದ ವಸ್ತುಗಳನ್ನಾದರೂ ಕ್ಷಣಮಾತ್ರದಲ್ಲಿ ತಂದುಕೊಡಬಲ್ಲೆನು. ಆದರೆ ನನ್ನ ಈ ನಾಲ್ವರು ಪುತ್ರರು ನನಗೆ ಪ್ರಾಣಸ್ವರೂಪರಾಗಿರುವರು. ಅವರಲ್ಲಿಯೂ ರಾಮಚಂದ್ರನನ್ನು ಮಾತ್ರ ನಾನು ಬಿಟ್ಟಿರಲಾರೆನು. ಮುನಿರಾಜ ! ಮಹಾಭಯಂಕರರೂ ಕ್ರೂರರೂ ಆದ ರಾಕ್ಷಸರೆಲ್ಲಿ? (ಸುಂದರರೂ ಕೋಮಲಕಾಯರೂ) ಆದ ಈ ಬಾಲಕರೆಲ್ಲಿ?" ಎಂದು ಪ್ರಲಪಿಸಿದನು. ಪ್ರೇಮರಸಪೂರ್ಣವಾದ ರಾಜನಮಾತುಗಳನ್ನು ಕೇಳಿ ಜ್ಞಾನಿಯಾದ ವಿಶ್ವಾಮಿತ್ರಮುನಿಯು ಸಂತೋಷಪಟ್ಟನು. ವಸಿಷ್ಠಮುನಿಯು ಹಲವು ಬಗೆಯಾಗಿ ರಾಜನನ್ನು ಸಮಾಧಾನಪಡಿಸಿದನು. ಅದರಿಂದ ಅವನ ಸಂದೇಹಗಳೆಲ್ಲ ದೂರವಾದವು. ಆಗ ದಶರಥನು ತನ್ನ ಪುತ್ರರಿಬ್ಬರನ್ನೂ ಆತ್ಮಾದರದಿಂದ ಬರ ಮಾಡಿಕೊಂಡು, ಆಲಂಗಿಸಿ, ಹಲವು ಬುದ್ಧಿಯ ಮಾತುಗಳನ್ನು ಹೇಳಿ ವಿಶ್ವಾಮಿತ್ರನನ್ನು ಕುರಿತು, " ಮುನಿರಾಜ! ಹೇ ನಾಥ ! ಈ ಪುತ್ರರು ನನ್ನ ಪ್ರಾಣಾಧಾರರಾಗಿರುವರು. ಇನ್ನು ನೀವೆ ಇವರ ತಂದೆಯು" ಎಂದು ಬಿನ್ನಯಿಸಿ ಕೊಂಡನು.

ದೋ ॥೨೪೦॥ ಸೋ ॥೨೪೧॥ ಮಹಾರಾಜನು ಮತ್ತೆ ರಾಮ ಲಕ್ಷ್ಮಣ ರಿಬ್ಬರನ್ನೂ, ಆಶೀರ್ವದಿಸಿ, ಅವರನ್ನು ವಿಶ್ವಾಮಿತ್ರನಿಗೆ ಒಪ್ಪಿಸಿದನು. ಶ್ರೀರಾಮ ಚಂದ್ರ ಪ್ರಭುವು ಮಾತೆಯ ಅಂತಃಪುರಕ್ಕೆ ಹೋಗಿ ಆಕೆಯ ಚರಣಗಳಿಗೆರಗಿ ಖುಷಿಯೊಂದಿಗೆ ಲಕ್ಷ್ಮಣ ಸಮೇತನಾಗಿ ಹೊರಡಲು ಸಿದ್ಧನಾದನು. ಮುನಿ ಭಯಹರಣರೂ, ದಯಾಸಮುದ್ರರೂ, ಧೀರಮತಿಗಳೂ, ಪುರುಷಸಿಂಹರೂ, ಅಖಿಲವಿಶ್ವಕಾರಣಕರ್ತರೂ ಆದ ಆ ವೀರರಿಬ್ಬರೂ, ಪ್ರಸನ್ನಚಿತ್ತದಿಂದ (ತಪೋ ವನಕ್ಕೆ) ತೆರಳಿದರು. ಅವರಿಬ್ಬರೂ ನಡೆಯುತ್ತಿರುವಾಗ ಅವರ ರೂಪವನ್ನೆಂತು ಬಣ್ಣಿಸಬೇಕು! ಕೆಂಪಾದ ಅವರ ಕಣ್ಣುಗಳೂ ಅಗಲವಾದ ಎದೆಯೂ, ವಿಶಾಲ ವಾದ ಭುಜಗಳೂ, ನೀಲ ಕಮಲ ಮತ್ತು ತಮಾಲ ವೃಕ್ಷದಂತಿದ್ದ ಅವರ ಶ್ಯಾಮ ಸುಂದರವಾದ ಶರೀರಗಳೂ ಪೀತಾಂಬರವನ್ನು ಸುತ್ತಿದ್ದ ಕಟಿಯೂ ಧನು ರ್ಬಾಣಗಳನ್ನು ಧರಿಸಿದ್ದ ಕೈಗಳೂ, ಬಹು ಮನೋಹರವಾಗಿ ಶೋಭಿಸುತ್ತಿದ್ದವು. ಒಬ್ಬನು ಶ್ಯಾಮಸುಂದರನು ಮತ್ತೊಬ್ಬನು ಗೌರಾಂಗನು. ಇಂತಹ ಸೋದರಿಬ್ಬ ರನ್ನೂ ಹೊಂದಿ ವಿಶ್ವಾಮಿತ್ರನಿಗೆ ಮಹಾನಿಧಿಯು * ಪ್ರಾಪ್ತವಾದಂತಾಯಿತು. "ಆಗವನು ಭಗವಾನ್ ರಾಮಚಂದ್ರನು ಬ್ರಹ್ಮಣ್ಯ ದೇವನೆಂಬುದನ್ನು ನಾನು ತಿಳಿದೆನು. ಏಕೆಂದರೆ, ಇವನು ಬ್ರಾಹ್ಮಣನಾದ ನನಗೋಸ್ಕರ ಪಿತನನ್ನೂ ಕೂಡ

* ನಿಧಿಗಳು:——ಮಹಾಪದ್ಮ, ಪದ್ಮ, ಶಂಕ, ಮಕರ, ಕಚ್ಛಪ, ಮುಕುಂದ ಕುಂದ, ನೀಲ, ಖರ್ವ, ಎಂಬವು.

ತ್ಯಜಿಸಿ ಬಂದಿರುವನು:" ಎಂದು ತಿಳಿದನು. ಮಾರ್ಗದಲ್ಲಿ ಹೋಗುತ್ತಿರುವಾಗ ತಾಟಕಿಯೆಂಬ ರಾಕ್ಷಸಿಯು ಕಾಣಿಸಿದಳು. ಆ ರಾಕ್ಷಸಿಯು ಇವರು ಮೂವರು ಹೋಗುತ್ತಿರುವುದನ್ನು ಕಂಡು, ಓಡಿಬಂದಳು. ಶ್ರೀರಾಮಚಂದ್ರನು ಒಂದೇ ಬಾಣದಿಂದ ಅವಳನ್ನು ಸಂಹರಿಸಿ, ಅವಳಿಗೆ ವೈಕುಂಠಪದವಿಯನ್ನಿತ್ತನು. ಆಗ ಇಂತೂ ಋಷಿಯು ತನ್ನ ಸ್ವಾಮಿಯ ಪರಿಚಯವನ್ನು ಚೆನ್ನಾಗಿ ಹೊಂದಿ ಆ ವಿದ್ಯಾಸಾಗರನಿಗೂ ಕೂಡ, ಹಸಿವು ಬಾಯಾರಿಕೆಗಳಾಗದೇ ಶರೀರದಲ್ಲಿ ಅತುಲ ಬಲವೂ ತೇಜಸ್ಸೂ ಪ್ರಕಾಶಿಸುವಂತೆ ಮಾಡುವಂತಹ (ಬಲ, ಅತಿಬಲಾದಿ) ವಿದ್ಯೆಗಳನ್ನು ಹೇಳಿಕೊಟ್ಟನು.

ದೋ ॥೨೪೨॥ ಮತ್ತೆ ತನ್ನಲ್ಲಿರುವ ಇತರ ಶಸ್ತ್ರಾಸ್ತ್ರಗಳನ್ನೆಲ್ಲ †ಪ್ರಭುವಿಗೆ ಸಮರ್ಪಿಸಿ, ಅವನನ್ನು ಋಷಿಯು ತನ್ನ ಆಶ್ರಮಕ್ಕೆ ಕರೆದುಕೊಂಡು ಹೋಗಿ, ಭೋಜನಕ್ಕಾಗಿ ಕಂದಮೂಲ ಫಲಗಳನ್ನು ಕೊಟ್ಟನು. ಮರುದಿನ ಬೆಳಿಗ್ಗೆ ಶ್ರೀರಾಮಚಂದ್ರನು ಮುನಿಯನ್ನು ನೋಡಿ, "ಮುನಿರಾಜ, ನೀವು ಇನ್ನು ನಿರ್ಭಯದಿಂದ, ಯಜ್ಞವನ್ನು ಮಾಡಿರಿ, ಎಂದು ಅಭಯ ವಚನವನ್ನು ಹೇಳಿದನು. ಅದನ್ನು ಕೇಳಿ ಋಷಿಗಳೆಲ್ಲರೂ ಯಜ್ಞವನ್ನು ಮಾಡಲಾರಂಭಿಸಿದರು. ರಾಮಚಂದ್ರನು ಯಜ್ಞ ರಕ್ಷಣೆಗಾಗಿ ನಿಂತನು. ಯಜ್ಞದ ಮಂತ್ರ ಘೋಷವನ್ನು ಕೇಳಿದ ಕೂಡಲೆ, ಮುನಿದ್ರೋಹಿಯಾದ ಮಾರಿಚನೆಂಬ ರಾಕ್ಷಸನು ಕ್ರೋಧದಿಂದ ತನ್ನ ಸಹಾಯಕರನ್ನು ಕರೆದುಕೊಂಡು ಓಡಿಬಂದನು. ರಾಮಚಂದ್ರನು (ತಡ ಮಾಡದೆ, ಕೈಗೆ ಸಿಕ್ಕ) ಮೊಂಡ ಬಾಣವೊಂದನ್ನು ಅವನಮೇಲೆ ಹೂಡಲು, ಆ ರಾಕ್ಷಸನು ನೂರುಯೋಜನದಾಚೆ ಸಮುದ್ರವನ್ನು ದಾಟಿಬಿದ್ದು ಮಡಿದನು. ಅನಂತರ ಆಗ್ನಿ ಬಾಣದಿಂದ ಸುಬಾಹುವೆಂಬ ರಾಕ್ಷಸನನ್ನು ಕೊಂದನು. ಇತ್ತ ಲಕ್ಷ್ಮಣನು ರಾಕ್ಷಸ ಸೈನ್ಯವನ್ನು ಸಮೂಲವಾಗಿ ಸಂಹರಿಸಿದನು. ದ್ವಿಜಭಯ

† ಆ ಶಸ್ತ್ರಾಸ್ತ್ರಗಳಾವುವೆಂದರೆ,—ದಂಡಚಕ್ರ, ಧರ್ಮಚಕ್ರ, ಕಾಲಚಕ್ರ, ವಿಷ್ಣುಚಕ್ರ, ಐಂದ್ರಚಕ್ರ, ವಜ್ರಾಸ್ತ್ರ, ಶೈವಶೂಲವರ', ಬ್ರಹ್ಮಶಿರ, ಐಷೀಕ, ಬ್ರಹ್ಮಾಸ್ತ್ರ, ಮೋದಕೀಗದಾ, ಶಿಖರೀಗದಾ, ಧರ್ಮಪಾಶ, ಕಾಲಪಾಶ, ವರುಣಪಾಶ, ಶುಷ್ಕವಜ್ರ, ಆರ್ದ್ರವಜ್ರ, ಪೈನಕಾಸ್ತ್ರ, ನಾರಾಯಣಾಸ್ತ್ರ, ಆಗ್ನೇಯಾಸ್ತ್ರ, ಶಿಖರನಾಮಕ ವಾಯವ್ಯಾಸ್ತ್ರ, ಹಯಶಿರೋಸ್ತ್ರ, ಕ್ರೌಂಚಾಸ್ತ್ರ, ಎರಡು ಶಕ್ತಿಗಳು, ವೈದ್ಯಧರಾಸ್ತ್ರ, ನಂದನ ಖಡ್ಗ, ಗಾಂಧರ್ವಾಸ್ತ್ರ ಮೋಹನನಾಮಪ್ರಸ್ವಾಪನ, ಪ್ರಶಮನ ಸೌಮ್ಯ, ವರ್ಷಣಸಂತಾಪನಶಸ್ತ್ರ, ವಿಲಾಪನ, ಕಾಮಪ್ರಿಯಮದನಾಸ್ತ್ರ, ಗಂಧರ್ವಾಸ್ತ್ರ, ಮಾನವನಾಮಕ ಪೈಶಾಚಾಸ್ತ್ರ, ಮೋಹನ ನಾಮ ತಾಮಸ, ಸೋಮನ, ಸಂವರ್ತ, ಮೌಶಲ, ಸತ್ಯಾಸ್ತ್ರ ಮಾಯಾಮಯ ತೇಜಃ ಪ್ರಭಾವನಾಮಕ ಸೌರಾಸ್ತ್ರ, ಶಿಶಿರನಾಮಕ ಸೌಮಾಸ್ತ್ರ, ತ್ವಾಷ್ಟ್ರಾಸ್ತ್ರ, ಭಗಾಸ್ತ್ರ, — ಸೀಲೇಷು, ಮತ್ತು ಮಾನವ, ಕಂಕಾಲ ನಾಮಮುಸಲ, ಕಾಪಾಲಕಿಂಕಣೀ— ಇವುಗಳು.

ನಿವಾರಕನಾದ ಭಗವಂತನು ರಾಕ್ಷಸರನ್ನು ಸಂಹರಿಸಿದ ಕೂಡಲೆ, ದೇವತೆಗಳೂ ಋಷಿಗಳೂ, ಭಗವಂತನನ್ನು ಸ್ತುತಿಸಲಾರಂಭಿಸಿದರು. ಅನಂತರ ವಿಪ್ರರ ಮೇಲೆ ಅನುಗ್ರಹವಿಟ್ಟು, ರಘುರಾಯನು ಕೆಲದಿನಗಳವರೆಗೆ ಅಲ್ಲಿಯೇ ವಾಸಿಸಿದನು. ಆಗ ಬ್ರಾಹ್ಮಣರು ಭಕ್ತಿಪೂರ್ವಕವಾಗಿ ಅನೇಕ ಪುರಾಣ ಪುಣ್ಯ ಕಥೆಗಳನ್ನು ಹೇಳುತ್ತಿದ್ದರು. ಆದರೆ ಅವುಗಳೆಲ್ಲ ರಾಮಚಂದ್ರನಿಗೆ ಮೊದಲೇ ಗೊತ್ತಿದ್ದವು. ಹೀಗೆ ಕೆಲವು ದಿನಗಳಾದ ನಂತರ, ವಿಶ್ವಾಮಿತ್ರ ಮುನಿಯು ರಾಮಚಂದ್ರನನ್ನು ಕುರಿತು, ಆದರದಿಂದ "ಹೇ ಪ್ರಭು, ಇಲ್ಲಿಂದ ನೀನು ಧನುರ್ಯಜ್ಞಕ್ಕೆ ಬಿಜಯ ಮಾಡಬೇಕು" ಎಂದು ಪ್ರಾರ್ಥಿಸಿದನು. ರಘುಕುಲನಾಥನು ಧನುರ್ಯಜ್ಞದ ಸಮಾಚಾರವನ್ನು ಕೇಳಿ, ಪ್ರಸನ್ನ ಚಿತ್ತದಿಂದ ಮುನಿವರನೊಂದಿಗೆ ಹೊರಟನು. ಮಾರ್ಗದಲ್ಲಿ ಒಂದು ಆಶ್ರಮವು ಕಾಣಿಸಿತು. ಅಲ್ಲಿ ಪಶುಪಕ್ಷ್ಯಾದಿ ಜೀವಜಂತುಗಳಾವುವೂ ಇರಲಿಲ್ಲ. ಅಲ್ಲಿ ಒಂದು ಶಿಲೆಯನ್ನು ನೋಡಿ, ಪ್ರಭುವು ಪ್ರಶ್ನೆ ಮಾಡಲು ಮುನಿಯು ಅದರ ಕಥೆಯನ್ನು ಸಾದ್ಯಂತವಾಗಿ ಹೇಳಿದನು.

### ಅಹಲ್ಯೋದ್ಧಾರ.

ದೋ ॥೨೫೩॥ ಮತ್ತೆ ಹೇಳಿದನೆಂತೆನೆ—ಹೇ ರಘುವೀರ, ಗೌತಮನ ಪತ್ನಿಯು * ಶಾಪದ ದೆಸೆಯಿಂದ ಧೀರಮತಿಯುಳ್ಳವಳಾಗಿ ಶಿಲಾರೂಪವನ್ನು ಧರಿಸಿರುವಳು. ಇವಳು ನಿನ್ನ ಚರಣಕಮಲರಜವನ್ನು ಅಪೇಕ್ಷಿಸುತ್ತಿರುವಳು. ಇವಳ ಮೇಲೆ ಅನುಗ್ರಹವಿಡು"—ಶೋಕವನ್ನು ಹರಣ ಮಾಡುವ ಶ್ರೀರಾಮಚಂದ್ರನ ಪವಿತ್ರಚರಣಗಳ ಸ್ಪರ್ಶವಾದ ಕೂಡಲೆ, ಆ ಶಿಲೆಯಿಂದ ತಪ

---

* ಒಂದಾನೊಂದು ದಿನ ಬ್ರಹ್ಮನು ತನ್ನ ಇಚ್ಛಾಬಲದಿಂದ ಅತಿಸುಂದರಳಾದ ಕನ್ಯೆಯನ್ನು ಸೃಷ್ಟಿಸಿದನು. ಗೌತಮ ಋಷಿಯು ಅವಳನ್ನು ಮದುವೆಯಾದನು. ಒಂದು ದಿನ ದೇವೇಂದ್ರನು ವಿಷಯಾಸಕ್ತನಾಗಿ ಋಷಿ ರೂಪವನ್ನು ಧರಿಸಿ, ಅಹಲ್ಯೆಯ ಬಳಿಗೆ ಬಂದು ಅವಳನ್ನು ವಂಚಿಸಿದನು. ಆ ಸಮಯದಲ್ಲಿ ಗೌತಮ ಋಷಿಯು ಅಲ್ಲಿಗೆ ಬಂದನು. ಆಗ ಅಹಲ್ಯೆಯು ಛದ್ಮವೇಷಧಾರಿಯಾದ ಋಷಿಯನ್ನು ನೀನಾರೆಂದು ಕೇಳಲು, ಅವನು "ನಾನು ದೇವೇಂದ್ರನು, ಕಾಪಾಡು, ಋಷಿಯ ಶಾಪದಿಂದ ನನ್ನನ್ನು ಕಾಪಾಡು" ಎಂದು ಮೊರೆಯಿಟ್ಟನು. ಆಗವಳು ಅವನನ್ನು ಮರೆಯಾಗಿಟ್ಟು, ಆಶ್ರಮದ ಬಾಗಿಲನ್ನು ತೆರೆದಳು. ಬಾಗಿಲನ್ನು ತೆಗೆಯುವುದಕ್ಕೆ ಹೆಚ್ಚು ಹೊತ್ತೇಕೆ ಆಯಿತೆಂದು ಗೌತಮನು ಅಹಲ್ಯೆಯನ್ನು ಪ್ರಶ್ನಿಸಲು, ಅವಳು ನಿಜವಾದ ಸಂಗತಿಯನ್ನು ತಿಳಿಸದೆ, ಬೇರೆ ಕಾರಣವನ್ನು ಹೇಳಿದಳು. ಋಷಿಯು ತನ್ನ ಜ್ಞಾನದೃಷ್ಟಿಯಿಂದ ನಿಜವಾದ ಸಂಗತಿಯನ್ನರಿತು, ಇಂದ್ರನಿಗೆ "ನಿನ್ನ ಶರೀರದಲ್ಲಿ ನೂರಾರು ಯೋನಿಗಳಾಗಲಿ" ಎಂದು ಶಪಿಸಿದನು. ಅಹಲ್ಯೆಗೆ ನೀನು ಶಿಲೆಯಾಗು. ಭಗವಂತನು ರಾಮಾವತಾರವನ್ನು ತಳೆದಾಗ ಆತನ ಚರಣ ಧೂಳಿಯು ನಿನ್ನಮೇಲೆ ಬಿದ್ದಾಗ ನಿನ್ನ ಉದ್ಧಾರವಾಗುವುದು ಎಂದು ಹೇಳಿದನು

ಶ್ರೀ ತುಳಸೀದಾಸ ರಾಮಾಯಣ:—



ಅಹಲ್ಯೋದ್ಧಾರ

(ಪುಟ ೧೫೨)

ಸ್ವಿನಿಯಾದ ಸ್ತ್ರೀಯು ಪ್ರಕಟವಾದಳು. ಭಕ್ತಜನಸುಖದಾಯಕನಾದ ರಘುನಾಯಕನ ದರ್ಶನವನ್ನು ಮಾಡಿ, ಕೈಜೋಡಿಸಿ, ಅವನ ಮುಂದೆ (ಮೊಣಕಾಲೂರಿ ತಲೆಬಾಗಿಸಿದಳು.) ಪ್ರೇಮಾತಿಶಯದಿಂದ ಅಧೀರಳಾದ ಅವಳ ಶರೀರವು ಪುಲಕಿತವಾಯಿತು. ಅವಳ ಬಾಯಿಂದ ಮಾತುಗಳೇ ಹೊರಡದಂತಾದವು. ಆಗ ಭಾಗ್ಯಶಾಲಿನಿಯಾದ ಅಹಲ್ಯೆಯು ಕಣ್ಣುಗಳಿಂದ ಕಂಬನಿಗಳನ್ನುದರಿಸುತ್ತ, ಶ್ರೀರಾಮಚಂದ್ರನ ಚರಣಗಳಿಗೆರಗಿದಳು. ಅನಂತರ ನಿಧಾನವಾಗಿ ಧೈರ್ಯವನ್ನು ತಳೆದು ಅವಳು ಭಗವಂತನನ್ನು ಗುರುತಿಸಿದಳು. ಶ್ರೀರಾಮಚಂದ್ರನ ಕೃಪೆಯಿಂದ ಅವಳಲ್ಲಿ ಭಕ್ತಿಯುತ್ಪನ್ನವಾಯಿತು. ಆಗವಳು ಅತಿ ನಿರ್ಮಲವಾದ ವಾಣಿಯಿಂದ ಇಂತು ಪ್ರಾರ್ಥಿಸಿದಳು.—"ಜ್ಞಾನಗಮ್ಯನಾದ ರಘುವರನೇ! ನಿನಗೆ ಜಯವಾಗಲಿ. ನಾನು ಅಪವಿತ್ರಳಾದ ಸ್ತ್ರೀಯು ನೀನು ಅಸುರಾರಿ, ಭಕ್ತಜನ ಸುಖದಾಯಕನು. ಹೇ ಕಮಲನಯನ! ಸಂಸಾರ ಭಯಮೋಚನ! ಪಾಹಿ, ಪಾಹಿ! ನನ್ನನ್ನು ರಕ್ಷಿಸು! ನಾನು ನಿನಗೆ ಶರಣಾಗತಳಾಗಿರುವೆನು ಗೌತಮ ಮುನಿಯ ಶಾಪದಿಂದ ನನಗೆ ಅನುಗ್ರಹವುಂಟಾಯಿತು ಅವರ ಶಾಪವೇ ಪರಮಾನುಗ್ರಹವೆಂದು ನಾನು ಭಾವಿಸಿದೆನು ಆವನ ದರ್ಶನವು ಲಾಭಕರವೆಂದು ಮಹಾದೇವನು ಭಾವಿಸಿರುವನೊ ಆ ಮುಕ್ತಿದಾಯಕನಾದ ಭಗವಂತನನ್ನು ಕಣ್ಣುಗಳು ದಣಿಯುವವರೆಗೆ ನಾನು ನೋಡುತ್ತಿರುವೆನು. ಹೇ! ಭಗವನ್ ನಾಥ! ನಾನೇನೂ ಅರಿಯದ ಅಜ್ಞಾನಿ ನನ್ನ ಮನಸ್ಸೆಂಬ ಭ್ರಮರವು ನಿನ್ನ ಚರಣಕಮಲ ಪರಾಗ ರಸವನ್ನು ಯಾವಾಗಲೂ ಪ್ರೇಮದಿಂದ ಪಾನಮಾಡುತ್ತಿರುವಂತೆ ಅನುಗ್ರಹಿಸು, ನನಗೆ ಇದೊಂದೇ ವರವು ಸಾಕು. ನಾನು ಮತ್ತೇನನ್ನೂ ಬೇಡುವುದಿಲ್ಲ. ಆವನ ಚರಣಕಮಲದಿಂದ ಹುಟ್ಟಿದ ಪರಮ ಪಾವನಳಾದ ಗಂಗೆಯನ್ನು ಶಿವನು ಜಟೆಯಲ್ಲಿ ಧರಿಸಿದನೋ, ಆವನ ಪಾದಪಂಕಜವನ್ನು ಬ್ರಹ್ಮನು ಪೂಜಿಸುವನೊ, ಅಂಥಾ ಚರಣಾರವಿಂದವನ್ನು ನೀನು ನನ್ನ ಶಿರಸ್ಸಿನ ಮೇಲಿಟ್ಟಿರುವೆ. ಹೇ ಕೃಪಾಳುವಾದ ಹರಿಯೆ! (ನಿನಗೆ ನಮಸ್ಕರಿಸುವೆನು)"-- ಹೀಗೆ ಪ್ರಾರ್ಥಿಸುತ್ತ, ಬಾರಿಬಾರಿಗೂ ರಾಮಚಂದ್ರನ ಚರಣಗಳಿಗೆರಗುತ್ತ, ತನಗೆ ಪ್ರಿಯವಾದ ವರವನ್ನು ಹೊಂದಿ, ಅಹಲ್ಯೆಯು ತನ್ನ ಪತಿಯ ಬಳಿಗೆ ತೆರಳಿದಳು.

### ಜನಕನಗರ ವರ್ಣನೆ.

ದೊ ॥ ೨೪೪ ॥ ತುಳಸಿದಾಸರು ಹೇಳುತ್ತಾರೆ, ಹೇ ಶಠರೆ, ಕಪಟವನ್ನೂ ನಿಂದೆಯನ್ನೂ ತ್ಯಜಿಸಿ, ದೀನ ಬಂಧುವೂ ಕಾರಣರಹಿತವಾಗಿ ದಯಾಳುವೂ ಆಗಿರುವ ರಾಮಚಂದ್ರ ಪ್ರಭುವನ್ನು ಭಜಿಸಿರಿ.—ರಾಮಚಂದ್ರನೂ ಲಕ್ಷ್ಮಣನೂ ಮುನಿಯೊಂದಿಗೆ ಹೊರಟು ಜಗತ್ತನ್ನೆ ಪಾವನಗೊಳಿಸುತ್ತಿರುವ ಗಂಗಾನದಿಯ ತೀರಕ್ಕೆ ಬಂದು ಸೇರಿದರು. ಆಗ ವಿಶ್ವಾಮಿತ್ರನು ಗಂಗೆಯು ಪೃಥ್ವಿ ಲೋಕಕೆ

ಹೇಗೆ ಬಂದಳೆಂಬ ಕಥೆಯನ್ನು * ರಾಮಚಂದ್ರನಿಗೆ ಹೇಳಿದನು. ಅನಂತರ ಭಗವಾನನು ಋಷಿಸಮೇತ ಸ್ನಾನಮಾಡಿ, ಬ್ರಾಹ್ಮಣರಿಗೆ ದಾನಾದಿಗಳನ್ನು ಕೊಟ್ಟು ಅಲ್ಲಿದ್ದ ಮುನಿವೃಂದದೊಂದಿಗೆ ಪ್ರಸನ್ನಚಿತ್ತದಿಂದ ಮುಂದಕ್ಕೆ ತೆರಳಿದನು. ಮುಂದೆ ಅತ್ಯಲ್ಪ ಸಮಯದಲ್ಲಿಯೆ ವಿದೇಹನಗರದ (ಜನಕಪುರದ) ಬಳಿಗೆ ಬಂದುಸೇರಿದರು. ರಾಮಚಂದ್ರನು ಜನಕಪುರಿಯ ಶೋಭೆಯನ್ನು ನೋಡಿ,ವಿಶೇಷ ಹರ್ಷಿತನಾದನು. ಅಲ್ಲಿ ಅನೇಕ ಕೊಳ, ಕೆರೆ, ನದಿಗಳು ಇದ್ದವು. ಅವುಗಳ ಸೋಪಾನಗಳು ಮಣಿಗಳಿಂದ ರಚಿಸಲ್ಪಟ್ಟಿದ್ದವು. ಅವುಗಳಲ್ಲಿದ್ದ ಜಲವು ಅಮೃತದಂತಿದ್ದುದು. ಅಲ್ಲಿ ರಸದಿಂದ ಮದವೇರಿದ ಭೃಂಗಗಳು ಗುಂಜಾರವವನ್ನು ಮಾಡುತ್ತಲಿದ್ದವು. ವಿವಿಧ ವರ್ಣಗಳ ಪಕ್ಷಿಗಳು ಮಧುರವಾದ ಕಲಕಲರವವನ್ನು ಮಾಡುತ್ತಿದ್ದವು. ಹಲವು

---

* ಸೂರ್ಯಕುಲದಲ್ಲಿ ಸಗರನೆಂಬ ರಾಜನಿದ್ದನು. ಅವನಿಗೆ ಕೇಶಿನೀ ಮತ್ತು ಸುಮತಿಯೆಂಬ ಇಬ್ಬರು ರಾಣಿಯರಿದ್ದರು. ಮೊದಲನೆಯವಳಲ್ಲಿ ಅಸಮಂಜಸನೆಂಬ ಮಗನೂ, ಎರಡನೆಯವಳಿಗೆ ೬೦ ಸಾವಿರ ಮಕ್ಕಳೂ, ಹುಟ್ಟಿದರು. ಒಂದು ಸಮಯದಲ್ಲಿ ಸಗರಚಕ್ರವರ್ತಿಯು ಅಶ್ವಮೇಧ ಯಜ್ಞವನ್ನು ಮಾಡಿದನು. ಆ ಕುದುರೆಯ ರಕ್ಷಣೆಗಾಗಿ ತನ್ನ ಪುತ್ರರನ್ನು ಕಳುಹಿಸಿದನು. ದೇವೇಂದ್ರನು ಆ ಕುದುರೆಯನ್ನು ಕದ್ದುಕೊಂಡು ಹೋಗಿ ಕಪಿಲಮುನಿಯ ಆಶ್ರಮದಲ್ಲಿ ಕಟ್ಟಿ ಹೋದನು. ಸಗರನ-ಪುತ್ರರು ಕುದುರೆಯನ್ನು ಹುಡುಕುತ್ತ ಕೊನೆಗೆ ಕಪಿಲಮುನಿಯ ಆಶ್ರಮಕ್ಕೆ ಬರಲು ಅಲ್ಲಿ ಕುದುರೆಯು ಕಟ್ಟಲ್ಪಟ್ಟಿದ್ದುದನ್ನು ನೋಡಿದರು. ಆಗ ಆ ಮುನಿಯು ಛದ್ಮವೇಷಧಾರಿಯೆಂದು ಭಾವಿಸಿ, ಕೋಪದಿಂದ ಕೋಲಾಹಲವನ್ನೆಬ್ಬಿಸಿದರು. ಅದನ್ನು ಕೇಳಿ ಸಮಾಧಿಸ್ಥನಾಗಿದ್ದ ಕಪಿಲಮುನಿಯು ತನ್ನ ಸಮಾಧಿಯನ್ನು ಭಂಗಪಡಿಸಿದವರಾರೆಂದು ಕೋಪದಿಂದ ಕಣ್ತೆರೆದು ನೋಡಲು, ಸಗರಪುತ್ರರೆಲ್ಲರೂ ಸುಟ್ಟು ಬೂದಿಯಾದರು. ಆಗ ರಾಜನು ಅಸಮಂಜಸನ ಪುತ್ರನಾದ ಅಂಶುಮಾನನನ್ನು ತನ್ನ ಪುತ್ರ ಶೋಧನಾರ್ಥವಾಗಿ ಕಳುಹಿಸಿದನು. ಅವನು ಕಪಿಲಮುನಿಯ ಆಶ್ರಮಕ್ಕೆ ಹೋಗಿ, ಮುನಿಯನ್ನು ಪ್ರಾರ್ಥಿಸಿ, ಕುದುರೆಯನ್ನು ತೆಗೆದುಕೊಂಡು ಬಂದನು. ಅಲ್ಲಿ ಅವನಿಗೆ ಗರುಡನ ಭೇಟಿಯಾಗಿ, ಅವನು "ಗಂಗೆಯನ್ನು ಪೃಥ್ವಿಗೆ ಕರೆದುಕೊಂಡು ಬರುವ ಪ್ರಯತ್ನವನ್ನು ಮಾಡು. ಗಂಗಾಜಲವು ನಿನ್ನ ಬಂಧುಗಳ ಬೂದಿಯ ಮೇಲೆ ಪ್ರವಹಿಸಿದರೆ, ನಿನ್ನ ಪಿತೃಗಳಿಗೆ ಸ್ವರ್ಗಪ್ರಾಪ್ತಿಯಾಗುವುದು" ಎಂದು ಅಂಶುಮಾನನಿಗೆ ಉಪದೇಶಿಸಿದನು. ಅಶ್ವಪ್ರಾಪ್ತಿಯಾದ ಕೂಡಲೆ ಸಗರನು ಯಜ್ಞವನ್ನು ಪೂರೈಸಿ, ಅಂಶುಮಾನನಿಗೆ ಪಟ್ಟಗಟ್ಟಿ, ತಾನು ವನಕ್ಕೆ ಹೊರಟುಹೋದನು. ಅಂಶುಮಾನನಿಗೆ ದಿಲೀಪನೆಂಬ ಮಗನು ಹುಟ್ಟಿದನು. ಅಂಶುಮಾನನಾಗಲಿ, ದಿಲೀಪನಾಗಲಿ, ಗಂಗೆಯನ್ನು ಕರೆತರುವ ಪ್ರಯತ್ನವನ್ನು ಮಾಡಲಿಲ್ಲ. ದಿಲೀಪನಿಗೆ ಭಗೀರಥನೆಂಬ ಪುತ್ರನು ಹುಟ್ಟಿದನು. ಅವನು ಘೋರವಾದ ತಪಸ್ಸನ್ನಾಚರಿಸಿ, ಕೊನೆಗೆ ಗಂಗೆಯನ್ನು ಪೃಥ್ವಿಗೆ ಕರೆತಂದನು. ಆಕಾಶದಿಂದ ಗಂಗೆಯು ಬರುವಾಗ ಆಕೆಯ ವೇಗವನ್ನು ತಡೆವುದಕ್ಕೋಸ್ಕರ ಭಗೀರಥನು ಶಿವನನ್ನು ಕುರಿತು ತಪಸ್ಸು ಮಾಡಿದನು. ಶಿವನು ಗಂಗೆಯನ್ನು ಶಿರಸಿನ ಮೇಲೆ ಧರಿಸಿ, ಆಕೆಯ ವೇಗವನ್ನು ತಡೆದನು. ಈ ಕಾರಣದಿಂದ ಗಂಗೆಯು ಪೃಥ್ವಿಗಿಳಿದು ಬಂದಳು.



ಭಗೀರಥನು ತಪಸ್ಸನ್ನಾಚರಿಸಿ ಗಂಗೆಯನ್ನು ಕರೆದುಕೊಂಡು ಹೋಗುತ್ತಿರುವುದು.

(ಪುಟ ೧೫೪)

ಬಣ್ಣಗಳ ಕಮಲಗಳು ಅರಳಿದ್ದುವು. ಮತ್ತೆ ಶೀತಲವೂ ಮಂದವೂ ಸುಗಂಧಿತವೂ ಆದ ಗಾಳಿಯು ಬೀಸುತ್ತ ಸುಖವನ್ನುಂಟುಮಾಡುತ್ತಿದ್ದಿತು.

ದೋ ॥ ೨೪೫॥ ಆ ನಗರದ ನಾಲ್ಕು ದಿಕ್ಕುಗಳಲ್ಲಿಯೂ ಪುಷ್ಪವಾಟಿಕೆಗಳಲ್ಲಿ ಹೂಗಳು ಅರಳಿದ್ದವು. ತೋಟಗಳಲ್ಲಿ ಹಣ್ಣುಗಳು ಹೇರಳವಾಗಿ ತೂಗಾಡುತ್ತಿದ್ದವು. ವನಗಳ ಗಿಡಬಳ್ಳಿಗಳಲ್ಲಿ ಹೊಸ ಚಿಗುರು ಹುಟ್ಟಿದ್ದಿತು. (ಮರಗಳ ಮೇಲೆ) ವಿಶಾಲವಾಗಿದ್ದ ಪಕ್ಷಿಯ ಗೂಡುಗಳು ಅಂದವಾಗಿ ಕಾಣಿಸುತ್ತಿದ್ದವು. ಆ ಜನಕಪುರಿಯ ವರ್ಣನೆಯನ್ನು ಮಾಡುವುದು ಅಸಾಧ್ಯ. ಏಕೆಂದರೆ, ವರ್ಣಿಸುವ ಕೆಲಸವು ಮನಸ್ಸಿಗೆ ಸೇರಿದ್ದು. ಮನಸ್ಸು ಎಲ್ಲಿಗೆ ಹೋಗುವುದೊ ಅಲ್ಲಿ, ಮೋಹವಶವಾಗುವುದು. ಜನಕಪುರಿಯ ಅಂಗಡಿಗಳ (ಸಾಲುಗಳು) ಬಹು ಮನೋಹರವಾಗಿದ್ದವು ಅವುಗಳ ಮೇಲಣ ಮಹಡಿಗಳು ಬಹು ವಿಚಿತ್ರವಾಗಿ ಸಾಕ್ಷಾತ್ ಬ್ರಹ್ಮನು ಇವುಗಳನ್ನು ತನ್ನ ಕೈಯಿಂದಲೇ ಅಲಂಕರಿಸಿರುವನೋ ಎಂಬಂತಿದ್ದವು. ಆ ನಗರದಲ್ಲಿ ಕುಬೇರನಿಗೆ ಸಮಾನರೆನಿಸಿದ ಧನಿಕರಾದ ವರ್ತಕರು ಕೊಂಡುಕೊಳ್ಳುವುದಕ್ಕೆ (ಅದಲುಬದಲು ವ್ಯಾಪಾರಕ್ಕೆ) ನಾನಾ ವಿಧವಾದ ವಸ್ತುಗಳನ್ನು ತೆಗೆದುಕೊಂಡು ಬಂದು ಅಂಗಡಿಗಳನ್ನಿಟ್ಟಿದ್ದರು. ಸುಂದರವಾದ ರಾಜಮಾರ್ಗಗಳಲ್ಲಿಯೂ, ಇತರ ಮಾರ್ಗಗಳಲ್ಲಿಯೂ, ಸುಗಂಧಿತ ಜಲವನ್ನು ಚೆಲ್ಲುತ್ತಿರುವರು. ಅಲ್ಲಿರುವವರ ಮನೆಗಳೆಲ್ಲ ಸಾಕ್ಷಾತ್ ಕಾಮದೇವನಿಂದ ಚಿತ್ರಿಸಲ್ಪಟ್ಟಿದ್ದಂತೆ ಸುಂದರವಾಗಿ ಮಂಗಳಮಯವಾಗಿ ಶೋಭಿಸುತ್ತಿದ್ದವು ನಗರ ನಿವಾಸಿಗಳಾದ ಸ್ತ್ರೀಪುರುಷರೆಲ್ಲರೂ ಸುಂದರರೂ, ಪವಿತ್ರರೂ, ಸಾಧುಗಳೂ, ಧರ್ಮಶೀಲರೂ, ಜ್ಞಾನಿಗಳೂ, ಗುಣವಂತರೂ ಆಗಿದ್ದರು ಜನಕರಾಜನ ಅರಮನೆಯಿದ್ದೆಡೆಯು ಬಹು ಮನೋಹರವಾಗಿದ್ದಿತು. ಅವನ ಭೋಗವಿಲಾಸಗಳನ್ನು ನೋಡಿ ದೇವತೆಗಳು ಚಕಿತರಾಗುತ್ತಿದ್ದರು. ಆ ನಗರದ ಕೋಟೆ ಕೊತ್ತಳಗಳನ್ನು ನೋಡಿ ಚಿತ್ತವು ಚಕಿತವಾಗುತ್ತಿದ್ದಿತು. ನೋಡಿದವರಿಗೆ ಅದು ಜಗತ್ತಿನ ಶೋಭಾರಾಶಿಯೆಲ್ಲವನ್ನೂ ತನ್ನೊಳಗೇ ಸಂಗ್ರಹಿಸಿಟ್ಟುಕೊಂಡಿದ್ದಂತೆ ಕಾಣುತ್ತಿದ್ದಿತು.

ದೋ ॥ ೨೪೬॥ ಅವನಾ ಧವಳಧಾಮದ ಬಾಗಿಲುಗಳೆಲ್ಲ ಸುವರ್ಣದಿಂದಲೂ, ಮಣಿಗಳಿಂದಲೂ, ವಿವಿಧವಾಗಿ ಅಲಂಕರಿಸಲ್ಪಟ್ಟಿದ್ದವು ಸೀತೆಯು ನಿವಾಸಿಸುತ್ತಿದ್ದ ಸುಂದರ ಸದನದ ಶೋಭೆಯನ್ನು ಯಾರು ಬಣ್ಣಿಸಬಲ್ಲರು? ಒಟ್ಟಿನಲ್ಲಿ ಆ ರಾಜ ಭವನದ ಬಾಗಿಲ ಚೌಕಟ್ಟುಗಳೆಲ್ಲವೂ ಬಹು ಸುಂದರವಾಗಿದ್ದವು. ಅವುಗಳ ಬಾಗಿಲುಗಳು ವಜ್ರದಿಂದ ರಚಿತವಾಗಿದ್ದವು. ಅದರಲ್ಲಿ ಯಾವಾಗಲೂ ರಾಜರು, ನಟರು, ಮಾಗಧಿಗಳು, ಭಟರಾಧಿಯಾಗಿ ಹಲವರ ಗದ್ದಲವಿರುತ್ತಿದ್ದಿತು. (ಅದರ ಸಮೀಪದಲ್ಲಿ) ಗಜಶಾಲೆ, ಅಶ್ವಶಾಲೆ, ಮೊದಲಾದ ವಿಶಾಲವಾದ ಮೃಗಶಾಲೆಗಳನ್ನು ಕಟ್ಟಿದ್ದರು. ಅವುಗಳಲ್ಲಿ ಯಾವಾಗಲೂ ರಥ,

ಆನೆ, ಕುದುರೆ, ಮೊದಲಾದ ಪ್ರಾಣಿಗಳು ತುಂಬಿರುವವು. ಆ ನಗರದಲ್ಲಿ ಶೂರ ವೀರರೂ, ಮಂತ್ರಿಗಳೂ, ಸೇನಾನಾಯಕರೂ, ವಿಶೇಷವಾಗಿರುವರು. ಅವರ ವಾಸ ಸ್ಥಾನಗಳೆಲ್ಲ ರಾಜ ಭವನದಂತೆಯೇ ಇರುವವು. ನಗರಕ್ಕೆ ಸಮೀಪವಾಗಿದ್ದ ಸರೋವರ ಮತ್ತು ನದಿಗಳ ಬಳಿ ಬಹು ಜನ ರಾಜರು ಅಲ್ಲಲ್ಲಿಳಿದುಕೊಂಡಿರು ವರು. ಅಲ್ಲಿಯೇ ಒಂದು ಅಂದವಾದ ಮಾವಿನ ತೋಪನ್ನು ನೋಡಿ, ವಿಶ್ವಾ ಮಿತ್ರನು "ಹೇ ಸುಜ್ಞಾನಿಯಾದ ರಘುವೀರ! ಈ ಸ್ಥಳವು ನನಗೆ ಮನೋಹರ ವಾಗಿ ಕಾಣುತ್ತಿದೆ. ನಾವಿಲ್ಲಿಯೇ ಇಳಿದುಕೊಳ್ಳುವಾ!" ಎಂದನು. ಕೃಪಾನಿಧಿ ಯಾದ ರಾಮಚಂದ್ರನು "ಒಳ್ಳೆಯದು ಮುನಿಶ್ರೇಷ್ಠ" ಎಂದು ಜತೆಯಲ್ಲಿ ಬಂದಿದ್ದ ಮುನಿಗಳೊಂದಿಗೆ ಅಲ್ಲಿಯೆ ಎಲ್ಲರೂ ಬಿಡಾರವನ್ನು ಹೂಡಿದರು. ವಿಶ್ವಾ ಮಿತ್ರ ಮಹಾ ಮುನಿಯು ಬಂದ ಸುದ್ದಿಯು ಜನಕರಾಜನಿಗೆ ತಿಳಿಯಿತು.

ದೋ ॥ ೨೪೭ ॥ ಆಗ ಜನಕರಾಜನು ಪ್ರಸನ್ನ ಚಿತ್ತನಾಗಿ, ಮಂತ್ರಿ, ಕಾಲಾ ಳುಗಳು, ಬ್ರಾಹ್ಮಣರು, ಗುರುಕುಲದವರೇ ಮೊದಲಾದ ಇತರ ಪರಿವಾರದೊಂದಿಗೆ ವಿಶ್ವಾಮಿತ್ರನ ಭೇಟಿಗಾಗಿ ಹೊರಟನು. ಮುನಿಯನ್ನು ಕಂಡು, ರಾಜನು ಅವನ ಚರಣಗಳಿಗೆರಗಿದನು. ವಿಶ್ವಾಮಿತ್ರ ಮುನಿಯು ಪ್ರಸನ್ನನಾಗಿ ಅವನನ್ನು ಆಶೀರ್ವ ದಿಸಿದನು. ಆನಂತರ ರಾಯನು ಮುನಿಯ ಬಳಿಯಿದ್ದ ಬ್ರಾಹ್ಮಣರೆಲ್ಲರಿಗೂ ನಮ ಸ್ಕರಿಸಿ, ಅವರ ದರ್ಶನಲಾಭವುಂಟಾದುದಕ್ಕಾಗಿ ಸಂತೋಷಪಟ್ಟನು. ಹಲವು ಕುಶಲವಾರ್ತೆಗಳನ್ನು ಕೇಳಿ, ವಿಶ್ವಾಮಿತ್ರನು ಜನಕರಾಜನನ್ನು ಕುಳ್ಳಿರಿಸಿದನು. ಇಷ್ಟರಲ್ಲಿ ಪುಷ್ಪವಾಟಿಕೆಗಳನ್ನು ನೋಡುವುದಕ್ಕೆ ಹೋಗಿದ್ದ ರಾಮ ಲಕ್ಷ್ಮಣ ರಿಬ್ಬರೂ, ಅಲ್ಲಿಗ ಬಂದರು. ನೇತ್ರಾನಂದಕರರೂ, ವಿಶ್ವಚಿತ್ತವನ್ನೇ ಅಪಹರಿಸು ವಂತಹ ಶ್ಯಾಮ ಮತ್ತು ಗೌರಾಂಗರೂ, ಕೋಮಲರೂ, ಕಿಶೋರ ವಯಸ್ಕರೂ ಆದ ಆ ಸೋದರರಿಬ್ಬರೂ ಬಂದ ಕೂಡಲೆ ಹಠಾತ್ತಾಗಿ ಅಲ್ಲಿದ್ದವರೆಲ್ಲರೂ (ಸಮ್ಮಾನ ಭಾವನೆಯಿಂದ) ಎದ್ದು ನಿಂತರು. ವಿಶ್ವಾಮಿತ್ರನು ಅವರಿಬ್ಬರನ್ನೂ ತನ್ನ ಹತ್ತಿರ ಕೂಡಿಸಿಕೊಂಡನು. ಆ ಭ್ರಾತೃಗಳಿಬ್ಬರನ್ನೂ ನೋಡಿ ಸರ್ವರಿಗೂ ಹರ್ಷವಾಯಿತು. (ಆಗಣ) ನೋಟವನ್ನೆಂತು ಬಣ್ಣಿಸುವುದು! ಎಲ್ಲರ ಕಣ್ಣುಗ ಳಲ್ಲಿಯು ಆನಂದಾಶ್ರುಗಳು ತುಂಬಿವೆ. ಶರೀರಗಳು ಪುಳಕಿತವಾಗಿವೆ ಆ ಮಧು ರವೂ, ಮನೋಹರವೂ, ಆದ ಮೂರ್ತಿಗಳನ್ನು ನೋಡಿ ವಿದೇಹ ರಾಜನು ವಿದೇಹಿ ಯಾದನು. ಎಂದರೆ, ಅವನ ಹೆಸರೇ ಮುಂಚೆ ವಿದೇಹನೆಂದಿತ್ತು. ಈಗ ಅವನು ನಿಜವಾಗಿ ತನ್ನ ದೇಹವನ್ನು ಮರೆತು ವಿದೇಹನಾದನು.

ದೋ ॥ ೨೪೮ ॥ ಜನಕರಾಜನು ಪ್ರೇಮ ಮಗ್ನನಾಗಿದ್ದರೂ ಜ್ಞಾನದಿಂದ ಧೈರ್ಯ ತಳೆದು, ವಿಶ್ವಾಮಿತ್ರನ ಅಡಿಗಳಿಗೆರಗಿ ಬಹು ಗಂಭೀರವಾದ ವಾಣಿ ಯಿಂದ ಗದ್ಗದ ಕಂಠನಾಗಿ, ಹೀಗೆ ಪ್ರಾರ್ಥಿಸಲಾರಂಭಿಸಿದನು– "ಹೇ ನಾಥ!

ಸುಂದರರಾದೀ ಬಾಲಕರಿಬ್ಬರು ಮುನಿಕುಲತಿಲಕರಾದ ಬ್ರಾಹ್ಮಣರೊ? ರಾಜ ಕುಲ ಪಾಲಕರಾದ ಕ್ಷತ್ರಿಯರೊ? ಅಥವಾ ವೇದಗಳಲ್ಲಿ "ನೇತಿ" ಎಂದು ವರ್ಣಿತ ನಾದ ಪರಬ್ರಹ್ಮನೇ ಈ ರೂಪವನ್ನು ಧರಿಸಿ ಬಂದಿರಬಹುದೊ?– ಎಂಬುದನ್ನು ದಯೆಯಿಟ್ಟು ನನಗೆ ತಿಳುಹಿಸಿರಿ. ಚಕೋರವು ಚಂದ್ರನನ್ನು ನೋಡಿ ಚಕಿತ ವಾಗುವಂತೆ, ಸ್ವಾಭಾವಿಕವಾಗಿಯೆ ವೈರಾಗ್ಯಪೂರ್ಣವಾಗಿರುವ ನನ್ನ ಮನಸು (ಇವರಿಬ್ಬರ ರೂಪವನ್ನು ನೋಡಿ) ಚಕಿತವಾದುದು. (ಆದುದರಿಂದ) ಹೇ ಪ್ರಭೊ! ಸತ್ಯಭಾವದಿಂದ ನಾನು ಕೇಳುತ್ತಿರುವೆನು. ತಾವು ಅವುದನ್ನೂ ಮರೆಮಾಚದೆ ಹೇಳಬೇಕು. ಇವರನ್ನು ನೋಡಿದ ಕೂಡಲೆ ನಾನು ಪ್ರೇಮಮಯನಾದೆನು. ಅದರ ಉದ್ವೇಗದಿಂದ ನಾನು ಬ್ರಹ್ಮ ಸುಖವನ್ನು ಬಿಟ್ಟು ಬಿಟ್ಟೆನು." –ಈ ಮಾತು ಗಳನ್ನು ಕೇಳಿ ವಿಶ್ವಾಮಿತ್ರನು ಮಂದಹಾಸ್ಯವದನನಾಗಿ, "ಹೇ ರಾಜನ್! ಸರಿಯಾಗಿ ಹೇಳಿದೆ. ನಿನ್ನ ವಚನಗಳೆಂದಿಗೂ ಅಸತ್ಯವಾಗವು. ಇವರು ಜಗತ್ತಿನ ಎಲ್ಲಾ ಪ್ರಾಣಿಗಳಿಗೂ ಪರಮ ಪ್ರಿಯರಾಗಿರುವರು. (ಈ ಮಾತುಗಳನ್ನು ಕೇಳಿ, ರಾಮಚಂದ್ರನ ಮುಖವು ಮುಗುಳುನಗೆಯಿಂದ ಪ್ರಕಾಶಿತವಾಯಿತು) – ಇವ ರಿಬ್ಬರೂ ರಘುಕುಲಮಣಿಯಾದ ದಶರಥನ ಪುತ್ರರು. ನನಗೆ ಸಹಾಯ ಮಾಡು ವುದಕ್ಕೋಸ್ಕರ ದಶರಥನು ಇವರಿಬ್ಬರನ್ನು ಕಳುಹಿಸಿಕೊಟ್ಟನು"

ದೋ ॥ ೨೪೯ ॥ "ಇವನು ರಾಮನು, ಕಿರಿಯನು ಲಕ್ಷ್ಮಣನು. ಸೋದರ ರಾದಿವರಿಬ್ಬರೂ ರೂಪ, ಶೀಲ, ಬಲಗಳ ನಿಧಿಸ್ವರೂಪರು. ಇವರು ಯುದ್ಧದಲ್ಲಿ ರಾಕ್ಷಸರನ್ನು ಗೆದ್ದು ನನ್ನ ಯಜ್ಞವನ್ನು ರಕ್ಷಿಸಿದರೆಂಬ ಸಂಗತಿಗೆ ಜಗತ್ತೇ ಸಾಕ್ಷಿ ಯಾಗಿದೆ," ಎಂದನು. ಮುನಿಯ ವಾಕ್ಯಗಳನ್ನು ಕೇಳಿ ಜನಕರಾಜನು "ಹೇ ಮುನಿರಾಜ, ತಮ್ಮ ಚರಣ ದರ್ಶನವನ್ನು ಮಾಡಿದ ನನ್ನ ಪುಣ್ಯ ಪ್ರಭಾವವನ್ನು ಅಷ್ಟಿಷ್ಟೆಂದು ವರ್ಣಿಸಲಾರೆನು. ಈ ಶ್ಯಾಮ ಗೌರಾಂಗ ಭ್ರಾತೃಗಳಿಬ್ಬರೂ ಆನಂ ದಕ್ಕೇ ಆನಂದವನ್ನುಂಟುಮಾಡುವವರಾಗಿರುವರು. ಇವರಿಬ್ಬರ ಪರಸ್ಪರ ಪ್ರೇಮವು ಪವಿತ್ರವಾಗಿದೆ. ಅದೆಂದಿಗೂ ಅಳಿಯದು. ಅದು ಮನಮೋಹಕವಾಗಿಯೂ ಮನೋಹರವಾಗಿಯೂ ಇದೆ. ಹೇ ನಾಥ! ಕೇಳಿರಿ ಇವರ ಪ್ರೇಮವು ಜೀವ ಬ್ರಹ್ಮ ರಂತೆ ಸಹಜಸ್ವರೂಪದಿಂದಿದೆ" ಎಂದು ಹೇಳಿ, ಆ ನರನಾಥನು ಶ್ರೀರಾಮಚಂದ್ರ ನನ್ನೇ ನೋಡುತ್ತ ರೋಮಾಂಚಿತನಾದನು. ಅವನ ಹೃದಯದಲ್ಲಿ ಉತ್ಸಾಹವು ಹೆಚ್ಚಿತು. ಆಗವನು ಮತ್ತೆ ವಿಶ್ವಾಮಿತ್ರನ ಚರಣಗಳಿಗೆರಗಿ, ಮುನಿಯನ್ನು ಪ್ರಶಂಸಿ ಸುತ್ತ ಅವನನ್ನು ಬಾಲಕರ ಸಮೇತ ನಗರದೊಳಗೆ ಕರೆದುಕೊಂಡು ಹೋದನು. ಅಲ್ಲಿ ಸದಾಸುಖದಾಯಕವಾದ ಸುಂದರ ಸದನದಲ್ಲಿಳಿಸಿದನು. ಅಲ್ಲಿ ಅವರನ್ನು ಪೂಜಿಸಿ, ಅವರಿಗೆ ಬೇಕಾದ ಅನುಕೂಲತೆಗಳನ್ನೊದಗಿಸಿ ಕೊಟ್ಟು ರಾಜನು ತನ್ನ ಅರಮನೆಗೆ ತೆರಳಿದನು.

## (ಶ್ರೀರಾಮ ಲಕ್ಷ್ಮಣರು ಜನಕನಗರವನ್ನು ನೋಡುವುದು)

ದೋ ॥೨೫೦, - ೫೧॥ ರಘುಕುಲ ಭೂಷಣನಾದ ರಾಮಚಂದ್ರನು ಋಷಿಯೊಂದಿಗೆ ಭೋಜನ ಮಾಡಿ ಲಕ್ಷ್ಮಣ ಸಮೇತನಾಗಿ ವಿಶ್ರಾಂತಿಯನ್ನು ಹೊಂದಿದನು. ಹೀಗೆ ಸ್ವಲ್ಪ ಹೊತ್ತು ಕಳೆಯಿತು. ಆಗ ಜನಕಪುರವನ್ನು ನೋಡಿ ಬರಬೇಕೆಂದು ಲಕ್ಷ್ಮಣನಿಗೆ ಆಶೆಯುಂಟಾಯಿತು. ಅಣ್ಣನೇನು (ಹೇಳುವನೊ) ಎಂದು ಹೆದರಿ, ಮುನಿಯನ್ನು ಕೇಳಲು ಸಂಕೋಚಪಟ್ಟು, ಅವನು ಮಾತಾಡದೆ ಮುಗುಳುನಗೆಯನ್ನು ತೋರುತ್ತಿದ್ದನು. ರಾಮಚಂದ್ರನು ತನ್ನ ಸೋದರನ ಮನೋಭಾವವನ್ನರಿತು ಅವನ ಹೃದಯದಲ್ಲಿ ಭಕ್ತವತ್ಸಲತೆಯುಂಟಾಯಿತು. ಆಗವನು ವಿಶೇಷ ವಿನಯದಿಂದಲೂ ಸಂಕೋಚಭಾವದಿಂದಲೂ, ಮುಗುಳುನಗೆಯನ್ನು ತೋರುತ್ತ, ವಿಶ್ವಾಮಿತ್ರನನ್ನು ಕುರಿತು – 'ಹೇ ನಾಥ! ಲಕ್ಷ್ಮಣನು ಜನಕಪುರವನ್ನು ನೋಡಲಪೇಕ್ಷಿಸುವನು. ತಮಗೆ ಹೆದರಿ ಸಂಕೋಚದಿಂದ ಸ್ಪಷ್ಟವಾಗಿ ಅದನ್ನು ಹೇಳುತ್ತಿಲ್ಲ ತಾವು ಅಪ್ಪಣೆಯನ್ನಿತ್ತರೆ ನಾನು ಅವನಿಗೆ ನಗರವನ್ನು ತೋರಿಸಿಕೊಂಡು ಬರುವೆನು " ಎಂದನು. ಇದನ್ನು ಕೇಳಿ ಋಷಿರಾಜನು ಪ್ರೀತಿಯಿಂದ "ಹೇ ರಾಮ! ನೀನು ನೀತಿಪಾಲಕನಲ್ಲವೆ? ಹೇ ತಾತ! ನೀನು ಧರ್ಮಸೇತು ರಕ್ಷಕನು. ಪ್ರೇಮವಶನಾಗಿ ಸೇವಕ ಸುಖದಾಯಕನಾಗಿರುವೆ. ಸುಖನಿಧಿಗಳಾದ ನೀವಿಬ್ಬರೂ ಹೋಗಿ ನಗರವನ್ನು ನೋಡಿಕೊಂಡು ಬನ್ನಿರಿ. ನಿಮ್ಮ ಸುಂದರವಾದ ಮುಖಮಂಡಲಗಳನ್ನು ತೋರಿ ಸರ್ವರ ನೇತ್ರಗಳನ್ನು ಸಫಲಗೊಳಿಸಿರಿ" ಎಂದು ಹೇಳಿದನು. ಲೋಕಲೋಚನಸುಖದಾಯಕರಾದ ಸೋದರರಿಬ್ಬರೂ, ಮುನಿಯ ಚರಣಕಮಲಗಳಿಗೆರಗಿ (ನಗರವನ್ನು ನೋಡಲು) ಹೊರಟರು. ಅವರ ಸೌಂದರ್ಯಾತಿಶಯವನ್ನು ಕಂಡವರ ನೇತ್ರಗಳೂ, ಮನಸ್ಸೂ, ಮುಗ್ಧವಾಗಿವೆಯೊ ಎಂಬಂತೆ ಬಹು ಜನ ಬಾಲಕರೂ, ಅವರ ಹಿಂದೆಯೇ ಗುಂಪು ಗುಂಪಾಗಿ ಹೊರಟರು. ಸೋದರರಿಬ್ಬರೂ ಸೊಂಟಕ್ಕೆ ಪೀತಾಂಬರವನ್ನು ಬಿಗಿಯಾಗಿ ಸುತ್ತಿರುವರು. ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿರುವರು. ಶರೀರದಲ್ಲಿ ಚಂದನದ ಸುಂದರವಾದ ನಾಮಗಳನ್ನು ಹಚ್ಚಿರುವರು. ಒಬ್ಬನು ಶ್ಯಾಮಾಂಗ, ಮತ್ತೊಬ್ಬನು ಗೌರಾಂಗ, ಈ (ಅಂದಚಂದದ) ಜೋಡಿಯು ಮನೋಹರವಾಗಿರುವುದು. ಅವರ ಕುತ್ತಿಗೆಯು ಸಿಂಹದಂತೆಯೂ ಭುಜಗಳು ನೀಳವಾಗಿಯೂ ಇರುವವು. ಹೃದಯದ ಮೇಲೆ ಗಜಮುಕ್ತಾವಳಿಯ ಮಾಲೆಯು ಇರುವುದು. ಅವರ ಕಣ್ಣುಗಳೆರಡೂ, ಕೆಂಪು ಕಮಲದಂತಿರುವವು. ಅವರ ಮುಖಾರವಿಂದವು ತಾಪತ್ರಯಗಳನ್ನೂ ದೂರಮಾಡುವಂಥಾದ್ದಾಗಿರುವುದು. ನೋಡಿದ ಕೂಡಲೆ ಮನಸ್ಸನ್ನಾಕರ್ಷಿಸುವಂತಿದ್ದ ಸುವರ್ಣ ಪುಷ್ಪಗಳು ಅವರ ಕಿವಿಗಳನ್ನಲಂಕರಿಸಿದ್ದವು. ಅವರ ನೋಟವು ಮನೋಹರವಾಗಿಯೂ ಹುಬ್ಬುಗಳು (ಬಿಲ್ಲಿನಂತೆ) ಬಾಗಿ ಸುಂದರ

ವಾಗಿಯೂ ಇರುವವು. ಅವರ ತಿಲಕ ರೇಖೆಗಳು ಮಿಂಚಿನಂತೆ ಶೋಭಿಸುತ್ತಿರುವವು.

ದೋ ॥ ೨೫೨॥ ಮಸ್ತಕದಲ್ಲಿ ಸುಂದರವಾಗಿ ಹೊಳೆಯುತ್ತಿದ್ದ ಟೋಪಿಗಳನ್ನು ಧರಿಸಿರುವರು. ತಲೆಯಲ್ಲಿ ಕಪ್ಪಾದ ಗುಂಗುರು ಕೂದಲು. ಆ ಸೋದರರಿಬ್ಬರ ಅಂಗಗಳೂ ನಖಶಿಖಾಂತದ ವರೆಗೆ ಸೌಂದರ್ಯ ಸೌಭಾಗ್ಯದಿಂದೊಪ್ಪುತ್ತಿರುವುವು. ರಾಜಪುತ್ರರಿಬ್ಬರೂ ನಗರವನ್ನು ನೋಡುವುದಕ್ಕೆ ಹೊರಟಿರುವರೆಂಬ ಸುದ್ದಿಯನ್ನು ಕೇಳಿದ ಕೂಡಲೆ, ಜನಕಪುರ ನಿವಾಸಿಗಳೆಲ್ಲರೂ ತಾವು ಮಾಡುತ್ತಿದ್ದ ಕೆಲಸ ಕಾರ್ಯಗಳನ್ನು ಬಿಟ್ಟು ದೀನಜನನಿಧಿಯನ್ನು ಲೂಟಿಮಾಡುವುದಕ್ಕೆ ಹೊರಟಿರುವರೊ ಎಂಬಂತೆ ಓಡಿಬಂದರು ಸಹಜಸುಂದರರಾದ ಸೋದರರಿಬ್ಬರನ್ನೂ ನೋಡಿ, ಅವರು ತಮ್ಮ ನೇತ್ರಗಳು ಸಫಲವಾದುವೆಂದು ತಿಳಿದು, ಸಂತೋಷಪಟ್ಟರು. ನಗರದ ಸ್ತ್ರೀಯರು ತಮ್ಮ ಮನೆಗಳ ಕಿಟಕಿಗಳಲ್ಲಿ ಕುಳಿತು, ಪ್ರೇಮದಿಂದ ರಾಮಚಂದ್ರನ ರೂಪವನ್ನು ನೋಡುತ್ತ ತಂತಮ್ಮೊಳಗೆ ಮಾತಾಡಿಕೊಳ್ಳುತ್ತಿದ್ದಾರೆ. (ನೋಡಿರಿ!) – "ಹೇ ಸಖಿ, ಇವರು ಕೋಟಿ ಕಾಮದೇವರ ಸೌಂದರ್ಯವನ್ನು ಪಡೆದಿರುವರು. ಇವರ ಸೌಂದರ್ಯವು ದೇವತೆಗಳಿಗಾಗಲಿ, ಮನುಷ್ಯರಿಗಾಗಲಿ, ಅಸುರರಿಗಾಗಲಿ, ನಾಗಗಳಿಗಾಗಲಿ, ಮುನಿಗಳಿಗಾಗಲಿ, ಇರಲಾರದು ವಿಷ್ಣುವು ಸುಂದರನಾದರೂ, ಅವನಿಗೆ ಕೈಗಳು ನಾಲ್ಕು; ಬ್ರಹ್ಮನಿಗೆ ನಾಲ್ಕು ಮುಖಗಳು. ಮಹಾದೇವನು ವಿಕಟವೇಷಧಾರಿಯಾಗಿ ಪಂಚ ಮುಖವುಳ್ಳವನಾಗಿರುವನು. ಇವರ ಉಪಮೆಯನ್ನು ಕೊಟ್ಟು ಸೌಂದರ್ಯವನ್ನು ಬಣ್ಣಿಸಲು ಮತ್ತಾವ ದೇವತೆಯಿರುವುದು ?

ದೋ ॥ ೨೫೩ – ೫೪ ॥ ಇವರು ಕಿಶೋರ ವಯಸ್ಕರು. ಶೋಭಾರಾಶಿಗಳು, ಸುಖನಿಧಿಗಳು, ಒಬ್ಬನು ಶ್ಯಾಮಾಂಗ, ಮತ್ತೊಬ್ಬನು ಗೌರಾಂಗನು. ಇವರ ಅಂಗಾಂಗಗಳಿಗೆ ಕೋಟಿಗಟ್ಲೆ ಕಾಮದೇವರನ್ನು ಕರೆತಂದು ನಿವಾಳಿಸಬೇಕು – ಸಖಿಯರೇ, ಹೇಳಿರಿ! ಇವರ ರೂಪವನ್ನು ನೋಡಿ, ಮೋಹಿತರಾಗದವರಾರು?" (ಹೀಗೆ ಮಾತಾಡಿಕೊಳ್ಳುತ್ತಿದ್ದವರಲ್ಲಿ) ಒಬ್ಬಳು ತನ್ನ ಸಖಿಯರನ್ನು ಕುರಿತು, ಮೃದುವಾಣಿಯಿಂದ ಹೇಳುತ್ತಾಳೆ – "ಚತುರ ಸಖಿಯರೆ! ಇವರ ವಿಚಾರವಾಗಿ ನನಗೆ ತಿಳಿದಿರುವ ಸಂಗತಿಗಳನ್ನು ಹೇಳುವೆನು, ಕೇಳಿರಿ! ಇವರಿಬ್ಬರೂ ದಶರಥ ಮಹಾರಾಜನ ಪುತ್ರರು. ಇವರಿಬ್ಬರೂ ಮರಾಳಯುಗಲದಂತಿರುವರು. ಇವರು ವಿಶ್ವಾಮಿತ್ರ ಮಹರ್ಷಿಯ ಯಜ್ಞ ರಕ್ಷಕರು. ರಣಾಂಗಣದಲ್ಲಿ ರಾಕ್ಷಸರನ್ನು ಸಂಹರಿಸಿದವರು. ಆಗೋ ನೋಡಿ! ಆ ಕಮಲನೇತ್ರನಾಗಿ ಕೈಯಲ್ಲಿ ಧನುರ್ಬಾಣಗಳನ್ನು ಧರಿಸಿರುವ ಶ್ಯಾಮಸುಂದರನು ಮಾರೀಚ ರಾಕ್ಷಸನಭುಜಬಲವನ್ನು ಮರ್ದಿಸಿದವನು. ಸುಖನಿಧಿಯಾದ ಕೌಸಲ್ಯಾ ರಾಣಿಯ ಪುತ್ರನು. ಅವನ ಹೆಸರು 'ಶ್ರೀರಾಮ' ಎಂದಿರುವುದು. (ಇತ್ತಕಡೆ) ಗೌರಾಂಗನಾಗಿ ಧನುರ್ಬಾಣ

ಗಳನ್ನು ಧರಿಸಿ, ಸುಂದರವಾಗಿ ಅಲಂಕೃತನಾಗಿ, ರಾಮನ ಹಿಂದೆ ಹೋಗುತ್ತಿರುವವನು ಅವನ ತಮ್ಮನು. ಇವನ ಹೆಸರು ಲಕ್ಷ್ಮಣ ಹೇ ಸಖಿಯೆ, ಕೇಳು! ಇವನ ತಾಯಿಯ ಹೆಸರು ಸುಮಿತ್ರೆ. ಈ ಸೋದರರಿಬ್ಬರೂ ವಿಶ್ವಾಮಿತ್ರ ಮುನಿಯ ಯಜ್ಞ ಕಾರ್ಯವನ್ನು ಮುಗಿಸಿಕೊಂಡು ಮಾರ್ಗದಲ್ಲಿ ಗೌತಮ ಮುನಿಯ ಪತ್ನಿಯಾದ ಅಹಲ್ಯೆಯನ್ನುದ್ಧರಿಸಿ, ಇಲ್ಲಿಗೆ ಧನುರ್ಯಜ್ಞಕ್ಕಾಗಿ ಬಂದಿರುವರು" –ಈ ಮಾತುಗಳನ್ನು ಕೇಳಿ ಎಲ್ಲರಿಗೂ ಸಂತೋಷವಾಯಿತು. ರಾಮಚಂದ್ರನ ಸೌಂದರ್ಯವನ್ನು ನೋಡಿ, ಒಬ್ಬ ಸಖಿಯು ತನ್ನ ಗೆಳತಿಯರನ್ನು ಕುರಿತು, "ಸಖಿಯರೇ! ಇವನೇ ಸೀತೆಗೆ ಯೋಗ್ಯನಾದ ವರನು. ಜನಕ ಮಹಾರಾಯನು ಇವನನ್ನು ನೋಡಿದರೆ, ತನ್ನ ಪ್ರಾಣವನ್ನಾದರೂ ಪಣವಾಗಿಟ್ಟು ಸೀತೆಯನ್ನು ಇವನಿಗೇ ಕೊಟ್ಟು ವಿವಾಹ ಮಾಡುವನು" ಎಂದಳು. ಮತ್ತೆ ಕೆಲವರು, ಜನಕ ರಾಜನು ಇವರನ್ನು ನೋಡಿ, ಮುನಿ ಸಮೇತ ಇವರಿಗೆ ಆದರ ಸತ್ಕಾರಗಳನ್ನು ಮಾಡಿರುವನು. ಆದರೆ, ಸಖಿಯರೆ! ರಾಜನು ತನ್ನ ಪ್ರತಿಜ್ಞೆಯನ್ನು ನಡೆಸಲು ತಪ್ಪುವವನಲ್ಲ. ಅವನು ವಿಧಿವಶನಾಗಿ ಆ (ಧನುರ್ಯಜ್ಞದ) ಅವಿಚಾರವನ್ನೆ ಮಾಡುತ್ತಿರುವನು" ಎಂದರು. ಮತ್ತೆ ಹಲವರು ಮಂಗಳಾತ್ಮನೂ, ಉಚಿತ ಫಲದಾಯಕನೂ, ಆದ ವಿಧಾತನ ಕೃಪೆಯಿಂದ ಜಾನಕಿಗೆ ಈ ವರನೇ ಲಭಿಸುವನು! ಸಖಿಯರೇ, ಇದರಲ್ಲಿ ಸಂದೇಹವಿಲ್ಲ! ವಿಧಿವಶದಿಂದ ಈ ಸಂಯೋಗವುಂಟಾದರೆ ಎಲ್ಲರೂ, ಕೃತಕೃತ್ಯರಾದಂತಾಗುವುದು. ಸಖಿಯರೆ! ಈ ವಿವಾಹ ಸಂಬಂಧವುಂಟಾಗಿ ಇವರೀರ್ವರೂ ಆಗಿಂದಾಗ್ಗೆ ನಮ್ಮ ನಗರಕ್ಕೆ ಬಂದು ಹೋಗುತ್ತಿರುವಂತಾಗಬೇಕೆಂದು ನನ್ನ ಅಪೇಕ್ಷೆ.

ದೋ॥ ೨೨೨॥ ಸಖಿಯರೆ, ಹಾಗಾಗುವದಿಲ್ಲವಾದರೆ, ಇವರ ದರ್ಶನವು ನಮಗೆ ದುರ್ಲಭವಾಗುವುದು ಈಗ ನಮ್ಮ ಪೂರ್ವ ಜನ್ಮದ ಪುಣ್ಯಗಳ ಫಲೋದಯವಾದರೆ ಈ ಸಂಘಟನೆಯಾಗುವುದು" ಎಂದಳು. ಮತ್ತೊಬ್ಬ ಸಖಿಯು "ಗೆಳತಿಯೆ, ನೀನು ಹೇಳಿದ್ದು ನಿಜ. ಈ ವಿವಾಹವು ಎಲ್ಲರಿಗೂ ಹಿತಕರವಾಗಿರುವುದು" ಎಂದಳು. ಮತ್ತೆ ಕೆಲವರು, "ಮಹಾದೇವನ ಧನುಸ್ಸು ಬಹು ದೊಡ್ಡದು. ಈ ಶ್ಯಾಮಾಂಗನಾದ ರಾಜಕುಮಾರನು ಬಹು ಕೋಮಲವಾದ ಅಂಗವುಳ್ಳವನು, ಮತ್ತೆ ಕಿಶೋರವಯಸ್ಕನು. ಎಲ್ಲ ವಿಷಯಗಳೂ ಅಸಮಂಜಸವಾಗಿವೆ" ಎಂದರು. ಈ ಮಾತನ್ನು ಕೇಳಿದ ಮತ್ತೊಬ್ಬಳು ಮಧುರವಾಣಿಯಿಂದ - "ಸಖಿಯರೆ! ಇವನು ನೋಡುವುದಕ್ಕೆ ಚಿಕ್ಕವನಾಗಿದ್ದರೂ, ಬಹು ಪ್ರಭಾವಶಾಲಿಯೆಂದು ಕೆಲವರು ಹೇಳುತ್ತಾರೆ. ಯಾವನ ಚರಣಕಮಲ ಧೂಳಿಯಿಂದ ಘೋರ ಪಾಪಿನಿಯಾದ ಅಹಲ್ಯೆಯು ಪುಣ್ಯಮಯಿಯಾದಳೊ ಅಂಥವನು ಶಿವನ ಧನುಸ್ಸನ್ನೆತ್ತಲಾರನೆ? ಈ ಭರವಸೆಯನ್ನು ಬಿಡಕೂಡದು. ಸುಂದರಿಯಾದ

ಸೀತೆಯನ್ನು ಸೃಷ್ಟಿಸಿದ ಬ್ರಹ್ಮನು ವಿಚಾರ ಪೂರ್ವಕವಾಗಿ ಈ ಶಾಮಸುಂದರನನ್ನೇ ಆಕೆಗೆ ವರನನ್ನಾಗಿ ಸೃಜಿಸಿರುವನು" ಎಂದಳು. ಅವಳ ಮಾತನ್ನು ಕೇಳಿ ಎಲ್ಲರೂ ಹರ್ಷದಿಂದ "ಹೇ ಈಶ್ವರ! ಹಾಗೆಯೆ ಆಗುವಂತೆ ಅನುಗ್ರಹಿಸು" ಎಂದು ಕೋಮಲವಾಣಿಯಿಂದ ಪ್ರಾರ್ಥಿಸಿದರು.

ದೋ ॥ ೨೪೬॥ ಸುಂದರಮುಖಿಯರೂ ಸುಲೋಚನೆಯರೂ ಅಲ್ಲಲ್ಲಿ ಗುಂಪುಗುಂಪಾಗಿ ಸೇರಿ ಮನಸ್ಸಿನಲ್ಲಿ ಹರ್ಷವನ್ನು ತಳೆದು ಪ್ರಸನ್ನಚಿತ್ತರಾಗಿ ಮೇಲಣಿಂದ ಇವರಿಬ್ಬರ ಮೇಲೆ ಹೂಮಳೆ ಸುರಿಸುತ್ತಿದ್ದರು ಈ ರೀತಿಯಾಗಿ ಸೋದರರಿಬ್ಬರೂ ಹೋದೆಡೆಯಲ್ಲೆಲ್ಲ ಎಲ್ಲರಿಗೂ ಪರಮಾನಂದವುಂಟಾಗುತ್ತಿದ್ದಿತು. [ರಘುನಾಥನ ಮೇಲೆ ಹೂಮಳೆಗರೆದುದರ ವಿಚಾರವಾಗಿ ಕೆಲವು ವಿದ್ವಾಂಸರು ಈ ರೀತಿಯಾಗಿ ಕಾರಣಗಳನ್ನು ಹೇಳಿರುವರು —(೧) ರಾಮಚಂದ್ರನ ಚರಣಗಳು ಕೋಮಲವಾಗಿದ್ದುದರಿಂದ ಅವನು ಕಠಿಣವಾದ ನೆಲದಮೇಲೆ ನಡೆಯುವಾಗ ಭೂಮಿಯು ಮೆತ್ತಗಿರಲೆಂದು ಸ್ತ್ರೀಯರು ಪುಷ್ಪವೃಷ್ಟಿಗೈದರು. (೨) ಪುಷ್ಪವೃಷ್ಟಿಯು ಮಂಗಳದಾಯಕವಾದ ಶಕುನವು. (೩) ರಾಮಚಂದ್ರನು ಯಾರ ಕಡೆಗೂ ತಿರುಗಿ ನೋಡುತ್ತಿರಲಿಲ್ಲ. ಪುಷ್ಪವೃಷ್ಟಿಯಾಗುವಾಗ ಅವನು ಮೇಲೆ ನೋಡಿದರೆ ಮನದಣಿಯುವಂತೆ ಅವನ ದರ್ಶನವಾಗಬಹುದು. (೪) ರಾಮಚಂದ್ರನಲ್ಲಿ ಮಗ್ನವಾಗಿರುವ ಮನಸ್ಸು ಪುಷ್ಪರೂಪದಿಂದ ಮಳೆಗರೆಯುತ್ತಿದ್ದಿತು. ಏಕೆಂದರೆ ಪುಷ್ಪವು ರಾಮಚಂದ್ರನ ಮುಖಾರವಿಂದಕ್ಕಿಂತಲೂ ಕಠೋರವಾಗಿದ್ದಿತು. ಆದುದರಿಂದ ತಮ್ಮ ಮನಸ್ಸನ್ನೆ ಬಿಚ್ಚಿಹಾಸಿದರೆ, ಆದರ ಮೇಲೆ ರಾಮಚಂದ್ರನು ನಡೆಯಲಿ ಎಂಬ ಭಾವವನ್ನು ಹೇಳಿರುವರು.]—(ಹೀಗೆಯೇ ನಡೆಯುತ್ತ) ಭ್ರಾತೃಗಳಿಬ್ಬರೂ ನಗರದ ಪೂರ್ವದಿಕ್ಕಿಗೆ ತಿರುಗಿದರು. ಅಲ್ಲಿ ಧನುರ್ಯಜ್ಞಕ್ಕೋಸ್ಕರ ಭೂಮಿಯನ್ನು ಸರಿಪಡಿಸಿದ್ದರು. (ಯಜ್ಞಭೂಮಿಯ ಮಧ್ಯದಲ್ಲಿ) ಬಹಳ ದೊಡ್ಡದೂ ಸುಂದರವೂ ಆದ ಗಾರೆಯ (ಗಚ್ಚಿನ) ವೇದಿಕೆಯನ್ನು ಕಟ್ಟಿದ್ದರು. ಆ ವೇದಿಕೆಯ ಸುತ್ತಲೂ ರಾಜರು ಕುಳಿತುಕೊಳ್ಳುವುದಕ್ಕೆ ವಿಶಾಲವಾದ ಸುವರ್ಣ ಮಂಚವನ್ನು ಹಾಕಿದ್ದರು. ಅವುಗಳ ಹಿಂದೆ ನಾಲ್ಕು ದಿಕ್ಕುಗಳಲ್ಲಿಯೂ ಬೇರೆ ಮಂಚಗಳನ್ನು ಮಂಡಲಾಕಾರವಾಗಿ ಹಾಕಿದ್ದರು ಅವುಗಳು (ಮೊದಲು ಹೇಳಿದ ಮಂಚಗಳಿಗಿಂತಲೂ) ಸ್ವಲ್ಪ ಎತ್ತರವಾಗಿದ್ದವು. ಅವುಗಳು ನಗರ ನಿವಾಸಿಗಳಿಗಾಗಿ ನಿರ್ಮಿಸಲ್ಪಟ್ಟಿದ್ದವು. ಅವುಗಳ ಸಮೀಪದಲ್ಲಿ ವಿವಿಧ ವರ್ಣಗಳ ಸ್ತ್ರೀಯರಿಗಾಗಿ ಸುಂದರವೂ ಮನೋಹರವೂ ಆದ ವಿವಿಧ ವರ್ಣಗಳ ಮಂಟಪಗಳನ್ನು ಕಟ್ಟಿದ್ದರು. ನಗರನಿವಾಸಿಗಳಾದ ಬಾಲಕರು ಕೋಮಲ ವಚನಗಳಿಂದ ಮಾತಾಡುತ್ತ ಆದರದಿಂದ ಅಲ್ಲಿ ನೋಡಬೇಕಾದುದೆಲ್ಲವನ್ನೂ ರಾಮಚಂದ್ರನಿಗೆ ತೋರಿಸಿದರು.

ದೋ ॥ ೨೫೭ ॥ ಈ ಕಾರಣದಿಂದ ನಗರನಿವಾಸಿಗಳಾದ ಬಾಲಕರೆಲ್ಲರೂ, ಭ್ರಾತೃಗಳಿಬ್ಬರ ಮನೋಹರವಾದ ಶರೀರಗಳನ್ನು ಸ್ಪರ್ಶಿಸಿ ವಿಶೇಷ ಹರುಷವನ್ನು ಹೊಂದಿದರು, ಹರುಷದಿಂದವರ ದೇಹಗಳು ಪುಲಕಿತವಾದವು, ಬಾಲಕರು (ಆ ಧಿವ್ಯ ಪುರುಷರಿಬ್ಬರನ್ನು ನೋಡಿ) ಆನಂದ ಸಾಗರದಲ್ಲಿ ಮುಳುಗಿದರು. ರಾಮ ಚಂದ್ರನು ತಮ್ಮ ಪ್ರೇಮವಶನಾದನೆಂದು ತಿಳಿದಾಗ ಬಾಲಕರು ಅವನಿಗೆ ತಂತಮ್ಮ ಮನೆಗಳನ್ನು ತೋರಿಸಿದರು. ಅವರಿಬ್ಬರನ್ನು ಬಾಲಕರು ತಮ್ಮ ಮನಸ್ಸು ಬಂದೆಡೆಗೆ ಕರೆದುಕೊಂಡು ಹೋಗುವರು. ರಾಮ ಲಕ್ಷ್ಮಣರು ವಿಶೇಷ ಸ್ನೇಹ ದಿಂದ ಅವರ ಜತೆಯಲ್ಲಿ ಹೋಗುವರು. ರಾಮಚಂದ್ರನು ಕೋಮಲವೂ ಮಧುರವೂ ಮನೋಹರವೂ ಆದ ವಚನಗಳನ್ನು ಹೇಳಿ ತನ್ನ ತಮ್ಮನಾದ ಲಕ್ಷ್ಮಣನಿಗೆ ಅಲ್ಲಿರುವ ವಸ್ತುಗಳನ್ನು ತೋರಿಸುತ್ತಿದ್ದನು. ಆವಾತನ ಆಜ್ಞೆಯಾದ ಕೂಡಲೆ ಮಾಯಾದೇವಿಯು ಲವನಿಮೀಷ ಮಾತ್ರದಲ್ಲಿ (ಎಂದರೆ ಕಣ್ಣು ಮುಚ್ಚಿ ತೆಗೆಯುವುದರೊಳಗಾಗಿ) ಬ್ರಹ್ಮಾಂಡವನ್ನು ರಚಿಸುವಳೋ, ಅಂತಹ ದೀನದಯಾಳು ವಾದ ಪ್ರಭುವು ಭಕ್ತಿಗೋಸುಗ ಆ ಧನುರ್ಯಜ್ಞ ಶಾಲೆಯನ್ನು ಚಕಿತನಾದವನಂತೆ ನೋಡುತ್ತಿದ್ದನು. ಈ ರೀತಿಯಾಗಿ ಅಲ್ಲಿರುವ ಕೌತುಕಗಳನ್ನು ನೋಡಿ, ಸೋದರ ರಿಬ್ಬರೂ ಗುರುವಿನ ಬಳಿಗೆ ತೆರಳಿದರು. ತಾವು ಹಿಂದಿರುಗುವದಕ್ಕೆ ಹೊತ್ತಾಗು ತ್ತದೆಂದು ಬಾಲಕರ ಮನಸ್ಸಿನಲ್ಲಿ ಹೆದರಿಕೆಯುಂಟಾಗಿದ್ದಿತು ಆವ ಪರಮಾತ್ಮನ ಭಯದಿಂದ ಭಯವೂ ಭಯಪಡುವುದೋ, ಆ (ಭಗವಂತನು) ತನ್ನ ಭಜನ ಪ್ರಭಾವವನ್ನು ತೋರುತ್ತಿರುವನು! ರಾಮಚಂದ್ರನು ಮಧುರವೂ ಮನೋಹರವೂ ಆದ ಮಾತುಗಳನ್ನು ಹೇಳಿ ಬಾಲಕರನ್ನು ಬೀಳ್ಕೊಟ್ಟನು.

ದೋ ॥ ೨೫೮ ॥ ಸೋದರರಿಬ್ಬರೂ (ತಮ್ಮ ಬಿಡಾರಕ್ಕೆ ಬಂದು) ಭಯ, ಪ್ರೇಮ ವಿನಯ ಮತ್ತು ಅತ್ಯಂತ ಸಂಕೋಚಯುಕ್ತರಾಗಿ ಗುರು ಚರಣಗಳಿಗೆ ಪ್ರಣಾಮಮಾಡಿ, ಅಪ್ಪಣೆ ಪಡೆದು ಕುಳಿತುಕೊಂಡರು. ಸಂಧ್ಯಾಕಾಲವಾದ ಕೂಡಲೆ ಮುನಿಯ ಆಜ್ಞೆಯನ್ನನುಸರಿಸಿ ಎಲ್ಲರೂ ಸಂಧ್ಯೋಪಾಸನೆಯನ್ನು ಮಾಡಿದರು. ಅನಂತರ ಸುಂದರವಾದ ಪ್ರಾಚೀನ ಇತಿಹಾಸದ ಕಥೆಗಳನ್ನು ಹೇಳುತ್ತ ಎರಡು ಪ್ರಹರ ರಾತ್ರಿಯು ಕಳೆಯಿತು. ಋಷಿರಾಜನಾದ ವಿಶ್ವಾ ಮಿತ್ರನು ಮಲಗಿದನು. ಆಗ, ಆರ ಚರಣಕಮಲಗಳಿಗೋಸ್ಕರ ವಿರಾಗಿಗಳು ವಿವಿಧ ಜಪತಪಗಳನ್ನು ಮಾಡುವರೂ, ಆ ಭ್ರಾತೃಗಳಿಬ್ಬರು ಪ್ರೇಮವಶರಾಗಿ ಪ್ರೀತಿಯಿಂದ ಮುನಿಯ ಕಾಲುಗಳನ್ನೊತ್ತುತ್ತಿದ್ದರು. ಮುನಿಯು ಅಪ್ಪಣೆ ಕೊಟ್ಟನಂತರ ರಾಮ ಚಂದ್ರನು ಹೋಗಿ ಮಲಗಿದನು. ಆಗ ಲಕ್ಷ್ಮಣನು ರಾಮಚಂದ್ರನ ಪಾದಗಳ ನ್ನೊತ್ತುತ್ತಿದ್ದನು ಆ ಸಮಯದಲ್ಲಿ ಅವನು ಪ್ರಭುವಿನ ಚರಣಗಳನ್ನು ತನ್ನ ಹೃದ ಯಕ್ಕೆ ಮುಟ್ಟಿಸಿಕೊಳ್ಳುತ್ತಿದ್ದನು, ಮತ್ತು ಭಯದಿಂದಲೂ ಪ್ರೇಮದಿಂದಲೂ ಸಂಕು

ಚಿತನಾಗುತ್ತಿದ್ದನು. (ಕೊನೆಗೆ) ರಾಮಚಂದ್ರನು ಅವನನ್ನು ಕುರಿತು "ಮಗೂ ಲಕ್ಷ್ಮಣ, ಹೋಗಿ ಮಲಗು" ಎಂದು ಹೇಳಿದ ಮೇಲೆ ಅವನು ರಾಮಚಂದ್ರನ ಪಾದಗಳನ್ನು ಮತ್ತೆ ತನ್ನ ಹೃದಯದ ಮೇಲಿಟ್ಟುಕೊಂಡು ಮಲಗುತ್ತಿದ್ದನು.

ದೋ || ೨೫೫ || ಕೋಳಿಯ ಕೂಗು ಕಿವಿಗೆ ಬಿದ್ದಕೂಡಲೆ ಲಕ್ಷ್ಮಣನು ರಾತ್ರಿಯು ಮುಗಿಯಿತೆಂದರಿತು ಏಳುತ್ತಿದ್ದನು. ಎಂದರೆ ಸ್ವಾಮಿ-ಸೇವಕರಂತೆ ತಾನು ತನ್ನ ಅಣ್ಣನಿಗಿಂತ ಮುಂಚಿತವಾಗಿ ಏಳುತ್ತಿದ್ದನು. ವಿವೇಕಿಯೂ ಜಗತ್ಪತಿಯೂ ಆದ ರಾಮಚಂದ್ರನು ವಿಶ್ವಾಮಿತ್ರ ಗುರುವು ಏಳುವುದಕ್ಕಿಂತ ಮುಂಚಿತವಾಗಿ ಏಳುತ್ತಿದ್ದನು. * ಅನಂತರ ಎಲ್ಲರೂ ಶೌಚವಿಧಿಯನ್ನು ತೀರಿಸಿ, ಸ್ನಾನಮಾಡಿ, ನಿತ್ಯ ಕರ್ಮಗಳನ್ನು ಮುಗಿಸಿ ಮುನಿಗೆ ನಮಸ್ಕರಿಸುತ್ತಿದ್ದರು. (ಪೂಜೆಗೆ) ಹೂತರುವುದಕ್ಕೆ ಸಮಯವಾದ ಕೂಡಲೆ ಗುರುವಿನ ಆಜ್ಞೆಯನ್ನು ಹೊಂದಿ ಸೋದರರಿಬ್ಬರೂ ಹೂಬಿಡಿಸುವುದಕ್ಕೆ ಹೋಗುತಿದ್ದರು. (ಒಂದುದಿನ) ಅವರಿಬ್ಬರೂ ಜನಕರಾಜನ ಶ್ರೇಷ್ಠವಾದ ಪುಷ್ಪವಾಟಿಕೆಗೆ ಹೋಗಿ ನೋಡಲು, ಅಲ್ಲಿ ವಸಂತ ಋತುವು ಮೋಹಕವಾಗಿದ್ದುದು. ಅದರಲ್ಲಿ ಅನೇಕ ಮನೋಹರವಾದ ಮರಗಳೂ, ವಿವಿಧ ವರ್ಣಗಳ ಲತಾಮಂಟಪಗಳೂ ಇದ್ದವು. ಆ ಮರಗಳಲ್ಲಿರುವ ಹೂ, ಹಣ್ಣು, ಚಿಗುರೆಲೆಗಳನ್ನು ನೋಡಿ ಕಲ್ಪವೃಕ್ಷವು ಕೂಡ ನಾಚಿಕೊಳ್ಳುವಂತೆ ಅವು ಸುಂದರವಾಗಿದ್ದುವು (ಅಥವಾ ಆ ಮರಗಳು ಎಲೆ ಹಣ್ಣು ಹೂಗಳ ಭಾರದಿಂದ ಬಗ್ಗಿ ಮನೋಹರವಾಗಿ ಕಾಣುತ್ತಿದ್ದವು). ಪಪೀಹ, ಕೋಗಿಲೆ, ಶುಕ, ಚಕೋರಾದಿ ಪಕ್ಷಿಗಳು (ಮಾತಾಡಿ ಕೊಳ್ಳುವಂತೆ) ಶಬ್ದ ಮಾಡುತ್ತಿದ್ದವು. ಸುಂದರವಾದ ನವಿಲುಗಳು ‡ ಕುಣಿಯುತ್ತಿದ್ದವು. ಆ ವನ ಮಧ್ಯದಲ್ಲಿ ಒಂದು ಸರೋವರವು ಶೋಭಿಸುತ್ತಿರುವುದು. ಅದರ ಸೋಪಾನಗಳು ವಿಚಿತ್ರವಾದ ಮಣಿಗಳಿಂದ ರಚಿಸಲ್ಪಟ್ಟಿವೆ. ಅದರ ನೀರು ಬಹು ನಿರ್ಮಲವಾಗಿರುವುದು. ಅದರಲ್ಲಿ ನಾನಾವರ್ಣಗಳ ಕಮಲಗಳು ಅರಳಿರುವುವು. ಅಲ್ಲಿ ಜಲ ಪಕ್ಷಿಗಳು ಕೂಗುತ್ತಿದ್ದವು ಭೃಂಗಗಳು ಗುಂಜಾರವವನ್ನು ಮಾಡುತ್ತಿದ್ದವು.

---

* ಮನುಸ್ಮೃತಿಯಲ್ಲಿ ಹೇಳಿರುವುದೇನಂದರೆ— "ಹೀನಾನ್ನವಸ್ತ್ರವೇಷಃ ಸ್ಯಾತ್ ಸರ್ವದಾಗುರು ಸನ್ನಿಧೌ। ಉತ್ತಿಷ್ಠೇತ್ಪ್ರಥಮಂ ಚಾಸ್ಯ ಚರಮಂಚೈವ ಸಂವಿಶೇತ್।" ಎಂದರೆ ಗುರುಸನ್ನಿಧಿಯಲ್ಲಿ ಯಾವಾಗಲೂ ಗುರುವಿನಗಿಂತಲೂ ಹೀನಾನ್ನವನ್ನು ಭುಂಜಿಸುತ್ತ, ಹೀನವಸ್ತ್ರವನ್ನು ಧರಿಸುತ್ತ, ಹೀನಸ್ವರೂಪದಿಂದಿರಬೇಕು. ಮತ್ತೆ ಗುರುವು ಏಳುವದಕ್ಕೆ ಮುಂಚೆ ಏಳಬೇಕು, ಮಲಗಿದನಂತರ ಮಲಗಬೇಕು

‡ ಇಲ್ಲಿ ಶೃಂಗಾರ ರಸಪ್ರಾಧಾನ್ಯವನ್ನು ತೋರಿಸುವುದಕ್ಕೋಸ್ಕರ ಈ ಐದು ಪಕ್ಷಿಗಳ ಹೆಸರನ್ನು ಸೂಚಿಸಲಾಗಿದೆ.

## ಪುಷ್ಪವಾಟಿಕೆಯಲ್ಲಿ ಸೀತಾ ರಾಮರ ಭೇಟಿ

ದೋ ॥ ೨೬೦ ॥ ಆ ಹೂದೋಟವನ್ನೂ ಸರೊವರವನ್ನೂ ನೋಡಿ ಭಗವಾನ್ ರಾಮಚಂದ್ರನು ಲಕ್ಷ್ಮಣನೊಂದಿಗೆ ಸಂತೋಷಪಟ್ಟನು. ರಾಮಚಂದ್ರನಿಗೆ ಸುಖವನ್ನು ಕೊಡುವ ಆ ತೋಟದ ರಮಣೀಯತೆಯನ್ನು ವರ್ಣಿಸುವುದು ಸಾಧ್ಯವೆ? ಸೋದರರಿಬ್ಬರೂ ನಾಲ್ಕು ದಿಕ್ಕುಗಳಲ್ಲಿಯೂ ನೋಡುತ್ತ, ತೋಟಗಾರರನ್ನು ಕೇಳಿ, ಪ್ರಸನ್ನ ಚಿತ್ತದಿಂದ ಪುಷ್ಪಪತ್ರೆಗಳನ್ನು ಬಿಡಿಸಲಾರಂಭಿಸಿದರು. ಆ ಸಮಯದಲ್ಲಿ ಸೀತೆಯು ಆ ವನಕ್ಕೆ ಬಂದಳು. ಅವಳ ಮಾತೆಯು ಪಾರ್ವತಿಯನ್ನು † ಪೂಜಿಸುವದಕ್ಕೋಸ್ಕರ ಅವಳನ್ನು ಈ ಉದ್ಯಾನದಲ್ಲಿದ್ದ ಮಂದಿರಕ್ಕೆ ಕಳುಹಿಸಿದ್ದಳು. ಸೀತೆಯ ಜತೆಯಲ್ಲಿ ಬಂದಿದ್ದ ಸಖಿಯರು ಸೌಭಾಗ್ಯಶಾಲಿಗಳೂ ಚತುರರೂ ಆಗಿದ್ದರು. ಅವರು ಮನೋಹರವಾದ ವಾಣಿಯಿಂದ ಗಾನವನ್ನು ಪಾಡುತ್ತಿದ್ದರು (ಅವರು ಬರುತ್ತಿದ್ದಸ್ಥಳಕ್ಕೆ ಸಮೀಪವಾಗಿದ್ದ) ಸರೋವರದ ಹತ್ತಿರವೇ ಗಿರಿಜಾ ದೇವಿಯ ಮಂದಿರವು. ಅದನ್ನು ನೋಡಿದ ಕೂಡಲೆ ಮನಸ್ಸು ಮೋಹಿತವಾಗುವಂತೆ ಶೋಭಾಯಮಾನವಾಗಿರುವುದು. (ಇಲ್ಲಿ ಹೇಳಿರುವುದು ರಾಮಲಕ್ಷ್ಮಣರಿರುವ ಸರೊವರವಲ್ಲ. ಏಕೆಂದರೆ ಅವರಿರುವ ಸರೋವರದ ಹತ್ತಿರ ಪಾರ್ವತೀ ಮಂದಿರದ ವರ್ಣನೆಯಿಲ್ಲ. ಅಲ್ಲದೆ ಮುಂದಿನ ಚೌಪಾಯಿಯಲ್ಲಿ ಸೀತೆಯು ಸ್ನಾನಮಾಡುವುದನ್ನು ಹೇಳಿರುವುದರಿಂದ, ಆಕೆಯು ಸ್ನಾನಮಾಡುವ ಸ್ಥಳದಲ್ಲಿ ಪುರುಷರಿರುವುದು ಅನುಚಿತವಾದುದು. ಮತ್ತೆ ಇಲ್ಲಿ ಗಿರಿಜೆಯ ಮಂದಿರವೆಂದು ಹೇಳಿರುವುದು ಸೀತೆಯ ಕೌಮಾರ್ಯಾವಸ್ಥೆಯನ್ನು ಸೂಚಿಸುವುದಕ್ಕಾಗಿ ಎಂದು ತಿಳಿಯಬೇಕು)—ಸೀತೆಯು ಆ ಸರೋವರದಲ್ಲಿ ಸಖಿಯರೊಂದಿಗೆ ಸ್ನಾನಮಾಡಿ, ಮುದಿತಮನಳಾಗಿ ಗೌರೀನಿಕೇತನಕ್ಕೆ ಹೋದಳು. ಅಲ್ಲಿ ಎಲ್ಲರೂ ಸೇರಿ ಬಹು ಭಕ್ತಿಯಿಂದ ಪೂಜೆಯನ್ನು ಮಾಡಿದರು. (ಅನಂತರ) ಸೀತೆಯು ತನಗೆ ಯೋಗ್ಯನೂ ಸೌಭಾಗ್ಯಶಾಲಿಯೂ ಆದ ಪತಿಯನ್ನನುಗ್ರಹಿಸೆಂದು ವರವನ್ನು ಬೇಡಿಕೊಂಡಳು. ಸಖಿಯರಲ್ಲೊಬ್ಬಳು ಸೀತೆಯನ್ನು ಬಿಟ್ಟು ಹೂದೋಟವನ್ನು ನೋಡಲು ಹೋದಳು. ಅಲ್ಲಿ ಸೋದರರಿಬ್ಬರನ್ನೂ ನೋಡಿ, ಪ್ರೇಮಭರಿತಳಾಗಿ ಸೀತೆಯ ಬಳಿಗೆ ತಿರುಗಿ ಬಂದಳು.—(ಈ ರಾಜಪುತ್ರರಿಬ್ಬರ ಆಗಮನವನ್ನು ಮೊದಲೇ ತಿಳಿದಿದ್ದುದರಿಂದ ಅವರನ್ನು ನೋಡಿದ ಕೂಡಲೇ ಅವರೇ ಇವರೆಂದು ತಿಳಿಸಲು ಸೀತೆಯ ಬಳಿಗೆ ಬಂದಳು).—

ದೋ ॥ ೨೬೧ ॥ ಅವಳಾ ಸ್ಥಿತಿಯನ್ನು ನೋಡಿ ಉಳಿದ ಸಖಿಯರ ಶರೀರಗಳು ಪುಳಕಿತವಾಗಿ, ಕಣ್ಣುಗಳಲ್ಲಿ ಆನಂದಾಶ್ರುಗಳು ತುಂಬಿದವು. (ಆಗ) ಸಖಿಯ

---

† "ದಾಂಪತ್ಯಾರ್ಥಮುಮಾಂ ಸತೀಂ"—ಸ್ತ್ರೀ ಪುರುಷರ ದಾಂಪತ್ಯವು ಶಾಶ್ವತವಾಗಿರಬೇಕೆಂದು ಸತಿಯಾದ ಪಾರ್ವತಿಯ ಪೂಜೆಯನ್ನು ಹೇಳಿದೆ.



ಪುಷ್ಪವಾಟಿಕೆಯಲ್ಲಿ ಸೀತಾರಾಮರ ಭೇಟಿ.

(ಪುಟ ೧೬೫)

ರೆಲ್ಲರೂ "ನಿನ್ನ ಹರ್ಷಕ್ಕೆ ಕಾರಣವಾವುದು" ಹೇಳೆಂದು ಮೃದು ವಚನಗಳಿಂದ ಕೇಳಿದರು. ಆಗಲಾ ಸಖಿಯು—"ಸಖಿಯರೇ, ಇಬ್ಬರು ರಾಜಕುವರರು ತೋಟವನ್ನು ನೋಡಲು ಬಂದಿರುವರು. ಅವರಿಬ್ಬರೂ ಕಿಶೋರವಯಸ್ಕರಾಗಿಯೂ ಸರ್ವಾಂಗ ಸುಂದರರಾಗಿಯೂ ಇರುವರು. ಅವರಲ್ಲಿ ಒಬ್ಬನು ಶ್ಯಾಮಾಂಗನಾಗಿಯೂ ಮತ್ತೊಬ್ಬನು ಗೌರಾಂಗನಾಗಿಯೂ ಇರುವರು. ಅವರ ವರ್ಣನೆಯನ್ನು ನಾನು ಮಾಡಲಾರೆನು. ಏಕೆಂದರೆ ಅವರನ್ನು ನೋಡಿದ ನನ್ನ ಕಣ್ಣಿಗೆ ವರ್ಣಿಸುವ ಶಕ್ತಿಯಿಲ್ಲ. ನಾಲಿಗೆಯ ಸಹಾಯದಿಂದ ವರ್ಣಿಸೋಣವೆಂದರೆ ಅದಕ್ಕೆ ಅವರ ಸೌಂದರ್ಯವನ್ನು ನೋಡುವ ಶಕ್ತಿಯಿಲ್ಲ"—ಎಂದಳು. ಈ ಮಾತುಗಳನ್ನು ಕೇಳಿ ಸಖಿಯರೆಲ್ಲರೂ ಹರ್ಷಿತರಾದರು. ಸೀತೆಯೂ ವಿಶೇಷ ಉತ್ಕಂಠಿತಳಾದುದನ್ನು ಕಂಡು ಸಖಿಯರಲ್ಲೊಬ್ಬಳು—"ಸಖಿಯರೇ! ಮುನಿಯ ಸಂಗಡ ಬಂದಿರುವರೆಂದು ಕೇಳಿರುವ ರಾಜಕುಮಾರರು ಇವರೇ ಆಗಿರಬೇಕು. ಅವರಾ ನಿಜರೂಪವನ್ನು ನೋಡಿ ನಮ್ಮ ನಗರದ ನರನಾರಿಯರೆಲ್ಲರೂ ಬೆರಗಾಗಿ, ಎಲ್ಲಿ ನೋಡಿದರಲ್ಲಿ, ಅವರ ಸೌಂದರ್ಯವನ್ನೇ ವರ್ಣಿಸುತ್ತಿರುವರು. ಅವರನ್ನು ಖಂಡಿತವಾಗಿ ನೋಡಲೇ ಬೇಕು. ಅವರು ನೋಡಲು ಯೋಗ್ಯರಾಗಿರುವರು"—ಎಂದಳು. ಸಖಿಯ ಈ ಮಾತುಗಳು ಸೀತೆಯ ಮನಸ್ಸಿಗೆ ಸಂತೋಷವನ್ನುಂಟುಮಾಡಿದವು. ಅವರ ದರ್ಶನಕ್ಕಾಗಿ (ಅವಳ) ಕಣ್ಣುಗಳು ಆತುರಗೊಂಡವು. ಆಗ ರಾಜಪುತ್ರರನ್ನು ನೋಡಿ ಬಂದಿದ್ದ ಸಖಿಯನ್ನು ಮುಂದೆ ಮಾಡಿಕೊಂಡು ತಾನು ಅವಳ ಹಿಂದೆ ಹೊರಟಳು. ಅವಳಾ ಪುರಾತನ ಪ್ರೇಮವಾರಿಗೂ ತಿಳಿಯಲಾರದು.

ದೊ॥೨೨೯॥ ಸೀತೆಯು ಆಗ ನಾರದನ ವಚನಗಳನ್ನು * ಸ್ಮರಿಸಿಕೊಳ್ಳಲು, ಅವಳಲ್ಲಿ ಪವಿತ್ರವಾದ ಪ್ರೇಮವು ಉತ್ಪನ್ನವಾಯಿತು. ಆಗವಳು ಚಕಿತಳಾಗಿ ಚಿಕ್ಕ ಮೃಗವು ಭಯದಿಂದ ಅತ್ತಿತ್ತ ತಿರುಗಿ ನೋಡುತ್ತಿರುವಂತೆ ಹಿಂದೆ ಮುಂದೆ ಸುತ್ತಲೂ ನೋಡುತ್ತ ಮುಂದೆ ಹೆಜ್ಜೆಯಿಡುತ್ತಿದ್ದಳು. ಸೀತೆಯ ಕಂಕಣದ ಕಿಂಕಿಣಿಯ ಪದನೂಪುರದ ಧ್ವನಿಯನ್ನು ಕೇಳಿ, ಹೃದಯದಲ್ಲಿ ವಿಚಾರ ಮಾಡುತ್ತ ರಾಮಚಂದ್ರನು ಲಕ್ಷ್ಮಣನನ್ನು ಕುರಿತು—"ಎಂತಹ ಸುಂದರವಾದ ಧ್ವನಿಯು ಕೇಳಿ ಬರುತ್ತಿದೆ ನೋಡು ಮದನನು ವಿಶ್ವವಿಜಯವನ್ನು ಪಡೆಯಬೇಕೆಂಬ ಮನಸ್ಸಿನಿಂದ ತನ್ನ ದುಂದುಭಿಯನ್ನು ಮೊಳಗಿಸುತ್ತಿರುವಂತೆ ತೋರುತ್ತಿದೆ," ಎಂದು ಹೇಳಿ, (ಧ್ವನಿಯು ಬರುತ್ತಿದ್ದ ಕಡೆಗೆ) ತಿರುಗಿ ನೋಡಿದನು.

---

* ಹಿಂದೊಮ್ಮೆ ನಾರದನು—"ನೀನು ರಾಮಚಂದ್ರನನ್ನು ಪುಷ್ಪವಾಟಿಕೆಯಲ್ಲಿ ಕಾಣುವೆ. ಅನಂತರ ಅವನೊಂದಿಗೆ ನಿನ್ನ ವಿವಾಹವಾಗುವುದು" ಎಂದು ಭವಿಷ್ಯವನ್ನು ಹೇಳಿದ್ದನು.

ಪ್ರಕಾಶದಿಂದ ಶೋಭಾಯಮಾನವಾಗಿ ಬೆಳಗುತ್ತಿರುವ ದೀಪದಂತಿರುವುದು. ಈ ಸೌಂದರ್ಯವನ್ನು ಬಣ್ಣಿಸುವುದರಲ್ಲಿ ಉಪಮೆಗಳೆಲ್ಲವೂ ಸುಳ್ಳಾಗಿರುವವೆಂದು ಕವಿಗಳೆಲ್ಲರೂ ನಿಶ್ಚಯಿಸಿರುವರು. ಆದುದರಿಂದ ನಾವು ಯಾವ ಉಪಮೆಯಿಂದ ಜಾನಕಿಯನ್ನು ವರ್ಣಿಸೋಣ? ಎಂದು ತುಳಸೀದಾಸರು ಕೇಳುತ್ತಾರೆ.

ದೋ॥ ೨೬೩॥ ಶ್ರೀರಾಮಚಂದ್ರನು ಜಾನಕಿಯ ಸೌಂದರ್ಯ ಶೋಭೆಯನ್ನು ಮನಸ್ಸಿನಲ್ಲಿಯೇ ಬಣ್ಣಿಸುತ್ತ ತನ್ನ (ಪ್ರೇಮಮುಗ್ಧ) ಅವಸ್ಥೆಯನ್ನು ಕುರಿತು ವಿಚಾರಮಾಡುತ್ತ, ಸಮಯಾನುಕೂಲವರಿತು, ತಮ್ಮನಾದ ಲಕ್ಷ್ಮಣನ ಕಡೆಗೆ ತಿರುಗಿ ಈ ಪವಿತ್ರ ವಚನಗಳನ್ನಾಡಿದನು.–ಹೇ ಲಕ್ಷ್ಮಣ, ಈಗ ಧನುರ್ಯಜ್ಞವಾಗುವುದು. ಈ ಜನಕನ ಕನ್ಯೆಗಾಗಿ. ಗೌರಿಯ ಪೂಜೆಗಾಗಿ ಸಖಿಯರು ಅವಳನ್ನಿಲ್ಲಿಗೆ ಕರೆತಂದಿರುವರು. ಅವಳು ಈ ಪುಷ್ಪವಾಟಿಕೆಯನ್ನು ಪ್ರಕಾಶಗೊಳಿಸುತ್ತ ತಿರುಗಾಡುತ್ತಿರುವಳು. ಅವಳಾ (ಬ್ರಹ್ಮಸೃಷ್ಟಿಯಿಂದ) ಅತೀತವಾದ ಅಲೌಕಿಕ ಸೌಂದರ್ಯವನ್ನು ನೋಡಿ, ಸ್ವಾಭಾವಿಕವಾಗಿಯೆ ಪವಿತ್ರವಾಗಿರುವ ನನ್ನ ಮನಸ್ಸು ಕ್ಷೋಭಿತವಾಗಿರುವುದು. ಇದರ ಕಾರಣವು ಆ ವಿಧಾತನಿಗೇ ಗೊತ್ತು. ನನ್ನ ಶುಭ ಅಂಗಗಳು––ಎಂದರೆ ಬಲಗೈ, ಕಣ್ಣು ಮೊದಲಾದುವು ಹಾರುತ್ತಿವೆ. ಹೇ ಲಕ್ಷ್ಮಣ, ರಘುವಂಶೀಯರು ಎಂದಿಗೂ ದುರ್ಮಾರ್ಗದಲ್ಲಡಿಯಿಡಲಾರರು. ಇದು ಅವರ ಸ್ವಾಭಾವಿಕ ಸ್ವಭಾವವಾಗಿದೆ. ಸ್ವಪ್ನದಲ್ಲಿ ಕೂಡ ನಾನು ಪರಸ್ತ್ರೀಯನ್ನು ನೋಡಿದವನಲ್ಲವೆಂದು ದೃಢವಾಗಿ ನಂಬಿರುವೆನು. ರಣಾಂಗಣದಲ್ಲಿ ಶತ್ರುವಿಗೆ ಬೆನ್ನು ತೋರಿಸದವರೂ, ಮನಸ್ಸಿನಲ್ಲಿ ಕೂಡ ಪರಸ್ತ್ರೀಯನ್ನು ನೆನೆಸದವರೂ, ಭಿಕ್ಷಾರ್ಥಿಗಳಿಗೆ ಏನನ್ನೂ ಕೊಡದೆ ಕಳುಹಿಸದವರೂ ಲೋಕದಲ್ಲಿ ಅತಿ ವಿರಳಾಗಿರುವರು.

ದೋ॥ ೨೬೪॥ ಶ್ರೀರಾಮಚಂದ್ರನು ಲಕ್ಷ್ಮಣನೊಂದಿಗೆ ಮಾತನಾಡುತ್ತಿದ್ದರೂ ಅವನ ಮನಸ್ಸು ಸೀತೆಯ ರೂಪದಲ್ಲಿ ಮಗ್ನವಾಗಿರುವುದು. ಭ್ರಮರವು ಕಮಲದಮೇಲೆ ಕುಳಿತುಕೊಂಡು ಅದರ ಮಕರಂದವನ್ನು ಪಾನಮಾಡುವಾಗ ಮೌನದಿಂದಿರುತ್ತ, ಮತ್ತೆ ಸ್ವಲ್ಪ ಸಮಯದನಂತರ ಅದರ ಬಳಿಯಲ್ಲಿ ಗುಂಜಾರವವನ್ನು ಮಾಡುವಂತೆ ಸೀತೆಯ ಮುಖಕಮಲದ ಕಾಂತಿಯೆಂಬ ಮಕರಂದವನ್ನು ಶ್ರೀರಾಮಚಂದ್ರನ ಮನಸ್ಸೆಂಬ ಭ್ರಮರವು ಪಾನಮಾಡುತ್ತಲಿದೆ. ಭ್ರಮರವು ಹೂವಿನ ರಸವನ್ನು ಪಾನಮಾಡುವಾಗ ಹೂವಿಗೆ ತೊಂದರೆಯನ್ನುಂಟು ಮಾಡಲಪೇಕ್ಷಿಸದೆ ಮತ್ತೆ ಮತ್ತೆ ಹಾರಿ ಗುಂಜಾರವವನ್ನು ಮಾಡುವುದು. ಇಲ್ಲಿಯೂ ರಾಮಚಂದ್ರನು ಸೀತೆಯ ಮುಖಸೌಂದರ್ಯವನ್ನು ನೆಟ್ಟಗಣ್ಣಿನಿಂದ ನೋಡದೆ ಮಧ್ಯೆ ಮಧ್ಯೆ ಲಕ್ಷ್ಮಣನೊಂದಿಗೆ ಮಾತು ಕಥೆಗಳನ್ನಾಡುತ್ತಿರುವನು.

ಆಗ ಸೀತೆಯ ಮುಖವು ಚಂದ್ರನಂತಾಯಿತು ರಾಮಚಂದ್ರನ ಮುಖವು ಚಕೋರನಂತಾಯಿತು. (ಎಂದರೆ ಚಕೋರದಂತೆ ಪ್ರೀತಿಯಿಂದ ಸೀತೆಯ ಮುಖಚಂದ್ರನನ್ನು ನೋಡಲಾರಂಭಿಸಿದನು.) ಮತ್ತೆ ಸೀತೆಯೆಲ್ಲಿರುವಳೆಂದು ಹುಡುಕುತ್ತ ಚಂಚಲವಾಗಿದ್ದ ನೇತ್ರಗಳು ಸ್ಥಿರವಾದುವು. (ಕಣ್ಣುಗಳು ತೆರದಿದ್ದು ತೆರದಂತೆಯೇ ಇದ್ದುವು. ಎಂದರೆ ಎವೆಯಿಕ್ಕದೆ ನೋಡುತ್ತಿದ್ದನೆಂದರ್ಥ)— ಆಗ ರಾಜನಾದ ನಿಮಿಯು * ಸಂಕೋಚಭಾವದಿಂದ ದೃಷ್ಟಿರೂಪವಾದ ವಸ್ತ್ರವನ್ನು ತ್ಯಜಿಸಿಬಿಟ್ಟಂತೆ ಕಾಣುತ್ತಿದ್ದವು (ರೆಪ್ಪೆಗಳೆರಡೂ ಮುಚ್ಚುವ ತೆರೆಯುವ ಕೆಲಸವನ್ನು ನಿಲ್ಲಿಸಿ ಬಿಟ್ಟಿದ್ದವು.) ರಾಮಚಂದ್ರನು ಸೀತೆಯ ಸೌಂದರ್ಯವನ್ನು ನೋಡಿ, ತನಗುಂಟಾದ ಸುಖವನ್ನು ವರ್ಣಿಸಲಾರದೆ ಮನಸ್ಸಿನಲ್ಲಿಯೆ ತೃಪ್ತಿಯನ್ನು ಹೊಂದಿದನು. (ಆ ಸೌಂದರ್ಯವು) ಬ್ರಹ್ಮದೇವನು ತನ್ನ ನೈಪುಣ್ಯವನ್ನೆಲ್ಲ ತೋರಿ ಸೀತೆಯ ಸೌಂದರ್ಯವನ್ನು ರಚಿಸಿ ಜಗತ್ತಿನಲ್ಲಿ ಪ್ರಕಟಿಸಿರುವನೋ ಎಂಬಂತಿದ್ದಿತು ಸೀತೆಯ ಸೌಂದರ್ಯವು ಸೌಂದರ್ಯಕ್ಕೇ ಕಾಂತಿಯನ್ನು ಕೊಡುವಂತಿರುವುದು. ಅದು ಒಂದು ಕಾಂತಿಮಯವಾದ ಮಂದಿರವನ್ನು ತನ್ನ

---

* ಜನಕರಾಜನ ಮೂಲ ವಂಶಜರಲ್ಲಿ ನಿಮಿಯೆಂಬ ರಾಜನಿದ್ದನು. ಅವನು ಯಜ್ಞವನ್ನು ಮಾಡಬೇಕೆಂಬ ಇಚ್ಛೆಯಿಂದ ವಸಿಷ್ಠಮುನಿಯನ್ನು ಕರೆಯಿಸಿದನು. ಆದರೆ ವಸಿಷ್ಠನಿಗೆ ಮೊದಲು ಇಂದ್ರನಿಂದ ಆಮಂತ್ರಣವು ಬಂದಿದ್ದಿತು ಆದುದರಿಂದ ಅವನು ಇಂದ್ರನ ಬಳಿಗೆ ಹೋದನು. ನಿಮಿರಾಜನು ಶರೀರವು ಅನಿತ್ಯವೆಂದು ತಿಳಿದು ಬೇರೆ ಪುರೋಹಿತನನ್ನು ಕರೆಯಿಸಿ ಯಜ್ಞವನ್ನಾರಂಭಿಸಿದನು. ವಸಿಷ್ಠನು ತನ್ನ ಕಾರ್ಯವನ್ನು ಮುಗಿಸಿಕೊಂಡು ಹಿಂತಿರುಗಿ ಬಂದು, ತನ್ನ ಶಿಷ್ಯನು (ಯಜಮಾನನು) ಮಾಡಿದ ಅಪರಾಧವನ್ನು ನೋಡಿ, "ನೀನು ನಿನ್ನ ಗುರುವಿಗೆ ಅಪಮಾನ ಮಾಡಿದುದರಿಂದ ನಿನ್ನ ಶರೀರವು ನಾಶವಾಗಲಿ" ಎಂದು ಶಾಪವಿತ್ತನು. ರಾಜನೂ ಕೂಡ "ಲೋಭದಿಂದ (ಅತ್ಯಾಸೆಯಿಂದ) ನೀನು ಧರ್ಮವನ್ನರಿಯದೇ ಹೋದುದರಿಂದ ನಿನ್ನ ಶರೀರವೂ ನಾಶವಾಗಲಿ" ಎಂದು ಶಾಪವಿತ್ತನು ಆಗ ಇಬ್ಬರೂ ಅಶರೀರಿಗಳಾದರು. ವಶಿಷ್ಠನು ಮತ್ತೆ ಒಂದು ಘಟದಲ್ಲಿ ಜನ್ಮವೆತ್ತಿದನು. ಆದರೆ ನಿಮಿರಾಜನ ಪುತ್ರರು ತಂದೆಗೆ ಸದ್ಗತಿಯುಂಟಾಗುವ ಕಾರ್ಯಗಳನ್ನೆಸಗಲು, ಆಗ ನಿಮಿಗೆ ಶರೀರವು ಸಿಕ್ಕುವ ಸಂಭವವುಂಟಾಯಿತು. ಆಗವನು "ನಾನು ಶರೀರದ ಬಂಧನದಲ್ಲಿರುವುದಿಲ್ಲ. ಪ್ರಾಣಿಗಳ ರೆಪ್ಪೆಗಳಲ್ಲಿ ವಾಸಿಸುವೆನು" ಎಂದು ಹೇಳಿ ಆ ವರವನ್ನು ಪಡೆದುಕೊಂಡು, ಅಂದಿನಿಂದ ಪ್ರಾಣಿಗಳ ರೆಪ್ಪೆಗಳಲ್ಲಿ ವಾಸಿಸಲಾರಂಭಿಸಿದನು. ಆದುದರಿಂದ ರೆಪ್ಪೆಗಳಿಗೆ "ನಿಮೇಷ" ವೆಂದು ಹೆಸರು. ಇಲ್ಲಿ ರಾಮಚಂದ್ರನ ಮತ್ತು ಸೀತೆಯ ದೃಷ್ಟಿಸಂಯೋಗವನ್ನು ನೋಡಿ, ನಿಮಿರಾಜನು "ಇನ್ನು ನಾನು ನಾಚಿಕೊಂಡರೆ ಅವರಿಬ್ಬರ ಕಾರ್ಯದಲ್ಲಿ ವಿಘ್ನವನ್ನುಂಟು ಮಾಡಿದಂತಾಗುವುದು" ಎಂದು ಅಲ್ಲಿಂದ ಹೊರಟುಹೋದನು. ಆದುದರಿಂದ ತೆರದ ಕಣ್ಣುಗಳು ಮುಚ್ಚದೇ ಹಾಗೆಯೆ ಇದ್ದುವು.

(ಇದುವರೆಗೆ ರಾಮಚಂದ್ರನ ವಿಚಾರವನ್ನೆ ಹೇಳಿದುದಾಯಿತು. ಇನ್ನು ಸೀತೆಯ ವಿಚಾರವನ್ನು ಹೇಳುವೆನು ಕೇಳಿರಿ) ಸೀತೆಯು ಚಕಿತಳಾಗಿ ನಾಲ್ಕು ದಿಕ್ಕುಗಳಲ್ಲಿಯೂ ಆ ರಾಜ ಕಿಶೋರರೆಲ್ಲಿ ಹೋದರೆಂದು ನೋಡುತ್ತಿರುವಳು. ಹರಿಣ ಶಿಶುವಿನಂತೆ ನೇತ್ರಗಳುಳ್ಳ ಸೀತೆಯು ನೋಡಿದೆಡೆಗಳಲ್ಲೆಲ್ಲ ಶ್ವೇತಕಮಲ ಪಂಕ್ತಿಗಳು * ವರ್ಷಿಸುತ್ತಿರುವಂತೆ ಭಾಸವಾಗುತ್ತಿತ್ತು. ಆಗ ಸಖಿಯರು ಲತೆಗಳ ಆಶ್ರಯದಲ್ಲಿ ಸಂಜ್ಞೆಯನ್ನು ಮಾಡುತ್ತ ಸುಂದರರಾಗಿ ಕಾಣುತ್ತಿರುವ ಆ ಶ್ಯಾಮಗೌರಾಂಗರಿಬ್ಬರನ್ನೂ ತೋರಿಸಿದರು ಅವರಾ ದಿವ್ಯಸ್ವರೂಪವನ್ನು ನೋಡಿದ ಕೂಡಲೆ ಸೀತೆಯ ಕಣ್ಣುಗರಳಿದವು. ತನಗೆ ಬೇಕಾಗಿದ್ದ ನಿಜನಿಧಿಯನ್ನು ಗುರುತಿಸಿದಂತೆ ಅವಳಾ ಕಣ್ಣುಗಳಲ್ಲಿ ಪ್ರಸನ್ನತೆಯು ತೋರಿತು ಶ್ರೀರಘುನಾಥನ ಸೌಂದರ್ಯವನ್ನು ನೋಡಿದ ಕೂಡಲೆ ಸೀತೆಯ ಕಣ್ಣುಗಳು ಆಯಾಸಗೊಂಡವು ಏಕೆಂದರೆ ಸೂರ್ಯನನ್ನು ನೋಡಲಪೇಕ್ಷಿಸುವವರು ಅವನ ಕಿರಣಗಳೆದುರಿಗೆ ಕಣ್ಣು ಬಿಡಲಾರದಂತೆ ರಾಮಚಂದ್ರನ ಸೌಂದರ್ಯ ಪ್ರಭಾವದಿಂದ ದೃಷ್ಟಿಯು ಅವನ ದೇಹದವರೆಗೂ ಹೋಗದೆ ಕಣ್ಣಿನ ಕೆಲಸವು ನಿಂತುಹೋಯಿತು. (ಅಷ್ಟರಿಂದಲೆ) ಅಧಿಕ ಸ್ನೇಹವುಂಟಾಗಿ, ಶರದೃತುವಿನ ಚಂದ್ರನನ್ನು ನೋಡಿ ಚಕೋರವು ಮೈಮರೆಯುವಂತೆ, (ಸೀತೆಯು) ತನ್ನ ಶರೀರವನ್ನು ಮರೆತಳು. (ಆಗ) ತನ್ನ ಕಣ್ಣಿನ ಮಾರ್ಗದಿಂದ ಶ್ರೀರಾಮಚಂದ್ರನನ್ನು ತನ್ನ ಹೃದಯದೊಳಗೆ ಸೇರಿಸಿಕೊಂಡು, ಆ ಸುಂದರಿಯಾದ ಸೀತೆಯು ರೆಪ್ಪೆಗಳೆಂಬ ಬಾಗಿಲುಗಳನ್ನು ಮುಚ್ಚಿಬಿಟ್ಟಳು. ಅವಳು (ಈ ಬಗೆಯಾಗಿ) ಪ್ರೇಮವಶಳಾದುದನ್ನು ನೋಡಿ ಸಖಿಯರು ಸಂಕೋಚದಿಂದ ಮಾತಾಡಲಾರದೇ ಮೌನವನ್ನು ತಳೆದರು.

ದೋ ॥ ೨೩೨ ॥ ಅದೇ ಸಮಯದಲ್ಲಿ ಮೇಘಮಂಡಲವನ್ನು ಛೇದಿಸಿ ಚಂದ್ರನು ಪ್ರಕಾಶಿತವಾಗುವಂತೆ ಆ ಸೋದರರಿಬ್ಬರೂ ಲತಾಕುಂಜದಲ್ಲಿ ಪ್ರಕಟರಾದರು. ಆ ವೀರರಿಬ್ಬರ ಶೋಭೆಯು ಮತ್ತಾರಿಗೂ ಇಲ್ಲ. ಅವರ ಶರೀರಗಳು ನೀಲ ಮತ್ತು ಪೀತ ಕಮಲಗಳಂತಿರುವವು. ಅವರ ತಲೆಯಲ್ಲಿ ಹೂಮಾಲೆಗಳ ಮಧ್ಯೆ ನವಿಲುಗರಿಗಳು ಸುಂದರವಾಗಿ ಕಾಣಿಸುತ್ತಿರುವವು. ಹಣೆಯಲ್ಲಿ ತಿಲಕವೂ

---

* ಇಲ್ಲಿ ಶ್ವೇತಕಮಲದ ಉಪಮೆಯನ್ನು ಕೊಟ್ಟಿರುವುದರಿಂದ ಸೀತೆಯು ಕೃತ್ರಿಮ ಅಲಂಕಾರಗಳನ್ನು ಧರಿಸಿಲ್ಲವೆಂದು ಅರ್ಥವಾಗುವುದು. ಮತ್ತೆ "ಕಮಲ–ಸಿತ–ಶ್ರೇಣೀ" ಎಂಬಲ್ಲಿ ಸಿತ ಎಂಬ ಶಬ್ದವನ್ನು ಉಪಯೋಗಿಸಿರುವುದರಿಂದ ಬೇರೆ ಭಾವವೂ ಉಂಟಾಗುವುದು. ನೇತ್ರಗಳ ವರ್ಣನೆಯಲ್ಲಿ ಶ್ವೇತ-ಶ್ಯಾಮ—ರಕ್ತ ಎಂಬ ತ್ರಿವರ್ಣಗಳು ಮುಖ್ಯವಾದುವು. ಶ್ವೇತದಿಂದ ಅಮೃತಗುಣ, ಶ್ಯಾಮದಿಂದ ವಿಷ, ರಕ್ತ ವರ್ಣದಿಂದ ಮಧ್ಯಸ್ಥ ಗುಣಗಳು ವ್ಯಕ್ತವಾಗುವವು.

ಬೆವರು ಹನಿಗಳೂ ಶೋಭಿಸುತ್ತಲಿವೆ. ಕಿವಿಗಳಲ್ಲಿ ಸುಂದರವಾದ ಆಭರಣಗಳು ಕಾಂತಿಯುಕ್ತವಾಗಿ ಹೊಳೆಯುತ್ತಲಿವೆ. ಹುಬ್ಬುಗಳು ಬಾಗಿವೆ. ಕೂದಲು ಗುಂಗುರಾಗಿದೆ. ಕಣ್ಣುಗಳು ಆಗತಾನೆ ಅರಳಿದ ಕೆಂಪು ಕಮಲದಂತಿರುವುವು. ಅವರ ಚಿಬುಕ, ನಾಸಿಕ, ಕಪೋಲಗಳು ಸುಂದರವಾಗಿವೆ. ಅವರಾ ನಸುನಗೆಯು ಮನಸ್ಸನ್ನೆ ಅಪಹರಿಸುವಂತಿರುವುದು. ಶ್ರೀಗೋಸ್ವಾಮಿ ತುಳಸೀದಾಸರು ಹೇಳುತ್ತಾರೆ–ಕೇಳಿರಿ—ಆ ಶ್ರೀಮುಖ ಸೌಂದರ್ಯವನ್ನು ನಾನು ವರ್ಣಿಸಲಾರೆನು ಏಕೆಂದರೆ ಅದನ್ನು ನೋಡಿ ಬಹುಮಂದಿ ಕಾಮದೇವರು ಲಜ್ಜಾನ್ವಿತರಾಗುವರು. ವಕ್ಷಸ್ಥಳದಲ್ಲಿ ಮಣಿಮಾಲೆಗಳಿವೆ. ಶಂಖದಂತೆ ಸುಂದರವಾದ ಕೊರಳು. ಆನೆಯ ಸೊಂಡಿಲಿನಂತೆ ಸುಂದರವೂ ಬಲವೂ ಆದ ಭುಜಗಳು, ಎಡಗೈಯಲ್ಲಿ ಹೂಗಳಿಂದ ತುಂಬಿದ ಬುಟ್ಟಿಯಿರುವುದು. ಇವರಲ್ಲಿ ಶ್ಯಾಮಕುಮಾರನು (ರಾಮಚಂದ್ರನು) ಬಹು ಸುಂದರನಾಗಿರುವನು.

ದೋ ॥ ೨೩೩ ॥ ಸಿಂಹದಂತೆ ತೆಳುವಾದ ನಡುವು ಅದಕ್ಕೆ ಪಿತಾಂಬರವನ್ನು ಸುತ್ತಿರುವನು. ಅವನು ಶೋಭೆ ಮತ್ತು ಶೀಲ ನಿಧಿಯು. ಇಂತಹ ಸೂರ್ಯವಂಶ ಭೂಷಣನನ್ನು (ರಾಮಚಂದ್ರನನ್ನು) ನೋಡಿ ಸಖಿಯರಿಗೆ ಹಿಂದುಮುಂದು ತೋರದಂತಾಯಿತು. ಅವರಲ್ಲಿ ಒಬ್ಬ ಸುಂದರಿಯಾದ ಸಖಿಯು ಧೈರ್ಯವನ್ನು ತಳೆದು ಸೀತೆಯ ಕೈಹಿಡಿದು (ಹೀಗೆ) ಕೇಳಿದಳು.—"ಗೌರಿಯ ಧ್ಯಾನವನ್ನು ಆಮೇಲೆ ಮಾಡಿಕೊ. ಈಗ ರಾಜಕಿಶೋರರನ್ನು ಏಕೆ ನೀನು (ಚೆನ್ನಾಗಿ) ನೋಡುವುದಿಲ್ಲ—ಆಗ ಸೀತೆಯು ಸಂಕೋಚದಿಂದ ಕಣ್ದೆರೆದಳು. (ಏಕೆಂದರೆ ಹೃದಯದಲ್ಲಿಟ್ಟುಕೊಂಡಿದ್ದ ಮೂರ್ತಿಯು ಬಾಗಿಲು ತೆರದಕೂಡಲೆ ಎಲ್ಲಿ ಮಾಯವಾಗುವುದೊ ಎಂದು ಭಯಪಟ್ಟಳು. ಕಣ್ದೆರದ ಕೂಡಲೆ) ಎದುರಿಗಿದ್ದ ರಘುವಂಶ ಸಿಂಹಗಳನ್ನು ನೋಡಿದಳು ಶ್ರೀರಾಮಚಂದ್ರನ ಸೌಂದರ್ಯವನ್ನು ನಖಶಿಖಾಂತದವರೆಗೆ ನೋಡಿ ತನ್ನ ತಂದೆಯ (ಜನಕನ) ಪ್ರತಿಜ್ಞೆಯನ್ನು ಜ್ಞಾಪಿಸಿಕೊಂಡು ಸೀತೆಯ ಮನಸ್ಸಿಗೆ ಭಯವುಂಟಾಯಿತು. ಸೀತೆಯು ಪ್ರೇಮವಶಳಾಗಿರುವುದನ್ನು ನೋಡಿ ಸಖಿಯರು "ಅಮ್ಮಾ, (ನಾವು ಬಂದು) ಬಹಳ ಹೊತ್ತಾಯಿತು. ನಾಳೆ ಇದೇ ಹೊತ್ತಿಗೆ ಬರೋಣ"–ಎಂದು ಹೇಳಿ, ಒಬ್ಬಳು ನಗಲಾರಂಭಿಸಿದಳು. ಆ ಗೂಢವಾದ ವಾಣಿಯನ್ನು ಕೇಳಿ ಸೀತೆಯು ಸಂಕೋಚಪಟ್ಟು, ಇನ್ನು ಹೊತ್ತುಮಾಡಿದರೆ ಮಾತೆಯು ಕೋಪಿಸಿಕೊಳ್ಳಬಹುದು ಎಂದು ಹೆದರಿದಳು. (ಕೊನೆಗೆ) ಧೈರ್ಯವನ್ನು ತಳೆದು ಅವಳು ರಾಮಚಂದ್ರನ ಮೂರ್ತಿಯನ್ನು ತನ್ನ ಹೃದಯದಲ್ಲಿ ಧರಿಸಿ, ತನ್ನ ಮಾನವು ಪಿತನ ಅಧೀನವಾಗಿರುವುದೆಂದರಿತು ಅಲ್ಲಿಂದ ತೆರಳಿದಳು.

ದೋ ॥ ೨೩೭–೩೮ ॥ ಪಕ್ಷಿ ಮತ್ತು ಮರಗಳನ್ನು ನೋಡುವ ನಿಮಿತ್ತದಿಂದ ಸೀತೆಯು ಮತ್ತೆ ಮತ್ತೆ ತೋಟಕ್ಕೆ ಹಿಂದಿರುಗುವಳು. ಏಕೆಂದರೆ ಶ್ರೀರಘುವೀರನ

ಸೌಂದರ್ಯವನ್ನು ನೋಡಿದಂತೆಲ್ಲ ಅವಳಲ್ಲಿ ಪ್ರೀತಿಯು ಅಧಿಕವಾಗಿ ಬೆಳೆಯು ತ್ತಿರುವುದು. ಶಿವನ ಧನುಸ್ಸು ಬಹು ಕಠಿಣವಾದುದು ಎಂದಾಲೋಚಿಸುತ್ತ, ರಾಮಧ್ಯಾನದಲ್ಲಿ ಮಗ್ನಳಾಗಿ ಅಲ್ಲಿಂದ ಹೊರಟಳು. ರಾಮಚಂದ್ರನು ಸುಖ, ಸ್ನೇಹ, ಸೌಂದರ್ಯ ಮತ್ತು ಗುಣಗಳ ನಿಧಿಯಾದ ಜಾನಕಿಯು ಹೋಗುತ್ತಿರು ವುದನ್ನು ನೋಡಿ, ಪರಮ ಪ್ರೇಮರೂಪವಾದ ಮೃದುಮಸಿಯಿಂದ ತನ್ನ ಹೃದಯ ಪಟಲದಲ್ಲಿ ಅವಳ ಚಿತ್ರವನ್ನು ಚಿತ್ರಿಸಿದನು. ಸೀತೆಯು ಮತ್ತೆ ಭವಾನೀಭವನಕ್ಕೆ ಹೋಗಿ, ಚರಣಗಳಿಗೆರಗಿ ಕೈಜೋಡಿಸಿ ಪ್ರಾರ್ಥಿಸಲಾರಂಭಿಸಿದಳು.—ಹೇ ಗಿರಿ ರಾಜ ಕುಮಾರಿ! ನಿನಗೆ ಜಯವಾಗಲಿ! ಜಯವಾಗಲಿ!! ಜಯವಾಗಲಿ!!! ಶ್ರೀ ಮಹಾದೇವಮುಖಚಂದ್ರಚಕೋರಿ! ಗಜವದನ–ಷಡಾನನ ಮಾತೆ! ಜಗಜ್ಜ ನನೀ! ಪ್ರಕಾಶಮಾಯಿ! ನಿನಗೆ ಜಯವಾಗಲಿ! ನೀನು ಅನಾದ್ಯನಂತಳು! ನಿನ್ನ ಪ್ರಭಾವವು ಅತುಲವಾದುದು! ಅದನ್ನು ವೇದಗಳು ಕೂಡ ತಿಳಿಯಲಾರವು. ನೀನು ಸಂಸಾರವನ್ನು ಸೃಷ್ಟಿಸುವವಳು, ಪಾಲಿಸುವವಳು, ಸಂಹಾರ ಮಾಡು ವವಳು. ವಿಶ್ವವಿಮೋಹಿನಿ! ವಿಶ್ವವಿಹಾರಿಣಿ! ಹೇ ಮಾತೆ! ಪ್ರತಿವ್ರತೆಯರಲ್ಲಿ ಮೊದಲನೆಯ ಹೆಸರು ನಿನ್ನದು. ನಿನ್ನ ಮಹಿಮೆಯು ಅತುಲವೂ ಅಪಾರವೂ ಆಗಿದೆ. ಅದನ್ನು ಸಾವಿರಾರು ಶಾರದೆಯರೂ, ಆದಿಶೇಷರೂ ವರ್ಣಿಸಲಾರರು. ನಿನ್ನ ಸೇವೆಯಿಂದ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧ ಪುರು ಷಾರ್ಥಗಳು ಸುಲಭವಾಗಿ ಲಭಿಸುವವು! ವರದಾಯಿನಿ, ತ್ರಿಪುರಾರಿ ಪ್ರಿಯೆ! ಹೇ ದೇವಿ! ನಿನ್ನ ಚರಣಕಮಲಗಳನ್ನು ಪೂಜಿಸಿ ದೇವತೆಗಳೂ ಮನುಷ್ಯರೂ ಋಷಿಗಳೂ ಸುಖಿಗಳಾಗುವರು ನೀನು ನನ್ನ ಮನೋರಥಗಳನ್ನು ಚೆನ್ನಾಗಿ ಅರಿತಿರುವೆ. ಏಕೆಂದರೆ ನೀನು ಯಾವಾಗಲೂ ಎಲ್ಲರ ಅಂತಃಕರಣಗಳಲ್ಲಿ ವಾಸಿ ಸುತ್ತಿ. ಆದುದರಿಂದ ಆ ಮನೋರಥಗಳನ್ನು ಪುನಃ ಪ್ರಕಟಿಸುವ ಆವಶ್ಯಕತೆ ಯಿಲ್ಲ.—ಹೀಗೆಂದು ಪ್ರಾರ್ಥಿಸಿ (ಜಾನಕಿಯು ಗೌರಿಯ) ಚರಣಗಳನ್ನು ಹಿಡಿದು ಕೊಂಡಳು. ಭವಾನಿಯು ವಿನಯಪ್ರೇಮವಶಳಾದಳು. ಆಗವಳ ವರದಾನ ರೂಪವಾದ ಹೂ ಮಾಲೆಯು ಜಾರಿಬಿದ್ದಿತು. ಮತ್ತೆ ಮೂರ್ತಿಯು ನಸುನಗೆ ಯನ್ನು ತೋರಿತು. ಸೀತೆಯು ಆ ಪ್ರಸಾದವನ್ನು ಬಹು ಆದರದಿಂದ ತಲೆಯಲ್ಲಿ ಮುಡಿದುಕೊಂಡಳು. (ಆಗ) ಪಾರ್ವತಿಯು ಹೃದಯದಲ್ಲಿ ಆನಂದ ಪೂರ್ಣ ಳಾಗಿ—"ಹೇ ಸೀತೆ! ನನ್ನ ನಿಜವಾದ ಆಶೀರ್ವಾದವನ್ನು ಕೇಳು. ನಿನ್ನ ಮನೋ ರಥಗಳೆಲ್ಲವೂ ಸತ್ಯವಾಗಿಯೂ ನೆರವೇರುವುವು. ನಾರದನ ವಚನವು ಸದಾ ಪವಿತ್ರವೂ ಸತ್ಯ ಪೂರ್ಣವೂ ಆಗಿರುವುದು. ಆದುದರಿಂದ ನಿನ್ನ ಮನಸ್ಸು ಯಾರಲ್ಲಿ ಮಗ್ನವಾಗಿದೆಯೋ ಆ ವರನೇ ನಿನಗೆ ಲಭಿಸುವನು. ನಿನಗೆ ದೊರೆ ಯುವ ಆ ಶ್ಯಾಮಸುಂದರನಾದ ರಾಮಚಂದ್ರನು ಕರುಣಾನಿಧಿಯೂ ಪರಮ ಜ್ಞಾನಿಯೂ ಆಗಿರುವನು. ಅವನು ನಿನ್ನ ಶೀಲ ಸ್ನೇಹಗಳನ್ನು ಬಲ್ಲನು"—

ಎಂದು ಆಶೀರ್ವದಿಸಿದಳು. ಈ ಬಗೆಯಾದ ಆಶೀರ್ವಾದವನ್ನು ಕೇಳಿ ಸಖಿಯರೊಂದಿಗೆ ಪ್ರಸನ್ನಚಿತ್ತಳಾಗಿ, ಪುನಃ ಪಾರ್ವತಿಯ ಪೂಜೆಯನ್ನು ಮಾಡಿ ಸೀತೆಯು ಮನೆಗೆ ಹೋದಳೆಂದು ತುಳಸೀದಾಸರು ಹೇಳುತ್ತಾರೆ.

ಸೋ ॥೨೩೬॥ ಈ ರೀತಿಯಾಗಿ ಪಾರ್ವತಿಯು ಅನುಕೂಲವಾಗಿರುವಳೆಂದು ತಿಳಿದು ಸೀತೆಯ ಮನಸ್ಸಿನಲ್ಲಿ ವರ್ಣಿಸಲಾಗದಷ್ಟು ಆನಂದವುಂಟಾಯಿತು. ಮಂಗಳ (ಶುಭ) ಶಕುನವನ್ನು ಸೂಚಿಸಲು ಸುಂದರಿಯಾದವಳ ವಾಮಾಂಗಗಳು ಹಾರಲಾರಂಭಿಸಿದವು. ರಾಮಚಂದ್ರನು ಸೀತೆಯ ಲಾವಣ್ಯ ಸ್ಮರಣೆಯಲ್ಲಿಯೆ ಮಗ್ನನಾಗಿದ್ದನು. ಸೋದರರಿಬ್ಬರೂ ಗುರುವಿನ ಬಳಿಗೆ ತೆರಳಿದರು. ವಿಶ್ವಾಮಿತ್ರನು ಅವರು ತಂದ ಹೂಗಳನ್ನು ತೆಗೆದುಕೊಂಡು ಪೂಜೆಯನ್ನು ಪೂರೈಸಿ, "ನಿಮ್ಮಿಬ್ಬರ ಮನಸ್ಸಿನಲ್ಲಿರುವ ಆಸೆಗಳು ಈಡೇರಲಿ" ಎಂದು ಹರಸಿದನು. ಇದನ್ನು ಕೇಳಿ ರಾಮಲಕ್ಷ್ಮಣರಿಬ್ಬರೂ ಪ್ರಸನ್ನಚಿತ್ತರಾದರು. ಮಹಾ ಜ್ಞಾನಿಯಾದ ಮುನಿವರನು ಭೋಜನವನ್ನು ಮಾಡಿ ಪುರಾಣ ಕಥೆಗಳನ್ನು ಹೇಳಲಾರಂಭಿಸಿದನು. (ಈ ಬಗೆಯಿಂದ) ದಿನವು ಕಳೆದು (ಸಂಧ್ಯಾಕಾಲವು ಸಮೀಪಿಸಲು) ಸೋದರರಿಬ್ಬರೂ ಗುರ್ವಾಜ್ಞೆಯನ್ನು ಪಡೆದು ಸಂಧ್ಯೋಪಾಸನೆಯನ್ನು ಮಾಡಲಾರಂಭಿಸಿದರು. ಪೂರ್ವದಿಕ್ಕಿನಲ್ಲಿ ಮನೋಹರನಾದ ಚಂದ್ರನುದಯಿಸಿದನು. ಅವನು ಸೀತೆಯ ಮುಖವನ್ನು ಹೋಲುತ್ತಿದ್ದುದರಿಂದ ರಾಮಚಂದ್ರನಿಗೆ ಸಂತೋಷವುಂಟಾಯಿತು ಕೊನೆಗೆ ಚಂದ್ರನು ಸೀತೆಯ ಮುಖದಷ್ಟು ಸುಂದರನಾಗಿಲ್ಲವೆಂದು ಅಂದುಕೊಂಡನು. (ಹಾಗೆ ಹೇಳಿಕೊಂಡ ಕಾರಣವನ್ನು ಮುಂದೆ ಹೇಳುತ್ತಾರೆ.)

ದೋ ॥೨೭೦॥ ಓಹೋ! ಸಮುದ್ರವೆಂದರೆ ಕ್ಷಾರಮಯ. ಅದರಲ್ಲಿ ಜನ್ಮವೆತ್ತಿದವನು ಅವನು (ಚಂದ್ರನು). ಅವನ ಸೋದರನು ಹಾಲಾಹಲನು (ವಿಷ) ಮತ್ತೆ ದಿನದಲ್ಲಿ ಮಲಿನನಾಗುವನು, ಅಲ್ಲದೆ ಕಲಂಕವನ್ನೂ ಉಳ್ಳವನಾಗಿರುವನು. ಇಂತಹ ಆ ಬಡಕಂಗಾಲ ಚಂದ್ರನು ಸೀತೆಯ ಮುಖವನ್ನು ಹೇಗೆ ಹೋಲುವನು? ಚಂದ್ರನು ಕೃಷ್ಣಪಕ್ಷದಲ್ಲಿ ಕ್ಷೀಣಿಸುವನು ಶುಕ್ಲಪಕ್ಷದಲ್ಲಿ ವೃಧ್ಧಿಯನ್ನೈದುವನು. ಮತ್ತು ವಿಯೋಗಿ ಜನರಿಗೆ ದುಃಖವನ್ನುಂಟುಮಾಡುವನು, ತನ್ನ ಸಮಯವನ್ನು ಕಾದಿದ್ದು ರಾಹುವು ಅವನನ್ನು ಗ್ರಾಸವಾಗಿ ಗ್ರಹಿಸುವನು. ಅವನು (ಚಂದ್ರನು) ಪಂಕಜದ್ರೋಹಿಯು, ಚಕೋರ ಚಕೋರಿಗಳಿಗೆ ದುಃಖಪ್ರದನು (ರಾತ್ರಿಯಲ್ಲಿ ಚಕೋರ ಚಕೋರಿಗಳು ಬೇರೆ ಬೇರೆಯಾಗಿರುವವು). "ಹೇ ಚಂದ್ರಮ! ನಿನ್ನಲ್ಲಿ ಇಂಥ ಅವಗುಣಗಳು ತುಂಬಿವೆ. ವಿದೇಹ ನಂದಿನಿಯ ಮುಖಕ್ಕೆ ನಿನ್ನ ಉಪಮೆಯನ್ನೀಯುವುದು ದೊಡ್ಡ ತಪ್ಪು. ಅದು ಅನುಚಿತವು." ಈ ಬಗೆಯಾಗಿ ಸೀತೆಯ ಮುಖ ಕಾಂತಿಯನ್ನು ಚಂದ್ರಕಾಂತಿಯೊಂದಿಗೆ ಹೋ

ಲಿಸಿ ವರ್ಣನೆ ಮಾಡುತ್ತ ರಾತ್ರಿ ವಿಶೇಷ ಸಮಯವು ಕಳೆದು ಹೋದುದನ್ನು ಕಂಡು, ರಾಮಚಂದ್ರನು ಗುರುಸೇವೆಯನ್ನು ಮಾಡಲು ಹೊರಟುಹೋದನು. ಅಲ್ಲಿ ಮುನಿಚರಣಕಮಲಗಳಿಗೆರಗಿ, ಅವನ ಆಜ್ಞೆಯನ್ನು ಪಡೆದು ಪವಡಿಸಿದನು. ರಾತ್ರಿ ಕಳೆದನಂತರ ರಘುನಾಯಕನು ಎಚ್ಚರನಾಗಿ, ತಮ್ಮನ ಕಡೆಗೆ ನೋಡಿ, "ಹೇ ಪುತ್ರ! ಅರುಣೋದಯವಾಯಿತು, ನೋಡು, ಈ ಸಮಯವು ಪಂಕಜ-ಲೋಕ-ಕೋಕಂಗಳಿಗೆ ಸುಖವನ್ನುಂಟುಮಾಡುವುದಾಗಿದೆ" ಎಂದನು. ಲಕ್ಷ್ಮಣನು ಕೈಗಳೆರಡನ್ನೂ ಜೋಡಿಸಿ ಪ್ರಭುಪ್ರಭಾವ ಸೂಚಕವಾದ ಮೃದುವಾಣಿಯಿಂದ ಇಂತೆಂದನು :—

ದೋ॥ ೨೭೧॥ ಹೇ ನಾಥ, ಅರುಣೋದಯವಾಯಿತು. ಕುಮುದಗಳು (ಕೆಲವು) ಸಂಕುಚಿತವಾದವು. ನಕ್ಷತ್ರಗಳ ತೇಜಸ್ಸು ಮಲಿನವಾಯಿತು. ಇದರಂತೆಯೆ ನಿನ್ನ ಆಗಮನವನ್ನು ತಿಳಿದು ರಾಜರೆಲ್ಲರೂ ಬಲಹೀನರಾಗಿರುವರು. ರಾಜರೆಲ್ಲರೂ ನಕ್ಷತ್ರಗಣದಂತೆ ಸ್ವಪ್ರಕಾಶವನ್ನು ಬೀರುವರು. ಆದರೆ ಧನುಸ್ಸಿನ ರೂಪದಿಂದಿರುವ ಅಂಧಕಾರವನ್ನು ಅವರು ನಿವಾರಿಸಲಾರರು ರಾತ್ರಿಯು ಕಳೆದುದರಿಂದ ಕಮಲಗಳೂ, ಚಕೋರಗಳೂ ಭ್ರಮರಗಳೂ ಅನೇಕ ಪಕ್ಷಿಗಳೂ ಪ್ರಸನ್ನವಾಗಿರುವವು. ಹೇ ಪ್ರಭು! ಸಾಕು! ಸೂರ್ಯೋದಯದಿಂದ ಶ್ರಮವಿಲ್ಲದೆ ಅಂಧಕಾರವು ನಾಶವಾಗಿ, ನಕ್ಷತ್ರಗಳು ಮಾಯವಾಗಿ ಜಗತ್ತಿನಲ್ಲಿ ಪ್ರಕಾಶವು ಹೆಚ್ಚಿದಂತೆ ನೀನು ಧನುರ್ಭಂಗವನ್ನು ಮಾಡುವುದರಿಂದ ಭಕ್ತಜನರೆಲ್ಲರೂ * ಸುಖಿಗಳಾಗುವರು. ಹೇ ರಘುರಾಜ! ಸೂರ್ಯನು ಉದಯಿಸಿ, ಪ್ರಭುವಾದ ನಿನ್ನ ಪ್ರಭಾವವನ್ನು ರಾಜರೆಲ್ಲರಿಗೂ ತೋರಿಸಿದನು. ನಿನ್ನ ಭುಜಬಲವನ್ನು ಪ್ರಕಟಿಸುವುದಕ್ಕಾಗಿಯೇ ಈ ಧನುರ್ಯಜ್ಞ ವಿಧಾನವು ಹುಟ್ಟಿದೆ. ಇದರಿಂದ ನಿನ್ನ ಅಘಟನಘಟನಾ ಸಾಮರ್ಥ್ಯವು ಪ್ರಕಟವಾಗುವುದು."—ತಮ್ಮನಾಡಿದ ಈ ಮಾತುಗಳನ್ನು ಕೇಳಿ ಪ್ರಭುವು ನಸುನಗೆಯನ್ನು ತೋರಿದನು. ಅನಂತರ ಸ್ವಭಾವದಿಂದಲೇ ಪವಿತ್ರನಾದವನು ಶೌಚಾದಿಗಳಿಂದ ನಿವೃತ್ತನಾಗಿ ಸ್ನಾನಮಾಡಿ, ನಿತ್ಯ ನಿಯಮಗಳನ್ನು ತೀರಿಸಿ, ಗುರುವಿನ ಚರಣಕಮಲಗಳಿಗೆರಗಿದನು.

ಅತ್ತ ಜನಕಮಹಾರಾಜನು (ಪುರೋಹಿತನಾದ) ಶತಾನಂದನನ್ನು ಕರೆಯಿಸಿ ಅವನನ್ನು ಕೌಶಿಕ (ವಿಶ್ವಾಮಿತ್ರ)ನ ಬಳಿಗಟ್ಟಿದನು. ಅವನು ಬಂದು

---

* ಭಕ್ತರಲ್ಲಿ ನಾಲ್ಕು ಬಗೆಯವರು.—ಆರ್ತ, ಜಿಜ್ಞಾಸು, ಅರ್ಥಾರ್ಥಿ, ಜ್ಞಾನಿ. ಇವರಲ್ಲಿ ಜಾನಕಿಯು ಆರ್ತ ಭಕ್ತಳು. ಜಿಜ್ಞಾಸುಗಳಲ್ಲಿ ವಿಶ್ವಮಿತ್ರಾದಿಗಳು, ಅರ್ಥಿಗಳಲ್ಲಿ ಜನಕಾದಿಕರು, ಜ್ಞಾನಿಗಳಲ್ಲಿ ಲಕ್ಷ್ಮಣಾದಿಕರು—ಇವರೆಲ್ಲರೂ ಧನುರ್ಭಂಗದಿಂದ ಎಂದರೆ ಮಾಯಾನಿವೃತ್ತರಾಗುವುದರಿಂದ ಪ್ರಸನ್ನ ಚಿತ್ತರಾಗುವರು.

(ಮುನಿಗೆ) ರಾಜನ ಬಿನ್ನಹವನ್ನರುಹಿದನು. ಅದನ್ನು ಕೇಳಿ ಮುನಿಯು ಪ್ರಸನ್ನನಾಗಿ ಸೋದರರಿಬ್ಬರನ್ನೂ ಕರೆದನು.

ದೋ ॥೨೭೨। ಸಮರ್ಥ (ಆ ಸೋದರ) ರಿಬ್ಬರೂ ಶತಾನಂದನ ಪಾದಗಳಿಗೆರಗಿ ವಿಶ್ವಾಮಿತ್ರ ಗುರುವಿನ ಬಳಿ ಹೋಗಿ ಕುಳಿತರು. ಆಗ ಮುನಿಯು "ಹೇ ಪುತ್ರರೇ, ನಡೆಯಿರಿ, ಜನಕರಾಜನು ಹೇಳಿ ಕಳುಹಿಸಿರುವನು. ನಾವು ಹೋಗಿ ಸೀತೆಯ ಸ್ವಯಂವರವನ್ನು ನೋಡಬೇಕಾಗಿದೆ. ಅಲ್ಲಿ ಈಶ್ವರನು ಯಾರ ಪ್ರಭಾವವನ್ನು ತೋರಿಸುವನೊ ನೋಡುವ!" ಎಂದನು. (ಆಗ) ಲಕ್ಷ್ಮಣನು—"ನಾಥ! ತಮ್ಮ ಆಶೀರ್ವಾದ ಕೃಪೆಯು (ಹಿಂದೆ ಹೇಳಿದ 'ನಿಮ್ಮ ಮನೋರಥಗಳು ಸಫಲವಾಗಲಿ' ಎಂಬ ಆಶೀರ್ವಾದವು) ಯಾರಮೇಲೆ ಆಗಿರುವುದೋ ಅವರೆ (ರಾಮಚಂದ್ರನೇ) ಮಹತ್ವವನ್ನು ಹೊಂದುವರು," ಎಂದನು. ಈ ವರವಾಣಿಯನ್ನು ಕೇಳಿ ವಿಶ್ವಾಮಿತ್ರನೂ ಇತರ ಋಷಿಗಳೂ ಹರ್ಷವನ್ನು ಹೊಂದಿ 'ಸತ್ಯಂಭವತು ತೇವಚಃ— ಎಂದರೆ ನಿನ್ನ ವಚನವು ಸತ್ಯವಾಗಲಿ' ಎಂದು ಹರಸಿದರು. ದಯಾಳುವಾದ ರಾಮಚಂದ್ರನು ಋಷಿ ಸಮೇತ ಧನುರ್ಯಜ್ಞ ಶಾಲೆಗೆ ತೆರಳಿದನು ನಗರನಿವಾಸಿಗಳು ಸೋದರರಿಬ್ಬರೂ ಸಭಾಮಂಟಪಕ್ಕೆ ಬಂದರೆಂಬ ಸುದ್ದಿಯನ್ನು ಕೇಳಿ ಗೃಹಕೃತ್ಯಗಳನ್ನು ಬಿಟ್ಟು ಬಾಲಕ ಬಾಲಕಿಯರು, ಯುವಕ ಯುವತಿಯರು, ವೃದ್ಧ ಸ್ತ್ರೀಪುರುಷರಾದಿಯರಾದಿಯಾಗಿ ಸರ್ವರೂ ಅತ್ತಕಡೆ ತೆರಳಿದರು. ಜನರ ಗುಂಪು ದೊಡ್ಡದಾದುದನ್ನು ಕಂಡು ಜನಕರಾಜನು ತನ್ನ ಸೇವಕರನ್ನು ಕರೆದು "ಎಲ್ಲರಿಗೂ ಉಚಿತಾಸನಗಳನ್ನು ಕೊಟ್ಟು ಕುಳ್ಳಿರಿಸಿ" ಎಂದು ಆಜ್ಞಾಪಿಸಿದರು.

ದೋ । ೨೭೩॥ ಆ ಸೇವಕರು ವಿಶೇಷ ವಿನಯದಿಂದ ಮೃದುವಚನಗಳನ್ನಾಡಿ ಉತ್ತಮ, ಮಧ್ಯಮ, ನೀಚ, ಲಘು ಸ್ತ್ರೀಪುರುಷರೆಲ್ಲರನ್ನೂ ಅವರವರ ಸ್ಥಿತಿಗನುಸಾರವಾದ ಸ್ಥಾನಗಳಲ್ಲಿ ಕುಳ್ಳಿರಿಸಿದರು. ಆ ಸಮಯದಲ್ಲಿ ಗುಣಸಾಗರರೂ ಚತುರರೂ ಧೀರರೂ ವೀರರೂ ಶ್ಯಾಮ–ಗೌರಾಂಗರೂ ಆದ ರಾಜಪುತ್ರರಿಬ್ಬರೂ ಅಲ್ಲಿಗೆ ಬಂದರು. ಅಂತಹ ಸುಂದರ ಪುರುಷರಾರೂ ಇರಲಿಲ್ಲ. ಆ ದೊಡ್ಡ ಸಭೆಯಲ್ಲಿ ಅವರಿಬ್ಬರೂ ನಕ್ಷತ್ರಗಳ ಮಧ್ಯದಲ್ಲಿ ಇಬ್ಬರು ಚಂದ್ರರಂತೆ ಕಾಣುತ್ತಿದ್ದರು. ಆ ಸಮಯದಲ್ಲಿ ಯಾರ ಭಾವನೆಯು (ಚಿತ್ತವೃತ್ತಿಯು) ಹೇಗಿದ್ದಿತೊ ಆ ಭಾವನೆಯಿಂದ ಅವರು ಶ್ರೀರಾಮಚಂದ್ರನನ್ನು ನೋಡುತ್ತಿದ್ದರು. ಮಹಾ ರಣಧೀರರಾದ ರಾಜರು ವೀರರಸವೇ ಮೂರ್ತಿರೂಪದಿಂದ ಶರೀರವನ್ನು ಧರಿಸಿ ಬಂದಿರುವುದೊ ಎಂದು ಭಾವಿಸಿದರು. ಕುಟಿಲರಾಜರು 'ಇದೆಂಥಾ ಭಯಂಕರವಾದ ಮೂರ್ತಿಗಳು ನಮ್ಮೆದುರಿಗೆ ಬಂದು ಕುಳಿತಿರುವರು' ಎಂದು ಭೀತಭಾವದಿಂದ ರಾಮಚಂದ್ರನ ಕಡೆಗೆ ನೋಡಿದರು. ಮೋಸದಿಂದ ರಾಜ

ವೇಷವನ್ನು ಧರಿಸಿ ಬಂದಿದ್ದ ರಾಕ್ಷಸರಿಗೆ ಪ್ರಭುವು ಪ್ರತ್ಯಕ್ಷ ಕಾಲಸ್ವರೂಪನಾಗಿ ಕಂಡನು. (ಇದು ರೌದ್ರರಸ) ನಗರನಿವಾಸಿಗಳು ಮನುಷ್ಯರಲ್ಲಿ ಭೂಷಣಪ್ರಾಯರೂ ನೇತ್ರಾನಂದಕರೂ ಆದ ಅವರನ್ನು ನೋಡಿ ಸಂತೋಷಪಟ್ಟರು. (ಇಲ್ಲಿ ಶೃಂಗಾರ ರಸವು ಅಂಕುರಿಸಿತು.)

ದೋ ॥ ೨೭೪॥ ಸ್ತ್ರೀಯರ ಅಂತಃಕರಣದಲ್ಲಿ ಪ್ರಸನ್ನತೆಯುಂಟಾಗಿ, ಅವರವರು ಅವರವರ ಮನಸ್ಸಿಗೆ ತೋರಿದಂತೆ "ಇದೇನು! ಶೃಂಗಾರರಸವೇ ಪ್ರತ್ಯಕ್ಷವಾಗಿ ಅತ್ಯಂತ ಸುಂದರವಾದ ಶರೀರಗಳನ್ನು ಧರಿಸಿ ಬಂದಿರುವುದೊ" ಎಂದುಕೊಂಡರು. ವಿದ್ವಾಂಸರಿಗೆ ಪ್ರಭುವಿನ ವಿರಾಟ್‌ಸ್ವರೂಪವು ಎಂದರೆ ಸಾವಿರಾರು ಮುಖ, ಕೈ, ಕಾಲು, ನೇತ್ರ, ಮಸ್ತಕಾದಿಗಳು * ಗೋಚರವಾದವು. (ಇದು ಬೀಭತ್ಸರಸವಾಯಿತು) ಜನಕರಾಜ ವಂಶದ ಜನರಿಗೆ ಅವರಿಬ್ಬರೂ ಒಡಹುಟ್ಟಿದ ಪ್ರಿಯಬಂಧುಗಳಂತೆ ಕಾಣಿಸಿದರು. ಜನಕರಾಜ ಮತ್ತು ಅವನ ರಾಣಿಯು (ಮಾತಾಪಿತೃಗಳು ಚಿಕ್ಕ ಮಕ್ಕಳನ್ನು ಕಾಣುವಂತೆ) ಅವರನ್ನು ಪುತ್ರವಾತ್ಸಲ್ಯದಿಂದ ನೋಡಿದರು (ಇದು ಕರುಣಾರಸವಾಯಿತು ) ಯೋಗಿಗಳಿಗೆ ಪರಮ ತತ್ವಸ್ವರೂಪವು ಭಾಸವಾಯಿತು. ಶುದ್ಧ ಶಾಂತರಸವೇ ಮೂರ್ತಿಮಂತವಾಗಿ ಪ್ರಕಾಶಿಸುತ್ತಿರುವುದೆಂದು ತಿಳಿದರು. ವಿಷ್ಣು ಭಕ್ತರಿಗೆ ಅವರಿಬ್ಬರೂ ಸರ್ವಸುಖದಾಯಕರಾದ ಇಷ್ಟದೇವತೆಗಳಂತೆ ಕಾಣಿಸಿದರು. (ಇಲ್ಲಿ ಅದ್ಭುತರಸವಾಯಿತು) ಸೀತೆಯು ಯಾವ ಭಾವದಿಂದ ರಾಮಚಂದ್ರನನ್ನು ನೋಡಿದಳೊ ಆ ಸ್ನೇಹವನ್ನು ವರ್ಣಿಸಲಾಗುವುದಿಲ್ಲ. (ಯಾರು ಸೀತೆಯಾಗಿ ರಾಮಚಂದ್ರನನ್ನು ನೋಡುವರೊ ಅವರಿಗೆ ಅದು ಅನುಭವವಾಗುವುದು!--ಇಲ್ಲಿ ಹಾಸ್ಯರಸವಾಯಿತು. ಈ ರೀತಿಯಾಗಿ ನವರಸಗಳನ್ನು ತೋರಿಸಿರುವರು.) ಸೀತೆಯೂ ಹೃದಯದಲ್ಲಿ ಆ ಆನಂದವನ್ನು ಅನುಭವಿಸುತ್ತಿರುವಳು. ಆದರೆ ಅದನ್ನು ಬಣ್ಣಿಸಲಾರಳು. (ಅನುಭವಿಸುವವರೇ ಅದನ್ನು ಬಣ್ಣಿಸಲಾಗದಿರುವಾಗ) ಕವಿಯು ಹೇಗೆ ವರ್ಣಿಸಬಲ್ಲನು! ಯಾರ್ಯಾರಿಗೆ ಯಾವ್ಯಾವ ಭಾವನೆಗಳಿದ್ದವೊ ಅಂತೆಯೆ ಕೋಶಲಾಧೀಶನಾದ ರಾಮಚಂದ್ರನನ್ನು ಅವರವರು ಕಂಡರು.†

---

* ಋಗ್ಯಜುಸ್ಸಾಮವೇದತ್ರಯಗಳಲ್ಲಿ ಇದೇ ಸ್ವರೂಪವು "ಸಹಸ್ರ ಶೀರ್ಷಾ ಪುರುಷಃ ಸಹಸ್ರಾಕ್ಷಃ ಸಹಸ್ರಪಾತ್" ಇತ್ಯಾದಿಗಳಿಂದ ಪ್ರತಿಪಾದಿತವಾಗಿದೆ.

† ಮಲ್ಲಾನಾಮಶನಿರ್ನೃಣಾಂ ನರವರಃ ಸ್ತ್ರೀಣಾಂಸ್ಮರೋ ಮೂರ್ತಿಮಾನ್ ಗೋಪಾನಾಂ ಸ್ವಜನೋಽಸತಾಂ ಕ್ಷಿತಿಭುಜಾಂ ಶಾಸ್ತಾ ಸ್ವಪಿತ್ರೋಃ ಶಿಶುಃ। ಮೃತ್ಯುರ್ಭೋಜಪತೇರ್ವಿರಾಡ ವಿದುಷಾಂ ತತ್ವಂಪರಂ ಯೋಗಿನಾಂ ವೃಷ್ಣೀನಾಂ ಪರದೇವತೇತಿ ವಿದಿತೋರಂಗಂ ಗತಸ್ಸಾಗ್ರಜಃ॥ ಮತ್ತೆ ಭಗವದ್ಗೀತೆಯಲ್ಲಿ—'ಯೇಯಥಾ ಮಾಂ ಪ್ರಪದ್ಯಂತೆ ತಾಂ ಸ್ತಥೈವ ಭಜಾಮ್ಯಹಮ್' ಎಂದು ಹೇಳಿದೆ.

ದೋ ॥ ೨೭೫–೨೬ ॥ ಆ ರಾಜ ಸಭೆಯಲ್ಲಿ ವಿಶ್ವವಿಲೋಚನಚೋರರೂ ಕೋಶಲಾಧೀಶ ಪುತ್ರರೂ, ಯುಗಲ ಕಿಶೋರರೂ ಆದ ಶ್ಯಾಮಗೌರಾಂಗ ಸುಂದರರಿಬ್ಬರು ಪ್ರಕಾಶಮಾನರಾಗಿರುವರು. ಮೂರ್ತಿಗಳಿಬ್ಬರೂ ಸ್ವಾಭಾವಿಕವಾಗಿ ಮನೋಹರವಾಗಿರುವರು. ಅವರಿಗೆ ಉಪಮೆಯನ್ನು ಕೊಡಲು ಕೋಟಿ ಕಾಮ ದೇವತೆಗಳೂ ಸಮಾನವಾಗಲಾರರು. ಶರಚ್ಚಂದ್ರನನ್ನು ನಿಂದಿಸುವ ಅವರ ಮುಖಮಂಡಲ, ನೋಡುವವರಿಗೆ ಸುಖವನ್ನೀಯುವ ನೀರಜನಯನಗಳು, ಕಾಮಧೇವನ ಮದವನ್ನು ಮರ್ದಿಸುವ ಕಟಾಕ್ಷ, ದರ್ಶಕರ ಮನಸ್ಸಿಗೆ ಪ್ರಿಯ ವಾಗಿರುವ ಅವರನ್ನು ವಾಣಿಯಿಂದ ವರ್ಣಿಸಲಸದಳವು. ಸುಂದರವಾದ ಕುತ್ತಿಗೆ, ಕಿವಿಗಳಲ್ಲಿ ಥಳಥಳಿಸುತ್ತಿರುವ ಕುಂಡಲಗಳು, (ತಿದ್ದಿದಂತಿರುವ) ಚಿಬುಕ, ತುಟಿ ಗಳು, ಮೃದುವಾದ ಮಾತು; ಕುಮುದಿನಿ ಮಿತ್ರನನ್ನು (ಚಂದ್ರನನ್ನು) ನಿಂದಿಸುವ ನಸುನಗೆ, (ಬಿಲ್ಲಿನಂತೆ) ಬಾಗಿದ ಹುಬ್ಬು, ಮುದ್ದಾದ ಮೂಗು, ವಿಶಾಲವಾದ ಲಲಾಟದಲ್ಲಿ ಮನೋಹರವಾಗಿ ಶೋಭಿಸುತ್ತಿರುವ ತಿಲಕ; ಭ್ರಮರ ಶ್ರೇಣಿ ಯನ್ನು ನಾಚಿಸುವ (ಕಪ್ಪಾದ) ಕೂದಲು, ಮಸ್ತಕದಲ್ಲಿ ಹಳದಿಯ ಕಸೂತಿಯ ಕುಲಾಯಿ, ತ್ರಿಭುವನ ಶೋಭೆಯ ಮೇರೆಯಂತೆ ಶಂಖದಂತೆ ಮೂರು ರೇಖೆ ಗಳಿಂದೊಪ್ಪುವ ಗಜಮುಕ್ತಾವಳಿಗಳುಳ್ಳ ಕಂಠ, ತುಳಸೀಮಾಲೆಯಿಂದೊ ಪ್ಪುವ ವಕ್ಷಸ್ಥಲ; ಎತ್ತರವಾಗಿ ಭಾರವನ್ನೆತ್ತುವುದರಲ್ಲಿ ಬಲವಾಗಿರುವ ವೃಷಭ ದಂತೆ ಸ್ಕಂಧ, ಸಿಂಹದಂತೆ (ಹಿಂದೆ ಮುಂದೆ ನೋಡುತ್ತ ನಡೆಯುವ) ನಡೆ, ಬಲನಿಧಿಯಂತಿರುವ ಭುಜ ಕಟಿಯಲ್ಲಿ ಸುತ್ತಿರುವ ಪೀತವಸ್ತ್ರ, ಮೇಲೆ ಧರಿಸಿರುವ ಪೀತಾಂಬರ. ಕೈಯಲ್ಲಿ ಬಾಣಗಳು, ಎಡಭುಜದ ಮೇಲೆ ಧನಸ್ಸು, ಕುತ್ತಿಗೆ ಯಲ್ಲಿ ಶೋಭಿಸುವ ಮಂಗಳಕರವಾದ ಪೀತವರ್ಣದ ಯಜ್ಞೋಪವೀತ--ಒಟ್ಟಿ ನಲ್ಲಿ ಅವರಿಬ್ಬರ ಶರೀರಗಳೂ ನಖಶಿಖಾಂತದವರೆಗೆ ಸುಂದರವಾದ ಮಹಜ್ಯೋತಿ ಯಿಂದ ಆವರಿಸಲ್ಪಟ್ಟಿವೆ. ಎಲ್ಲರೂ ನೆಟ್ಟ ನೋಟದಿಂದ ಅವರನ್ನು ದರ್ಶಿಸಿ ಸುಖವನ್ನು ಹೊಂದಿದರು ಜನಕರಾಜನೂ ಪ್ರಸನ್ನನಾಗಿ, ವಿಶ್ವಾಮಿತ್ರನ ಅಡಿ ಗಳಿಗೆರಗಿ, ತನ್ನ ಕಥೆಯನ್ನೆಲ್ಲ * ಅರುಹಿ, (ರಾಜಕುಮಾರರೊಂದಿಗೆ ಮುನಿಯನ್ನು

* ಆ ಕಥೆಯಾವುದೆಂದರೆ.—ಮುಂಚೆ ಈ ಧನುಸ್ಸು ಅರಮನೆಯಿಂದ ಬಹು ದೂರದಲ್ಲಿದ್ದಿತು. ರಾಜನು ಅದರ ಪೂಜೆಗಾಗಿ ನಿತ್ಯವೂ ಅಲ್ಲಿಗೆ ಹೋಗುತ್ತಿದ್ದನು. ಒಂದುದಿನ ಸೀತೆಯೂ ಅವನ ಜತೆಯಲ್ಲಿ ಹೋದಳು. ಆಗವಳು ಇದರ ಪೂಜೆಗಾಗಿ ಜನಕನೂ ನಿತ್ಯವೂ ಇಷ್ಟುದೂರವೇಕೆ ಬರಬೇಕೆಂದಾಲೋಚಿಸಿ, ಅದನ್ನೆತ್ತಿ ಮನೆಗೆ ತಂದಳು.—ಮತ್ತೊಂದು ಕಲ್ಪದ ಕತೆಯಿಂತಿರುವುದು.—ಧನುಸ್ಸಿಟ್ಟಿದ್ದ ಸ್ಥಳವನ್ನು ನಿತ್ಯವೂ ಸೀತೆಯ ಮಾತೆಯು ಸಾರಿಸುತ್ತಿದ್ದಳು. ಅವಳು ಧನುಸ್ಸಿನ ಸುತ್ತಲೂ ಸಾರಿ ಸುತ್ತಿದ್ದಳು. ಒಂದುದಿನ ಸೀತೆಯೆ ಅದನ್ನು ಸಾರಿಸಬೇಕಾಗಿಬರಲು, ಸೀತೆಯು ಅದನ್ನು ಒಂದು ಬದಿಗೆತ್ತಿಟ್ಟು ಸಾರಿಸಿದಳು. ಅದನ್ನು ನೋಡಿ ಜನಕನಿಗೆ ಆಶ್ಚರ್ಯ

ಕರೆದುಕೊಂಡು ಹೋಗಿ) ಅವರಿಗೆ ರಂಗಸ್ಥಳವನ್ನು ತೋರಿಸಿದನು ಶ್ರೇಷ್ಠರಾದು ರಾಜಕುವರರಿಬ್ಬರು ಹೋದೆಡೆಯಲ್ಲೆಲ್ಲ ಜನರು ಚಕಿತರಾಗಿ ಅವರನ್ನೇ ನೋಡು ತ್ತಿರುವರು. ಅವರವರು ಅವರವರ ಭಾವನೆಯಂತೆ ರಾಮಚಂದ್ರನ ರೂಪವನ್ನು ನೋಡಿದರೇವಿನಾ, ಮುಖ್ಯವಾದ ಮರ್ಮವನ್ನೆ (ಎಂದರೆ ರಾಮಚಂದ್ರನೂ ಸೀತೆ ಯೂ ಹರಿ ಮತ್ತು ಲಕ್ಷ್ಮಿಯರ ಅವತಾರವೆಂಬುದನ್ನು) ತಿಳಿಯಲಿಲ್ಲ. ವಿಶ್ವಾ ಮಿತ್ರ ಮುನಿಯು ನಿನ್ನ ಏರ್ಪಾಡುಗಳು ಚೆನ್ನಾಗಿವೆ ಎಂದು ಹೇಳಿದುದನ್ನು ಕೇಳಿ ಜನಕರಾಜನು (ಇದರ ಪರಿಣಾಮವು ಒಳ್ಳೆಯದಾಗುವುದೆಂದರಿತು) ಮುದಿತ ಮನದಿಂದ ಮಹದಾನಂದವನ್ನು ಹೊಂದಿದನು

ದೋ ॥ ೨೭೭ ॥ (ಆ ಸಭೆಯಲ್ಲಿ) ಒಂದು ಮಂಚವು ಎಲ್ಲವುಗಳಿಗಿಂತಲೂ ಎತ್ತರವಾಗಿಯೂ ಅಗಲವಾಗಿಯೂ ಇದ್ದಿತು ಜನಕ ಮಹಾರಾಯನು ವಿಶ್ವಾ ಮಿತ್ರ ಮುನಿಯನ್ನೂ ಸೋದರರಿಬ್ಬರನ್ನೂ ಅದರ ಮೇಲೆ ಕುಳ್ಳಿರಿಸಿದನು. ಚಂದ್ರನುದಯಿಸಿದ ಕೂಡಲೆ ತಾರಾಗಣಗಳು ಕಳೆಗುಂದುವಂತೆ, ಶ್ರೀರಾಮ ಚಂದ್ರನನ್ನು ನೋಡಿ ರಾಜರೆಲ್ಲರೂ ಮ್ಲಾನವದನರಾದರು. ರಾಮಚಂದ್ರನು ಧನುರ್ಭಂಗವನ್ನು ಮಾಡುವನು, ಇದರಲ್ಲಿ ಸಂದೇಹವಿಲ್ಲ ಎಂದು ಎಲ್ಲರೂ ಹೇಳಿ ಕೊಂಡರು. ಆ ದೊಡ್ಡ ಧನುಸ್ಸನ್ನು ರಾಮಚಂದ್ರನು ಭಂಗಮಾಡದಿದ್ದರೂ ಸೀತೆಯು ರಾಮಚಂದ್ರನಿಗೇ ಜಯಮಾಲೆಯನ್ನು ಹಾಕುವಳು ಬಂಧು ಗಳೇ, ಈ ಬಗೆಯಾಗಿ ಆಲೋಚಿಸಿ, ಯಶಸ್ಸು, ಪ್ರತಾಪ, ಬಲ ಮತ್ತು ತೇಜ ಸ್ಸನ್ನು ಕಳೆದುಕೊಂಡು ರಾಜರೆಲ್ಲರೂ ಮನೆಯದಾರಿ ಹಿಡಿಯಲಿ ಎಂದು ಕೆಲವರು

---

ವಾಗಿ, ಈ ಧನುಸ್ಸನ್ನೆತ್ತಿ ಹೆದೆಯೇರಿಸಬಲ್ಲವನಿಗೇ ಸೀತೆಯನ್ನು ಕೊಟ್ಟು ಮದುವೆ ಮಾಡುವೆನು ಎಂದು ಅವನು ನಿಶ್ಚಯಿಸಿದನು. ಇದು ದಂತ ಕತೆಯಾಗಿರುವುದು. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಹೇಳಿರುವುದೇನೆಂದರೆ—ನಿಮಿರಾಜನಿಗೆ ದೇವರಾತ ನೆಂಬ ಜ್ಯೇಷ್ಠಪುತ್ರನಿದ್ದನು. ದೇವತೆಗಳು ಅವನಿಗೆ ಈ ಧನುಸ್ಸನ್ನು ಕೊಟ್ಟರು. ಪೂರ್ವಕಾಲದಲ್ಲಿ ಮಹಾದೇವನು ದಕ್ಷಯಜ್ಞವನ್ನು ವಿಧ್ವಂಸಗೊಳಿಸಿ ದೇವತೆಗಳನ್ನು ಕುರಿತು "ನೀವು ನನಗೆ ಯಜ್ಞಭಾಗವನ್ನರ್ಪಿಸದಿದ್ದುದರಿಂದ ಈ ಧನುಸ್ಸಿನಿಂದ ನಿಮ್ಮ ಶಿರಸ್ಸನ್ನು ಛೇದಿಸುವೆನು" ಎಂದು ಹೇಳಿದನು. ಆಗ ದೇವತೆಗಳು ಅವನನ್ನು ಸ್ತುತಿಸ ಲಾರಂಭಿಸಿದರು. ಆದರಿಂದ ಶಂಕರನು ಶಾಂತನಾಗಿ ತನ್ನ ಧನುಸ್ಸನ್ನು ದೇವತೆಗಳಿಗೆ ಕೊಟ್ಟನು. ಅದುವೇ ಈ ಧನಸ್ಸು ಜನಕರಾಜನು ಯಜ್ಞಾರ್ಥವಾಗಿ ಭೂಮಿಯನ್ನು ಅಗೆಯುತ್ತಿರುವಾಗ ಸೀತೆಯು ದೊರಕಿದಳು ಅವಳು ಯೋನಿದ್ವಾರದಿಂದ ಜನ್ಮ ತಾಳಲಿಲ್ಲವಾದುದರಿಂದ ಜನಕನು ಅವಳಿಗೆ "ವೀರ್ಯಶುಲ್ಕಾ" ಎಂದು ನಾಮಕರಣ ಮಾಡಿದನು.. ಅವಳು ದೊಡ್ಡವಳಾದಮೇಲೆ ಅವಳಾ ಬಾಹುಬಲವನ್ನು ನೋಡಿ, ಮೇಲೆ ಹೇಳಿದ ಪ್ರತಿಜ್ಞೆಯನ್ನು ಮಾಡಿದನು.—ಈ ಬಗೆಯಾಗಿ ಕಲ್ಪ ಕಲ್ಪದಲ್ಲಿಯೂ ರಾಮಾವತಾರ ಕಾರಣಗಳು ಬೇರೆ ಬೇರೆಯಾಗಿರುವಂತೆ ಧನುಸ್ಸಿನ ಪ್ರತಿಜ್ಞೆಯೂ ಪ್ರತ್ಯೇಕವಾಗಿರುವುದು.

ಹೇಳಿದರು. ಈ ವಾಣಿಯನ್ನು ಕೇಳಿ ಮೂಢರೂ ಮಂದಮತಿಗಳೂ ಅಹಂಕಾರಿಗಳೂ ಆದ ರಾಜರೆಲ್ಲರೂ (ಓಹೊ! ಎಂದು) ಹಾಸ್ಯಮಾಡಿದರು. ಮತ್ತೆ ಹೇಳಿದರೇನಂದರೆ —ಧನುರ್ಭಂಗವನ್ನು ಮಾಡಿದನಂತರವೂ ವಿವಾಹವಾಗುವುದು ಕಠಿಣವಾಗಿದೆ. ಅಂಥಾದ್ದರಲ್ಲಿ ಭಂಗಮಾಡದೆ ಹುಡುಗಿಯನ್ನಾರು ಮದುವೆಮಾಡಿಕೊಳ್ಳಬಲ್ಲರು. ಕಾಲಪುರುಷನು ಬಂದರೂ ಚಿಂತೆಯಿಲ್ಲ. ಸೀತೆಗೋಸ್ಕರ ಯುದ್ಧವಾಗುವುದಾದರೂ ನಾವೇ ಅದರಲ್ಲಿ ಗೆಲ್ಲುವೆವು.–ಈ (ಮೂಢ) ವಚನಗಳನ್ನು ಕೇಳಿ ಧರ್ಮಶೀಲರೂ ಭಗವದ್ಭಕ್ತರೂ ಚತುರರೂ ಆದ ರಾಜರು ನಸುನಕ್ಕು (ಇಂತೆಂದರು)––

ಸೋ ॥ ೨೬೮ ॥ "ಶ್ರೀರಾಮಚಂದ್ರನು ರಾಜರೆಲ್ಲರ ಗರ್ವಭಂಗಮಾಡಿ ಸೀತೆಯನ್ನು ಮದುವೆಯಾಗುವನು. ಯುದ್ಧದಲ್ಲಿಯಾದರೂ ದಶರಥನ ರಣಧೀರ ಪುತ್ರರನ್ನು ಜಯಿಸುವವರಾರು? ವ್ಯರ್ಥವಾಗಿ ಕೂಗಿ ಗಂಟಲೊಣಗಿಸಿಕೊಂಡು ಸಾಯಬೇಡಿರಿ. ಮನಸ್ಸಿನಲ್ಲಿ ಮಂಡಿಗೆಯನ್ನು ಕಲ್ಪಿಸಿಕೊಂಡು ಹಸಿಯುವಿರೇಕೆ? ನಾವು ಹೇಳಿದ ಮಾತುಗಳು ಪವಿತ್ರವೆಂದು ಭಾವಿಸಿ ಸೀತೆಯನ್ನು ಜಗನ್ಮಾತೆಯೆಂದು ತಿಳಿಯಿರಿ ರಘುಪತಿಯು ಜಗತ್ಪತಿಯೆಂದು ಕಣ್ಮುಚ್ಚಿ ವಿಚಾರಮಾಡಿರಿ. ಈ ನೋದರರಿಬ್ಬರೂ ಸುಂದರರೂ ಸಕಲಜನ ಸುಖದಾಯಕರೂ ಸರ್ವಗುಣನಿಧಿಗಳೂ ಶಂಭುಹೃದಯವಾಸಿಗಳೂ ಆಗಿರುವರು. ಸಮೀಪದಲ್ಲಿರುವ ಅಮೃತಸಮುದ್ರವನ್ನು ಬಿಟ್ಟು ನೀರ್ಗುದುರೆಯನ್ನು ನೋಡಿ ಓಡಿ ಓಡಿ ಸಾಯುವಿರೇಕೆ? ಆಗಲಿ, ಯಾರಿಗೆ ಯಾವುದು ಒಳ್ಳೆಯದಾಗಿ ತೋರುವುದೋ ಹಾಗೆ ಭಾವಿಸಲಿ. ನಾವಂತೂ ಇಂದು ನಮ್ಮ ಜನ್ಮವನ್ನು ಸಾರ್ಥಕಗೊಳಿಸಿದೆವು." ––ಹೀಗೆಂದು ಹೇಳುತ್ತ ಒಳ್ಳೆಯ ರಾಜರು ಪ್ರೇಮಮಗ್ನರಾಗಿ ರಾಮಚಂದ್ರನ ಅನುಪಮ ಸೌಂದರ್ಯವನ್ನು ನೋಡಲಾರಂಭಿಸಿದರು. ಆಕಾಶದಲ್ಲಿ ದೇವತೆಗಳು ವಿಮಾನಗಳಲ್ಲಿ ಕುಳಿತು ಹೂಮಳೆಗರೆಯುತ್ತ, ಮಧುರವಾದ ಗೀತೆಗಳನ್ನು ಹಾಡುತ್ತಿದ್ದರು.

ದೋ ॥ ೨೬೯ ॥ ಜನಕರಾಯನು ಸುಮುಹೂರ್ತದಲ್ಲಿ ಸೀತೆಯನ್ನು ಕರೆಕಳುಹಿಸಿದನು. ಚತುರರೂ ಸುಂದರಿಯರೂ ಆದ ದಾಸಿಯರು ಆದರದಿಂದ ಅವಳನ್ನು ಕರೆದುಕೊಂಡು ಬರಲು ಹೊರಟರು. ಸೀತಾದೇವಿಯ ಶೋಭೆಯನ್ನು ವರ್ಣಿಸುವುದು ಹೇಗೆ? ಜಗನ್ಮಾತೆಯೂ ರೂಪರಾಶಿಯೂ ಗುಣನಿಧಿಯೂ ಆದ ಸೀತೆಯೊಂದಿಗೆ ಯಾವ ವಸ್ತುವನ್ನು ಹೋಲಿಸುವುದಕ್ಕೂ ಸಂಕೋಚವಾಗುವುದು. ಏಕೆಂದರೆ ಉಪಮೆಗಳನ್ನೆಲ್ಲ ಈ ಜಗತ್ತಿನಲ್ಲಿರುವ ಸ್ತ್ರೀಯರನ್ನು ವರ್ಣಿಸಲು ಉಪಯೋಗಿಸಿರುವರು. ಸೀತೆಯ ವರ್ಣನೆಯನ್ನು ಮಾಡುವಾಗ ಮಾನವ ಸ್ತ್ರೀಯರ ಉಪಮೆಯನ್ನು ಕೊಟ್ಟರೆ ಕುಕವಿಯೆಂಬ ಅಪಯಶಸ್ಸು ಯಾರಿಗೆ

ಬಣ್ಣಿವುದು ? ಈ ಜಗತ್ತಿನ ಸ್ತ್ರೀಯರೊಂದಿಗೆ ಸೀತೆಗೆ ಉಪಮೆಯಾಗಿ ವರ್ಣಿಸಲು ಅಂತಹ ಕಮನೀಯ ಕಮಲಾಕ್ಷಿಯು ಎಲ್ಲಿರುವಳು ? ಸರಸ್ವತಿಯ ಉಪಮೆಯನ್ನು ಕೊಡೋಣವೆಂದರೆ ಅವಳು ಮುಖರಳು (ಹರಟೆಮಲ್ಲಿಯು), ಭವಾನಿಯ ಉಪಮೆಯನ್ನು ಕೊಡೋಣವೆಂದರೆ ಅವಳು ಅರ್ಧಾಂಗಿನಿ, ರತಿಯ ಉಪಮೆಯನ್ನು ಕೊಡೋಣ ವೆಂದರೆ ಅವಳ ಪತಿಯು ಅನಂಗನಾದುದರಿಂದ ದುಃಖಿತೆಯಾಗಿರುವಳು. ಲಕ್ಷ್ಮಿಯ ಉಪಮೆಕೊಡೋಣವೆಂದರೆ ವಿಷವೂ ವಾರುಣಿಯೂ ( ಮದಿರೆ ) ಆಕೆಯ ಸೋದರರಾಗಿರುವರು --(ಸಮುದ್ರದಲ್ಲಿ ವಿಷ ಮತ್ತು ವಾರುಣಿಯೊಂದಿಗೆ ಹುಟ್ಟಿದ) ರಮೆಯೊಂದಿಗೆ ಜಾನಕಿಯನ್ನು ಹೋಲಿಸಲಾಗದು. ಅವಳೂ ಸೌಂದರ್ಯವೇ ಹಾಲ್ಗಡಲು, ಪರಮ ದಿವ್ಯ ರೂಪವೇ ಕೂರ್ಮ, ಶೋಭೆಯೇ ರಜ್ಜು (ಹಗ್ಗ) ಅಲಂಕಾರವೇ ಮಂದರಗಿರಿ, ಪ್ರತ್ಯಕ್ಷ ಕಾಮದೇವನೇ ತನ್ನ ಹಸ್ತಕಮಲದಿಂದ ಅದನ್ನು ಮಥಿಸುವನು.

ದೋ ॥ ೨೪೦ ॥ ಇಷ್ಟು ವಿಧವಾದ ಸಾಧನಗಳಿಂದ ಸೌಂದರ್ಯ ಮತ್ತು ಸುಖಗಳ ಮೂಲಕಾರಣಳಾದ ಒಬ್ಬ ಲಕ್ಷ್ಮಿಯು ಹುಟ್ಟುವಳು ಆದಾಗ್ಗೂ ಸೀತೆಯನ್ನು ಅವಳೊಂದಿಗೆ ಹೋಲಿಸುವಾಗ ಕವಿಯು ಸಂಕೋಚಪಡುವನು. ಸಭೆಯ ನೀತಿರೀತಿಯನ್ನರಿತ ಸಖಿಯರು ಮನೋಹರವಾದ ವಾಣಿಯಿಂದ ಗೀತೆಗಳನ್ನು ಹಾಡುತ್ತ (ಸೀತೆಯನ್ನು) ಜತೆಯಲ್ಲಿ ಕರೆದುಕೊಂಡು ಹೊರಟರು ಜಗಜ್ಜನನಿಯ ಅತುಲವೂ ಅಪಾರವೂ ಆದ ಸೌಂದರ್ಯದಿಂದ (ಆಕೆಯ ಸುತ್ತಮುತ್ತಲಿರುವ) ಸಖಿಯರು ಕೂಡ ಶೋಭಿಸಲಾರಂಭಿಸಿದರು. ಸೀತೆಯು ಧರಿಸಿದ್ದ ಆಭರಣಗಳೆಲ್ಲವೂ ಅವುಗಳಿಗೆ ಉಚಿತವಾದ ಸ್ಥಳದಲ್ಲಿ ಶೋಭಿಸುತ್ತಿದ್ದವು. ಸೀತೆಯು ಸಭಾಮಂಟಪದಲ್ಲಡಿಯಿಟ್ಟಕೂಡಲೆ ಅವಳ ರೂಪವನ್ನು ನೋಡಿ ಅಲ್ಲಿದ್ದ ಸ್ತ್ರೀ ಪುರುಷರೆಲ್ಲರೂ ಮೋಹಿತರಾದರು. ದೇವತೆಗಳು ನಗಾರಿಯನ್ನು ಬಾರಿಸಿ ಪುಷ್ಪವೃಷ್ಟಿ ಗೈದರು ಅಪ್ಸರೆಯರು ಗಾನವನ್ನು ಹಾಡಿದರು. ಸೀತೆಯ ಹಸ್ತಕಮಲಗಳಲ್ಲಿ ಜಯಮಾಲೆಯು ಶೋಭಿಸುತ್ತಿರುವುದು. ಚಂಚಲ ಚಿತ್ತದಿಂದವಳು ಅತ್ತಿತ್ತ ಎಲ್ಲ ರಾಜರ ಕಡೆಗೂ ನೋಡಿದಳು ರಾಜರೆಲ್ಲರೂ ಯಾವನ್ನ ಮೋಹವಶರಾಗಿದ್ದರೋ ಆ ರಾಮಚಂದ್ರನನ್ನು ನೋಡಲು ಚಕಿತಮನಳಾದ ಸೀತೆಯು ಆತುರಗೊಂಡಿದ್ದಳು ವಿಶ್ವಾಮಿತ್ರಮುನಿಯ ಬಳಿ ಕುಳಿತಿರುವ ಭ್ರಾತೃಗಳಿಬ್ಬರನ್ನೂ ಅವಳು ನೋಡಿದಕೂಡಲೆ, ಅವಳ ಕಣ್ಣುಗಳಲ್ಲಿ ಕಾಂತಿಯು ಮೂಡಿತು. ಅವಳು ( ಎಷ್ಟೋ ವರ್ಷಗಳಿಂದ ಹುಡುಕುತ್ತಿದ್ದ ) ನಿಧಿಯನ್ನು ಪಡೆದಳು.

ದೋ ॥ ೨೪೧ ॥ ಸೀತೆಯು ಆ ದೊಡ್ಡ ಸಭೆಯಲ್ಲಿದ್ದ ಗುರುಹಿರಿಯರನ್ನು ನೋಡಿ ಲಜ್ಜೆಯಿಂದ ಸಂಕೋಚಪಟ್ಟು ಹೃದಯದಲ್ಲಿ ರಘುವೀರ ಮೂರ್ತಿ

ಯನ್ನು ಧ್ಯಾನಿಸುತ್ತ ಸಖಿಯರ ಕಡೆಗೆ (ತಾನೇನು ಮಾಡಬೇಕೆಂದು ಕೇಳುವವರಂತೆ) ಸಖಿಯರ ಕಡೆಗೆ ನೋಡಲಾರಂಭಿಸಿದಳು. ಸೀತಾರಾಮರ ಕಾಂತಿಯನ್ನು ಕಂಡು ನರನಾರಿಯರೆಲ್ಲರೂ ನೆಟ್ಟದೃಷ್ಟಿಯುಳ್ಳವರಾದರು. ಎಲ್ಲರ ಮನಸ್ಸಿನಲ್ಲಿಯೂ ಶುಭಾಲೋಚನೆಯುಂಟಾಗಿದೆ. ಆದರೆ ಅದನ್ನು ಹೇಳಲು ಸಂಕೋಚಪಡುತ್ತ ಮನಸ್ಸಿನಲ್ಲಿಯೆ ವಿಧಾತನನ್ನು ಪ್ರಾರ್ಥಿಸಲಾರಂಭಿಸಿದರೆಂತೆನೆ — "ವಿಧಾತನೆ! ಜನಕರಾಯನ ಮೂರ್ಖತ್ವವನ್ನು ನಿವಾರಿಸಿ ನಮ್ಮಂತಹ ಸದ್ಬುದ್ಧಿಯನ್ನು ಅವನಿಗೆ ಅನುಗ್ರಹಿಸು. ಅದರಿಂದ ನರನಾಥನು ಹಿಂದು ಮುಂದಾಲೋಚಿಸದೇ ತನ್ನ ಪಣವನ್ನು ಬಿಟ್ಟು ಸೀತೆಯನ್ನು ರಾಮನಿಗೇ ಕೊಟ್ಟು ವಿವಾಹ ಬೆಳೆಸುವಂತಾಗಲಿ. ಇದೇ ಸದ್ಭಾವನೆಯೆಂದು ಜಗತ್ತೇ ಹೇಳುವುದು. ಇದುವೆ ಎಲ್ಲರ ಮನಸ್ಸಿಗೊಪ್ಪುವುದು. ಹಠಹಿಡಿದವನು ಕೊನೆಗೆ ಪರಿತಪಿಸಬೇಕಾಗುವುದು. ಆ ಶ್ಯಾಮಸುಂದರನೇ ಜಾನಕಿಗೆ ಯೋಗ್ಯನಾದ ವರನು."— ಈ ರೀತಿಯಾದ ಉತ್ಸಾಹದಲ್ಲಿ ಜನರೆಲ್ಲರೂ ಮಗ್ನರಾಗಿರುವಾಗ ಜನಕರಾಯನು ವಂದೀ (ಭಟ-ಚಾರಣರಾದಿ) ಜನರನ್ನು ಕರಯಿಸಿದನು. ಅವರು ಬಿರುದಾವಳಿಗಳನ್ನು ಹೇಳುತ್ತ ಬಂದರು. ರಾಜನು ಅವರನ್ನು ಕುರಿತು "ನೀವು ಹೋಗಿ ನನ್ನ ಪಣವನ್ನು ಸಾರಿರಿ" ಎಂದನು. ಕೂಡಲೆ ಅವರು ವಿಶೇಷ ಹರುಷದಿಂದ ಹೊರಟರು.

ದೋ ॥ ೨೪೯ ॥ ಆ ಭಟರು ಶ್ರೇಷ್ಠ ವಚನಗಳಿಂದ ಹೀಗೆ ಸಾರಿದರು — "ರಾಜರುಗಳಿರಾ! ನಾವು ಕೈಯೆತ್ತಿ (ವಿದೇಹಿಯೆನಿಸಿದ) ಜನಕಮಹಾರಾಜನ ಪಣವನ್ನು ಸಾರುವೆವು, ಕೇಳಿರಿ. ರಾಜರ ಭುಜಬಲವೇ ಚಂದ್ರ, ಶಿವಧನುಸ್ಸೇ ರಾಹು, ಇದು ಬಹು ಭಾರವಾದುದು ಮತ್ತು ಕಠೋರವಾದುದೆಂದು ಎಲ್ಲರೂ ಬಲ್ಲರು. ರಾವಣ ಬಾಣಾಸುರಾದಿ ಮಹಾಯೋಧರು ಈ ಧನುಸ್ಸನ್ನು ನೋಡಿ ಹಿಂದಿರುಗಿರುವರು. ಈ ತ್ರಿಪುರಾರಿಯ ಕಠೋರವಾದ ಕೋದಂಡವನ್ನು ಇಂದು ಈ ಸಭೆಯಲ್ಲಿ ಯಾರು ಮುರಿಯುವರೊ ಅಂಥವರನ್ನು—ಅವರು ಯಾರೇ ಆಗಿರಲಿ, ಎಂದರೆ ಅವನು ರಾಜನಾಗಲಿ ರಂಕನಾಗಲಿ ಯೋಗ್ಯನಾಗಿರಲಿ ಅಯೋಗ್ಯನಾಗಿರಲಿ, ಅವನನ್ನೇ—ನಾನು ವರಿಸುವೆನೆಂದು ತ್ರಿಭುವನ ವಿಜಯಿಯಾದ ಸೀತೆಯು ಹರತೊಟ್ಟಿರುವಳು."— ಈ ಪಣವನ್ನು ಕೇಳಿ ರಾಜರೆಲ್ಲರೂ ನಾವೇಕೆ ಪ್ರಯತ್ನಿಸಬಾರದೆಂಬ ಅಭಿಲಾಷೆಯುಳ್ಳವರಾದರು. ಆದರೆ ತಾವೇ ಶೂರರೆಂದು ಗರ್ವಿಷ್ಠರಾದ ರಾಜರು ಕ್ರೋಧಮಗ್ನರಾಗಿ, ಎದ್ದು ಸೊಂಟಕಟ್ಟಿ, ತಮ್ಮ ಇಷ್ಟ ದೇವತೆಯನ್ನು ಸ್ಮರಿಸಿ (ಧನುರ್ಭಂಗಕ್ಕೆ) ಹೊರಟರು. ಅವರು ಕೋಪದಿಂದ ಸೊಂಟವನ್ನು ಮತ್ತಷ್ಟು ಬಿಗಿಯುತ್ತ, ಅತ್ತಿತ್ತ ನೋಡುತ್ತ, ಶಿವಧನುಸ್ಸನ್ನು ಹಿಡಿಯುತ್ತ ಅದನ್ನು ಮೇಲಕ್ಕೆತ್ತಲು ಹಲವು ವಿಧವಾದ ಉಪಾಯಗಳನ್ನು

ಹೊಡುತ್ತಿರುವರು, ಆದಾಗ್ಗೂ ಧನುಸ್ಸು ಕದಲುತ್ತಿಲ್ಲ. ವಿಚಾರಶೀಲರಾದ ರಾಜರು ಅದರ ಹತ್ತಿರ ಕೂಡ ಹೋಗಲಿಲ್ಲ.

ದೋ ॥೨೪೩॥ ಮೂರ್ಖರಾದ ರಾಜರು ಧನುಸ್ಸನ್ನು ಗಟ್ಟಿಯಾಗಿ ಹಿಡಿದೆತ್ತಲೆತ್ನಿಸುವರು. ಅದು ಕದಲದಿರುವುದನ್ನು ನೋಡಿ ನಾಚಿಕೆಯಿಂದ ಹಿಂದಿರುಗುವರು. (ಈ ಪ್ರಯತ್ನಕ್ಕಾಗಿ ಮುಂದುವರಿಯುತ್ತಿದ್ದ) ಶೂರವೀರರ ಭುಜಬಲಕ್ಕನುಸಾರವಾಗಿ ಧನುಸ್ಸೂ ದೊಡ್ಡದಾಗುತ್ತಿರುವುದೋ ಎಂಬಂತೆ ತೋರುತ್ತಿದ್ದಿತು. ಹತ್ತುಸಾವಿರ * ರಾಜರು ಕೂಡಿ ಎತ್ತಿದರೂ ಅದು ಸ್ಥಳವನ್ನು ಬಿಟ್ಟು ಕದಲಲಿಲ್ಲ. ಕಾಮಾಸಕ್ತ ಪುರುಷರ ವಚನದಿಂದ ಸತಿಯಾದ ಸ್ತ್ರೀಯ ಮನಸ್ಸು ಚಂಚಲವಾಗುವುದೇ? ವೈರಾಗ್ಯವಿಲ್ಲದ ಸನ್ಯಾಸಿಯಂತೆ ರಾಜರೆಲ್ಲರೂ ಹಾಸ್ಯಕ್ಕೆ ಗುರಿಯಾದರು. ತಮ್ಮ ಕೀರ್ತಿ, ವಿಜಯ, ಶೂರವೀರತೆಯ ಹೆಮ್ಮೆಯೆಲ್ಲವನ್ನೂ ಆ ಧನುಸ್ಸಿನೆದುರಿಗೆ ಸಮರ್ಪಿಸಿ ಸೋತು, ತೇಜೋಹೀನರಾಗಿ ಹಿಂದಿರುಗಿ ತಮ್ಮವರ (ಇತರ ರಾಜರ) ಮಧ್ಯದಲ್ಲಿ ಕುಳಿತುಕೊಂಡರು. ಆ ರಾಜರನ್ನು ನೋಡಿ ಜನಕನು (ನನ್ನ ಪಣವನ್ನು ತ್ಯಜಿಸಬೇಕಾಗುವುದೋ ಎಂದು) ಗಾಬರಿಯಾಗಿ, ಕ್ರೋಧಪೂರ್ಣನಾಗಿರುವನೋ ಎಂಬಂತೆ ಬಿರುನುಡಿಗಳನಾಡಿದನೆಂತೆನೆ:—" ನಾನು ಪಣಕಟ್ಟಿರುವುದನ್ನು ಕೇಳಿ ದ್ವೀಪಾಂತರಗಳಿಂದ ಅನೇಕ ರಾಜರೂ, ದೇವತೆಗಳೂ, ದಾನವರೂ, ಮನುಷ್ಯಶರೀರವನ್ನು ಧರಿಸಿ ಬಂದಿರುವರು. ಮತ್ತೆ ಪ್ರಬಲರಾದ ರಣಧೀರ ಶೂರವೀರರೂ ಬಂದಿರುವರು.

ದೋ ॥೨೪೪॥ "ಮನೋಹರವಾದ ವಿಜಯ ಸ್ವರೂಪಳೂ ಅತಿ ಕಮನೀಯ ಕೀರ್ತಿರೂಪಳೂ ಆದ ಕನ್ಯೆಯನ್ನು ಹೊಂದುವ ಧನುದಮನೀಯನನ್ನು ಬ್ರಹ್ಮನು ಸೃಷ್ಟಿಸಿಲ್ಲವೆಂದು ತಿಳಿದುಕೊಳ್ಳಬೇಕೊ? ಹೇಳಿರಿ! ಈ ಶಿವಧನುಸ್ಸಿಗೆ ಹೆದೆಯನ್ನೇರಿಸಲಾಗದವರಿಗೆ ಈ ಲಾಭವು ಬೇಡವಾಗಿರಬಹುದು. ಬಂಧುಗಳೇ! ಹೆದೆಯೇರಿಸುವುದಂತಿರಲಿ, ಅದನ್ನು ಎಳ್ಳಷ್ಟಾದರೂ ಅಲ್ಲಾಡಿಸಲು ಯಾರಲ್ಲಿಯೂ ಶಕ್ತಿಯಿಲ್ಲವಾಯಿತು. ನಾನು ಹೇಳುವ ಮಾತುಗಳನ್ನು ಕೇಳಿ ಅಭಿಮಾನಿಗಳಾದ ಶೂರ ಭಟರು ಅನ್ಯಥಾ ಭಾವಿಸಬಾರದು. ಈ ಪೃಥ್ವಿಯು ವೀರವಿಹೀನವಾಗಿರುವುದೆಂದು ಈಗ ತಿಳಿದೆನು. ಇನ್ನು ನಿಮ್ಮ ಆಶೆಗಳನ್ನು ಬಿಟ್ಟು ನಿಂನಿಮ್ಮ ಸ್ಥಳಗಳಿಗೆ ಹಿಂದಿರುಗಿರಿ. ವಿಧಾತನು ಜಾನಕಿಯ ವಿವಾಹವನ್ನು ಅವಳ

---

* ಇಲ್ಲಿ ಹತ್ತುಸಾವಿರ ಜನರು ಒಂದೇಸಾರಿ ಎತ್ತಿದರೆ ಕನ್ಯೆಯು ಯಾರಿಗೆ ಸೇರುವಳು? ಎಂಬ ಪ್ರಶ್ನೆ ಹುಟ್ಟುವುದು ಅವರೆಲ್ಲರೂ ಮಾತಾಡಿಕೊಂಡು ಈ ಕೆಲಸವನ್ನು ಮಾಡಿದರು. ಒಂದುವೇಳೆ ಧನುಸ್ಸನ್ನೆತ್ತಲಾಗದಿದ್ದರೆ, ಯುದ್ಧಮಾಡಿ, ಜನಕರಾಯನನ್ನು ಗೆಲ್ಲುವೆವೆಂದು ಭಾವಿಸಿದರು.—ಮತ್ತೆ ಇಲ್ಲಿ "ಸಹಸದಸ" 'ಹತ್ತುಸಾವಿರ' ವೆಂದರೆ ಸಹಸ್ರಬಾಹುವಾದ ಕಾರ್ತ್ಯವೀರನು ಮತ್ತು ದಶಕಂಠನಾದ ರಾವಣನು ಎಂದೂ ಅರ್ಥಮಾಡುವರು.

ಅದೃಷ್ಟದಲ್ಲಿ ಬರೆದಿಲ್ಲವೆಂದು ತೋರುತ್ತದೆ. ನಾನು ನನ್ನ ಪ್ರತಿಜ್ಞೆಯನ್ನು ಬಿಟ್ಟರೆ † ಧರ್ಮವು ನಷ್ಟವಾಗುವುದು. ಏನುಮಾಡಲಿ! ಕನ್ಯೆಯು ಕುಮಾರಿಯಾಗಿಯೆ ಇರಲಿ. ಬಂಧುಗಳೇ! ಈ ಪೃಥ್ವಿಯಲ್ಲಿ ಶೂರರಾರೂ ಇಲ್ಲವೆಂದು (ನನಗೆ ಮೊದಲೆ) ತಿಳಿದಿದ್ದರೆ, ನಾನು ಪಣಕಟ್ಟಿ ಈ ರೀತಿಯಾಗಿ ಹಾಸ್ಯಕ್ಕೆ ಗುರಿಯಾಗುತ್ತಿರಲಿಲ್ಲ."—ಜನಕರಾಯನ ಈ ಮಾತುಗಳನ್ನು ಕೇಳಿ ಸ್ತ್ರೀಪುರುಷರೆಲ್ಲರೂ ಜಾನಕಿಯನ್ನು ನೋಡಿ ದುಃಖಿತರಾದರು. (ಆದರೇನು!) ಲಕ್ಷ್ಮಣನು ಮಾತ್ರ ಕ್ರೋಧಾವಿಷ್ಟನಾಗಿ, ಹುಬ್ಬು ಗಂಟಿಕ್ಕಿ ತುಟಿಗಳನ್ನು ಕಚ್ಚುತ್ತ ಕಣ್ಣುಗಳಿಂದ ಕಿಡಿಗಳನ್ನುದರಿಸಿದನು.

ದೋ || ೨೫೨ || ಅವನು ರಘುವೀರನ ಭಯದಿಂದ ಆವಮಾತನ್ನೂ ಆಡಲಿಲ್ಲ. ಆದರೆ ಜನಕನ ವಚನಗಳು ಅವನಿಗೆ ಬಾಣದಂತೆ ತೋರಿದವು. ಆಗವನು ರಾಮಚಂದ್ರನ ಚರಣಕಮಲಗಳಿಗೆರಗಿ ಪ್ರಾಮಾಣಿಕತೆಯಿಂದ ಸರಳವಾದ ನುಡಿಗಳಿಂದ ಹೇಳಿದನೇನಂದರೆ—"ರಘುವಂಶದವರಿರುವ ಸಭೆಯಲ್ಲಿ ಆಡಬಾರದ ಮಾತುಗಳನ್ನು ಜನಕರಾಯನು ಆಡಿಬಿಟ್ಟನು. ಅದು ಕೂಡ ರಘುಕುಲಮಣಿಯ ಸನ್ನಿಧಿಯಲ್ಲಿ!–ಹೇ ಸೂರ್ಯ ಕುಲಕಮಲ ದಿವಾಕರ! ಶ್ರೀರಾಮಚಂದ್ರ! ಕೇಳು, ನಾನು ಸ್ವಾಭಾವಿಕವಾಗಿ ಹೇಳುವೆನು, ಅಭಿಮಾನದಿಂದಲ್ಲ. ನಿನ್ನ ಅಪ್ಪಣೆಯಾದರೆ ನಾನು ಬ್ರಹ್ಮಾಂಡವನ್ನೆಲ್ಲ ಗೆಲ್ಲಬಲ್ಲೆನು, ಮತ್ತೆ ಆ ಬ್ರಹ್ಮಾಂಡವನ್ನು ಸಾಮಾನ್ಯ ಘಟದಂತೆ ಚೂರು ಚೂರು ಮಾಡಬಲ್ಲೆನು. ಸುಮೇರು ಪರ್ವತವನ್ನು ಸಮೂಲವಾಗಿ ಕಿತ್ತುಹಾಕಬಲ್ಲೆನು. ಹೇ ಭಗವನ್! ನಿನ್ನ (ದಿವ್ಯ) ಪ್ರತಾಪದೆದುರಿನಲ್ಲಿ ಈ ತುಕ್ಕುಹಿಡಿದ (ಹಳೆಯ) ಧನುಸ್ಸಿನ ಮಾತೆಷ್ಟರದು. ಹೇ ನಾಥ! ಈ ವಿಚಾರವನ್ನಾಲೋಚಿಸಿ, ನನಗೆ ಅಪ್ಪಣೆಯನ್ನಿತ್ತರೆ, ನಾನು ಒಂದು ವಿನೋದವನ್ನು ಮಾಡುವೆನು, ನೋಡಬೇಕು. ನಾನು ಕಮಲದ ದಂಟನ್ನು ಮುರಿಯುವಂತೆ ಈ ಬಿಲ್ಲನ್ನು ಬಾಗಿಸುವೆನು. ಮೂರು ಯೋಜನಗಳವರೆಗೆ ಅದನ್ನೆತ್ತಿಕೊಂಡು ಓಡಬಲ್ಲೆನು.

ದೋ || ೨೫೩ || "ಹೇ ನಾಥ, ತಮ್ಮ ಪ್ರತಾಪಬಲದಿಂದ ನಾನು ಈ ಬಿಲ್ಲನ್ನು ಮೇಣದ ಕೋಲಿನಂತೆ ಮುರಿದಿಡುವೆನು. ಹಾಗೆ ಮಾಡಲಾಗದಿದ್ದರೆ, ಇನ್ನು ಚಾಪಬಾಣಗಳನ್ನು ತೊಡುವುದಿಲ್ಲ," ಎಂದನು. ಲಕ್ಷ್ಮಣನು ಈ ಬಗೆಯ ಕೋಪವಚನಗಳನ್ನು ನುಡಿವಾಗ ಭೂಮಿಯು ಗುಡುಗಿತು. ದಿಗ್ಗಜಗಳು—(ಐರಾವತ, ಪುಂಡರೀಕ, ವಾಮನ, ಕುಮುದ, ಅಂಜನ, ಪುಷ್ಪದಂತ, ಸಾರ್ವಭೌಮ, ಸುಪ್ರತೀಕಗಳು–ಕಂಪಿಸಲಾರಂಭಿಸಿದವು. ಸಕಲಲೋಕಗಳೂ ಸರ್ವರಾಜರೂ ಹೆದ

† ಏಕೆಂದರೆ 'ಸಂಭಾವಿತಸ್ಯ ಚಾಕೀರ್ತಿರ್ಮರಣಾದತಿರಿಚ್ಯತೇ' ಎಂದರೆ ಸಂಭಾವಿತನಿಗೆ ಮರಣಕ್ಕಿಂತಲೂ ಅಕೀರ್ತಿಯೇ ಹೆಚ್ಚು ತಾಪಕರ.

ಬಿದವು. ಸೀತೆಯ ಮನಸ್ಸಿನಲ್ಲಿ ಸಂತೋಷವುಂಟಾಯಿತು. ಜನಕನ ಮನಸ್ಸು ಸಂಕುಚಿತವಾಯಿತು. ಗುರು (ವಿಶ್ವಾಮಿತ್ರ), ರಾಮಚಂದ್ರ, ಮತ್ತು ಋಷಿ ಗಣಗಳು ಮನಸ್ಸಿನಲ್ಲಿ ವಿಶೇಷ ಪ್ರಸನ್ನತೆಯಂ ತಳೆದು, ಪುಲಕಿತರಾದರು. ರಾಮಚಂದ್ರನು ಸನ್ನೆಯಿಂದ ಲಕ್ಷ್ಮಣನನ್ನು ತಡೆದು, ಪ್ರೀತಿಯಿಂದ ಅವನನ್ನು ತನ್ನ ಬಳಿ ಕುಳ್ಳಿರಿಸಿಕೊಂಡನು ವಿಶ್ವಾಮಿತ್ರನು ಸಮಯವರಿತು ವಿಶೇಷ ಪ್ರೇಮಯುಕ್ತವಾದ ವಾಣಿಯಿಂದ "ಹೇ ರಾಮ! ಏಳು, ಭವ ಅಥವಾ ಸಂಸಾರ ರೂಪವಾದ ಧನುಸ್ಸನ್ನು ಮುರಿ, (ಜೀವನು ಸಂಸಾರದಲ್ಲಿ ಈಶ್ವರನನ್ನು ಮರೆಯುವನು. ಈಶ್ವರನ ಕೃಪೆಯಿಂದಲೇ ಮುಕ್ತನಾಗುವನು ಎಂಬೀ ಭಾವವನ್ನು ಇಲ್ಲಿ 'ಭವ-ಚಾಪ' ಎಂಬುದರಿಂದ ವ್ಯಕ್ತಪಡಿಸಿರುವರು) ಹೇ ಪುತ್ರ! ಜನಕನ ಸಂತಾಪವನ್ನು ನಿವಾರಿಸು ಎಂದನು. ಅವನು ಗುರುವಚನಗಳನ್ನು ಕೇಳಿ ಅವನ ಚರಣಗಳಿಗೆರಗಿದನು. ಆದರೆ ಆವನ ಮನಸ್ಸಿನಲ್ಲಿ ಹರ್ಷವಾಗಲಿ ಶೋಕವಾಗಲಿ ಉಂಟಾಗಲಿಲ್ಲ. ಸಹಜ ಸ್ವಭಾವದಿಂದ ಎದ್ದು ನಿಂತನು ಅವನ ನಡೆ ನೋಟಗಳನ್ನು ನೋಡಿ ಮದೋನ್ಮತ್ತವಾದ ಸಿಂಹವೂ ಲಜ್ಜೆಯನ್ನು ಹೊಂದುವುದು.

### ಶ್ರೀರಾಮಚಂದ್ರನು ಧನುರ್ಭಂಗವಮಾಡುವುದು.

ದೋ ॥೨೮೭॥ ಮಂಚರೂಪವಾದ ಉದಯಗಿರಿಯಮೇಲೆ ರಘುವರರೂಪನಾದ ಬಾಲಪತಂಗನುದಯಿಸಿದನು. (ಆ ಸಮಯದಲ್ಲಿ) ಸಂತರೂಪವನ್ನು ತಳೆದಿದ್ದ ಕಮಲಗಳರಳಿದವು. ಅವರ ನೇತ್ರಗಳೆಂಬ ಭ್ರಮರಗಳು ಪ್ರಸನ್ನವಾದವು (ಸೀತೆಯನ್ನು ಹೊಂದಬೇಕೆಂದಿದ್ದ) ರಾಜರ ಆಶೆಯೆಂಬ ರಾತ್ರಿಯು ನಷ್ಟವಾಯಿತು. ಅವರ ವಚನಗಳೆಂಬ ನಕ್ಷತ್ರಗಳ ಪ್ರಕಾಶವು ಮಲಿನವಾಯಿತು. ಅಭಿಮಾನಿಗಳಾದ ರಾಜರೆಂಬ ಕುಮುದಗಳು ಸಂಕುಚಿತವಾದವು ಕಪಟ ರಾಜರೆಂಬ ಗೂಬೆಗಳು ಅವಿತುಕೊಂಡವು ಚಕೋರ, ಋಷಿ ಮತ್ತು ದೇವತೆಗಳ ಶೋಕವು ದೂರವಾಯಿತು. ಅವರು ಹೂಮಳೆಗರೆಯುತ್ತ ತಮ್ಮ ಸೇವೆಯನ್ನು ಪ್ರಕಾಶಗೊಳಿಸಿದರು. (ಇಷ್ಟರಲ್ಲಿ) ರಾಮಚಂದ್ರನು ವಿಶೇಷ ಅನುರಾಗ ಯುಕ್ತನಾಗಿ ಗುರುಚರಣಗಳಿಗೆ ನುತ್ತಿ ನಮಿಸಿ ಋಷಿಗಳ ಅಪ್ಪಣೆಯನ್ನು ಬೇಡಿದನು. ಸಕಲ ಜಗತ್ತಿನ ಸ್ವಾಮಿಯಾದ ರಾಮಚಂದ್ರನು ಮದೋನ್ಮತ್ತವಾದ ಸುಂದರ ಗಜರಾಜನಂತೆ ಸಹಜ ಸ್ವಭಾವದಿಂದ ಮುಂದಡಿಯಿಟ್ಟನು. ಅವನು ಮುಂದಡಿಯಿಟ್ಟ ಕೂಡಲೆ ಸ್ತ್ರೀಪುರುಷರೆಲ್ಲರೂ ಪುಳಕಿತರಾಗಿ ಅವರ ಮೈಯ್ಯಗಳುಬ್ಬಿ ಸುಖವನ್ನನುಭವಿಸಿದರು. ಎಲ್ಲರೂ ತಂತಮ್ಮ ಪಿತೃಗಳಿಗೆ (ಪೂರ್ವಜರಿಗೆ) ನಮಸ್ಕರಿಸಿ ತಮ್ಮ ಪೂರ್ವಪುಣ್ಯವನ್ನು ಸ್ಮರಿಸುತ್ತ "ನಾವು ಹಿಂದೆ ಗಳಿಸಿದ ಪುಣ್ಯಪ್ರಭಾವವೇನಾದರೂ ಇದ್ದರೆ,–ಹೇ ಗಣೇಶ! ಹೇ ಗೋಸಾಯಿ! ರಾಮನು ಈ ಶಿವಧನುಸ್ಸನ್ನು ಕಮಲನಾಳದಂತೆ ಮುರಿದುಬಿಡಲಿ" ಎಂದರು.

ದೋ ॥ ೨೮೮ ॥ (ಅತ್ತ) ಸೀತೆಯ ಮಾತೆಯು ಪ್ರೇಮದಿಂದ ರಾಮನನ್ನು ನೋಡುತ್ತ ಸಖಿಯರನ್ನು ಬಳಿಗೆ ಕರೆದು ಪ್ರೇಮದಿಂದಲೂ ಕರುಣೆಯಿಂದಲೂ ನುಡಿದಳೇನಂದರೆ—ಸಖಿಯರೇ! ನಮ್ಮ ಹಿತಚಿಂತಕರೆನಿಸಿಕೊಂಡವರು ಕೂಡ ಈ ವಿನೋದವನ್ನು ನೋಡುತ್ತಿರುವರಲ್ಲ! ಈ ರಾಮಚಂದ್ರನು ಬಾಲಕನೆಂದು ಯಾರೂ ರಾಜನಿಗೆ ಹೇಳಲೊಲ್ಲರಲ್ಲ! ಅವರಾ ಹಠವು ಸರಿಯಲ್ಲ. ರಾವಣನೂ ಬಾಣಾಸುರನೂ ಇದನ್ನು (ಧನುಸ್ಸನ್ನು) ಮುಟ್ಟಲೂ ಇಲ್ಲ. ಅಭಿಮಾನ ಪೂರ್ಣರಾದ ರಾಜರೆಲ್ಲರೂ ಸೋತುಹೋದರು. ಈ ಧನುಸ್ಸನ್ನು ಆ ರಾಜಪುತ್ರನಿಗೆ ಕೊಡುವುದೆ! ಬಾಲ ಮರಾಳವು ಮಂದರವನ್ನೆತ್ತಬಲ್ಲದೆ? ರಾಜರ ಚಾತುರ್ಯವೆಲ್ಲ ಎಲ್ಲಿ ಮಾಯವಾಯಿತು! ಸಖಿಯರೆ! ವಿಧಿಗತಿಯನ್ನಾರು ಬಲ್ಲರು?"—(ಈ ವಚನಗಳನ್ನು ಕೇಳಿ) ಸಖಿಯರು ಇಂತೆಂದರು—"ಹೇ ರಾಣಿ! ತೇಜಸ್ವಿಗಳನ್ನು ಚಿಕ್ಕವರೆನ್ನಬಾರದು. ಆ ಅಪಾರವಾದ ಸಮುದ್ರವೆಲ್ಲಿ? ಅಗಸ್ತ್ಯಮುನಿಯೆಲ್ಲಿ? * (ಮೂರು ಆಚಮನಗಳಿಂದ ಅದನ್ನು ಆತನು ಹೀರಿಬಿಡಲಿಲ್ಲವೆ? ಈಗ ಅವನ ಯಶಸ್ಸನ್ನು ಜಗತ್ತೆ ಗಾನಮಾಡುತ್ತಿಲ್ಲವೆ? ಸೂರ್ಯಮಂಡಲವು ನೋಡುವುದಕ್ಕೆ ಚಿಕ್ಕದಾಗಿದ್ದರೂ, ಅದರ ಉದಯದಿಂದ ತ್ರಿಭುವನಗಳ ತಮಸ್ಸು ಓಡಿಹೋಗುವುದಿಲ್ಲವೆ?

ದೋ ॥ ೨೮೯ ॥ ಮಂತ್ರವು ಪರಮಲಘುವಾಗಿದ್ದರೂ ಹರಿಹರ ಬ್ರಹ್ಮಾದಿ ದೇವತೆಗಳು ಅದರ ವಶರಾಗಿರುವರು ಅಂಕುಶವು ಚಿಕ್ಕದಾಗಿದ್ದರೂ ಮದೋನ್ಮತ್ತವಾದ ಆನೆಯನ್ನು ತನ್ನ ವಶದಲ್ಲಿಟ್ಟುಕೊಳ್ಳುವುದಿಲ್ಲವೆ? ಕಾಮದೇವನು ಕುಸುಮ ಬಾಣದಿಂದ ಸಕಲ ಜನರನ್ನು ತನ್ನ ವಶದಲ್ಲಿಟ್ಟುಕೊಂಡಿಲ್ಲವೆ? ಹೇ ದೇವಿ, ನಿನ್ನ ಸಂಶಯವನ್ನು ಬಿಟ್ಟುಬಿಡು. ರಾಮಚಂದ್ರನು ಈ ಧನುಸ್ಸನ್ನು ಅಗತ್ಯವಾಗಿ ಮುರಿದುಬಿಡುವನು"—ಸಖಿಯರ ಈ ವಚನಗಳನ್ನು ಕೇಳಿ

---

* ಒಂದಾನೊಂದು ಕಾಲದಲ್ಲಿ ಸಮುದ್ರವು ಒಂದು ಪಕ್ಷಿಯ ಮೂರು ಮರಿಗಳನ್ನು ಕೊಚ್ಚಿಕೊಂಡು ಹೋಯಿತು. ಆಗಲಾ ಪಕ್ಷಿಯು ಕೋಪದಿಂದ ಇದರ ನೀರನ್ನು ಹೀರಿ ಒಣಗಿಸುವೆನೆಂದು ನಿತ್ಯವೂ ತನ್ನ ಕೊಕ್ಕಿನಿಂದ ನೀರನ್ನು ತುಂಬಿ ಎಸೆಯುತ್ತಿತ್ತು ಒಂದುದಿನ ಅಗಸ್ತ್ಯಮುನಿಯು ಅದನ್ನು ನೋಡಿ, ನೀನು ನೀರನ್ನೇಕೆ ಚೆಲ್ಲುವೆ ಎಂದು ಕೇಳಲು, ಪಕ್ಷಿಯು ತನ್ನ ಕಥೆಯನ್ನರುಹಿತು ಆಗ ಮುನಿಗೆ ದಯೆಯುಂಟಾಗಿ, ಈ ದುಷ್ಟನನ್ನು ನಾನು ಶಿಕ್ಷಿಸುವೆನು ಎಂದು ಹೇಳಿ ಸಮುದ್ರದಲ್ಲಿ ಸ್ನಾನಮಾಡಲಾರಂಭಿಸಿದನು. ಆಗ ಸಮುದ್ರವು ಉಕ್ಕಿ ತೀರದಲ್ಲಿದ್ದ ಮುನಿಯ ಪೂಜಾ ಸಾಮಗ್ರಿಗಳನ್ನು ಕೊಚ್ಚಿಕೊಂಡು ಹೋಯಿತು. ಆಗ ಮುನಿಯು ಕೋಪದಿಂದ ಸಮುದ್ರವನ್ನೇ ಮೂರು ಆಪೋಶನದಿಂದ ಹೀರಿಬಿಟ್ಟನು. ಅನಂತರ ದೇವತೆಗಳು ಬಂದು ಪ್ರಾರ್ಥಿಸಿದಾಗ ಮೂತ್ರದ್ವಾರದಿಂದ ಅದನ್ನು ಬಿಟ್ಟುಬಿಟ್ಟನು. ಅದರಿಂದಲೆ ಸಮುದ್ರದ ನೀರು ಕ್ಷಾರಮಯವಾಗಿರುವುದೆಂದು ಹೇಳುವರು.

ಅವಳಲ್ಲಿ ವಿಶ್ವಾಸವುಂಟಾಯಿತು. ಅವಳ ದುಃಖವು ದೂರವಾಯಿತು; ಮನಸ್ಸಿನಲ್ಲಿ ಪ್ರೀತಿಯು ಹೆಚ್ಚಿತು. ಆಗ ವಿದೇಹಸುತೆಯು ರಾಮಚಂದ್ರನನ್ನು ನೋಡಿ, ಮನಸ್ಸಿನಲ್ಲಿ (ಒಂದು ವಿಧವಾದ) ಹೆದರಿಕೆಯಿಂದ "ಭವಾನಿಶಂಕರರು ಪ್ರಸನ್ನರಾಗಿ ನಾನು ಮಾಡಿದ ಸೇವೆಯನ್ನು ಸಾರ್ಥಕಗೊಳಿಸಲಿ! ನನ್ನ ಹಿತಕ್ಕೋಸುಗ ಧನುಸ್ಸಿನ ಭಾರವೆಲ್ಲ ಮಾಯವಾಗುವಂತಾಗಲಿ! ಹೇ ಗಣನಾಯಕ! ವರದಾಯಕ, ದೇವಾ! ಇಂದಿನವರೆಗೆ ನಾನು ನಿನ್ನ ಸೇವೆಮಾಡಿರುವೆನು. ನನ್ನ ಪ್ರಾರ್ಥನೆಯನ್ನು ಕೇಳಿ ಧನುಸ್ಸಿನ ಭಾರವು ಕಡಿಮೆಯಾಗುವಂತೆ ಮಾಡಬೇಕೆಂದು ನುತಿಸುವೆನು." ಎಂದು ಪ್ರಾರ್ಥಿಸಿದಳು.

ದೋ ॥ ೨೯೦ ॥ ಸೀತೆಯು ರಾಮಚಂದ್ರನಕಡೆಗೆ ನೋಡಿ ದೇವತೆಗಳನ್ನು ಧ್ಯಾನಿಸುತ್ತಲಿರುವಳು, ಧೈರ್ಯವನ್ನು ತಳೆಯುತ್ತಿರುವಳು, (ಅವಳ) ಕಣ್ಣುಗಳಲ್ಲಿ ಪ್ರೇಮಾಶ್ರುವು ತುಂಬಿರುವುದು, ಅವಳಾ ಶರೀರವು ಪುಳಕಿತವಾಗುತ್ತಿರುವುದು. ಕಣ್ಣು ದಣಿಯುವಂತೆ (ರಾಮಚಂದ್ರನ) ಶೋಭೆಯನ್ನು ನೋಡಿ, ಪಿತನ ಪಣವನ್ನು ಜ್ಞಾಪಿಸಿಕೊಂಡು ಮತ್ತೆ ಅಸುಖಿಯಾಗುವಳು. ಅವಳು ಮನಸ್ಸಿನಲ್ಲಿಯೆ "ಅಯ್ಯೋ! ತಂದೆಯೆ, ನಿನ್ನ ಹಠವು † ಕಠಿಣವೂ ಕ್ರೂರವೂ ಆಗಿದೆ. ನಿನಗೆ ಲಾಭಹಾನಿಗಳೆರಡೂ ತಿಳಿಯವು, ಮಂತ್ರಿಯು ಕೂಡ ಹೆದರುತ್ತಿರುವನು ಯಾರೂ ನಿನಗೆ ತಿಳಿವಳಿಕೆಯನ್ನುಂಟುಮಾಡುತ್ತಿಲ್ಲವಲ್ಲ. ವಿದ್ವಾಂಸರ ಸಭೆಯಲ್ಲಿ ಅನೇಕ ಅನುಚಿತವಾದ ಕಾರ್ಯಗಳು ನಡೆಯುತ್ತಲಿವೆ ವಜ್ರಕ್ಕಿಂತಲೂ ಕಠಿಣವಾದ ಈ ಧನುಸ್ಸೆಲ್ಲಿ! ಶ್ಯಾಮಸುಂದರನೂ ಕೋಮಲಾಂಗನೂ ಕಿಶೋರವಯಸ್ಕನೂ ಆದ ರಾಜಕುವರನೆಲ್ಲಿ! ಹೇ ವಿಧಾತಾ! ನಾನು ಹೇಗೆ ಧೈರ್ಯವನ್ನು ತಳೆಯಲಿ? ಸಾಸಿವೆ ಹೂವಿನ ಕಣಗಳಿಂದ ರತ್ನವು ಕೊರೆಯಲ್ಪಡುವುದೆ? ಈ ಸಭೆಯಲ್ಲಿ ಎಲ್ಲರ ಬುದ್ಧಿಯೂ ಭ್ರಾಂತಿಗೊಂಡಿರುವುದು. ಹೇ ಶಂಭುಚಾಪವೆ! ನಾನು ನಿನಗೆ ಶರಣಾಗತಳಾಗಿರುವೆನು. ನಿನ್ನ ಜಡತ್ವವನ್ನು ಜನಗಳ ಮೇಲೆ ಹೊರಿಸಿ, ರಾಮಚಂದ್ರನನ್ನು ನೋಡಿ ಹಗುರವಾಗು!" ಎಂದು ವಿಶೇಷವಾಗಿ ಪರಿತಪಿಸುತ್ತ ಪ್ರತಿಯೊಂದು ನಿಮೇಷಕಾಲವನ್ನು ನೂರಾರು ಯುಗಗಳಂತೆ ಭಾವಿಸುತ್ತಿದ್ದಳು.

ದೋ ॥ ೨೯೧ ॥ ಜಾನಕಿಯು ಒಮ್ಮೆ ರಾಮಚಂದ್ರನನ್ನು ನೋಡುವಳು ಮತ್ತೊಮ್ಮೆ (ಮಾತೆಯಾದ) ಪೃಥ್ವಿಯನ್ನು ನೋಡುವಳು. ಆಗವಳ ಲೋಲ

---

† "ಕಮಠಪೃಷ್ಠಕಠೋರಮಿದಂ ಧನುರ್ಮಧುರ ಮೂರ್ತಿರಸೌ ರಘುನಂದನಃ। ಕಥಮಧಿಜ್ಯಮನೇನ ವಿಧೀಯತಾಮಹಹ ತಾತ ಪಣಸ್ತವದಾರುಣಃ ॥" ಎಂದರೆ ಆಮೆಯ ಬೆನ್ನಿನಂತೆ ಕಠೋರವಾದ ಧನುಸ್ಸೆಲ್ಲಿ, ಸುಕುಮಾರ ಮೂರ್ತಿಯಾದ ರಾಮಚಂದ್ರನೆಲ್ಲಿ! ಅವನು ಈ ಧನುಸ್ಸನ್ನು ಹೇಗೆ ಹೆದೆಯೇರಿಸುವನು? ಹಾ ಹಾ ಪಿತನೆ! ನಿನ್ನ ಪಣವು ದಾರುಣವಾದುದು.

ಲೋಚನಗಳು ಚಂದ್ರಮಂಡಲದಲ್ಲಿ ತೂಗಿಬಿಟ್ಟ ಕಾಮದೇವರೂಪವಾದ ಎರಡು ಮೀನುಗಳಂತೆ ಹೊಳೆಯುತ್ತಿದ್ದವು. ಜಾನಕಿಯ ವಾಣಿರೂಪವಾದ ಭ್ರಮರವನ್ನು ಮುಖಕಮಲವು ಮುಚ್ಚಿಬಿಟ್ಟಿತು. ಲಜ್ಜೆಯೆಂಬ ರಾತ್ರಿಯು ಸಮೀಪಿಸಿದ ಕೂಡಲೆ ಅದು ವಿಕಾಸಗೊಳ್ಳುವುದಿಲ್ಲ ಮಹಾ ಕೃಪಣನು ಮಲಗುವಂತೆ ಅಶ್ರುವು ಕಣ್ಣನ್ನು ಬಿಟ್ಟು ಹೊರಗೆ ಬರಲಾರದೆ ಕಣ್ಣಡೆಯಲ್ಲಿಯೇ ನಿಂತಿತು. ವ್ಯಾಕುಲಳಾಗಿ ಅವಳು ಸಂಕುಚಿತೆಯಾದಳು. ಮತ್ತೆ ಧೈರ್ಯವನ್ನು ತಳೆದು ವಿಶ್ವಾಸಪೂರ್ಣವಾದ ಮನಸ್ಸಿನಿಂದ ಆಲೋಚಿಸಲಾರಂಭಿಸಿದಳು —"ತ್ರಿಕರಣ ಪೂರ್ವಕವಾಗಿ ನಾನು ರಘುಪತಿಯ ಪಾದಾರವಿಂದಗಳಲ್ಲಿಯೇ ಮನಸ್ಸಿಟ್ಟಿರುವೆನು. ಸರ್ವಾಂತರ್ಯಾಮಿಯಾದ ಭಗವಂತನು ನನ್ನನ್ನು ರಘುವರನ ದಾಸಿಯಾಗಿ ಮಾಡುವುದೇ ನಿಜ! ಏಕೆಂದರೆ ಯಾರಿಗೆ ಯಾರಮೇಲೆ ನಿಜವಾದ ಪ್ರೇಮ ವಿರುವುದೊ ಅವರಿಗೆ ಅಪೇಕ್ಷಿತರಾದವರೇ ದೊರೆಯುವರು ಇದರಲ್ಲಿ ಸಂದೇಹವಿಲ್ಲ." ಈ ಬಗೆಯಾಗಿ ಆಲೋಚಿಸುತ್ತ ಸೀತೆಯು ಮತ್ತೆ ರಾಮಚಂದ್ರನ ಕಡೆಗೆ ನೋಡಿ, ಕೊನೆಗ ತನ್ನ ಪ್ರೇಮದ ಪಣವೇ (ಗೆಲ್ಲುವುದೆಂದು) ನಿಶ್ಚಯಿಸಿದಳು. ಕೃಪಾನಿಧಿ ಯಾದ ರಾಮಚಂದ್ರನು ಇದೆಲ್ಲವನ್ನೂ ತಿಳಿದುಕೊಂಡನು. ಗರುಡನು ಹಾವಿನ ಮರಿಯನ್ನು ಹಿಡಿದೆತ್ತುವಂತ ರಾಮಚಂದ್ರನು ಸೀತೆಯನ್ನು ನೋಡಿ ಧನುಸ್ಸ ನ್ನೆತ್ತಿದನು.

ದೋ ॥ ೨೯೨ ॥ ರಘುಕುಲಮಣಿಯು ಶಿವಚಾಪವನ್ನೆತ್ತಿದುದನ್ನು ನೋಡಿ, ಲಕ್ಷ್ಮಣನು ಪುಳಕಿತಗಾತ್ರನಾಗಿ, ಕಾಲಿನಿಂದ ಭೂಮಿಯನ್ನೊತ್ತಿ—"ಹೇ ದಿಗ್ಗಜ ಗಳೇ! ಕೂರ್ಮವೆ! ಹೇ ಶೇಷನೆ! ಹೇ ವರಾಹಮೂರ್ತಿ! ನೀವೆಲ್ಲರೂ ಧೈರ್ಯ ದಿಂದ ಪೃಥ್ವಿಯು ಅಲ್ಲಾಡದಂತೆ ಅದನು ಹಿಡಿದುಕೊಳ್ಳಿರಿ ಶ್ರೀರಾಮಚಂದ್ರನು ಶಿವಧನುಸ್ಸನ್ನು ಮುರಿಯಲಪೇಕ್ಷಿಸಿರುವನು. ನನ್ನ ಅಪ್ಪಣೆಯನ್ನು ಕೇಳಿ ನೀವೆ ಲ್ಲರೂ ಶಾಂತಚಿತ್ತರಾಗಿರಿ" * ಎಂದು ಘೋಷಿಸಿದನು ರಾಮನು ಧನುಸ್ಸಿನ ಬಳಿ ಬಂದಕೂಡಲೆ ಸ್ತ್ರೀಪುರುಷರೆಲ್ಲರೂ ದೇವತೆಗಳನ್ನೂ ತಮ್ಮ ಪುಣ್ಯವನ್ನೂ ಸ್ಮರಿಸಿದರು. (ಉಳಿದ) ಎಲ್ಲರ ಸಂಶಯವೂ ಅಜ್ಞಾನವೂ ಮೂರ್ಖರಾಜರ ಅಭಿ ಮಾನವೂ ಪರಶುರಾಮನ ಗರ್ವವೂ ಗುರುತ್ವವೂ, ದೇವತೆ ಮತ್ತು ಋಷಿಗಳ ಭಯವೂ ಸೀತೆಯ ಚಿಂತೆಯೂ ಜನಕ ಮಹಾರಾಯನ ಚಿಂತೆಯೂ, ರಾಣೀ ವಾಸದವರ ದಾರುಣವಾದ ದುಃಖದಾವಾನಲವೂ ಮಹಾದೇವನ ಧನುಸ್ಸನ್ನು ಒಂದು ದೊಡ್ಡ ಹಡಗೆಂದು ಭಾವಿಸಿ (ಅವುಗಳೆಲ್ಲವೂ) ಅದನ್ನಡರಿದವು. ರಾಮ

---

* ಪುರಾಣ ಮತದಂತೆ ಪೃಥ್ವಿಯ ಕೆಳಗೆ ೮ ದಿಗ್ಗಜಗಳೂ ಅವುಗಳ ಕೆಳಗೆ ಕೂರ್ಮವೂ, ಅದರ ಕೆಳಗೆ ಶೇಷನೂ, ಶೇಷನ ಕೆಳಗೆ ವಾರಾಹ ಮೂರ್ತಿಯೂ ಇರುವರು, ಲಕ್ಷ್ಮಣನು ಅವರೆಲ್ಲರಿಗೆ ಸಮಾಧಾನವನ್ನು ಹೇಳಿದನು.

ಚಂದ್ರನ ಬಾಹುಬಲ ರೂಪವಾದ ಅಪಾರ ಸಾಗರವನ್ನು ಅವುಗಳು ಪಾರಾಗಲೆಣಿಸಿರುವವು. ಆದರೆ ಹಡಗನ್ನು ನಡೆಯಿಸಲು ನಾವಿಕನೇ ಇಲ್ಲ!

ದೋ ॥ ೨೬೩ ॥ ಶ್ರೀರಾಮಚಂದ್ರನು ಎಲ್ಲರನ್ನೂ ನೋಡಿದನು. ಎಲ್ಲರೂ ಚಿತ್ರಪ್ರತಿಮೆಗಳಂತಾಗಿದ್ದರು. ದಯಾಸಾಗರನು ಸೀತೆಯು ವಿಶೇಷ ವ್ಯಾಕುಲಳಾಗಿದ್ದುದನ್ನು ನೋಡಿದನು. ಅವಳಿಗೆ ಪ್ರತಿಯೊಂದು ಕ್ಷಣವೂ ಕಲ್ಪವಾಗಿ ತೋರುತ್ತಿರುವುದು! ಬಾಯಾರಿದವನು ನೀರು ಸಿಕ್ಕದೇ ಪ್ರಾಣಬಿಟ್ಟನಂತರ ಅಮೃತಸಾಗರವು ದೊರೆತರೇನು ಪ್ರಯೋಜನ? ಬಿತ್ತಿದ ಭೂಮಿಯು ಚೆನ್ನಾಗಿ ಒಣಗಿದಮೇಲೆ ಮಳೆ ಬಂದರೇನುಫಲ? ಕಾಲವು ಕಳೆದುಹೋದಮೇಲೆ ಪಶ್ಚಾತ್ತಾಪಪಟ್ಟರೇನಾಗುವುದು?—ಎಂದಾಲೋಚಿಸುತ್ತ ಸೀತೆಯನ್ನು ನೋಡಿ, ತನ್ನ ಮೇಲೆ ಅವಳಲ್ಲಿರುವ ಪ್ರೀತಿಯನ್ನರಿತು ರಾಮಚಂದ್ರನು ಪುಳಕಿತನಾದನು. ರಾಮಚಂದ್ರನು (ತನ್ನ ಕುಲ) ಗುರುವನ್ನು (ಎಂದರೆ ವಸಿಷ್ಠನನ್ನು) ಮನಸ್ಸಿನಲ್ಲೇ ವಂದಿಸಿ, ಅನಾಯಾಸದಿಂದ ಧನುಸ್ಸನ್ನೆತ್ತಿದನು ಆಗ ಅದು ಮಿಂಚಿನಂತೆ ಹೊಳೆಯಿತು, ನೀಲವರ್ಣದ ಅವನ ಸ್ವರೂಪವು ಆಕಾಶದಂತೆ ಭಯಂಕರ ರೂಪವನ್ನು ಧರಿಸಿತು. ರಾಮಚಂದ್ರನು ಧನುಸ್ಸನ್ನು ತೆಗೆದುಕೊಂಡನೊ ಇಲ್ಲವೊ ಎಂದು ಜನರೆದ್ದು ಸ್ತಬ್ಧರಾಗಿ ನೋಡುತ್ತಿರುವಷ್ಟರಲ್ಲಿಯೆ ಅವನು ಧನುಸ್ಸನ್ನು ಮುರಿದುಬಿಟ್ಟನು. ಆಗ ಅದರ ಘೋರವಾದ ಶಬ್ದವು ಸಮಗ್ರ ಲೋಕವನ್ನಾಕ್ರಮಿಸಿತು. ಅದನ್ನು ಕೇಳಿ (ಆಕಾಶದಲ್ಲಿ) ಸೂರ್ಯನ ರಥದ ಕುದುರೆಗಳು ದಾರಿತಪ್ಪಿ ಓಡಿದವು ದಿಗ್ಗಜಗಳು ಚೀತ್ಕಾರಮಾಡಿದವು, ಭೂಮಿಯು ನಡುಗಿತು ಶೇಷ ಕೂರ್ಮ ವಾರಾಹಗಳು ಥಟ್ಟನೆದ್ದು ನಿಂತವು. ಸುರಾಸುರರೂ ಮುನಿಗಳೂ ಕಿವಿಗಳಮೇಲೆ ಕೈಯಿಟ್ಟುಕೊಂಡು ವ್ಯಾಕುಲರಾಗಿ ಆಲೋಚಿಸುತ್ತಿರುವರು. ತುಳಸೀದಾಸರು ಹೇಳುತ್ತಾರೆ—ಕೇಳಿ, ಶ್ರೀರಾಮಚಂದ್ರನು ಕೋದಂಡ ಖಂಡನ ಮಾಡಿದ ಕೂಡಲೆ ಎಲ್ಲರು ಜಯಧ್ವನಿಯನ್ನು ಮಾಡಿದರು.

### ಸೀತೆಯು ರಾಮಚಂದ್ರನಿಗೆ ಜಯಮಾಲೆಯನ್ನು ಹಾಕುವುದು.

ಸೋ ॥ ೨೬೪ ॥ ಶಂಕರನ ಧನುಸ್ಸು ಹಡಗು, ರಘುವರನ ಬಾಹುಬಲವು ಸಮುದ್ರವಾಯಿತು. (ಹಡಗೊಡೆದು ಸಮುದ್ರದಲ್ಲಿ ಮುಳುಗುವಂತೆ) ಮೋಹವಶರಾದವರೆಲ್ಲರೂ ಅದರಲ್ಲಿ ಮುಳುಗಿದರು. ಪ್ರಭುವು ಬಿಲ್ಲಿನ ತುಂಡುಗಳೆರಡನ್ನೂ ನೆಲದಮೇಲೆ ಬಿಸುಟನು. ಅದನ್ನು ನೋಡಿ ಎಲ್ಲರಿಗೂ ಆನಂದವಾಯಿತು. ವಿಶ್ವಾಮಿತ್ರರೂಪದಿಂದಿರುವ ಪವಿತ್ರ ಸಾಗರದಲ್ಲಿ ಸುಂದರವಾದ ಪ್ರೇಮರೂಪವನ್ನು ತಳೆದಿರುವ ಜಲವಿರುವುದು. ರಾಮಚಂದ್ರರೂಪದಿಂದಿರುವ ಪೂರ್ಣಚಂದ್ರನನ್ನು ನೋಡಿ ಅದರಲ್ಲಿ ಪುಲಕಾವಳಿ ರೂಪವನ್ನು ತಳೆದ ದೊಡ್ಡ ತರಂಗಗಳೆದ್ದವು. ಆಕಾಶದಲ್ಲಿ ಮಂಗಳವಾದ್ಯಗಳು ಮೊಳಗಿದವು. ದೇವತಾ

## ಶ್ರೀ ತುಳಸೀದಾಸ ರಾಮಾಯಣ:—



ಶ್ರೀರಾಮನು ಧನುರ್ಭಂಗ ಮಾಡುವುದು.

(ಪುಟ ೧೮೫)

ವಧುಗಳಾದ (ಅಪ್ಸರೆಯರು) ಗಾನವಂ ಪಾಡುತ್ತ ನರ್ತಿಸಿದರು ಬ್ರಹಾ
ದೇವತೆಗಳೂ ಸಿದ್ಧ ಮುನೀಶ್ವರರೂ ಶ್ರೀರಾಮಚಂದ್ರನನ್ನು ಪ್ರಶಂಸಿಸಿ ಆಶೀರ್ವ
ಸುತ್ತಿರುವರು. ಅನೇಕ ವರ್ಣಗಳ ಹೂಮಾಲೆಗಳುದುರಲಾರಂಭಿಸಿವೆ. ಕಿನ
ಗಣಗಳು ರಸಭರಿತವಾದ ಗೀತೆಯನ್ನು ಹಾಡುತ್ತಲಿವೆ ಸಮಗ್ರ ಜಗತ್ತಿ
ಜಯಧ್ವನಿಯು ಘೋಷಿಸುತ್ತಿದೆ ಅದರಲ್ಲಿ ಧನುಸ್ಸು ಮುರಿದ ಧ್ವನಿಯು ಕೆ
ಸುತ್ತಿಲ್ಲ. ಅಲ್ಲಲ್ಲಿ ಸ್ತ್ರೀ ಪುರುಷರು ಆನಂದದಿಂದುಬ್ಬಿ ಶಿವನ ದೊಡ್ಡ ಧನುಸ್ಸ
ರಾಮಚಂದ್ರನು ಮುರಿದುಬಿಟ್ಟನೆಂದು ಹೇಳಿಕೊಳ್ಳುತ್ತಿರುವರು!

ದೋ ॥ ೨೯೫ ॥ ಧೀರಮತಿಗಳಾದ ವಂದಿ ಮಾಗಧ ಸೂತರು ಬಿರುದಾ
ಯನ್ನು (ಪ್ರಶಂಸಾಪರವಾದ ಸ್ತುತಿಯನ್ನು) ಹೇಳುತ್ತಿರುವರು. ಜನರೆಲ್ಲ
ಆನೆ ಕುದುರೆ ಮಣಿ ಧನ ಕನಕ ವಸ್ತ್ರಾದಿಗಳನ್ನು ದಾನಮಾಡುತ್ತಿರುವ
ಜಾಗಟೆ, ಮೃದಂಗ, ಶಂಖ, ತುತೂರಿ, ನಗಾರಿ, ಇವೇ ಮೊದಲಾದ ಹಲ
ಬಗೆಯ ವಾದ್ಯಗಳು ಮೊಳಗಿದವು. ಅಲ್ಲಲ್ಲಿ ಸ್ತ್ರೀಯರು ಮಂಗಳ ಗೀತೆಯ
ಪಾಡಿದರು. ಒಣಗಿದ ಧಾನ್ಯದಮೇಲೆ ನೀರೆರದಂತೆ ಸಖಿ ಸಮೇತರಾದ ರಾ
ಯರು ಹರ್ಷಿಸಿದರು. ನೀರಿನಲ್ಲಿ ಈಜುತ್ತ ಈಜುತ್ತ ಕೈ ಸೋತವನಿಗೆ ಆ
ಸಿಕ್ಕಂತೆ ಜನಕರಾಜನ ಚಿಂತೆಯು ದೂರವಾಗಿ, ಅವನು ಸುಖವನ್ನನುಭ
ದನು. ಹಗಲಿನಲ್ಲಿ ದೀಪದ ತೇಜಸ್ಸು ಕುಂದುವಂತೆ ಧನುಸ್ಸನ್ನು ಮು
ಕೂಡಲೆ ರಾಜರ ಮುಖಗಳು ಬಾಡಿದವು ಇನ್ನು ಸೀತೆಯ ಸುಖವನ್ನಂ
ಬಣ್ಣಿಸಲಾಗದು ಸ್ವಾತೀ ಮಳೆಯ ಹನಿಯನ್ನು ಹೊಂದಿದ ಚಾತಕದ
ಸೀತೆಯು ಪ್ರಸನ್ನವದನೆಯಾದಳು ಚಕೋರವು ಚಂದ್ರನನ್ನು ನೋಡುವ
ಲಕ್ಷ್ಮಣನು ರಾಮಚಂದ್ರನನ್ನು ನೋಡುತ್ತಿರುವನು. ಆಗ ಶತಾನಂದನು ಅಪ್ಪ
ಯನ್ನಿತ್ತಕೂಡಲೆ ಸೀತೆಯು ರಾಮಚಂದ್ರನ ಬಳಿ ಬಂದು ನಿಂತಳು.

ದೋ ॥ ೨೯೬ ॥ ಸೀತೆಯೊಂದಿಗೆ ಮಂಗಳ ಗೀತೆಗಳನ್ನು ಹಾಡುತ್ತ ಸುಂ
ಯರೂ ಚತುರೆಯರೂ ಆದ ಸಖಿಯರು ಹೋಗುತ್ತಿರುವರು. ಅಪಾರ ಶೋ
ನಾಂಗಿಯಾದ ಸೀತೆಯು ಬಾಲಹಂಸೆಯಂತೆ ನಡೆಯುತ್ತಿರುವಳು. ಜ್ಯೋತಿ
ಮಧ್ಯದಲ್ಲಿ ಒಂದು ದೊಡ್ಡ ಜ್ಯೋತಿಯು ಪ್ರಕಾಶಿಸುತ್ತಿರುವುದೊ ಎಂಬ
ಸಖಿಯರ ಮಧ್ಯದಲ್ಲಿ ಸೀತೆಯು ಶೋಭಿಸುತ್ತಿರುವಳು ವಿಶ್ವವಿಜಯ ಕಾ
ಯುಕ್ತವಾದ ಜಯಮಾಲೆಯು ಅವಳ ಹಸ್ತಕಮಲವನ್ನಲಂಕರಿಸಿರುವುದ
ಸೀತೆಯ ಬಾಹ್ಯಾಂಗಗಳು (ಲಜ್ಜೆಯಿಂದ) ಸಂಕುಚಿತವಾಗಿದ್ದರೂ ಮನಸ್ಸಿನ
ಉತ್ಸಾಹವು ಉಕ್ಕೇರುತ್ತಿರುವುದು ಗುಪ್ತ ಪ್ರೇಮವು ಯಾರಿಗೂ ಕಾಣಿಸುವುದಿ
ರಾಮಚಂದ್ರನ ಬಳಿ ಹೋಗಿ ಅವನ ಸೌಂದರ್ಯವನ್ನು ನೋಡಿದ ಕೂಡ

ಪಾಪ! ಆ ರಾಜಕುಮಾರಿಯು ಚಿತ್ರದ ಬೊಂಬೆಯಂತೆ ನಿಂತುಬಿಟ್ಟಳು. ಚತುರ ರಾದ ಸಖಿಯರು ಇದನ್ನು ನೋಡಿ, ಅವಳನ್ನು ಸಮಾಧಾನಪಡಿಸಿ, "ಆ ಸುಂದರವಾದ ಜಯಮಾಲೆಯನ್ನು ರಾಮಚಂದ್ರನಿಗೆ ಹಾಕು" ಎಂದರು. ಇದನ್ನು ಕೇಳಿದ ಕೂಡಲೆ ಸೀತೆಯು ಜಯಮಾಲೆಯನ್ನೆತ್ತಿದಳು. ಆದರೆ, ಪ್ರೇಮ ವಿವಶಳಾದವಳು ಹಾರವನ್ನು ಹಾಕಲಾರದೇ (ಸ್ವಲ್ಪಹೊತ್ತು ಸುಮ್ಮನೆ) ನಿಂತು ಬಿಟ್ಟಳು. ಆಗ ಸೀತೆಯ ಕೈಗಳೆರಡೂ ಚಂದ್ರನಿಗೆ ಜಯಮಾಲೆಯನ್ನು ಹಾಕು ತ್ತಿರುವ ಎರಡು ಕಮಲಗಳೋ ಎಂಬಂತೆ ಶೋಭಿಸಿದವು. ಸಖಿಯರು ಅದನ್ನು ನೋಡಿ ಹಾಡಲಾರಂಭಿಸಿದರು. (ಕೊನೆಗೆ) ಸೀತೆಯು ಶ್ರೀರಾಮಚಂದ್ರನ ಕೊರಳಿನಲ್ಲಿ ಜಯಮಾಲೆಯನ್ನು ತೊಡಿಸಿದಳು.

ಸೋ ॥ ೨೯೭ ॥ ಶ್ರೀರಾಮಚಂದ್ರನ ವಕ್ಷಸ್ಥಳದಲ್ಲಿ ಜಯಮಾಲೆಯನ್ನು ನೋಡಿ ದೇವತೆಗಳು ಪುಷ್ಪವೃಷ್ಟಿಗೈದರು ಸೂರ್ಯನನ್ನು ನೋಡಿ ಕುಮುದ ಗಳು ಮುದುರುವಂತೆ ರಾಮಚಂದ್ರನನ್ನು ನೋಡಿ ರಾಜರೆಲ್ಲರೂ ಸಂಕುಚಿತ ರಾದರು. ಜನಕಪುರದಲ್ಲಿಯೂ ಆಕಾಶದಲ್ಲಿಯೂ ಮಂಗಳ ವಾದ್ಯಗಳು ಮೊಳಗಿ ದವು. ದುರ್ಜನರ ಮುಖಗಳು ಮಲಿನವಾದವು, ಸಜ್ಜನರು ಪ್ರಸನ್ನವದನ ರಾದರು. ದೇವತೆಗಳು, ಕಿನ್ನರ, ನಾಗ ಮನುಷ್ಯ, ಮುನೀಶರಾದಿಯಾಗಿ ಎಲ್ಲರೂ ಜಯಘೋಷವನ್ನು ಮಾಡುತ್ತ ಆಶೀರ್ವದಿಸಲಾರಂಭಿಸಿದರು ಅಪ್ಸರೆ ಯರು ನರ್ತಿಸುತ್ತ ಗಾನಮಾಡಲಾರಂಭಿಸಿದರು ಬಾರಿ ಬಾರಿಗೂ ಪುಷ್ಪವೃಷ್ಟಿ ಯಾಯಿತು. ಅಲ್ಲಲ್ಲಿ ಬ್ರಾಹ್ಮಣರು ವೇದಘೋಷವನ್ನು ಮಾಡುತ್ತಿರುವರು, ವಂದಿ ಜನರು ಬಿರುದಾವಳಿಗಳನ್ನು ಹೇಳುತ್ತಲಿರುವರು. ರಾಮನು ಧನು ರ್ಭಂಗಮಾಡಿ ಸೀತೆಯನ್ನು ವರಿಸಿದನೆಂಬ ಯಶಸ್ಸು ಸ್ವರ್ಗ ಮರ್ತ್ಯ ಪಾತಾಳ ಲೋಕಗಳಲ್ಲೆಲ್ಲ ಹಬ್ಬಿತು. ಜನಕಪುರದ ನರನಾರಿಯರೆಲ್ಲರೂ ಆರತಿಗಳನ್ನು ಬೆಳಗುತ್ತ, ಮಿತಿಮೀರಿ ವಿತ್ತದಾನವನ್ನು ಕೊಡುತ್ತಿರುವರು. ಶೃಂಗಾರವೂ ಸೌಂದರ್ಯವೂ ಒಂದೆಡೆಯಲ್ಲಿ ಸೇರಿರುವವೊ ಎಂಬಂತೆ ಸೀತೆಯೂ ರಾಮ ಚಂದ್ರನೂ ಶೋಭಾಯಮಾನರಾಗಿರುವರು. ಸಖಿಯರು "ಸೀತೆ! ಪ್ರಭು ಪದ ಗಳನ್ನು ಮುಟ್ಟು" ಎಂದು ಹೇಳುತ್ತಿರುವರು. ಆದರೆ ಸೀತೆಯು ಅತಿ ಭೀತಳಾಗಿ ಚರಣಗಳನ್ನು ಮುಟ್ಟದೆ ನಿಂತಿದ್ದಾಳೆ.

ದೋ ॥ ೨೯೮ ॥ ಗೌತಮ ಪ್ರಿಯೆಗುಂಟಾದ ಗತಿಯನ್ನು ಸ್ಮರಿಸಿಕೊಂಡು ಸೀತೆಯು ಕೈಗಳಿಂದ ಪಾದಗಳನ್ನು ಮುಟ್ಟುವುದಿಲ್ಲ* ಏಕೆಂದರೆ ಕೈಗಳಲ್ಲಿ

---

* ಚಂಪೂರಾಮಾಯಣೇ—"ಶ್ರೀರಾಮಸ್ಯ ಪದಾರವಿನ್ದರಜಸಾ ಜಾತಾ ಶಿಲಾ ಸುಂದರೀ, ತಸ್ಮಾನ್ನಕ್ರಿಯತೇ ಮಯಾಹಿ ಶಿರಸಾ ತತ್ಪಾದಸಂಸ್ಪರ್ಶನಮ್ । ಕರ್ತ ವ್ಯಂ ಸಖಿ ಚೇತ್ತದಾ ಮಣಿಗಣಶ್ಚಾರುರ್ಲಲಾಟೇ ಸ್ಥಿತಃ, ಸ್ತ್ರೀತ್ವಂ ಪ್ರಾಪ್ಸ್ಯತಿ ರಾಘು

ರತ್ನದ ಬಳೆಗಳಿವೆ ಅವುಗಳೂ ಕಲ್ಲುಗಳೇ. ರಘುಕುಲ ಭೂಷಣನು (ರಾಮಚಂದ್ರನು) ಈ ಅಲೌಕಿಕ ಪ್ರೀತಿಯ ರೀತಿಯನ್ನರಿತು ನಸುನಗೆಯನ್ನು ತೋರಿದನು. ಆ ಸಮಯದಲ್ಲಿ ಸೀತೆಯನ್ನು ನೋಡಿ ರಾಜರೆಲ್ಲರು (ಇವಳನ್ನು ಹೊಂದುವ ಭಾಗ್ಯವು ನಮಗಿಲ್ಲದೇ ಹೋಯಿತಲ್ಲಾ! ಎಂಬ) ದುರಾಶೆಯುಳ್ಳವರಾದರು ಕ್ರೂರರೂ ಕುಪುತ್ರರೂ ಮೂರ್ಖರೂ ಆದ ರಾಜರು ಕ್ರೋಧವನ್ನು ತಳೆದರು ನಿರ್ಭಾಗ್ಯರಾದ ಅವರು (ರಾಮ ವಿವಾಹೋತ್ಸವದ ಆನಂದವನ್ನು ಬಿಟ್ಟು ದುರ್ಬುದ್ಧಿಯಿಂದ) ಅತ್ತಿತ್ತ ತಿರುಗಾಡುತ್ತ ತಲೆಹರಟೆಯ ಮಾತುಗಳನ್ನಾಡಲಾರಂಭಿಸಿದರು (ಅವರಲ್ಲಿ) ಕೆಲವರು ಸೀತೆಯನ್ನು ಎಳೆದುಕೊಳ್ಳಿರಿ! ರಾಜಕುಮಾರರಿಬ್ಬರನ್ನೂ ಕಟ್ಟಿಹಾಕಿರಿ! ಬಿಲ್ಲನ್ನು ಮುರಿದಕೂಡಲೆ ಕಾರ್ಯವಾದಂತಾಗಲಿಲ್ಲ! ನಮ್ಮನ್ನು ಗೆಲ್ಲದೆ ಕುವರಿಯನ್ನು ವರಿಸುವನಾರು? ಜನಕರಾಜನು (ಅವರಿಗೆ) ಸಹಾಯಮಾಡಿದರೆ ಅವನನ್ನೂ ಈ ಸೋದರರಿಬ್ಬರ ಸಮೇತ ಗೆಲ್ಲುವಾ!—ಎಂದು ಆರ್ಭಟಿಸಿದರು. ಅದನ್ನು ಕೇಳಿ ಸಜ್ಜನರಾದ ರಾಜರು— ಈ ರಾಜಸಭೆಯಲ್ಲಿ ಎಂತಹ ಲಜ್ಜಾಸ್ಪದವಾದ ಮಾತುಗಳನ್ನಾಡುತ್ತಿರುವಿರಿ? ನಿಮ್ಮ ಬಲ, ಪ್ರತಾಪ, ವೀರ ಶೂರತ, ಗೌರವಗಳೆಲ್ಲ ಧನುಸ್ಸಿನೊಂದಿಗೆ ಸ್ವರ್ಗಕ್ಕೆ ಹೋದವು ಈಗ ಅವುಗಳನ್ನು ನೀವು ಹೇಗೆ ಹೊಂದಿದಿರಿ? ನಿಮ್ಮ ಬುದ್ಧಿಯು ಹೀಗಿರುವುದರಿಂದಲೆ ವಿಧಾತನು ನಿಮ್ಮ ಮುಖಕ್ಕೆ ಮಸಿ ಬಳಿದನು.

ದೋ ॥ ೨೬೯ ॥ ಭ್ರಾತೃಗಳೇ! ಈರ್ಷೆ, ಮದ, ಕ್ರೋಧಗಳನ್ನು ತ್ಯಜಿಸಿ ರಾಮಚಂದ್ರನನ್ನು ಕಣ್ತುಂಬ ನೋಡಿರಿ ಲಕ್ಷ್ಮಣನ ಕ್ರೋಧವೆಂಬ ಅಗ್ನಿಯಲ್ಲಿ ತಿಳಿದು ತಿಳಿದು ಪತಂಗದಂತೆ ಬೀಳಬೇಡಿರಿ. ಕಾಗೆಯು ಗರುಡನಾಗಲಪೇಕ್ಷಿಸಿದಂತೆ, ಮೊಲವು ಸಿಂಹವಾಗಲಿಚ್ಛಿಸಿದಂತೆ, ಅಕಾರಣ ಕೋಪಿಯಾದವನು ತನ್ನ ಕ್ಷೇಮವನ್ನು ಬಯಸುವಂತೆ, ಶಿವದ್ರೋಹಿಯಾದವನು ಸಕಲ ಸಂಪತ್ತನ್ನೂ ಆಶಿಸುವಂತೆ, ಲೋಭಿಗಳೂ ತಿಂಡಿಪೋತರೂ ಕೀರ್ತಿ ಗಳಿಸಲಿಚ್ಛಿಸುವಂತೆ, ವ್ಯಭಿಚಾರಿಗಳು ತಮಗೆ ಕಲಂಕ ಬರಕೂಡದೆಂದು ಬಗೆಯುವಂತೆ, ಭಗವಚ್ಚರಣದಿಂದ ವಿಮುಖರಾದ ಮಾನವರು ಸದ್ಗತಿಯನ್ನಿಚ್ಛಿಸಿದಂತೆ,*—ಹೇ ನರೇಶ್ವರರೇ!—

---

ವಸ್ಯ ಚ ಮಯಿ ಪ್ರೀತಿಸ್ತತೋ ನಾಧಿಕಾ ॥" ಎಂದರೆ ಸೀತೆಯು ಇಂತೆಂದಳು— ಶ್ರೀರಾಮಚಂದ್ರನ ಚರಣಕಮಲ ಧೂಳಿಯಿಂದ ಶಿಲೆಯು ಸ್ತ್ರೀಯಾಗಿ ಮಾರ್ಪಟ್ಟಿತು ಅದ್ದರಿಂದ ನಾನು ಚರಣಗಳನ್ನು ಸ್ಪರ್ಶಿಸುವುದಿಲ್ಲ ಏಕೆಂದರೆ ನನ್ನ ಶಿರೋಭೂಷಣಗಳಾಗಿರುವರ ರತ್ನಗಳೆಲ್ಲ ಸ್ತ್ರೀಯರಾದರೆ, ನನ್ನ ಮೇಲೆ ಆತನ ಪ್ರೀತಿಯು ಅಧಿಕವಾಗಿರಲಾರದು.

* ಇವರ ಸಂಬಂಧವಾಗಿ ಹೇಳಿರುವುದೇನೆಂದರೆ—" ಯೋ ವಾಸುದೇವಾದನ್ಯತ್ರ ಮೋಕ್ಷಂ ಪ್ರಾರ್ಥಯತೇಽಲ್ಪಧೀ। ಅಗ್ನಿಭ್ರಾಂತೇಃ ಸ ಖದ್ಯೋತಂ ಶೀತತ್ರಾಣಾಯ ಕಲ್ಪತೇ॥ ಎಂದರೆ ಭಗವಂತನನ್ನು ಬಿಟ್ಟು ಮೋಕ್ಷ ಪ್ರಾಪ್ತಿಗಾಗಿ ಅನ್ಯ ಉಪಾಸನ

ನಿಮಗೆ ದುರಾಶೆಯುಂಟಾಗಿದೆ"–ಎಂದರು. ಈ ಕೋಲಾಹಲವನ್ನು ಕೇಳಿ ಸೀತೆಯು ಸಂದೇಹವನ್ನು ತಳೆದಳು. ಅಷ್ಟರಲ್ಲಿ ಸಖಿಯರು ಅವಳನ್ನು ರಾಣಿ ಜನರಿದ್ದೆಡೆಗೆ ಕರೆದುಕೊಂಡು ಹೋದರು. ರಾಮಚಂದ್ರನು ಸೀತೆಯ ಪ್ರೀತಿಯನು ಮನಸ್ಸಿನಲ್ಲಿ ಬಣ್ಣಿಸುತ್ತ ಎಂದಿನಂತೆ ಸ್ವಾಭಾವಿಕವಾಗಿ ವಿಶ್ವಾಮಿತ್ರನ ಬಳಿಗೆ ತೆರಳಿದನು (ಇತ್ತ) ರಾಣಿಯರೊಂದಿಗೆ ಸೀತೆಯು–ಈಗ ವಿಧಿಯು ಏನುಮಾಡಬೇಕೆಂದಿರುವುದೋ?–ಎಂದು ಚಿಂತಿಸಲಾರಂಭಿಸಿದಳು ಆ ರಾಜರ ವಚನಗಳನ್ನು ಕೇಳಿ ಲಕ್ಷ್ಮಣನು ಅತ್ತಿತ್ತ ನೋಡುತ್ತ ರಾಮಚಂದ್ರನ ಭಯದಿಂದ ಮಾತಾಡದಿರುವನು.

### ಪರಶುರಾಮನು ಜನಕನ ಸಭೆಗೆ ಬರುವುದು.

ದೋ ॥ ೩೦೦ ॥ ಲಕ್ಷ್ಮಣನ ಕಣ್ಣುಗಳು ಕೆಂಪಾಗಿವೆ, ಹುಬ್ಬು ಗಂಟಿಕ್ಕಿವೆ ಸಿಂಹದ ಮರಿಯು ಮತ್ತಗಜಗಣವನ್ನು ನೋಡಿ ಅದರ ಮೇಲೆ ಹಾರಬೇಕೆಂದಿರುವಂತೆ ಕೋಪಾವೇಶದಿಂದ ಅವನು ರಾಜರನ್ನು ನೋಡುತ್ತಿರುವನು. ಈ ಬಗೆಯ (ರಾಜರ) ಬೊಬ್ಬೆಯನ್ನು ಕೇಳಿ ಜನಕಪುರದ ಸ್ತ್ರೀಯರು ವ್ಯಾಕುಲರಾಗಿ, ಆ ರಾಜರನ್ನು ಬೈಯ್ಯಲಾರಂಭಿಸಿದರು ಆ ಸಮಯದಲ್ಲಿ ಶಿವಧನುರ್ಭಂಗ ಧ್ವನಿಯನ್ನು ಕೇಳಿ ಭೃಗುಕುಲಕಮಲಕ್ಕೆ ಸೂರ್ಯ ಸ್ವರೂಪನಾದ (ಪರಶುರಾಮನು) ‡ ಬಂದನು ಕೊಕ್ಕರೆಯನ್ನು ನೋಡಿ ಕ್ರೌಂಚವು ಅಡಗಿಕೊಳ್ಳುವಂತೆ ಅವನನ್ನು ನೋಡಿ ರಾಜರೆಲ್ಲರೂ ಸಂಕುಚಿತರಾದರು ಪರಶುರಾಮನು ಗೌರಾಂಗನು, ದೇಹಕ್ಕೆ ಭಸ್ಮವನ್ನು ಬಳಿದಿರುವನು, ಅವನ ವಿಶಾಲವಾದ ಲಲಾಟದಲ್ಲಿ ತ್ರಿಪುಂಡ್ರ ತಿಲಕವು ಶೋಭಾಯಮಾನವಾಗಿದೆ. ಮಸ್ತಕದಲ್ಲಿ ಜಟೆಯು ಶೋಭಿಸುತ್ತಲಿದೆ, ಚಂದ್ರನಂತೆ ಸುಂದರ ಮುಖಮಂಡಲವಿದೆ, ಅವನು ಕೋಪದಿಂದ ಸ್ವಲ್ಪ ಕೆಂಪೇರಿಬಂದಿರುವನು. ಹುಬ್ಬುಗಳು ಗಂಟಿಕ್ಕಿವೆ, ಕೋಪದ ದೆಸೆಯಿಂದ ಕಣ್ಣುಗಳಿಂದ

---

ಯನ್ನು ಮಾಡುವವರು, ಭ್ರಾಂತಿಯಿಂದ ಮಿಂಚಿನ (ಮಿಣುಕು) ಹುಳುವನ್ನು ಅಗ್ನಿಯೆಂದು ಭಾವಿಸಿ ಅದರಿಂದ ತಮ್ಮ ಶೀತನಿವಾರಣೆಯನ್ನು ಮಾಡಿಕೊಳ್ಳಲಿಚ್ಛಿಸುವವರಂತಿರುವರು.

‡ ಕುಶಾಂಬು ರಾಜನಿಗೆ ಗಾಧಿ ಎಂಬ ಮಗನೂ ಸತ್ಯವತಿಯೆಂಬ ಮಗಳೂ ಹುಟ್ಟಿದರು ಋಚೀಕನು ಸತ್ಯವತಿಯನ್ನು ಮದುವೆಯಾದನು. ಒಂದು ಸಮಯದಲ್ಲಿ ಅತ್ತೆ ಸೊಸೆಯರಿಬ್ಬರೂ ತಮಗೆ ಋಷಿಪುತ್ರನು ಹುಟ್ಟಬೇಕೆಂದಾಶಿಸಿದರು. ಆಗ ಋಷಿಯು ಒಂದು ಚರುವನ್ನು ಬ್ರಾಹ್ಮಮಂತ್ರದಿಂದಲೂ ಮತ್ತೊಂದು ಚರುವನ್ನು ಕ್ಷಾತ್ರ ಮಂತ್ರದಿಂದಲೂ ಮಂತ್ರಿಸಿ ಅವರಿಗೆ ಕೊಟ್ಟು ಸ್ನಾನಕ್ಕೆ ಹೊರಟು ಹೋದನು. ಆ ಮೇಲೆ ಮರೆವೆಯಿಂದ ತಾಯಿಯ ಭಾಗವನ್ನು ಸೊಸೆಯೂ ಸೊಸೆಯ ಭಾಗವನ್ನು ತಾಯಿಯೂ ಸೇವಿಸಿದರು ಆಗ ಮುನಿಯು ಬಂದು ನಡೆದ ಸುದ್ದಿಯನ್ನು ಕೇಳಿ, ನಿನ್ನ ಪುತ್ರನು ಕ್ಷತ್ರಿಯನಾಗುವನು, ಅತ್ತೆಯ ಮಗನು ಬ್ರಾಹ್ಮಣನಾಗುವನು

ಕಿಡಿಗಳುದುರುತ್ತಲಿವೆ. (ಅದನ್ನು ನೋಡಿದವರೆಲ್ಲರಿಗೂ) ಕೋಪಭರಿತನಾಗಿರುವಂತೆ ಕಾಣಿಸುತ್ತಿರುವನು, ಅವನು ವೃಷಸ್ಕಂಧನು, ವಿಶಾಲವಾದ ಎದೆ ಮತ್ತು ಭುಜಗಳುಳ್ಳವನು, ಸುಂದರವಾದ ಯಜ್ಞೋಪವೀತ (ಜನಿವಾರ) ವನ್ನು ಧರಿಸಿ ಮಾಲೆಯನ್ನೂ ವ್ಯಾಘ್ರಚರ್ಮವನ್ನೂ ತೆಗೆದುಕೊಂಡು ನಡುವಿನಲ್ಲಿ ಮುನಿವಸ್ತ್ರವನ್ನೂ ಎರಡು ಬತ್ತಳಿಕೆಗಳನ್ನೂ ಕಟ್ಟಿಕೊಂಡು, ಕೈಯಲ್ಲಿ ಧನುರ್ಬಾಣಗಳನ್ನು ಹಿಡಿದು, ಹೆಗಲಮೇಲೆ ಉತ್ತಮವಾದ ಕುಠಾರವನ್ನು (ಕೊಡಲಿಯನ್ನು) ಹೊತ್ತಿರುವನು.

ದೋ ॥ ೨೦೧॥ ವೇಷವು ಸಂತರದರಂತಿದ್ದರೂ ಅವನು ಮಾಡುವ ಕಾರ್ಯಗಳು ಕ್ರೂರವಾಗಿರುವವು. ಅವನ ಸ್ವರೂಪವನ್ನು ಬಣ್ಣಿಸಲಾಗದು. ಆ ರಾಜಸಭೆಗೆ ವೀರರಸವೇ ಮೂರ್ತಿರೂಪವನ್ನು ಧರಿಸಿ ಬಂದಿರುವಂತೆ ಕಾಣುತ್ತಿದೆ. ಭೃಗುಪತಿಯ (ಪರಶುರಾಮನ) ವೇಷವನ್ನು ನೋಡಿದ ಕೂಡಲೆ, ರಾಜರೆಲ್ಲರೂ ಭಯದಿಂದ ವ್ಯಾಕುಲರಾಗಿ ಎದ್ದು, ತಂತಮ್ಮ ಪ್ರವರೋಚ್ಚಾರ ಮಾಡುತ್ತ ಎಲ್ಲರೂ ಅವನಿಗೆ ಪ್ರಣಾಮಮಾಡಿದರು ಇಂಥವನು ತನ್ನ ಪ್ರೀತಿಪಾತ್ರನೆಂದು ಪರಶುರಾಮನು ಯಾವನನ್ನು ನೋಡುವನೊ ಅವನು ಇಂದಿಗೆ ನನ್ನ ಆಯುಷ್ಯವು ಮುಗಿಯಿತೆಂದು ತಿಳಿಯುವನು ಜನಕರಾಯನು ಬಂದು ತಲೆಬಾಗಿಸಿ ಪ್ರಣಾಮ ಮಾಡಿ, ಸೀತೆಯನ್ನು ಕರೆಯಿಸಿ ಅವಳಿಂದಲೂ ಪ್ರಣಾಮ ಮಾಡಿಸಿದನು. ಆಗವನು ಸೀತೆಗೆ ಆಶೀರ್ವಾದವಿತ್ತುದನ್ನು ಕಂಡು ಸಖಿಯರೆಲ್ಲರೂ ಪ್ರಸನ್ನರಾಗಿ ಮತ್ತೆ ಸೀತೆಯನ್ನು ತಮ್ಮ ಗುಂಪಿದ್ದಲ್ಲಿಗೆ ಕರೆದುಕೊಂಡು ಹೋದರು. ಅನಂತರ ವಿಶ್ವಾಮಿತ್ರನು ಭೇಟಿಯಾಗ ಸೋದರರಿಬ್ಬರಿಂದಲೂ ಪ್ರಣಾಮಮಾಡಿಸಿ, ಇವರು ದಶರಥ ಪುತ್ರರಾದ ರಾಮ ಲಕ್ಷ್ಮಣರು ಎಂದು ಪರಿಚಯಮಾಡಿಸಿದನು. ಕಾಮದೇವನ ಮದವನ್ನು ಮರ್ದಿಸುವ ಅಪಾರವಾದ ರೂಪವುಳ್ಳ ಸುಂದರಾದವರಿಬ್ಬರನ್ನೂ ಪರಶುರಾಮನು ಆಶೀರ್ವದಿಸಿದನು. ಮತ್ತೆ ಅವನು ಶ್ರೀರಾಮಚಂದ್ರನನ್ನು ಕಣ್ತುಂಬ ನೋಡುತ್ತಿದ್ದನು.

ದೋ ॥ ೨೦೨॥ ಅನಂತರ ಜನಕರಾಜನ ಕಡೆಗೆ ನೋಡಿ, ಇದೇನು ಕೋಲಾಹಲವೆಂದು ಕಂಡರಿಯದವನಂತೆ ಕೇಳುತ್ತ ಕೋಪಭರಿತನಾದನು ರಾಜರು

---

ಎಂದು ಹೇಳಿದನು. ಆಗ ಹೆಂಡತಿಯು ವ್ಯಾಕುಲಳಾದುದರಿಂದ ಕರುಣೆ ಹುಟ್ಟಿ ನಿನ್ನ ಪೌತ್ರನು ಕ್ಷತ್ರಿಯನಾಗುವನು ಎಂದು ಹೇಳಿದನು. ಮುಂದೆ ಅವಳಲ್ಲಿ ಜಮದಗ್ನಿಯು ಹುಟ್ಟಿದನು. ಸತ್ಯವತಿಯು ಕೌಶಿಕೀ ಎಂಬ ನದಿಯಾದಳು. ಜಮದಗ್ನಿಯು ಪ್ರಸೇನಜಿತ್ ರಾಜನ ಮಗಳಾದ ರೇಣುಕೆಯನ್ನು ಮದುವೆಯಾದನು. ಅವಳಲ್ಲಿ ವಸುಮಾನ್ ಮೊದಲಾಗಿ ಎಂಟುಜನ ಮಕ್ಕಳು ಹುಟ್ಟಿದರು. ಅವರಲ್ಲಿ ಕೊನೆಯವನೇ ಪರಶುರಾಮನು.

ಬಂದಿದ್ದ ಕಾರಣವನ್ನು ಜನಕನು ಅವನಿಗೆ ತಿಳಿಸಿದನು. ಆ ಮಾತುಗಳನ್ನು ಕೇಳುತ್ತ ಪರಶುರಾಮನು ಮತ್ತೊಂದುಕಡೆ ತಿರುಗಿನೋಡಿದನು. ಅಲ್ಲಿ ನೆಲದ ಮೇಲೆ ಧನುಸ್ಸಿನ ತುಂಡುಗಳು ಬಿದ್ದಿರುವುದನ್ನು ಕಂಡನು. ಆಗವನು ಕ್ರೋಧ ದಿಂದ ನುಡಿದ ಬಿರುನುಡಿಗಳಿಂತಿರುವವು:—ಎಲೋ ಮೂಢ ಜನಕ! ಈ ಧನು ಸ್ಸನ್ನು ಮುರಿದವನಾರೆಂದು ತೋರಿಸು! ಎಲೋ ಮೂರ್ಖ, ಅವನನ್ನು ಬೇಗ ತೋರಿಸದಿದ್ದರೆ ನಿನ್ನ ರಾಜ್ಯವಾಗಿರುವ ಭೂಭಾಗವನ್ನು ತಲೆಕೆಳಗೆ ಮಾಡಿಬಿಡು ವೆನು.—ಜನಕರಾಜನು ಹೆದರಿ ಯಾವ ಉತ್ತರವನ್ನೂ ಕೊಡಲಿಲ್ಲ. ದುಷ್ಟರಾದ ರಾಜರು ಮನಸ್ಸಿನಲ್ಲಿ ಹರ್ಷವನ್ನು ತಳೆದರು. ದೇವತೆಗಳು, ಮುನಿ, ನಾಗ, ನಗರವಾಸಿಗಳಾದಿಯಾಗಿ ಸ್ತ್ರೀಪುರುಷರೆಲ್ಲರೂ ಚಿಂತಿಸುತ್ತ ಬಹು ಕಷ್ಟವನ್ನನುಭವಿ ಸಿದರು. ಇದುವರೆಗೆ ಸರಿಯಾಗಿದ್ದುದನ್ನೆಲ್ಲ ವಿಧಿಯು ಹೇಗೆ ಬಿಗಡಾಯಿಸಿಬಿಟ್ಟ ನಲ್ಲ ಎಂದು ಸೀತೆಯ ಮಾತೆಯು ಪರಿತಪಿಸಲಾರಂಭಿಸಿದಳು. ಪರಶುರಾಮನ ನಿಜಗುಣವನ್ನರಿತ ಸೀತೆಗೆ ಒಂದು ನಿಮಿಷವೆಂಬುದು ಒಂದು ಕಲ್ಪದಂತೆ ತೋರಿತು.

ದೋ ॥೩೦೩॥ ಸುಖದುಃಖಾತೀತನಾದ ಶ್ರೀರಘುವೀರನು ಜನಗಳೆಲ್ಲರೂ ಭಯಭ್ರಾಂತರಾದುದನ್ನೂ ಜಾನಕಿಯ ಸಂಕಟವನ್ನೂ ಕಂಡು (ಪರಶುರಾಮ ನನ್ನು ಕುರಿತು)—ಹೇ ನಾಥ! ಶಿವಧನುಸ್ಸನ್ನು ಮುರಿದವನು ನಿಮ್ಮದಾಸರಲ್ಲೊಬ್ಬ ನಾಗಿರಬಹುದು. ತಮ್ಮ ಅಪ್ಪಣೆಯು ಏನೆಂದು ನನಗೆ ತಿಳುಹಿಸಿ—ಎಂದನು. ಈ ಮಾತನ್ನು ಕೇಳಿ ಕೋಪಿಯಾದ ಋಷಿಯು (ಪರಶುರಾಮನು) ಮತ್ತಷ್ಟು ಕೋಪದಿಂದ ಮಾತನಾಡಿದನು —'ಎಲೋ ರಾಮ! ಸೇವೆಯನ್ನು ಮಾಡುವವನು ಸೇವಕನು. ಅವನು ಶತ್ರುಕಾರ್ಯವನ್ನು ಮಾಡಿದರೆ ನನ್ನೊಂದಿಗೆ ಯುದ್ಧ ಮಾಡಬೇಕಾಗುವುದು. ರಾಮ! ಈ ಶಿವಧನುರ್ಭಂಗ ಮಾಡಿದವನು ನನಗೆ ಸಹಸ್ರಬಾಹುವಿನಂತೆ (ಕಾರ್ತ್ಯವೀರ್ಯಾರ್ಜುನನಂತೆ) * ಶತ್ರುವಾಗಿರುವನು

* ಪರಶುರಾಮನ ಪಿತನಾದ ಜಮದಗ್ನಿಯು ಒಂದು ಸಮಯದಲ್ಲಿ ಸಹಸ್ರಾ ರ್ಜುನನನ್ನು ತನ್ನ ಆಶ್ರಮಕ್ಕೆ ಕರೆಯಿಸಿ, ಸೇನಾ ಪರಿವಾರ ಸಮೇತನಾಗಿ ಅವನಿಗೆ ಇಚ್ಛಿತ ಭೋಜನವನ್ನು ಮಾಡಿಸಿದನು. ವನವಾಸಿಯಾದ ಮುನಿಗೆ ಇಷ್ಟು ಐಶ್ವರ್ಯವೆಲ್ಲಿಂದ ಬಂದಿತೆಂದು ರಾಜನಿಗೆ ಸಂಶಯವಾಗಿ, ಕೊನೆಗೆ ಅವೆಲ್ಲವೂ ಮುನಿಯ ಬಳಿ ಇರುವ ಕಾಮಧೇನುವಿನಿಂದ ಪ್ರಾಪ್ತವಾದುದೆಂದು ತಿಳಿಯಿತು. ಆಗ ರಾಜನು ಕಾಮಧೇನು ವನ್ನು ತನಗೆ ಕೊಡುವಂತೆ ಬೇಡಿದನು. ಮುನಿಯು ಕೊಡಲಿಲ್ಲ. ಆಗ ಸಹಸ್ರ ಬಾಹುವು ಜಮದಗ್ನಿಯನ್ನು ಕೊಂದು ಕಾಮಧೇನುವನ್ನು ಕಿತ್ತುಕೊಂಡನು. ಕಾಮ ಧೇನುವು ಸ್ವರ್ಗಕ್ಕೆ ಹೋಯಿತು. ಆ ಸಮಯದಲ್ಲಿ ಹೊರಗೆ ಹೋಗಿದ್ದ ಪರಶು ರಾಮನು ಈ ಸುದ್ದಿಯನ್ನು ಕೇಳಿ ಮಾಹಿಷ್ಮತೀನಗರಕ್ಕೆ ಹೋಗಿ ಯುದ್ಧದಲ್ಲಿ ಕಾರ್ತ್ಯ ವೀರ್ಯಾರ್ಜುನನನ್ನು ಕೊಂದನು. ಮತ್ತೆ ಪೃಥ್ವಿಯಲ್ಲಿ ಕ್ಷತ್ರಿಯರಿಲ್ಲದಿರುವಂತೆ ಮಾಡುವೆನೆಂದು ಪ್ರತಿಜ್ಞೆಮಾಡಿ, ೨೧ ಬಾರಿ ಪೃಥ್ವಿಯನ್ನು ಸುತ್ತಿ ಕ್ಷತ್ರಿಯರನ್ನು ನಾಶ ಗೊಳಿಸಿದನು.

ಆ ವೈರಿಯು ಸಭೆಯಿಂದೆದ್ದು ಬರಲಿ, ಇಲ್ಲವಾದರೆ ಎಲ್ಲ ರಾಜರನ್ನೂ ಸಂಹರಿಸುವೆನು" ಎಂದನು. ಪರಶುರಾಮನ ಈ ಮಾತುಗಳನ್ನು ಕೇಳಿ ಲಕ್ಷ್ಮಣನು ನಸುನಗೆಯಿಂದ ಪರಶುರಾಮನಿಗೆ ಅಪಮಾನವಾಗುವಂತೆ ಈ ಮಾತುಗಳನ್ನಾಡಿದನು.—ಹೇ ಗೋಸಾಯಿ! ಬಾಲ್ಯದಲ್ಲಿ ಅನೇಕ ಧನುಸ್ಸುಗಳನ್ನು (ಈ ಸಮರ್ಥನು) ಮುರಿದಿರುವನು. ‡ ಆಗ ಹೀಗೆ ಕೋಪಿಸಿಕೊಳ್ಳಲಿಲ್ಲ. ಈಗ ಈ ಧನುಸ್ಸಿನಮೇಲೆ ಇಷ್ಟು ಮಮತೆಯೇಕೆ ಬಂದಿತು."—ಇದನ್ನು ಕೇಳಿ ಭೃಗುಕುಲಕೇತುವು (ಪರಶುರಾಮನು) ಕೋಪದಿಂದ ಇಂತೆಂದನು.—

ದೋ ॥ ೦೪ ॥ ಹೇ ನೃಪಬಾಲಕ! ನಿನ್ನ ಕಾಲವು ಸಮಿಾಪಿಸಿರುವುದು! ನೀನು ಚೆನ್ನಾಗಿ ಯೋಚಿಸಿ ಮಾತಾಡುತ್ತಿಲ್ಲ. ಸಮಗ್ರ ಜಗತ್ತಿನಲ್ಲಿ ಮಹಾಶೂರನೆನಿಸಿದ ತ್ರಿಪುರಾರಿಯ ಈ ಧನುಸ್ಸಿಗೆ ಆ ಚಿಕ್ಕ ಧನುಸ್ಸುಗಳು ಸಮವೇ!" (ಈ ಮಾತುಗಳನ್ನು ಕೇಳಿ) ಲಕ್ಷ್ಮಣನು ನಕ್ಕು—"ಹೇ ದೇವ! ಎಲ್ಲ ಧನುಸ್ಸುಗಳೂ ಸಮಾನವೆಂದು ನಾನು ತಿಳಿದಿರುವೆನು. ಹಳೆಯ ಬಿಲ್ಲನ್ನು ಮುರಿದುದರಿಂದಾದ ಹಾನಿಲಾಭವಾವುದು? ಶ್ರೀರಾಮಚಂದ್ರನು ಇದನ್ನು ಹೊಸ ಬಿಲ್ಲೆಂದು ತಿಳಿದಿದ್ದನು. ಆದರೆ ಇದು ಮುಟ್ಟಿದ ಕೂಡಲೆ ಮುರಿಯಿತು ಹೇ ಮುನಿವರ, ವಿನಾಕಾರಣ ಕೋಪಿಸುವೆಯೇಕೆ?" ಎಂದನು. ಆಗ ಪರಶುರಾಮನು ತನ್ನ ಪರಶುವಿನ ಕಡೆಗೆ ನೋಡಿಕೊಂಡು, "ಎಲೋ ದುರುಳ, ನೀನು ನನ್ನ ಸ್ವಭಾವ

---

‡ ಪರಶುರಾಮನು ಕ್ಷತ್ರಿಯರನ್ನೆಲ್ಲ ನಾಶಗೊಳಿಸಿದಾಗ ಅವರ ಧನುಸ್ಸುಗಳನ್ನೆಲ್ಲ ತಂದು ತನ್ನಲ್ಲಿ ಸಂಗ್ರಹಿಸಿಟ್ಟುಕೊಂಡಿದ್ದನು. ಅವುಗಳೊಂದಿಗೆ ಹಲವು ದೇವತೆಗಳ ಧನುಸ್ಸುಗಳನ್ನೂ ತಂದಿಟ್ಟಿದ್ದನು. ಅವುಗಳ ಭಾರದದೆಸೆಯಿಂದ ಪೃಥ್ವಿಯೂ ಶೇಷನೂ ಹೆದರಿದರು. ಆಗ ಪೃಥ್ವಿಯು ಮಾತೆಯರೂಪವನ್ನೂ ಶೇಷನು ಪುತ್ರನರೂಪವನ್ನೂ ಧರಿಸಿ ಈ ಧನುಸ್ಸುಗಳು ರಾಕ್ಷಸರ ಕೈಗೆ ಸಿಕ್ಕರೆ ಪ್ರಳಯವಾಗುವುದೆಂದು ಭಾವಿಸಿ, ಪರಶುರಾಮನ ಬಳಿಗೆ ಬಂದು ನಾವು ಮಾತಾ ಪುತ್ರರಿಬ್ಬರೂ ಬಹು ಸಂಕಷ್ಟಕ್ಕೊಳಗಾಗಿರುವೆವು, ನಮಗೆ ಹೊಟ್ಟೆಗೆ ಅನ್ನವಿಲ್ಲ. ಅಪ್ಪಣೆಯಾದರೆ ನಾವು ಇಲ್ಲಿಯೇ ತಮ್ಮ ಸೇವೆಯನ್ನು ಮಾಡುತ್ತಲಿರುವೆವು ಬೇರೆ ಋಷಿಗಳ ಬಳಿಗೆ ನಾನು ಹೋದಾಗ ಅವರು ಈ ಪುತ್ರನ ಚಂಚಲತೆಯನ್ನು ನೋಡಿ ಆಶ್ರಯವನ್ನು ಕೊಡಲಿಲ್ಲ. ತಾವು ಈ ಹುಡುಗನ ಅಪರಾಧವನ್ನು ಸಹಿಸಿಕೊಂಡು, ತಮ್ಮ ಸೇವೆಯನ್ನು ಮಾಡಲು ನನಗೆ ಅಪ್ಪಣೆಯನ್ನೀಯಬೇಕು" ಎಂದಳು. ಆಗ ಮುನಿಯು ಕರುಣೆಯಿಂದ "ನಿನ್ನ ಪುತ್ರನ ಅಪರಾಧಗಳನ್ನು ಸಹಿಸಿಕೊಳ್ಳುವೆನು ನೀವಿಬ್ಬರೂ ಇಲ್ಲಿರಬಹುದು" ಎಂದನು. ಒಂದುದಿನ ಪರಶುರಾಮನು ಹೊರಗೆ ಹೋಗಿದ್ದಾಗ ಆ ಬಾಲಕನು ಅಲ್ಲಿದ್ದ ಧನುಸ್ಸುಗಳನ್ನೆಲ್ಲ ಮುರಿದುಬಿಟ್ಟನು ಅದರ ಧ್ವನಿಯನ್ನು ಕೇಳಿ ಪರಶುರಾಮನು ಬಂದು, ಕೋಪಿಸದೆ ಹುಡುಗನನ್ನು ಆಶೀರ್ವದಿಸಿ, ಮಾತಾ ಪುತ್ರರನ್ನು ಬೀಳ್ಕೊಟ್ಟನು. ಆಗ ಶೇಷನು ತನ್ನ ನಿಜರೂಪವನ್ನು ತೋರಿಸಿ ಮುಂದೆ ಶಿವಧನುಸ್ಸನ್ನು ಮುರಿದಾಗ ಮತ್ತೆ ಸಂಭಾಷಣೆಯಾಗುವುದೆಂದು ಹೇಳಿ ಅಂತರ್ಧಾನವನ್ನೈದಿದನು.

ವನ್ನರಿಯೆ. ಬಾಲಕನಾದುದರಿಂದ † ನಿನ್ನನ್ನು ನಾನು ಕೊಲ್ಲುವುದಿಲ್ಲ. ಹೇ ಮೂರ್ಖ! ನಾನು ಕೇವಲ ಮುನಿವೃತ್ತಿಯುವನೆಂದು ತಿಳಿದುಕೊಂಡಿರುವೆ. ಬಾಲ ಬ್ರಹ್ಮಚಾರಿಯಾದ ನಾನು ಅತಿಕೋಪಿಯು, ಕ್ಷತ್ರಿಯ ಕುಲದ್ರೋಹಿಯೆಂದು ಜಗತ್ತಿನಲ್ಲಿ ಪ್ರಸಿದ್ಧನಾಗಿರುವೆನು. ನಾನು ನನ್ನ ಭುಜಬಲದಿಂದ ಭೂಮಿಯಲ್ಲಿ ಭೂಪಾಲರಿಲ್ಲದಂತೆ ಮಾಡಿದೆನು. ಹಲವು ಬಾರಿ ನಾನು ಮಹಿಯನ್ನು ಭೂಸುರರಿಗೆ ದಾನಮಾಡಿದೆನು. ಎಲೋ ರಾಜಕುಮಾರ! ಸಹಸ್ರ ಬಾಹುವಿನ ಭುಜಗಳನ್ನು ಕತ್ತರಿಸಿದ ನನ್ನ ಪರಶುವನ್ನು ನೋಡು?

ದೋ ॥ ೨೭೨ ॥ ಎಲೌ ರಾಜಕಿಶೋರ, ಮಾತಾಪಿತೃಗಳ (ದುಃಖವನ್ನು) ಚಿಂತಿಸದೆ, ಗರ್ಭದಲ್ಲಿರುವ ಮಕ್ಕಳನ್ನು ಕೂಡ ಸಂಹರಿಸುವ ನನ್ನ ಈ ಪರಶು ಭಯಂಕರವಾದುದು"––ಎಂದನು. (ಅದಕ್ಕೆ) ಲಕ್ಷ್ಮಣನು ನಕ್ಕು ಕೋಮಲ ವಾಣಿಯಿಂದ—"ಹೇ ಮುನಿರಾಜ! ನೀನೇ ಬಹು ಶೂರ ವೀರನೆಂದು ನೀನು ತಿಳಿದುಕೊಂಡಿರುವೆ! ಬಾರಿ ಬಾರಿಗೂ ನನಗೆ ನಿನ್ನ ಕೊಡಲಿಯನ್ನು ತೋರಿಸುತ್ತಿರುವೆ. ನೀನು ಬೆಟ್ಟವನ್ನು ನಿನ್ನ ಉಸಿರಿನಿಂದ ಹಾರಿಸಬೇಕೆಂದಪೇಕ್ಷಿಸುವೆ. ನಿನ್ನ ತರ್ಜನೀಬೆರಳನ್ನು ನೋಡಿ ಹೆದರಿ ಸಾಯುವ ಕುಂಬಳಕಾಯಿಯ ಹೀಚಿನಂತಿರುವವರಾರೂ ಇಲ್ಲಿ ಇಲ್ಲ (ಕುಂಬಳಕಾಯಿಯ ಹೀಚುಗಳು ಮುಟ್ಟಿದ ಕೂಡಲೆ ತಾಯಿಬಳ್ಳಿಯನ್ನು ಬಿಟ್ಟುದುರುವವು). ನಿನ್ನ ಕೊಡಲಿಯೂ ಧನುರ್ಬಾಣಗಳೂ ಕ್ಷತ್ರಿಯತ್ವದ ಲಕ್ಷಣವೆಂದರಿತು ನಿನಗೆ ನಾನು ಅಭಿಮಾನ ಪೂರ್ವಕವಾಗಿ ಹೇಳುತ್ತಿರುವೆನು, (ಕೇಳು) ನೀನು ಭೃಗುವಂಶಜನೆಂದು ತಿಳಿದು, ನಿನ್ನ ಯಜ್ಞೋಪವೀತವನ್ನು ನೋಡಿ (ಬ್ರಾಹ್ಮಣನೆಂದು ತಿಳಿದು) ನಾನು ಕೋಪವನ್ನು ಇದುವರೆಗೆ ತಡೆದುಕೊಂಡು ಮಾತನಾಡಿದೆನು. ನಮ್ಮ ರಘುವಂಶದವರು ದೇವತೆಗಳು ಬ್ರಾಹ್ಮಣರು, ಭಗವದ್ಭಕ್ತರು ಮತ್ತು ಗೋ ಮಾತೆ––ಇವರಮೇಲೆ ತಮ್ಮ ಶೂರತ್ವವನ್ನು ತೋರಿಸುವುದಿಲ್ಲ. ಇವರನ್ನು ಕೊಲ್ಲುವುದರಿಂದ ಪಾಪವುಂಟಾಗುವುದು. ಇವರಿಂದ ಸೋತರೆ ಅಪಕೀರ್ತಿ ಬರುವುದು ಆದ್ದರಿಂದ ನೀನು ಹೊಡೆದರೂ ನಾವು ನಿನ್ನ ಅಡಿಗೆರಗಬೇಕು. ಮುನಿಯೆ! ನಿನ್ನವಚನಗಳು ಕೋಟಿ ವಜ್ರಘಾತಗಳಂತಿರುವವು. ನೀನು ಧನುರ್ಬಾಣಗಳನ್ನೂ ಕೊಡಲಿಯನ್ನೂ ಹೊತ್ತುಕೊಂಡು ಅಲೆದಾಡುತ್ತಿರುವುದು ವ್ಯರ್ಥ.

ದೋ ॥ ೨೭೩ ॥ ಹೇ ಧೀರ, ಮಹಾಮುನಿ! ನಾನು ನಿನ್ನೀ ಚಿಹ್ನೆಗಳನ್ನು ನೋಡಿ ಏನಾದರು ಅನುಚಿತ ವಚನವನ್ನಾಡಿದ್ದರೆ ಕ್ಷಮಿಸು—" ಎಂದನು.

---

† ಬಾಲ ಹತ್ಯೆಯು ಪಾಪಕರವಾದುದೆಂದು ಶಾಸ್ತ್ರದಲ್ಲಿ ಹೇಳಿರುವುದೇನೆಂದರೆ– "ಸ್ತ್ರೀ ಶೂದ್ರವಿಟ್ ಕ್ಷತ್ರವಧೋನಾಸ್ತಿಕ್ಯಂಚಾಪಿ ಪಾತಕಮ್ । ಅಪಹೃತ್ಯಚ ನಿಕ್ಷೇಪಂ ಕೃತ್ವಾ ಸ್ತ್ರೀಬಾಲಘಾತನಮ್ "॥

ಇದನ್ನು ಕೇಳಿದ ಭೃಗುಕುಲಮಣಿಯಾದ ಪರಶುರಾಮನು ಕ್ರೋಧಪೂರ್ಣವೂ ಗಂಭೀರವೂ ಆದ ವಾಣಿಯಿಂದ ಹೀಗೆ ಹೇಳಿದನು.—"ವಿಶ್ವಾಮಿತ್ರ! ಒರಟನೂ ವಕ್ರ ಬುದ್ಧಿಯುಳ್ಳವನೂ ಕುಲನಾಶಕನೂ ಆದ ಈ ಹುಡುಗನು ಕಾಲವಶನಾಗಿರುವನು. ಸೂರ್ಯವಂಶರೂಪದ ಪೂರ್ಣಚಂದ್ರನು ಕಲಂಕನಾಗಿರುವನು. ಇವನು ಕೇವಲ ನಿರಂಕುಶನಾಗಿಯೂ ಮೂರ್ಖನಾಗಿಯೂ ಭೀತಿಯಿಲ್ಲದವನಾಗಿಯೂ ಇರುವನು ನಾನು ಸಾರಿ ಸಾರಿ ಹೇಳುತ್ತೇನೆ, ಕೇಳು! ಕ್ಷಣಮಾತ್ರದಲ್ಲಿ ಇವನು ಮೃತ್ಯುವಿಗೆ ಗ್ರಾಸವಾಗುವನು. ನೀನು ಇವನನ್ನುಳಿಸಬೇಕಾಗಿದ್ದರೆ ಇವನಿಗೆ ನನ್ನ ಬಲ, ಪ್ರತಾಪ, ಕೋಪವಿಚಾರಗಳನ್ನು ಪರಿಚಯಮಾಡಿಕೊಡು." (ಈ ಮಾತನ್ನು ಕೇಳಿ) ಲಕ್ಷ್ಮಣನು,—ಹೇ ಮುನಿ! ನೀನು ಬದುಕಿರುವಾಗ ನಿನ್ನ ಶುದ್ಧ ಯಶಸ್ಸನ್ನು ಯಾರು ವರ್ಣಿಸಿ ಪಾರಾಗಬಲ್ಲರು? ಏಕೆಂದರೆ ನೀನೇ ನಿನ್ನಬಾಯಿಂದ ನಿನ್ನ ಕಾರ್ಯಗಳನ್ನು ಕುರಿತು ಹಲವು ಬಾರಿ ಹಲವು ವಿಧವಾಗಿ ವರ್ಣಿಸಿರುವೆ. ಈಗಲೂ (ಅಷ್ಟರಿಂದ) ಸಂತೋಷವಾಗಿರದಿದ್ದರೆ ಮತ್ತೆ ಬೇಕಾದುದನ್ನು ಹೇಳು. ಕ್ರೋಧವನ್ನು ತಡೆದರೂ ದುಸ್ಸಹವಾದ ದುಃಖವನ್ನು ಸಹಿಸಬೇಡ. ನಿನ್ನ ವೃತ್ತಿಯೇ ವೀರ ವೃತ್ತಿಯಾಗಿರುವುದು, ನೀನು ಧೀರನು, ಕ್ರೋಧರಹಿತನು. ನಿಂದೆಯ ವಚನಗಳನ್ನಾಡುವುದು ನಿನಗೆ ಶೋಭಿಸುವುದಿಲ್ಲ.—

ದೋ ॥ ೩೦೭॥ ಶೂರರು ಸಮರ ಕಾರ್ಯಗಳನ್ನು ಮಾಡುವರು, ಅವರು ಮಾತಿನಿಂದ ಆತ್ಮಪ್ರಶಂಸೆ ಮಾಡಿಕೊಳ್ಳುವುದಿಲ್ಲ. ಶತ್ರುಗಳು ರಣಭೂಮಿಯಲ್ಲಿ ವಿದ್ಯಮಾನರಾಗಿರುವುದನ್ನರಿತು ಹೇಡಿಗಳು ವೃಥಾ ಪ್ರಲಾಪವನ್ನು ಮಾಡುವರು. ನಿನ್ನಂತಹರನೇಕರೂ ಕಾಲನನ್ನು ಜತೆಯಲ್ಲಿಯೇ ಕರೆದುಕೊಂಡು ಬಂದು ಹಲವು ಬಾರಿ ನನ್ನನ್ನು ಕರೆದಿರುವರು" ಎಂದನು. ಲಕ್ಷ್ಮಣನ ಈ ಕಠೋರ ವಚನಗಳನ್ನು ಕೇಳಿ ಮುನಿಯು ತನ್ನ ಭಯಂಕರವಾದ ಪರಶುವನ್ನೆತ್ತಿ ಕೈಯಲ್ಲಿ ಹಿಡಿದನು. ಮತ್ತೆ ಹೇಳಿದನೇನೆಂದರೆ—ಇನ್ನು ಜನರು ನನ್ನ ಮೇಲೆ ದೋಷವನ್ನು ಹೊರಿಸದಿರಲಿ. ಕಟುವಾದಿಯಾದೀ ಬಾಲಕನು ವಧಾರ್ಹನಾಗಿರುವನು ಬಾಲಕನೆಂದು ನಾನು ಇದುವರೆಗೆ (ಇವನಾಡಿದ ವಚನಗಳನ್ನು) ಸಹಿಸಿದೆನು. ಈಗ ಇವನು ನಿಜವಾಗಿಯೂ ಮರಣೋನ್ಮುಖನಾಗಿರುವನು." ಅದಕ್ಕೆ ವಿಶ್ವಾಮಿತ್ರನು—ಅಪರಾಧವನ್ನು ಕ್ಷಮಿಸಬೇಕು. ಮಹಾತ್ಮರು ಬಾಲಕರ ಗುಣ ದೋಷಗಳನ್ನು ಗಣಿಸುವುದಿಲ್ಲ ಎಂದನು. ಆಗ ಪರಶುರಾಮನು—'ನಾನು ಕಾರಣವಿಲ್ಲದೆ ಕೋಪಗೊಳ್ಳುವವನು. ಇದರ ಮೇಲೆ ನನ್ನ ಕೈಯಲ್ಲಿ ಪರಶುವಿದೆ, ಅಪರಾಧಿಯಾದ ಗುರು ದ್ರೋಹಿಯು ನನ್ನೆದುರಿಗೆ ನಿಂತಿರುವನು. ಇಷ್ಟಲ್ಲದೆ ಪ್ರತ್ಯುತ್ತರವನ್ನೀಯುತ್ತಿರುವನು. ಹೇ ವಿಶ್ವಾಮಿತ್ರ! ಕೇವಲ ನಿನ್ನ ಶೀಲವನ್ನು ನೋಡಿ ಇವನನ್ನು ಬಿಡುವೆನು, ಇಲ್ಲವಾದರೆ ಕೊಡಲಿಯಿಂದ ಇವನ ತಲೆಯನ್ನು

ಕಡಿದು ಅಲ್ಪ ಪರಿಶ್ರಮದಿಂದಲೆ ನಾನು ಗುರು ಋಣದಿಂದ ಮುಕ್ತನಾಗುತ್ತಿದ್ದೆನು," ಎಂದನು.

ದೋ॥ ೩೦೮॥ ವಿಶ್ವಾಮಿತ್ರನು ನಕ್ಕು ಮನಸ್ಸಿನಲ್ಲಿಯೆ 'ಕಬ್ಬಿನ ಜಲ್ಲೆಯನ್ನು ಮುರಿದಹಾಗೆ ಶಿವಧನುಸ್ಸನ್ನು ಮುರಿದ ಹರಿಯನ್ನು ಪರಶುರಾಮನು ಅರಿಯೆಂದು ತಿಳಿದಿರುವನು. ಇವನನ್ನಿನ್ನೂ (ಶ್ರೀರಾಮಚಂದ್ರನನ್ನು) ತಿಳಿಯಲಿಲ್ಲ" ಎಂದುಕೊಂಡನು. ಲಕ್ಷ್ಮಣನು ಪರಶುರಾಮನನ್ನು ಕುರಿತು—"ಹೇ ಮುನಿ! ನಿನ್ನ ಶೀಲವನ್ನರಿಯದವರಾರು? ಅದು ಸಮಗ್ರ ಜಗತ್ತಿನಲ್ಲಿ ಪ್ರಸಿದ್ಧವಾಗಿದೆ. ಮಾತಾಪಿತೃ ಋಣವನ್ನು ನೀನು ಚೆನ್ನಾಗಿ ತೀರಿಸಿರುವೆ.* ಇನ್ನು ಗುರುವಿನ ಋಣವೊಂದಿರುವುದರಿಂದ ಹೆಚ್ಚು ಯೋಚನೆಯಾಗಿರಬಹುದು. ನನ್ನ ಶಿರವನ್ನು ತರಿಯುವುದೇ ಆ ಋಣವಾಗಿರಬಹುದು. ಆ ಋಣವಾಗಿ ಬಹುದಿನಗಳಾದ್ದರಿಂದ ಬಡ್ಡಿಯೂ ಬಹಳ ಬೆಳೆದಿರಬಹುದು. ಯಾವನಾದರೊಬ್ಬ ಸಾವಕಾರ (ಧನಿಕ) ನನ್ನು ಕರೆದುಕೊಂಡು ಬಂದರೆ ನಾನು ಈಗಲೇ ಚೀಲವನ್ನು ಬಿಚ್ಚಿ ಲೆಕ್ಕವನ್ನು ತೀರಿಸುವೆನು," ಎಂದನು. ಪರಶುರಾಮನು ಈ ಕಟುವಚನಗಳನ್ನು ಕೇಳಿ ಪರಶುವನ್ನೆತ್ತಿದನು. ಆಗ ಸಭೆಯಲ್ಲಿ ಹಾಹಾಕಾರವೆದ್ದಿತು. ಲಕ್ಷ್ಮಣನು ಮತ್ತೆ ಇಂತೆಂದನು—ಭೃಗುವರ! ನೀನು ನನಗೆ ಪರಶುವನ್ನು ತೋರಿಸುತ್ತಿರುವೆ, ಆದರೆ, ರಾಜದ್ರೋಹಿಯೆ! ನೀನು ವಿಪ್ರನಾದುದರಿಂದ ನಿನ್ನನ್ನು ಕಾಪಾಡಿರುವೆನು. ಎಂದಾದರೂ ನಿನಗೆ ಯುದ್ಧದಲ್ಲಿ ಸುಭಟರು

---

* ಪರಶುರಾಮನ ತಂದೆಯಾದ ಜಮದಗ್ನಿಯು ಒಂದುದಿನ ತನ್ನ ಹೆಂಡತಿಯಾದ ರೇಣುಕೆಯನ್ನು ನದಿಯಿಂದ ನೀರು ತರುವುದಕ್ಕೆ ಕಳುಹಿಸಿದನು. ಅಲ್ಲಿ ಗಂಧರ್ವ ಗಂಧರ್ವಿಯರು ಕ್ರೀಡಿಸುತ್ತಲಿದ್ದರು. ರೇಣುಕೆಯು ಅದನ್ನು ನೋಡುತ್ತ ನಿಂತುದರಿಂದ ಮನೆಗೆ ಬರಲು ತಡವಾಯಿತು. ತಡವಾಗಿ ಬಂದುದರ ಕಾರಣವನ್ನು ರೇಣುಕೆಯು ಮುನಿಗೆ ತಿಳಿಸಿದಳು. ಪರಪುರುಷನ ರತಿ ಕ್ರೀಡೆಯನ್ನು ನೋಡುವುದು ಪಾಪವೆಂದು ಹೇಳಿ ಮುನಿಯು ಮುನಿಸಿ ಪರಶುರಾಮನನ್ನೂ ಅವನ ಏಳು ಜನ ಸೋದರರನ್ನೂ ಕರೆಯಿಸಿ ನಿಮ್ಮ ಮಾತೆಯ ಶಿರಚ್ಛೇದನಮಾಡಿರಿ ಎಂದು ಆಜ್ಞಾಪಿಸಿದನು ಆದರೆ ಸಪ್ತ ಸೋದರರು ಅದಕ್ಕೆ ಒಪ್ಪಲಿಲ್ಲ ಆಗವನು ಪರಶುರಾಮನಿಗೆ ಹೇಳಿದನು. ಅವನು ತನ್ನ ಮಾತೆ ಮತ್ತು ಸಪ್ತ ಸೋದರರ ಶಿರಚ್ಛೇದನವನ್ನು ಮಾಡಿದನು. ಜಮದಗ್ನಿಯು ಪ್ರಸನ್ನನಾಗಿ ವರವನ್ನು ಕೇಳಿಕೊ ಎಂದನು. ಆಗ ಪರಶುರಾಮನು—ನನ್ನ ಮಾತೆಯೂ ಸೋದರರೂ ಮತ್ತೆ ಜೀವಿತರಾಗಲಿ, ಮತ್ತು ಇವರ ಶಿರಚ್ಛೇದನವನ್ನು ನಾನು ಮಾಡಿದೆನೆಂದು ಅವರಿಗೆ ಜ್ಞಾಪಕವಿರದಂತಾಗಲಿ—ಎಂದು ಬೇಡಿಕೊಂಡನು ಋಷಿಯು 'ತಥಾಸ್ತು' ಎಂದನು. ಕೂಡಲೆ ಎಲ್ಲರೂ ಜೀವಿತರಾಗೆದ್ದರು. ಅನಂತರ ಕಾರ್ತ್ಯವೀರ್ಯಾರ್ಜುನನನ್ನು ಸಂಹರಿಸಿ ೨೧ ಬಾರಿ ಪೃಥ್ವಿಯನ್ನು ಸುತ್ತಿ ಕ್ಷತ್ರಿಯರನ್ನು ನಾಶಗೊಳಿಸಿದನು. ಈ ಬಗೆಯಾಗಿ ಮಾತಾ ಪಿತೃ ಋಣದಿಂದ ಮುಕ್ತನಾದೆ ಯೆಂಬ ವಿಚಾರವನ್ನೆ ವ್ಯಕ್ತವಾಗಿ ಲಕ್ಷ್ಮಣನು ಹೇಳಿದನು.

ದೊರೆತಿದ್ದರೊ? ದೇವತೆಗಳೂ ಬ್ರಾಹ್ಮಣರೂ ಮನೆಯಲ್ಲಿ ದೊಡ್ಡವರೆನಿಸಿಕೊಳ್ಳು ವರು ಎಂದನು. ಆಗ ಹುಡುಗನು ಅನುಚಿತ ವಚನಗಳನ್ನಾಡುತ್ತಿರುವನೆಂದು ಜನರು ಹೇಳಿಕೊಳ್ಳಲಾರಂಭಿಸಿದರು. ಆದರೆ ರಘುನಾಥನು ಸಂಜ್ಞೆ (ಸನ್ನೆ) ಯಿಂದ ಅವನನ್ನು ತಡೆದನು.

ದೋ ॥ ೨೭೯ ॥ ಈ ಬಗೆಯಾಗಿ ಲಕ್ಷ್ಮಣನ ಉತ್ತರ ರೂಪವಾದ ಆಹುತಿ ಯಿಂದ ಪರಶುರಾಮನ ಕ್ರೋಧರೂಪವಾದ ಅಗ್ನಿಯು ಉದ್ದೀಪ್ತವಾಗುತ್ತಿರು ವುದನ್ನು ಕಂಡು ರಘುಕುಲ ಭಾನುವಾದ ಶ್ರೀರಾಮಚಂದ್ರನು ಜಲಸಮಾನವಾದ ವಚನಗಳನ್ನಾಡಿದನು. ಅವನು—"ಹೇ ನಾಥ! ಹುಡುಗನ ಮೇಲೆ ದಯ ಯಿಡಬೇಕು, ಅವನು ಅಜ್ಞಾನಿ, ಚಿಕ್ಕವನು, ಅವನ ಮೇಲೆ ಕೋಪಿಸಕೂಡದು, ಅವನು ತಮ್ಮಂತಹ ಶ್ರೀಯುಕ್ತರ ಪ್ರಭಾವವನ್ನರಿತಿದ್ದರೆ ಈ ಬಗೆಯಾಗಿ ಮಾತಾ ಡುತ್ತಿದ್ದನೆ? ಮಕ್ಕಳು ತಂಟೆ ಮಾಡಿದರೆ ಅದರಿಂದ ಮಾತಾಪಿತೃಗಳೂ ಗುರುವೂ ಮನಸ್ಸಿನಲ್ಲಿಯೇ ಆನಂದಿತರಾಗುವರು, ಬಾಲಕನು ತಮ್ಮ ಸೇವಕನೆಂದರಿತು ತಿಳಿದು ಅನುಗ್ರಹ ವಿಡಬೇಕು, ತಾವು ಸಮದರ್ಶಿಗಳು, ಶೀಲವಂತರು, ಧೀರರು, ಋಷಿಗಳು; ಜ್ಞಾನಿಗಳು," ಎಂದನು. ರಾಮಚಂದ್ರನ ಈ ವಚನಗಳನ್ನು ಕೇಳಿ ಪರಶುರಾಮನು ಸ್ವಲ್ಪವೂ ಶಾಂತನಾಗಲಿಲ್ಲ. ಅಷ್ಟರಲ್ಲಿ ಲಕ್ಷ್ಮಣನು ಕೆಲವು ಅಸ್ಪಷ್ಟ ವಾದ ಮಾತುಗಳನ್ನಾಡಿ ನಕ್ಕನು. ಅವನಾ ನಗೆಯನ್ನು ನೋಡಿ ಪರಶುರಾಮನಿಗೆ ನಖಶಿಖಾಂತದವರೆಗೆ ಕೋಪವು ಹೆಚ್ಚಿತು. ಆಗವನು ರಾಮನನ್ನು ಕುರಿತು, "ನಿನ್ನ ತಮ್ಮನು ಮಹಾಪಾಪಿ, ಇವನ ಶರೀರವು ಗೌರ ವರ್ಣದಿಂದಿದ್ದರೂ ಅವನ ಮನಸ್ಸು ಕೆಟ್ಟುದಾಗಿರುವದು. ಇವನು ಕಾಲಕೂಟ ಮುಖನಾಗಿರುವನು, ಪಯೋಮುಖ ನಾಗಿಲ್ಲ, ಇವನ ಸ್ವಭಾವವು ವಕ್ರವಾಗಿರುವುದು. ಅವನು ನಿನಗೆ ವಿಧೇಯನಾ ಗಿಲ್ಲ, ಈ ನೀಚನು ನನ್ನನ್ನು ಮೃತ್ಯು ಸಮಾನನೆಂದು ಇನ್ನೂ ತಿಳಿದಿಲ್ಲ" ಎಂದನು.

ದೋ ॥ ೨೮೦ ॥ ಈ ವಚನಗಳನ್ನು ಕೇಳಿ ಲಕ್ಷ್ಮಣನು ಮತ್ತೆ ನಕ್ಕು "ಹೇ ಋಷಿರಾಜ! ಕ್ರೋಧವೆ † ಪಾಪದ ಮೂಲವು. ಲೋಗರು ಅದರ ಅಧೀನರಾಗಿ ಅನುಚಿತವಾದ ಕಾರ್ಯಗಳನ್ನೆಸಗುವರು, ಸಮಗ್ರ ಜಗತ್ತಿನೊಂದಿಗೆ ವೈರವನ್ನು

† "ಅಂಧೀ ಕರೋತಿ ಭುವನಂ ಬಧಿರೀ ಕರೋತಿ ಧೀರಂ ಸಚೇತನಮಚೇತನ ತಾಂ ನಯೇತ್ ಕ್ರುಧ್ ! ಕೃತ್ಯಂ ನಪಶ್ಯತಿ ನಚಾತ್ಮಹಿತಂ ಶೃಣೋತಿ ಧೀಮಾನಧೀ ತಮಪಿ ನಪ್ರತಿಸಂದಧಾತಿ ॥ ಅಂದರೆ ಕೋಪವು ಜನರನ್ನು ಅಂಧರನ್ನಾಗಿ ಮಾಡುವುದು, ಪಂಡಿತರನ್ನು ಕಿವುಡರನ್ನಾಗಿ ಮಾಡುವುದು. ಮತ್ತೆ ಸಚೇತನರನ್ನು ಅಚೇತರನ್ನಾ ಗಿಯೂ ಮಾಡುವುದು. ಕೋಪ ಬಂದವನು ತನ್ನ ಕಾರ್ಯವನ್ನಾಗಲಿ, ತನ್ನ ಹಿತ ವನ್ನಾಗಲಿ ಲಕ್ಷಿಸುವುದಿಲ್ಲ ಅದು ಬಂದಾಗ ಪಂಡಿತರ ಜ್ಞಾನವೆ, ಪಂಡಿತರನ್ನು ನೋಡದಂತಾಗುವುದು,

ಕಟ್ಟಿಕೊಳ್ಳುವರು. ಹೇ ಋಷಿರಾಜ! ನಾನು ನಿನ್ನ ಸೇವಕನು. ಕೋಪವನ್ನು ಬಿಟ್ಟು ನನ್ನಮೇಲೆ ದಯೆಯಿಡು. ಮುರಿದು ಹೋದ ಬಿಲ್ಲು ಕೋಪದಿಂದ ಕೂಡಿಕೊಳ್ಳಲಾರದು! ಇದುವರೆಗೆ ನಿಂತು ನಿಂತು ಕಾಲುನೋಯುತ್ತಿರಬಹುದು, ಕುಳಿತು ಕೊಳ್ಳಬೇಕು. ಈ ಧನುಸ್ಸು ನಿನಗೆ ಅತಿಪ್ರಿಯವಾಗಿದ್ದರೆ ಯಾವನಾದರೊಬ್ಬ ಕಮ್ಮಾರನನ್ನು ಕರೆಯಿಸಿ ಸರಿಮಾಡಿಸುವ ಉಪಾಯವನ್ನು ಮಾಡಬೇಕು" ಎಂದನು. ಲಕ್ಷ್ಮಣನು ಮಾತನಾಡಿದಂತೆಲ್ಲ ಜನಕನ ಭಯವು ಹೆಚ್ಚುತ್ತಲಿತ್ತು. ಕೊನೆಗೆ ಅವನು "ಇನ್ನು ಸುಮ್ಮನಿರು! ಚಿಕ್ಕವರು ದೊಡ್ಡ ಮಾತುಗಳನ್ನಾಡುವುದು ಸರಿಯಲ್ಲ" ಎಂದನು. ಈ ಸಂವಾದ ಸಮಯದಲ್ಲಿ ಪುರವಾಸಿಗಳಾದ ನರನಾರಿಯರು ಥರಥರನೆ ನಡುಗುತ್ತ, "ಏನಪ್ಪಾ, ನೋಡುವುದಕ್ಕೆ ಈ ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದಾಗಿದೆಯಲ್ಲ!" ಎನ್ನುತ್ತಿದ್ದರು. ಪರಶುರಾಮನು ಅವನಾ ನಿರ್ಭಯವಾಣಿಯನ್ನು ಕೇಳಿ ಅವನ ಕ್ರೋಧಾಗ್ನಿಯು ಹೆಚ್ಚುತ್ತ ಬಲವು ಕುಂದುತ್ತಲಿದ್ದಿತು. ಆಗವನು ರಾಮಚಂದ್ರನಕಡೆಗೆ ದಯಾದೃಷ್ಟಿಯನ್ನು ಬೀರಿ, "ಇವನು ನಿನ್ನ ತಮ್ಮನೆಂದು ಸುಮ್ಮನಿದ್ದೇನೆ. (ಇಲ್ಲದಿದ್ದರೆ) ಇಷ್ಟೊತ್ತಿಗೆ ಸಂಹರಿಸಿಬಿಡುತ್ತಲಿದ್ದೆನು. ವಿಷದಿಂದ ತುಂಬಿದ ಸುವರ್ಣಕಲಶದಂತೆ ಇವನ ಮನವು ಮಲಿನವಾಗಿದ್ದರೂ ತನುವು ಸುಂದರವಾಗಿದೆಯಲ್ಲ?" ಎಂದನು.

ದೋ ||೨೮೧|| ಇದನ್ನು ಕೇಳಿ ಲಕ್ಷ್ಮಣನು ಮತ್ತೆ ಹೆಚ್ಚಾಗಿ ನಕ್ಕನು. ಆಗ ರಾಮಚಂದ್ರನು ಅವನನ್ನು ಕಣ್ಸನ್ನೆಯಿಂದ ತಡೆದನು ಆಗವನು ಸಂಕುಚಿತನಾಗಿ ವಕ್ರನುಡಿಗಳಾಡುವುದನ್ನು ಬಿಟ್ಟು ಗುರುವಿನ ಬಳಿಯಲ್ಲಿಹೋಗಿ ಕುಳಿತನು ಮತ್ತೆ ರಾಮಚಂದ್ರನು ಕೈಜೋಡಿಸಿ, ವಿಶೇಷ ನಮ್ರತೆಯಿಂದ ಬಹು ಮೃದುವಾಗಿ "ಹೇ ನಾಥ! ತಾವು ಸ್ವಾಭಾವಿಕವಾಗಿಯೇ ಚತುರರಾಗಿರುವಿರಿ. ಆದುದರಿಂದ ಬಾಲಕನ ವಚನಗಳಿಗೆ ಕಿವಿಗೊಡಬಾರದು. ಬಾಲಕರು ಮತ್ತು ಕಣಜದ ಹುಳುವಿನ ಸ್ವಭಾವವು ಏಕರೀತಿಯಾಗಿರುವುದು. ಅದನ್ನು ಮಹಾತ್ಮರು ದೋಷವೆಂದೆಣಿಸುವುದಿಲ್ಲ. ನಾಥ! ಲಕ್ಷ್ಮಣನು ತಮ್ಮ ಕಾರ್ಯದಲ್ಲಿ ಕೈಹಾಕಿಲ್ಲ. ನಾನೇ ತಮಗೆ ಅಪರಾಧಿಯಾಗಿರುವೆನು. ಹೇ ಸಾಧು! ಕೃಪೆ, ಕ್ರೋಧ, ವಧೆ, ಬಂಧನಾದಿಗಳಾವುದನ್ನು ಮಾಡಬೇಕಾಗಿದ್ದರೂ ನಾನು ತಮ್ಮ ದಾಸನೆಂದು ತಿಳಿದು ನನ್ನಮೇಲೆ (ತಮ್ಮ ಶಕ್ತಿಪ್ರಯೋಗ) ಮಾಡಬೇಕು. ಹೇ ಮುನಿನಾಯಕ, ತಮ್ಮ ಕೋಪವು ಬೇಗ ಇಳಿಯಬೇಕಾದರೆ ಏನು ಮಾಡಬೇಕೆಂದು ಹೇಳಿ, ಅದನ್ನು ಮಾಡುವೆನು," ಎಂದನು. ಪರಶುರಾಮನು ಅದಕ್ಕೆ "ಎಲೊ ರಾಮ! ಕೋಪವು ಹೇಗೆ ಹೋಗುವುದು? ನಿನ್ನ ತಮ್ಮನು ಇನ್ನೂ ನನ್ನನ್ನು ವಕ್ರದೃಷ್ಟಿಯಿಂದ ನೋಡುತ್ತಿರುವನು. ಈ ಕುಠಾರವನ್ನು ಅವನ ಕಂಠದಲ್ಲಿ ನೆಡದಿದ್ದರೆ, ನಾನು ಕೋಪಿಸಿಕೊಂಡುದರ ಪ್ರಯೋಜನವೇನಾಯಿತು?

ದೋ ॥೨೭೨॥ ಈ ಘೋರಕುಠಾರಗತಿಯನ್ನು ಕೇಳಿದ ಕೂಡಲೆ ರಾಜ ಸ್ತ್ರೀಯರ ಗರ್ಭಪತನವಾಗುವುದು. ಈ ಪರಶುವಿನಿಂದಲೆ ಆ ನನ್ನ ವೈರಿಯಾದ ರಾಜಕುವರನನ್ನು ಗೆಲ್ಲಬೇಕೆಂದಿರುವೆನು. ಆದರೆ ಕೈಏಳುವುದಿಲ್ಲ, ಕ್ರೋಧ ಪೂರ್ಣ ವಾದ ಹೃದಯವು ಜ್ವಲಿಸುತ್ತಲಿದೆ. ನೃಪಘಾತಕವಾದ ಈ ಕುಠಾರವು ಇಂದು ಕುಂಠಿತವಾಗಿದೆ. ವಿಧಿವೈಚಿತ್ರ್ಯದಿಂದ ನನ್ನ ಸ್ವಭಾವವೇ ಮಾರ್ಪಡಿಸಿದೆ; ನನ್ನ ಹೃದಯದಲ್ಲಿ ಎಂತಹ ಕೃಪೆಯನ್ನಿಡಲಿ ಇದುವರೆಗೆ ನಾನು ಸಹಿಸಲಾಗದಿದ್ದ ದುಃಖವನ್ನು ಇಂದು ಸಹಿಸುವಂತೆ ವಿಧಿಯು ಮಾಡಿದನು" ಎಂದುನುಡಿದನು. ಅದನ್ನು ಕೇಳಿ ಲಕ್ಷ್ಮಣನು ಮತ್ತೆ ತಲೆಬಾಗಿಸಿಕೊಂಡು,—ಭಲೆ, ಭಲೆ, ಕೃಪೆಯೆ! ನಿನ್ನ ಕರುಣೆಯೆಂತಿರುವುದೊ ಅಂತೆಯೆ ನಿನ್ನ ಮೂರ್ತಿಯಿರುವುದು! ನೀನಾಡು ತ್ತಿರುವ ಮಾತುಗಳೆಲ್ಲ ಕುಸುಮ (ದಂತೆ ಕೋಮಲ) ವಾಗಿರುವವು! ಹೇ ಮುನಿ ರಾಜ! ಕೃಪೆಯನ್ನಿಡುವುದರಿಂದ ನಿನ್ನ ಶರೀರವು ಜ್ವಲಿಸುತ್ತಿದ್ದರೆ ಕ್ರೋಧದಿಂದ ನಿನ್ನನ್ನು ವಿಧಾತನು ರಕ್ಷಿಸಲಿ" ಎಂದನು. ಇದನ್ನು ಕೇಳಿ ಪರಶುರಾಮನು "ನೋಡು ಜನಕ! ಈ ಬಾಲಕನನ್ನು ತಡೆಗಟ್ಟು, ಈ ಮೂರ್ಖನು ಯಮಪುರ ನಿವಾಸಿಯಾಗಬೇಕೆಂದು ಅಪೇಕ್ಷಿಸುವಂತೆ ತೋರುತ್ತಿದೆ ಇವನು ನನ್ನ ಕಣ್ಣೆದು ರಿಗೆ ನಿಲ್ಲದಂತೆ ಮರೆಮಾಡುವುದಿಲ್ಲವೇಕೆ? ಇವನು ನೋಡುವುದಕ್ಕೆ ಚಿಕ್ಕವ ನಾಗಿದ್ದರೂ ಬಹಳ ಚುರುಕಾಗಿರುವನು" ಎಂದು ನುಡಿಯಲು, ಅದಕ್ಕೆ ಲಕ್ಷ್ಮ ಣನು ಮತ್ತೆ ನಕ್ಕು "ಹೇ ಮುನಿ! ನೀನೇ ನಿನ್ನ ಕಣ್ಣು ಮುಚ್ಚಿಕೊಂಡರೆ, ಯಾರೂ ನಿನ್ನ ಕಣ್ಣಿಗೆ ಕಾಣಿಸಲಾರರು" ಎಂದನು

ದೋ ॥೨೭೩॥ ಆಗ ಪರಶುರಾಮನು ಮನಸ್ಸಿನಲ್ಲಿ ವಿಶೇಷ ಕೋಪವನ್ನು ತಾಳಿ, ರಾಮನನ್ನು ಕುರಿತು—ಎಲೌ ಶಠನೆ! ನೀನು ಶಿವಧನುಸ್ಸನ್ನು ಭಂಗ ಪಡಿಸಿ, ಈಗ ನನಗೆ ಬೋಧಿಸಲು ಬರುವೆಯಾ! ನಿನ್ನ ತಮ್ಮನು ನಿನ್ನ ಸಮ್ಮತಿ ಯಿಂದಲೆ ಕಟುವಚನಗಳನ್ನಾಡುತ್ತಿರುವನು. ನೀನು ಕೈಜೋಡಿಸಿ, ಬಿನ್ನವಿಸಿ ಕೊಳ್ಳುತ್ತಿರುವುದೆಲ್ಲ ಮೋಸ! ನೀನು ಯುದ್ಧಮಾಡಿ ನನ್ನನ್ನು ತೃಪ್ತಿಪಡಿಸು, ಇಲ್ಲವಾದರೆ "ರಾಮ" ಎಂಬ ಹೆಸರನ್ನು ಬದಲಾಯಿಸು. ಎಲೋ ಶಿವದ್ರೋಹಿ! ನೀನು ಮೋಸವನ್ನು ಬಿಟ್ಟು ಯುದ್ಧಮಾಡು! ಇಲ್ಲವಾದರೆ ನಿನ್ನ ಸೋದರನ ಸಮೇತ ನಿನ್ನನ್ನೂ ನಾಶಮಾಡುವೆನು-ಎಂದನು. ಈ ಬಗೆಯಾಗಿ ಪರಶು ರಾಮನು ಕುಠಾರವನ್ನೆತ್ತಿ ಮಾತನಾಡುವಾಗ ರಾಮಚಂದ್ರನು ತಲೆಬಾಗಿಸಿ, ಮುಗುಳ್ನಗೆಯಿಂದ—"ಒಳ್ಳೆಯದು ಮುನಿವರ! ಅಪರಾಧವು ಲಕ್ಷ್ಮಣನದಾಗಿದ್ದರೂ ಕೋಪವು ನನ್ನ ಮೇಲೆ ಬಂದಿರುವುದು. ಒಂದೊಂದು ಸಮಯದಲ್ಲಿ ಸಾಧು ವೃತ್ತಿಯೂ ದೋಷವೆಂದೆಣಿಸಲ್ಪಡುವುದು. ಬಿದಿಗೆ ಚಂದ್ರನು ವಕ್ರನಾಗಿರು ವುದರಿಂದ ಎಲ್ಲರೂ ವಂದಿಸುವರು. ವಕ್ರನಾದ ಚಂದ್ರನನ್ನು ರಾಹುವು ಗ್ರಾಸ

ತೆಗೆದುಕೊಳ್ಳುವುದಿಲ್ಲ" (ಎಂದು ಮನಸ್ಸಿನಲ್ಲಿ ತಿಳಿದು ಅನಂತರ ಪ್ರಕಟವಾಗಿ) ಹೇ ಮುನೀಶ್ವರ! ತಾವು ಕೋಪವನ್ನು ಬಿಟ್ಟುಬಿಡಿ, ತಮ್ಮ ಕೈಯಲ್ಲಿ ಕುಠಾರವಿದೆ, ಮುಂದೆ ನನ್ನ ಶಿರವಿದೆ, ತಾವು ಕೋಪದಿಂದ ತಮಗೆ ತಿಳಿದಂತೆ ಮಾಡಬಹುದು. ನಾನು ತಮ್ಮ ಸೇವಕನೆಂದು ತಿಳಿಯಿರಿ.

ದೋ ॥೨೭೮॥ ಹೇ ವಿಪ್ರವರ! ತಾವು (ಖಂಡಿತವಾಗಿಯೂ) ಕೋಪವನ್ನು ತ್ಯಜಿಸಿರಿ. ಸ್ವಾಮಿ ಸೇವಕರಲ್ಲಿ ಸಂಗ್ರಾಮವೆಂತಹುದು? ಪ್ರಭು! ತಮ್ಮ (ಕ್ಷತ್ರಿಯ) ವೇಷವನ್ನು ನೋಡಿ ಹುಡುಗನು ಏನೋ ಮಾತನಾಡಿದನು. ಅದು ಆ ಬಾಲಕನ ದೋಷವಲ್ಲ. ತಾವು ಕುಠಾರ ಧನುರ್ಬಾಣಗಳನ್ನು ಧರಿಸಿದುದನ್ನು ನೋಡಿ, ತಾವೂ ಯೋಧರೆಂದು ತಿಳಿದು ಹುಡುಗನಿಗೆ ಕ್ರೋಧವುಂಟಾಯಿತು. ತಮ್ಮ ಹೆಸರಿನಿಂದ ಕೂಡ ಅವನು ತಮ್ಮನ್ನು ಗುರುತಿಸಲಿಲ್ಲ. (ಆದುದರಿಂದ) ಅವನ ಸ್ವಭಾವಕ್ಕನುಸಾರವಾಗಿ ಅವನು ಉತ್ತರಕೊಟ್ಟನು. ತಾವು ಋಷಿಯಂತೆ ಬಂದಿದ್ದರೆ, ಮುನಿವರ, ತಮ್ಮ ಪಾದಧೂಳಿಯನ್ನು ಹುಡುಗನು ಶಿರಸ್ಸಿನಲ್ಲಿ ಧರಿಸುತ್ತಿದ್ದನು. ಅವನು ಅರಿಯದೆ ಮಾಡಿದ ದೋಷವನ್ನು ಕ್ಷಮಿಸಬೇಕು. ಬ್ರಾಹ್ಮಣರಾದ ತಮ್ಮ ಹೃದಯದಲ್ಲಿ ಘನವಾದ ಕರುಣೆಯುಂಟಾಗಬೇಕು. ಹೇ ನಾಥ! ತಮಗೆ ನಾವು ಸಮಾನರೆ? ಹೇಳಿರಿ, ಚರಣಗಳಿಗೂ ಮಸ್ತಕಕ್ಕೂ ಅಂತರವಿಲ್ಲವೆ? (ಎಂದರೆ ನಾವು ತಮ್ಮ ಚರಣ ಪೂಜಕರು, ತಾವು ಶಿರದಂತೆ ಪೂಜ್ಯಸ್ಥಾನದಲ್ಲಿರುವವರು) ಮತ್ತೆ ಎರಡಕ್ಷರದ ರಾಮ ಎಂಬ ನನ್ನ ಹೆಸರು ಚಿಕ್ಕದು. ಪರಶು ಸಮೇತವಾದ ತಮ್ಮ ಹೆಸರು ಪಂಚಾಕ್ಷರಗಳುಳ್ಳುದು. ಹೇ ದೇವ! ಧನುರ್ಧಾರಣವೊಂದೇ ನಮ್ಮ ಗುಣವಾಗಿದೆ. ತಮಗಾದರೊ ಪರಮ ಪವಿತ್ರವಾದ ನವ (೯) ಗುಣಗಳಿವೆ. * (ಆದುದರಿಂದ) ಸರ್ವಪ್ರಕಾರದಿಂದಲೂ ನಾವು ನಿಮಗೆ ಸೋತಿರುವೆವು. ಹೇ ವಿಪ್ರ! ನಮ್ಮ ಅಪರಾಧವನ್ನು ಕ್ಷಮಿಸಿರಿ.

ದೋ ॥೨೭೯॥ ಶ್ರೀರಾಮಚಂದ್ರನು ಬಾರಿ ಬಾರಿಗೂ ಪರಶುರಾಮನನ್ನು ವಿಪ್ರವರ, ಬ್ರಾಹ್ಮಣ ಎಂದು ಸಂಬೋಧಿಸುತ್ತಿದ್ದರೂ ಪರಶುರಾಮನು ಕುಪಿತ

---

* 'ಗುಣ' ವೆಂದರೆ ಸೂತ್ರ ಅಥವಾ ಚಾಪವೆಂದು ಅರ್ಥವಾಗುವುದು. ಆದುದರಿಂದ ಚಾಪಧಾರಿಗಳಿಗೆ ಧನುಸ್ಸಿನ ಏಕಮಾತ್ರ ಬಲವಿರುವುದು; ಅದೂ ಹಿಂಸೆಮಾಡುವುದರಿಂದ ಅಪವಿತ್ರವಾಗಿರುವುದು. ಆದರೆ ಬ್ರಾಹ್ಮಣರಿಗೆ ಪರಮ ಪವಿತ್ರ ತಪಸ್ಸು ವೇದಾಧ್ಯಯನಾದಿಗಳನ್ನು ಮಾಡತಕ್ಕ ಒಂಭತ್ತು ಸೂತ್ರದ ಯಜ್ಞೋಪವೀತದ ಬಲವಿದೆ ಭಗವದ್ಗೀತೆಯಲ್ಲಿ ಹೇಳಿರುವ ಬ್ರಾಹ್ಮಣರ ಒಂಭತ್ತು ಗುಣಗಳಾವುವೆಂದರೆ—"ಶಮೋ ದಮಸ್ತಪಃ ಶೌಚಂ ಶಾಂತಿರಾರ್ಜವಮೇವ ಚ ॥ ಜ್ಞಾನಂ ವಿಜ್ಞಾನ ಮಾಸ್ತಿಕ್ಯಂ ಬ್ರಹ್ಮಕರ್ಮ ಸ್ವಭಾವಜಮ್ ॥ ಎಂದರೆ ಶಮ, ದಮ, ತಪ, ಶೌಚ, ಶಾಂತಿ, ಋಜುತಾ, ಜ್ಞಾನ, ವಿಜ್ಞಾನ ಮತ್ತು ಆಸ್ತಿಕತೆ.

ನಾಗಿ—"ನೀನೂ ನಿನ್ನ ತಮ್ಮನಂತೆ ಪ್ರಚಂಡನಾಗಿರುವೆ! ನೀನೂ ನನ್ನನ್ನು ಬ್ರಾಹ್ಮಣನೆಂದು ತಿಳಿದಿರುವೆಯೊ? ನಾನು ಎಂತಹ ಬ್ರಾಹ್ಮಣನೆಂಬುದನ್ನು ತಿಳಿಸುವೆನು ಕೇಳು. ನನ್ನ ಭಯಂಕರ ಕ್ರೋಧವೆಂಬ ಅಗ್ನಿಗೆ ಧನುಸ್ಸೇ ಸ್ರುವ, ಬಾಣವೇ ಆಹುತಿ, ಚತುರಂಗ ಸೇನೆಯೆ ಸವಿತ್ತು. ಮಹಾ ಮಹೀಪಾಲರೆ ಆ ಯಜ್ಞದ ಪಶುಗಳಾದರು ನಾನು ಅವರ ಶಿರಗಳನ್ನು ತರಿದು, ಬಲಿದಾನಮಾಡಿದೆನು. ಇಂತಹ ಸಮರಯಜ್ಞಗಳನ್ನು ನಾನು ಕೋಟಿಗಟ್ಟಲೆ ಮಾಡಿರುವೆನು. ನನ್ನ ಪ್ರಭಾವವಿನ್ನೂ ನಿನಗೆ ತಿಳಿದಿಲ್ಲ. ಬ್ರಾಹ್ಮಣನೆಂದು ತಿಳಿದು ಅನಾದರದಿಂದ ಮಾತನಾಡುತ್ತಿರುವೆಯೊ! ಧನುರ್ಭಂಗ ಮಾಡಿದಾಕ್ಷಣ ನಿನ್ನ ಅಭಿಮಾನವು ಹೆಚ್ಚಿರುವುದು. ಅದರಿಂದ ಸಮಗ್ರ ಜಗತ್ತನ್ನೆ ಗೆದ್ದೆನೆಂದು ಅಹಂಕಾರದಿಂದ ಮೆರೆಯುವೆಯೊ!" ಎಂದನು. ಅದಕ್ಕೆ ರಾಮಚಂದ್ರನು—"ಹೇ ಮುನಿವರ! ಸ್ವಲ್ಪ ಯೋಚಿಸಿ ಮಾತನಾಡಬೇಕು, ನಮ್ಮ ಅಪರಾಧವು ಚಿಕ್ಕದಾಗಿದ್ದರೂ ನಿಮ್ಮ ಕೋಪವು ಬಹಳ ಹೆಚ್ಚಾಗುತ್ತಿದೆ. ಹಳೆಯ ಧನುಸ್ಸು ಮುಟ್ಟಿದ ಕೂಡಲೆ ಮುರಿದು ಹೋದರೆ ನಾನು ಏನೆಂದು ಅಭಿಮಾನಪಡಲಿ!

ದೋ ॥ ೨೮೬ ॥ ಹೇ ಭೃಗುನಾಥ! ನೀವು ಬ್ರಾಹ್ಮಣರೆಂದು ನಾವು ಅನಾದರಮಾಡಿರುವೆವೆ? (ಶೌರ್ಯಗರಿಮೆಯಿಂದ ಬ್ರಾಹ್ಮಣರನ್ನು) ಅನಾದರದಿಂದ ಕಂಡು ನಿಮ್ಮನ್ನು ಭಯಪಡಿಸಿ, ತಲೆಬಾಗಿಸುವಂತೆ ಮಾಡುವ ರಣಧೀರನು ಜಗತ್ತಿನಲ್ಲಾವನಿರುವನು? ಹೇಳಿರಿ. ಸಮಾನ ಬಲರಾದ ಅಥವಾ ಅಧಿಕ ಬಲಿಷ್ಠರಾದ ದೇವತೆಗಳಾಗಲಿ, ದೈತ್ಯರಾಗಲಿ, ರಾಜರಾಗಲಿ, ಹಲವು ರಣಧೀರರಾಗಲಿ ನಮ್ಮನ್ನು ರಣರಂಗಕ್ಕೆ ಕರೆದರೆ,-ಅವರು ಪ್ರತ್ಯಕ್ಷ ಕಾಲಸ್ವರೂಪರಾಗಿದ್ದರೂ-ನಾವು ಅವರೊಂದಿಗೆ ಸಂತೋಷದಿಂದ ಯುದ್ಧಮಾಡುವೆವು. ಕ್ಷತ್ರಿಯ ತನುಧಾರಿಗಳಾಗಿ ಯುದ್ಧಕ್ಕೆ ಹೆದರುವವರು ಪಾಮರರೂ, ಕುಲಕಲಂಕರೂ ಆಗಿರುವರು. ನಾನು ಕೇವಲ ಅಭಿಮಾನದಿಂದ ಹೇಳುವುದಿಲ್ಲ, ನಮ್ಮ ಕುಲ ಸ್ವಭಾವಕ್ಕನುಸಾರವಾಗಿ ಹೇಳುವೆನು, ಕೇಳಿರಿ—ರಘುವಂಶದವರು ರಣದಲ್ಲಿ ಕಾಲನನ್ನೆದುರಿಸುವುದಕ್ಕೂ ಹೆದರುವುದಿಲ್ಲ. ಸರ್ವತ್ರ ಭೀತಿಹೀನರಾಗಿರುವ ನಾವು ನಿಮ್ಮನ್ನು ಕಂಡು ಹೆದರುವುದರಿಂದಲೇ ನಿಮ್ಮ (ವಿಪ್ರವಂಶದವರ) ಮಹಿಮೆಯು ತಿಳಿಯುವುದು –(ಎಂದರೆ ರಮನ್ತೇ ಯೋಗಿನೋ ಯಸ್ಮಿನ್ ಅರ್ಥಾತ್ ಯಾವದರಲ್ಲಿ ದೊಡ್ಡ ದೊಡ್ಡ ಯೋಗೀಶ್ವರರೂ ರಮಿಸುತ್ತಿರುವರೊ ಅಂತಹ ವೈಕುಂಠದಲ್ಲಿ ಭೃಗುಲತ್ತೆಯನ್ನು ಸ್ವೀಕರಿಸಿದಾ ಶ್ರೀರಾಮಚಂದ್ರನು ಕೂಡ ಬ್ರಾಹ್ಮಣರಿಗೆ (ಪರಶುರಾಮನಿಗೆ) ಹೆದರುತ್ತಿರುವುದರಿಂದ ವಿಪ್ರವಂಶ ಮಹಿಮೆಯು ತಿಳಿಯುವುದು) ಎಂದನು. ಈ ಅಂತಿಮ ವಚನದಿಂದ ಪರಶುರಾಮನಿಗೆ ಜ್ಞಾನೋದಯವಾಯಿತು. (ಆಗ) ಪರಶುರಾಮನು–"ಹೇ ರಾಮ! ಹೇ ರಮಾರಮಣ! ನೀನು

ನನ್ನ ಧನುಸ್ಸನ್ನು ಸ್ವೀಕರಿಸಿ ಹೆದೆಯೇರಿಸಿದರೆ ನನ್ನ ಸಂದೇಹ ನಿವಾರಣೆಯಾಗುವುದು" ಎಂದು ಹೇಳಿ, ಧನುಸ್ಸನ್ನು ರಾಮಚಂದ್ರನ ಕೈಮುಂದೆ ನೀಡಿದನು. ಅದು ಕೂಡಲೆ ರಾಮನ ಕೈಸೇರಿ ತಾನಾಗಿಯೇ ಹೆದೆಯೇರಿತು. ಅದನ್ನು ನೋಡಿ ಪರಶುರಾಮನು ಆಶ್ಚರ್ಯಾನ್ವಿತನಾದನು. *

ದೋ ॥ ೩೧೭ ॥ ಆಗ ಅವನು ರಾಮನ ಪ್ರಭಾವವನ್ನರಿತು, ಅವನ ಹೃದಯದಲ್ಲಿ ಹಿಡಿಸಲಾರದಷ್ಟು ಪ್ರೇಮವು ಉಕ್ಕಿ ಪುಳಕಿತಗಾತ್ರನೂ, ಪ್ರಫುಲ್ಲ ಚಿತ್ತನೂ ಆಗಿ ಕೈಜೋಡಿಸಿ ಹೀಗೆ ಸ್ತುತಿಸಲಾರಂಭಿಸಿದನು–ಹೇ ರಘುವಂಶ ರೂಪವಾದ ಕಮಲ ವನಕ್ಕೆ † ಸೂರ್ಯನಾದವನೆ! ಹೇ ಘೋರ ರಾಕ್ಷಸ ಕುಲ ದಾಹಕ ಅಗ್ನಿಯೆ! ನಿನಗೆ ಜಯವಾಗಲಿ! ಹೇ ಸುರವಿಪ್ರಧೇನು ಹಿತಕಾರಿ! ನಿನಗೆ ಜಯವಾಗಲಿ! ಹೇ ಮದಮೋಹಕ್ರೋಧಭ್ರಮೆಗಳ ನಿವಾರಕನೆ! ನಿನಗೆ ಜಯವಾಗಲಿ! ಹೇ ವಿನಯಶೀಲ! ಕರುಣಾ ಗುಣಸಾಗರ! ವಚನ ರಚನೆಯಲ್ಲಿ ಅತಿ ನಿಪುಣನಾದವನೆ! ನಿನಗೆ ಜಯವಾಗಲಿ ಸೇವಕ ಸುಖಪ್ರದ! ಸರ್ವಾಂಗ ಸುಂದರ! ಕೋಟಿ ಅನಂಗ ದೇಹಕಾಂತಿಯುಳ್ಳವನೆ! ನಿನಗೆ ಜಯವಾಗಲಿ! ನಾನು ಏಕಮುಖದಿಂದ ನಿನ್ನ ಪ್ರಶಂಸೆಯನ್ನು ಹೇಗೆತಾನೆ ಮಾಡಲಿ? ಹೇ ಮಹೇಶಮನಮಾನಸಹಂಸ, ನಿನಗೆ ಜಯವಾಗಲಿ! ನಾನು ತಿಳಿಯದೆ ಅನುಚಿತ ವಚನಗಳನ್ನಾಡಿದೆನು. ಕ್ಷಮಾಮಂದಿರ ಸ್ವರೂಪರಾದ ಸೋದರರೆ! ನಾನಾಡಿದ ಮಾತುಗಳಿಗಾಗಿ ನನ್ನನ್ನು ಕ್ಷಮಿಸಿರಿ. ಹೇ ರಘುಕುಲಕೇತು ರಾಮಚಂದ್ರ! ನಿನಗೆ ಜಯವಾಗಲಿ! ಜಯವಾಗಲಿ!! ಜಯವಾಗಲಿ!!!–ಈ ಬಗೆಯಾಗಿ ಸ್ತುತಿಸಿ, ಪರಶುರಾಮನು ತಪವನ್ನಾಚರಿಸಲು ವನಕ್ಕೆ ತೆರಳಿದನು. ಆಗ (ಮೊದಲು ಪರಶುರಾಮನು ಕೋಪಿಸಿಕೊಂಡಾಗ ನಗುತ್ತಿದ್ದ) ಕುಟಿಲರಾಜರು ಅಂಜಿದರು, ಹೇಡಿಗಳಾದವರು ಅಲ್ಲಲ್ಲಿ ಅಡಗಿಕೊಂಡರು.

---

* ಈ ಚೌಪದಿಗೆ ಮತ್ತೊಂದು ಅರ್ಥವೂ ಆಗುವುದು ಅದಾವುದೆಂದರೆ "ಹೇ ರಾಮ ರಮಾಪತಿಯ ಎಂದರೆ ಲಕ್ಷ್ಮೀಪತಿಯಾದ ವಿಷ್ಣುವಿನ ಧನುಸ್ಸನ್ನು ನಿನ್ನ ಕೈಯಲ್ಲಿ ಹಿಡಿದು ಹೆದೆಯೇರಿಸಿದರೆ ನನ್ನ ಸಂಶಯವು ದೂರವಾಗುವುದು" ಎಂದು. ವಿಷ್ಣುವು ಪರಶುರಾಮನಿಗೆ ಈ ಧನುಸ್ಸನ್ನು ಕೊಟ್ಟು, ಯಾವನಾದರೂ ಈ ಧನುಸ್ಸನ್ನು ಹೆದೆಯೇರಿಸಿದರೆ ಅವನನ್ನು ಅವತಾರ ಪುರುಷನೆಂದು ತಿಳಿದು ನೀನು ವನಕ್ಕೆ ತೆರಳು ಎಂದು ಹೇಳಿದ್ದನು ಈಗ ರಾಮನು ಕೈಗೆ ತೆಗೆದುಕೊಳ್ಳುವುದಕ್ಕೆ ಮುಂಚೆ ಅದು ತಾನಾಗಿಯೇ ಅವನ ಕೈಸೇರಿ ಹೆದೆಯೇರಿದುದರಿಂದ ತನ್ನ ಮುಂದಿರುವವನಾರೆಂದು ಪರಶುರಾಮನಿಗೆ ತಿಳಿಯಿತು.

† ಇಲ್ಲಿ ವನಜ-ವನ-ಭಾನು; ವನ ಎಂದರೆ ನೀರಿಗೂ ಹೆಸರಿದೆ. ಅದರಲ್ಲಿ ಉತ್ಪನ್ನವಾದ್ದು ಕಮಲ, ಅದರ ವನ ಎಂದರೆ ಸಮೂಹವೆಂದು ಅರ್ಥ.

ದೋ ॥೩೧೯॥ ದೇವತೆಗಳು ನಗಾರಿಯನ್ನು ಬಾರಿಸಿ ಶ್ರೀರಾಮಚಂದ್ರನ ಮೇಲೆ ಹೂಮಳೆಯನ್ನು ಸುರಿದರು. ನಗರನಿವಾಸಿಗಳಾದ ಸ್ತ್ರೀಪುರುಷರೆಲ್ಲರಿಗೂ ಹರ್ಷವುಂಟಾಯಿತು. ಮೋಹಮಯವಾದ ಸಂತಾಪವು ಮಾಯವಾಯಿತು. ಅತಿ ಘನವಾದ ವಾದ್ಯಗಳು ಮೊಳಗಿದವು, ಎಲ್ಲರೂ ಮನೋಹರವಾದ ಮಂಗಳ ವಸ್ತುಗಳನ್ನು ಸಿದ್ಧಪಡಿಸಿದರು. ಸುಂದರ ಮುಖಿಯರೂ ಸುಲೋಚನೆಯರೂ ಗುಂಪು ಗುಂಪಾಗಿ ಕೋಗಿಲೆಯಂತೆ ಇಂಪಾದ ಸ್ವರದಲ್ಲಿ ಗೀತೆಯನ್ನು ಹೇಳಲಾರಂಭಿಸಿದರು. ಜನಕರಾಯನ ಆನಂದಕ್ಕೆ ಮೇರೆಯಿಲ್ಲದಂತಾಯಿತು. ಆಜನ್ಮ ದರಿದ್ರನಿಗೆ ಸಂಪತ್ತು ಸಿಕ್ಕಿದಷ್ಟು ಸಂತೋಷವುಂಟಾಯಿತು. ಚಂದ್ರೋದಯದಿಂದ ಚಕೋರ ಕಿಶೋರಿಯು ಹರ್ಷಿತವಾಗುವಂತೆ ಸೀತೆಯ ಚಿಂತೆಯು ದೂರವಾಗಿ, ಅವಳೂ ಸುಖಿಯಾದಳು. ಜನಕನು ವಿಶ್ವಾಮಿತ್ರನ ಅಡಿಗಳಿಗೆರಗಿ,— ಪ್ರಭುವೆ, ತಮ್ಮ ಕೃಪೆಯಿಂದ ರಾಮಚಂದ್ರನು ಧನುರ್ಭಂಗ ಮಾಡಿದನು. ಸೋದರರಿಬ್ಬರೂ ನನ್ನನ್ನು ಕೃತಾರ್ಥನಾಗಿ ಮಾಡಿರುವರು. ಇನ್ನು, ಸ್ವಾಮಿನ್! ಮುಂದೇನು ಮಾಡಬೇಕೆಂಬುದನ್ನು ತಿಳಿಸಿರಿ"—ಎಂದನು. ಆಗ ವಿಶ್ವಾಮಿತ್ರನು-ಹೇ ಚತುರ ನರನಾಥ! ಕೇಳು, ವಿವಾಹವು ಧನುಸ್ಸನ್ನವಲಂಬಿಸಿದ್ದಿತು. ಧನುರ್ಭಂಗವಾದ ಕೂಡಲೆ ವಿವಾಹವಾದಂತಾಯಿತು. ದೇವತೆ, ನಾಗ, ಮನುಷ್ಯರೆಲ್ಲರೂ ಇದನ್ನರಿತಿರುವರು.

## ಸೀತಾಕಲ್ಯಾಣಮಂಟಪಾಲಂಕಾರ.

ದೋ ॥೩೧೯-೨೦॥ ಆದಾಗ್ಯೂ ನೀನು ಈಗ ಕುಲಮರ್ಯಾದೆಗನುಸರಿಸಿ ಕೆಲಸಗಳನ್ನು ಮಾಡು, ಬ್ರಾಹ್ಮಣರನ್ನೂ ನಿನ್ನ ವಂಶದಲ್ಲಿ ಹಿರಿಯರಾದವರನ್ನೂ ಗುರುಗಳನ್ನೂ ಕೇಳಿ ವೇದಾನುಕೂಲವಾದ ಆಚರಣೆಯನ್ನು ಮಾಡು. ಮೊದಲು ಅಯೋಧ್ಯೆಗೆ ದೂತರನ್ನಟ್ಟಿ ದಶರಥರಾಯನನ್ನು ಕರೆಯಿಸು-ಎಂದು ಹೇಳಿದನು. ಜನಕರಾಜನು ಅದನ್ನು ಕೇಳಿ ಪ್ರಸನ್ನನಾಗಿ, "ಹಾಗೆಯೇ ಆಗಲಿ! ದಯಾಳುವೆ!" ಎಂದು ದೂತರನ್ನು ಕರೆಯಿಸಿದನು. ಮತ್ತೆ ಸಕಲ ಮಹಾಜನರನ್ನೂ ಕರೆಯಿಸಲು ಅವರು ಆದರದಿಂದ ಬಂದು ತಲೆಬಾಗಿಸಿದರು. ಆಗ ರಾಯನು ಅವರನ್ನು ಕುರಿತು, ನೀವು ಅಂಗಡಿ, ಬೀದಿ, ಮನೆ, ದೇವಾಲಯಗಳನ್ನೂ ಪಟ್ಟಣದ ನಾಲ್ಕು ದಿಕ್ಕುಗಳನ್ನೂ ಅಲಂಕರಿಸಿರಿ" ಎಂದು ಆಜ್ಞಾಪಿಸಿದನು ಅವರು ಸಂತೋಷದಿಂದೊಪ್ಪಿಕೊಂಡು ತಂತಮ್ಮ ಮನೆಗಳಿಗೆ ತೆರಳಿದರು. ಮತ್ತೆ ಸೇವಕರನ್ನು ಕರೆಯಿಸಿ, ನೀವು ಚಿತ್ರವಿಚಿತ್ರವಾದ ಮಂಟಪಗಳನ್ನು ಅಣಿಮಾಡಿ ಎಂದು ಹೇಳಲು ಅವರು ತಲೆವಾಗಿ ನಮಿಸಿ ಮೌನದಿಂದ ತೆರಳಿದರು. ಅನಂತರ ಮಂಟಪರಚನೆಯಲ್ಲಿ ನಿಪುಣರೆನಿಸಿದ ಅನೇಕಜನ ಕಾರಿಗಾರರನ್ನು ಕರೆಯಿಸಿದನು. ಅವರು ಬ್ರಹ್ಮನಿಗೆ ನಮಿಸಿ, ಕೆಲಸವನ್ನಾರಂಭಿಸಿ, ಕನಕ ಕದಲೀಸ್ತಂಭವನ್ನು ರಚಿಸಿದರು.

ಅದರಲ್ಲಿ ಪಚ್ಚೆಮಣಿಗಳಿಂದ ಪತ್ರಗಳನ್ನೂ ಫಲಗಳನ್ನೂ ರಚಿಸಿ, ಪದ್ಮರಾಗ ಮಣಿಯಿಂದ ಪುಷ್ಪವನ್ನು ನಿರ್ಮಿಸಿದರು. ಅವುಗಳ ಅತಿವಿಚಿತ್ರ ರಚನೆಯನ್ನು ನೋಡಿ ಬ್ರಹ್ಮನ ಚಿತ್ತವೂ ಭ್ರಮಿಸಿದುದು. ಹರಿತಮಣಿಗಳಿಂದ ಪರ್ಣಸಮೇತವಾದ ವೇಣುಕುಂಜ (ಬಿದಿರುಮೆಳೆ) ಗಳನ್ನು ನಿರ್ಮಿಸಿದರು. ಅವುಗಳನ್ನು ನೆಟ್ಟಗೆ ನಿಲ್ಲಿಸಿ ನೋಡಿದರೆ ಇದು ನಿಜವಾದ ಗಿಡವೆಂದು ಭ್ರಮೆಯುಂಟಾಗುತ್ತಲಿತ್ತು. ಅನಂತರ ಸುವರ್ಣದ ನಾಗ ಬೇಲ ವೃಕ್ಷಗಳನ್ನು ನಿರ್ಮಿಸಿದರು. ಅವು ಕೃತ್ರಿಮದವೆಂದು ಯಾರಿಗೂ ತಿಳಿಯಲಿಲ್ಲ ಆ ಬಿಲ್ವವೃಕ್ಷಗಳ ಮಧ್ಯದಲ್ಲಿ ತೋರಣವನ್ನು ಕಟ್ಟಿ ಅದರ ಮಧ್ಯದಲ್ಲಿ ಮುತ್ತಿನ ಸರಗಳನ್ನು ತೂಗುಗಟ್ಟಿದರು. ಮತ್ತೆ ವಜ್ರ ಮಾಣಿಕ್ಯ ಮರಕತ (ಕೆಂಪು ನೀಲಿ ಹಸುರು) ಮಣಿಗಳನ್ನು ಕಡೆದು ಕೊರೆದು ಕಮಲಗಳನ್ನು ನಿರ್ಮಿಸಿದರು. ಅವುಗಳ ಮೇಲೆ ಗಾಳಿಯ ಬಲದಿಂದ ಗುಂಜಾರವವನ್ನು ಮಾಡುವ ವಿವಿಧ ವರ್ಣಗಳ ಭ್ರಮರ ಪಕ್ಷಿಗಳನ್ನು ಮಾಡಿಟ್ಟರು ಕಂಭಗಳಲ್ಲಿ ದೇವತಾ ಮೂರ್ತಿಗಳನ್ನು ಕೊರೆದರು; ಅವುಗಳು ಕೈಯಲ್ಲಿ ಮಂಗಳ ದ್ರವ್ಯಗಳನ್ನು ಹಿಡಿದು ನಿಂತಿದ್ದವು. ಮತ್ತೆ ಸಿಂದೂರ ಮತ್ತು ಮಣಿಗಳಿಂದ ಸಹಜ ಸುಂದರವಾದ ಚೌಕುಗಳನ್ನೂ ಮಾಡಿಟ್ಟರು

ದೋ ॥ ೩೨೮ ॥ ನೀಲಮಣಿಯನ್ನು ಕೊರೆದು ಸುಂದರವಾದ ಮಾವಿನೆಲೆಗಳನ್ನು ತಯಾರಿಸಿದರು. ಅವುಗಳ ಮಧ್ಯದಲ್ಲಿ ರೇಶಿಮೆ ದಾರದಲ್ಲಿ ಪೋಣಿಸಿದ ಹೇಮ ಮತ್ತು ಮರಕತ ಮಣಿಗಳ ಪುಷ್ಪ ಗುಚ್ಛಗಳನ್ನು ತೂಗುಗಟ್ಟಿದರು. ಅವುಗಳು (ನೋಡುವವರ ನೇತ್ರಗಳನ್ನೂ ಮನಸ್ಸನ್ನೂ ಹಿಡಿಯುವ) ಕಾಮದೇವನ ಬಲೆಗಳೋ ಎಂಬಂತೆ ಶೋಭಿಸುತ್ತಿದ್ದವು. ಅನಂತರ ಅನೇಕ ಮಂಗಳ ಕಲಶಗಳೂ, ಮನೋಹರವಾದ ಧ್ವಜಗಳೂ, ಪತಾಕೆಗಳೂ, ವಸ್ತ್ರಗಳೂ, ಚೌರಿಗಳೂ ಸಿದ್ಧವಾದವು. ಮನೋಹರವಾದ ಅನೇಕ ಮಣಿಮಯದೀಪಗಳು ಪ್ರಕಾಶಿಸುತ್ತಿರುವ, ವರ್ಣನಾತೀತವೂ ವಿಚಿತ್ರವೂ ಆದ, ವಿವಾಹ ಮಂಟಪವು ಅಣಿಯಾಯಿತು. ಯಾವ ಮಂಟಪದಲ್ಲಿ ವಿದೇಹಸುತೆಯೂ ಮದುಮಗಳಾಗಿರುವಳೊ ಆ ಮಂಟಪವನ್ನು ವರ್ಣನೆ ಮಾಡುವಷ್ಟು ಬುದ್ಧಿಯು ಯಾವ ಕವಿಗಿರುವುದು? ಯಾವ ಮಂಟಪದಲ್ಲಿ ಮದುಮಗನರೂಪದಿಂದ ಗುಣಸಾಗರನಾದ ಶ್ರೀರಾಮಚಂದ್ರನಿರುವನೋ ಆ ಮಂಟಪವು ತ್ರಿಲೋಕ ಪ್ರಸಿದ್ಧವಾಗಿರುವುದು. ಜನಕರಾಜನ ಅರಮನೆಯು ಶೋಭಿಸುತ್ತಿದ್ದಂತೆ (ಇಂದು) ಸಮಗ್ರ ಜನಕಪುರದಲ್ಲಿ ಪ್ರತಿಯೊಂದು ಮನೆಯೂ ಶೋಭಿಸುತ್ತಲಿದ್ದಿತು ಆ ಸಮಯದಲ್ಲಿ ಮಿಥಿಲಾಪುರವನ್ನು ನೋಡಿದವರಿಗೆ ಹದಿನಾಲ್ಕು ಲೋಕಗಳೂ (ಬ್ರಹ್ಮಾಂಡವು) ಇದಕ್ಕಿಂತ ಸಣ್ಣವೆಂದು ಭಾಸವಾಗುವಂತಿದ್ದಿತು. ಅಲ್ಲಿ ಒಬ್ಬ ಸಾಮಾನ್ಯ ಮಾನವನ ಮನೆಯಲ್ಲಿ ಶೋಭಿಸುತ್ತಲಿದ್ದ ಸಂಪತ್ತನ್ನು ನೋಡಿ ದೇವೇಂದ್ರನು ಕೂಡ ಮೋಹಿತನಾಗುತ್ತಿದ್ದನು.

ದೋ ॥ ೩೨೨॥ ಆವ ನಗರದಲ್ಲಿ ಲಕ್ಷ್ಮೀದೇವಿಯು ಕಪಟದಿಂದ ಸ್ತ್ರೀ ವೇಷವನ್ನು ಧರಿಸಿ ವಾಸಿಸುತ್ತಿರುವಳೊ ಆ ನಗರದ ಶೋಭೆಯನ್ನು ವರ್ಣಿಸಲು ಸರಸ್ವತಿಯೂ ಶೇಷನೂ ಸಂಕೋಚಪಡುವರು. ಏಕೆಂದರೆ ಅವರು ಅದನ್ನು ಸಂಪೂರ್ಣವಾಗಿ ವರ್ಣಿಸಲಾರರು. ಜನಕರಾಜನಿಂದ ಕಳುಹಿಸಲ್ಪಟ್ಟಿದ್ದ ದೂತರು ಪವಿತ್ರ ರಾಮಪುರಿಯಾದ ಅಯೋಧ್ಯಾನಗರವನ್ನು ಸೇರಿ, ಅದರ ಸೌಂದರ್ಯವನ್ನು ನೋಡಿ ಹರ್ಷಿತರಾದರು. ಅನಂತರ ಅವರು ರಾಜದ್ವಾರದ ಬಳಿ ಹೋಗಿ ಒಳಗೆ ಸುದ್ದಿಯನ್ನು ಕಳುಹಿಸಿದರು. ಮಹಾರಾಜನು ಸುದ್ದಿಯನ್ನು ಕೇಳಿದ ಕೂಡಲೆ ಅವರನ್ನು ಒಳಗೆ ಕರೆಯಿಸಿದನು. ದೂತರು ಪ್ರಣಾಮಗೈದು ಚೀಟಿಯನ್ನು ಕೊಟ್ಟರು. ದಶರಥರಾಜನು ಪ್ರಸನ್ನನಾಗಿ ತಾನೇ ಸ್ವಂತವಾಗಿ ಆ ಚೀಟಿಯನ್ನು ತೆಗೆದುಕೊಂಡನು. ಅದನ್ನು ಓದುತ್ತಿರುವಾಗಲೆ ಕಣ್ಣುಗಳಿಂದ ಆನಂದಾಶ್ರುಗಳನ್ನುದುರಿಸುತ್ತ ಅವನು ಪುಳಕಿತಗಾತ್ರನಾದನು. ಅವನ ಎದೆ ಯುಬ್ಬಿತು. ದಶರಥನ ಹೃದಯದಲ್ಲಿ ರಾಮ ಲಕ್ಷ್ಮಣರಿರುವರು, ಕೈಯಲ್ಲಿ ಶ್ರೇಷ್ಠವಾದ ಚೀಟಿಯಿರುವುದು. ಅವನು ಸ್ವಲ್ಪ ಹೊತ್ತು ಯಾವ ಮಾತನ್ನೂ ಆಡದೆ ನೀರವವಾಗಿದ್ದು, ಅನಂತರ ಧೈರ್ಯವನ್ನು ತಳೆದು ಸಭೆಯ ಮುಂದೆ ಪತ್ರವನ್ನೋದಿದನು. ಅದನ್ನು ಕೇಳಿ ಸಭೆಯಲ್ಲಿದ್ದವರೆಲ್ಲರೂ ಆನಂದಭರಿತ ರಾದರು. ಹೊರಗೆ ಆಡುತ್ತಿದ್ದ ಭರತ ಶತ್ರುಘ್ನರಿಬ್ಬರಿಗೂ ಈ ಸುದ್ದಿಯು ತಿಳಿ ಯಲು ಆ ಪ್ರಿಯ ಸೋದರರಿಬ್ಬರೂ ಮಹಾರಾಜನ ಬಳಿ ಓಡಿಬಂದು ಅತಿ ಸ್ನೇಹ ದಿಂದಲೂ ಸಂಕೋಚ ಭಾವದಿಂದಲೂ ಪ್ರಶ್ನಿಸಿದರೇನಂದರೆ–ಪಿತನೆ ಈ ಪತ್ರವು ಎಲ್ಲಿಂದ ಬಂದಿತು ?

ದೋ ॥ ೩೨೩॥ ನಮ್ಮ ಪ್ರಾಣಪ್ರಿಯರಾದ ಭ್ರಾತೃಗಳಿಬ್ಬರೂ ಕುಶಲ ರಾಗಿರುವರಷ್ಟೆ ?––ಈ ಪ್ರೇಮವಚನಗಳನ್ನು ಕೇಳಿ ನರೇಶನಾದ ದಶರಥನು ಮತ್ತೊಮ್ಮೆ ಪತ್ರವನ್ನು ಓದಿ ಹೇಳಿದನು. ಮತ್ತೆ ದಶರಥಮಹಾರಾಯನು ದೂತರನ್ನು ಸಮಿಾಪದಲ್ಲಿ ಕುಳ್ಳಿರಿಸಿಕೊಂಡು ಮನೋಹರವೂ ಮಧುರವೂ ಆದ ವಚನಗಳಿಂದ ಕೇಳಿದನೇನೆಂದರೆ––ಅಣ್ಣಗಳಿರಾ, ಬಾಲಕರಿಬ್ಬರೂ ಕುಶಲರಾಗಿ ರುವರಷ್ಟೆ? ಅವರು ಕುಶಲರಾಗಿರುವರೆಂದು ನಿಮ್ಮ ಕಣ್ಣುಗಳಿಂದ ನೋಡಿರು ವಿರಾ ? ಒಬ್ಬನು ಶ್ಯಾಮಾಂಗನು. ಮತ್ತೊಬ್ಬನು ಗೌರಾಂಗನು, ಇಬ್ಬರೂ ಕೈಗಳಲ್ಲಿ ಧನುಸ್ಸನ್ನು ಧರಿಸಿರುವರು, ಕಿಶೋರವಯಸ್ಕರು. ಅವರ ಜೊತೆಯಲ್ಲಿ ವಿಶ್ವಾಮಿತ್ರ ಮುನಿಯಿರುವನು ನಿಮಗೆ ಅವರ ಪರಿಚಯವಿದೆಯೆ ? ಪರಿಚಯ ವಿದ್ದರೆ ಅವರ ಸ್ವಭಾವವನ್ನು ವರ್ಣಿಸಿರಿ—ಈ ಬಗೆಯಾಗಿ ರಾಯನು ಪ್ರೇಮ ವಿವಶನಾಗಿ ಬಾರಿ ಬಾರಿಗೂ ಹೇಳಲಾರಂಭಿಸಿದನೇನೆಂದರೆ—"ವಿಶ್ವಾಮಿತ್ರ ಮುನಿಯು ಅವರನ್ನು ಕರೆದುಕೊಂಡು ಹೋದಂದಿನಿಂದ ನನಗೆ ಅವರ ಸುದ್ದಿಯು ತಿಳಿದುದು ಇಂದೇ. ಒಳ್ಳೆಯದು, ಜನಕರಾಜನು ಅವರ ವಿಚಾರವಾಗಿ ಯಾವ

ಅಭಿಪ್ರಾಯವುಳ್ಳವನಾಗಿರುವನು ?"—ಈ ಪ್ರಿಯ ವಾಕ್ಯವನ್ನು ಕೇಳಿ ದೂತರು ನಸುನಕ್ಕರು.

ದೋ ॥ ೩೨೪ ॥ ಅನಂತರ ದೂತರು ಈ ಬಗೆಯಾಗಿ ಬಿನ್ನಯಿಸಿದರು.— ಹೇ ಮಹೀಪತಿ ಮುಕುಟಮಣಿ! ತಮ್ಮ ಸಮಾನ ಧನ್ಯರು ಯಾರೂ ಇಲ್ಲ. ಮಹಾರಾಜ! ತಮ್ಮ ಪುತ್ರರ ವಿಚಾರ ಕೇಳಬೇಕೆ! ಅವರು ಪುರುಷಸಿಂಹರು, ತ್ರಿಲೋಕ ಪ್ರಕಾಶಕರು. ಅವರ ಕೀರ್ತಿ ಪ್ರತಾಪಗಳೆದುರಿನಲ್ಲಿ ಚಂದ್ರನು ಮಲಿನ ನಾಗಿಯೂ ಸೂರ್ಯನು ಶೀತಲನಾಗಿಯೂ ತೋರುವರು ಹೇ ನಾಥ! ಅವರ ಪರಿಚಯವನ್ನು ಹೇಳಬೇಕೆಂದು ಕೇಳುವಿರಿ! ಕೈಯಲ್ಲಿ ದೀಪವನ್ನು ಹಿಡಿದು ಕೊಂಡು ಸೂರ್ಯನನ್ನು ಹುಡುಕುವುದಕ್ಕೆ ಹೋಗಬೇಕೆ? ಮಹಾರಾಜ! ಸೀತೆಯ ಸ್ವಯಂವರದಲ್ಲಿ ಒಬ್ಬರಿಗಿಂತಲೂ ಒಬ್ಬರು ಉತ್ತಮ ಶೂರ ವೀರರಾದ ರಾಜರು ಸೇರಿದ್ದರು. ಅವರಲ್ಲಿ ಒಬ್ಬರಾದರೂ ಶಿವಧನುಸ್ಸನಲುಗಾಡಿಸಲಾಗ ಲಿಲ್ಲ. ವೀರರೂ ಅಭಿಮಾನಿಗಳೂ ಆದ ರಾಜರೆಲ್ಲರೂ ಸೋತರು ತ್ರಿಲೋಕ ಪ್ರಸಿದ್ಧರಾದ ವೀರರ ಶಕ್ತಿಯನ್ನು ಶಿವಧನುಸ್ಸು ಭಂಜನಮಾಡಿಬಿಟ್ಟಿತು. ಸುಮೇರು ಪರ್ವತವನ್ನೆತ್ತಬಲ್ಲ ದೇವತೆಗಳು ದೈತ್ಯರು ಕೂಡ ಎದೆಗುಂದಿ ಕಂಗೆಟ್ಟು ಹಿಂದಿರುಗಿದರು. ಕೈಲಾಸ ಪರ್ವತವನ್ನು ಆಟದಿಂದ ಮೇಲಕ್ಕೆತ್ತಿದ ರಾವಣನು ಕೂಡ ಸಭೆಗೆ ಬಂದು ಸೋತು ಹೋದನು.

ದೋ ॥ ೩೨೫ ॥ (ಮುಂದೆ) ಕೇಳಬೇಕು, ರಾಜಾಧಿರಾಜ! ಆನೆಯು ಕಮಲದ ದಂಟನ್ನು ಕೀಳುವಂತೆ, ಆ ರಘುಕುಲಮಣಿಯಾದ ರಾಮಚಂದ್ರನು ನಿರಾ ಯಾಸವಾಗಿ ಅದನ್ನು ಮುರಿದು ಬಿಸುಟನು. ಆ ಧನುರ್ಭಂಗದ ಧ್ವನಿಯನ್ನು ಕೇಳಿ ಪರಶುರಾಮನು ಕುಪಿತನಾಗಿ ಬಂದನು. ಅವನೆಷ್ಟೋ ಬಗೆಯಾಗಿ ಕಣ್ಣು ತಿರುಗಿಸಿ ನೋಡಿದನು. ಕೊನೆಗೆ ಅವನು ರಾಮನ ಬಲವನ್ನು ನೋಡಿ, ತನ್ನ ಧನುಸ್ಸನ್ನು ಅವನಿಗೆ ಕೊಟ್ಟು, ಬಹುವಾಗಿ ಅವನನ್ನು ಸ್ತುತಿಸಿ, ವನಕ್ಕೆ ಹೊರಟು ಹೋದನು. ಹೇ ರಾಜನ್! ರಾಮನು ಅತುಲ ಪರಾಕ್ರಮಿಯಾಗಿರುವಂತೆಯೆ ಲಕ್ಷ್ಮಣನು ಪರಮ ತೇಜಸ್ವಿಯಾಗಿರುವನು. ಸಿಂಹದ ಮರಿಯ ನೋಟದಿಂದ ಆನೆಯು ಹೆದರುವಂತೆ ಅವನನ್ನು ನೋಡಿದ ಕೂಡಲೆ ರಾಜರೆಲ್ಲರೂ ನಡುಗುವರು. ನಿಮ್ಮ ಮಕ್ಕಳಿಬ್ಬರನ್ನು ನೋಡಿದನಂತರ ನಮ್ಮ ಕಣ್ಣಿಗೆ ಅಂತಹರು ಮತ್ತಾರೂ ಕಾಣುತ್ತಿಲ್ಲ."—ಈ ಬಗೆಯಾದ ಪ್ರೇಮ, ಪ್ರತಾಪ ಮತ್ತು ವೀರ ರಸಯುಕ್ತ ವಾದ ದೂತರ ವಾಕ್ಯಗಳು ದಶರಥರಾಯನಿಗೆ ಪ್ರಿಯವಾಗಿದ್ದುವು. ಸಭಾ ಸಮೇತನಾಗಿ ರಾಯನು ಸ್ನೇಹಪೂರ್ಣವಾಗಿ, ದೂತರಿಗೆ ಪಾರಿತೋಷಕಗಳನ್ನು ಕೊಡಿಸಲಾರಂಭಿಸಿದನು. ಆಗಲಾ ದೂತರು ತಮ್ಮ ಕಿವಿಯಮೇಲೆ ಕೈಯಿಟ್ಟು ಕೊಂಡು,—(ನಮ್ಮ ರಾಜನ ಮಗಳನ್ನು ನಿಮ್ಮ ಮನೆಗೆ ಕೊಡುವುದರಿಂದ ನಾವು

ಈ ಬಹುಮಾನವನ್ನು ಸ್ವೀಕರಿಸುವ)--ಈ ಆಚಾರವು ನೀತಿಯಾಗಿರದು ಎಂದರು. ಅವರಾ ಧರ್ಮವಿಚಾರವನ್ನು ತಿಳಿದು ಸರ್ವರಿಗೂ ಸಂತೋಷ ವುಂಟಾಯಿತು.

### ದಶರಥನು ಸೀತಾಕಲ್ಯಾಣಕ್ಕೆ ತೆರಳುವುದು.

ದೋ ॥ ೩೨೬-೨೭ ॥ ಅನಂತರ ದಶರಥನು ವಸಿಷ್ಠನ ಬಳಿಗೆ ಹೋಗಿ ಅವನಿಗೆ ಆ ಪತ್ರವನ್ನು ಕೊಟ್ಟು, ದೂತರನ್ನು ಕರೆಯಿಸಿ, ಅವರಿಂದ ಸಮಾಚಾರ ವನ್ನೆಲ್ಲ ಅರುಹಿಸಿದನು. ಅದೆಲ್ಲವನ್ನು ಕೇಳಿ ವಸಿಷ್ಠನು ಸಂತೋಷಪಟ್ಟು,--ಸೇರುವ ಕಾಮನ ವಿಲ್ಲದಿದ್ದರೂ ನದಿಗಳು ಸಾಗರವನ್ನು ಸೇರುವಂತೆ ಪುಣ್ಯಾತ್ಮರಿಗೋಸ್ಕರ ಪೃಥ್ವಿಯೆಲ್ಲ ಸುಖಮಯವಾಗಿರುವುದು. ಅದರಂತೆಯೆ ಸುಖ ಸಂಪತ್ತಿಗಳು, ಹೇಳದೆ ಕೇಳದೇ, ತಾವಾಗಿಯೆ ಧರ್ಮಶೀಲರಾದವರ ಬಳಿಗೆ ಬರುವುದು. ನೀನು ಗುರು ವಿಪ್ರಧೇನುಸುರ ಸೇವಕನಾಗಿರುವೆ, ಪವಿತ್ರ ಕೌಸಲ್ಯಾ ಮಹಾರಾಣಿಯೂ ನಿನ್ನಂತೆಯೆ ಇರುವಳು. ನಿನ್ನ ಸಮಾನ ಪುಣ್ಯವಂತನಾದವನು ಜಗತ್ತಿನಲ್ಲಾರೂ ಇಲ್ಲ, ಮುಂದೂ ಹುಟ್ಟಲಾರನು. ಹೇ ರಾಜನ್! ರಾಮನನ್ನು ಪುತ್ರನನ್ನಾಗಿ ಪಡೆದಿರುವುದಕ್ಕಿಂತಲೂ ಹೆಚ್ಚಿನ ಪುಣ್ಯವು ಮತ್ತಾರದಿರುವುದು? ನಿನ್ನ ನಾಲ್ಕು ಜನ ಪುತ್ರರೂ ವೀರರು, ವಿನಯಶೀಲರು, ಧರ್ಮವ್ರತಧಾರಿಗಳು, ಗುಣಸಾಗರರು, ಶ್ರೇಷ್ಠರು. ನಿನಗೆ ಯಾವಾಗಲೂ ಶುಭ ವಾಗುವುದು, ನೀನು ಮಂಗಳವಾದ್ಯದೊಡನೆ ದಿಬ್ಬಣವನ್ನು ಹೊರಡಿಸು. ನಡೆ, ಬೇಗ"-ಎಂದನು. ಈ ಗುರುವಚನಗಳನ್ನು ಕೇಳಿ, ರಾಜನು ಒಳ್ಳೆಯದೆಂದು ಹೇಳಿ, (ಜನಕನ) ದೂತರಿಗೆ ಬಿಡಾರವನ್ನು ತೋರಿಸಿ, ಅರಮನೆಗೆ ಹೋದನು. ಅಲ್ಲಿ ಅಂತಃಪುರದವರನ್ನೆಲ್ಲ ಕರೆಯಿಸಿ ಅವರೆದುರಿಗೆ ಜನಕರಾಯನು ಕಳುಹಿಸಿದ್ದ ಪತ್ರವನ್ನು ಓದಿದನು ವಿವಾಹ ಸಂದೇಶವನ್ನರಿತು ಸರ್ವರೂ ಪ್ರಸನ್ನರಾದರು. ಮತ್ತೆ ರಾಜನು ದೂತರಿಂದ ತಿಳಿದ ಸಂಗತಿಗಳನ್ನೆಲ್ಲ ತಿಳಿಸಿದನು. ರಾಣಿಯರೆಲ್ಲರೂ ಪ್ರೇಮದಿಂದ ಪ್ರಫುಲ್ಲಿತರಾಗಿ, ಮೇಘದ ಗರ್ಜನೆಯನ್ನು ಕೇಳಿದ ಕೂಡಲೆ ನವಿಲು ಪ್ರಫುಲ್ಲಿತವಾಗುವಂತೆ, ಶೋಭಾಯಮಾನರಾದರು. ಗುರುಕುಲದ ಸ್ತ್ರೀಯರೂ ಹಿರಿಯರೆನಿಸಿದ ವೃದ್ಧ ಸ್ತ್ರೀಯರೂ ಪ್ರಸನ್ನರಾಗಿ ಆಶೀರ್ವದಿಸಲಾರಂಭಿಸಿದರು. ಮಾತೆಯರು ಆನಂದದಲ್ಲಿ ಮಗ್ನರಾದರು. ರಾಣಿಯರು ಆ ಅತಿಪ್ರಿಯವಾದ ಪತ್ರಿಕೆಯನ್ನು ತಮ್ಮ ತಮ್ಮ ಕೈಯಲ್ಲಿ ತೆಗೆದುಕೊಂಡು ಬಾರಿ ಬಾರಿಗೂ ಎದೆ ಗಪ್ಪಿಕೊಳ್ಳುತ್ತ, ಹೃದಯವನ್ನು ಶಾಂತಗೊಳಿಸುತ್ತಿದ್ದರು. ಮತ್ತೆ ರಾಜನು ರಾಮ ಲಕ್ಷ್ಮಣರ ಕೀರ್ತಿಯನ್ನೂ ಅವರು ಮಾಡಿದ ಕೆಲಸಗಳನ್ನೂ ಬಾರಿ ಬಾರಿಗೂ ಬಣ್ಣಿಸುತ್ತಿದ್ದನು. ಕೊನೆಗೆ ಇವೆಲ್ಲವೂ ವಿಶ್ವಾಮಿತ್ರ ಮತ್ತು ವಸಿಷ್ಠರ ಕೃಪೆ ಯೆಂದು ಹೇಳಿ, ಮಹಾರಾಜನು ರಾಜದ್ವಾರದ ಬಳಿ ಬಂದನು. ಅತ್ತ ರಾಣಿ

ಯರು ಬ್ರಾಹ್ಮಣರನ್ನು ಕರೆಯಿಸಿ, ಆನಂದದಿಂದ ಅವರಿಗೆ ದಾನಗಳನ್ನು ಮಾಡಿದರು. ಅವರು ಸಂತುಷ್ಟರಾಗಿ ರಾಣಿಯರಿಗೆ ಆಶೀರ್ವಾದವನ್ನಿತ್ತು ತೆರಳಿದರು.

ಸೋ ॥೩೨೮॥ ಅನಂತರ ಅವರು (ರಾಣಿಯರು) ಯಾಚಕರನ್ನು ಕರೆಯಿಸಿ ಅವರಿಗೆ ಕೋಟ್ಯಾಂತರ ವಿಧವಾದ ವಸ್ತುಗಳನ್ನು ಪರಿತೋಷಕವಾಗಿ ಹಂಚಿದರು. ಅವರು ತೃಪ್ತರಾಗಿ ದಶರಥ ಮಹಾರಾಯನ ನಾಲ್ವರು ಪುತ್ರರೂ ಚಿರಂಜೀವಿಗಳಾಗಲಿ ಎಂದು ಹರಸುತ್ತ ತಮಗೆ ಉಡುಗೆರೆಯಾಗಿ ಬಂದ ವಸ್ತ್ರಗಳನ್ನು ಧರಿಸಿ, ಪ್ರಸನ್ನರಾಗಿ, ವಾದ್ಯಗಳನ್ನು ಬಾರಿಸಿದರು. ಮತ್ತೆ ಈ ಶುಭ ಸಮಾಚಾರವು ಅಯೋಧ್ಯಾನಗರ ನಿವಾಸಿಗಳಿಗೆ ತಿಳಿದ ಕೂಡಲೆ ಎಲ್ಲರ ಮನೆಗಳಲ್ಲಿ ಧನ್ಯವಾದ ಗೀತೆಗಳನ್ನು ಹಾಡಲಾರಂಭಿಸಿದರು. ಜನಕಸುತೆಯು ರಘುವೀರನನ್ನು ವರಿಸುವಳೆಂಬ ಸುದ್ದಿಯನ್ನು ಕೇಳಿ ಹದಿನಾಲ್ಕು ಲೋಕಗಳೂ ಆನಂದೋತ್ಸವದಲ್ಲಿ ಮಗ್ನವಾದವು. ಮತ್ತೆ ಈ ಸುದ್ದಿಯನ್ನು ತಿಳಿದು ಪ್ರಜೆಗಳು ಮಾರ್ಗಗಳನ್ನೂ, ಉಪಮಾರ್ಗಗಳನ್ನೂ, ಮನೆಗಳನ್ನೂ ಅಲಂಕರಿಸಲಾರಂಭಿಸಿದರು. ಪವಿತ್ರವೂ ಮಂಗಳಮಯವೂ ಆದ ರಾಮಚಂದ್ರನ ಅಯೋಧ್ಯೆಯು ಯಾವಾಗಲೂ ಸುಂದರವಾಗಿರುವುದಾದರೂ ಜನರು ತಮ್ಮ ತಮ್ಮ ಪ್ರೀತಿಗನುಸಾರವಾಗಿ ಅದನ್ನು ಹೆಚ್ಚು ಸುಂದರವಾಗಿಯೂ ಮಂಗಳಮಯವಾಗಿಯೂ ಮಾಡಿದರು. ಸುಂದರವಾದ ಧ್ವಜಪತಾಕೆ, ವಿವಿಧವರ್ಣಗಳವಸನ, ಚಾಮರಗಳಿಂದ ಪೇಟೆಯು ಬಹು ಚಿತ್ರವಿಚಿತ್ರವಾಗಿ ಅಲಂಕರಿಸಲ್ಪಟ್ಟಿತು. ಕನಕಕಲಶ, ತೋರಣ, ಮಣಿಜಾಲ, ಅರಸಿನ, ಗರಿಕೆ, ಮೊಸರು, ಅಕ್ಕಿ, ಹೂ ಮೊದಲಾದ ವಸ್ತುಗಳನ್ನು ಎಲ್ಲರೂ ಸಂಗ್ರಹಿಸಿದರು.

ದೋ ॥೩೨೯॥ ನಗರನಿವಾಸಿಗಳು ತಮ್ಮ ಮನೆಗಳನ್ನು ಮಂಗಳದ್ರವ್ಯಗಳಿಂದ ಚೆನ್ನಾಗಿ ಅಲಂಕರಿಸಿ, ಬಾಗಿಲಮುಂದೆ ಅಂಗಳಗಳಂತೆ ಸಾರಿಸಿ ಗುಡಿಸಿ (ರಂಗವಲ್ಲಿಗಳಿಂದ) ಚೌಕುಗಳನ್ನು ಮಾಡಿದರು. ತಮ್ಮ ಸೌಂದರ್ಯದಿಂದ ರತಿಯನ್ನು ನಾಚಿಸುವಂತಿದ್ದ ಚಂದ್ರವದನೆಯರೂ ಮೃಗಲೋಚನೆಯರೂ ಸಕಲ ದ್ಯುತಿದಾಮಿನಿಯರೂ ಹದಿನಾರು ಬಗೆಯ ಅಲಂಕಾರಗಳನ್ನು ಧರಿಸಿ ಅಲ್ಲಲ್ಲಿ ಗುಂಪುಗುಂಪಾಗಿ ಮಧುರವಾಣಿಯಿಂದ ಮಂಗಳಾಚರಣೆಗಳನ್ನು ಹಾಡಲಾರಂಭಿಸಿದರು. ಅವರ ಮನೋಹರವಾದ ಕಲರವವನ್ನು ಕೇಳಿ ಕೋಗಿಲೆಯೂ ನಾಚಿಗೊಂಡಿತು. ಇನ್ನು ಜಗನ್ಮೋಹಕವಾದ ಮಂಟಪವನ್ನುಳ್ಳ ರಾಜಭವನವನ್ನು ವರ್ಣಿಸುವದೆಂತು? ಅಲ್ಲಿ ಅನೇಕ ವಿಧವಾದ ವಸ್ತುಗಳನ್ನಿಟ್ಟಿದ್ದರು, ವಿವಿಧವಾದ್ಯಗಳು ಮೊಳಗುತ್ತಿದ್ದವು. ಒಂದೆಡೆಯಲ್ಲಿ ವಂದೀಜನರು ಬಿರುದಾವಳಿಗಳನ್ನು ಹಾಡುತ್ತಿದ್ದರು, ಮತ್ತೊಂದೆಡೆಯಲ್ಲಿ ಭೂಸುರರು ವೇದಮಂತ್ರಗಳನ್ನು ಪಠಿಸುತ್ತಿದ್ದರು. ಸೀತಾರಾಮರ ಹೆಸರಿನಲ್ಲಿ ಸುಂದರಾಂಗಿಯರು ಮಂಗಲ ಗೀತೆಗಳನ್ನು ಪಾಡುತ್ತಿದ್ದರು.

ಅಲ್ಲಿ ತೋರುತ್ತಿದ್ದ ಮಹಾ ಉತ್ಸಾಹಕ್ಕೆ ರಾಜಭವನವು ಚಿಕ್ಕದಾಗಿದ್ದಂತೆ ಭಾಸವಾಗುತ್ತಿದ್ದಿತು. ಆದಕಾರಣ ಆನಂದತರಂಗಗಳು ಅರಮನೆಯಿಂದ ಹೊರಸೂಸುತ್ತಲಿದ್ದವೊ ಎಂಬಂತೆ ಕಾಣುತ್ತಿದ್ದಿತು.

ದೋ ॥೩೩೦॥ ಸಕಲ ಸುರಶಿರೋಮಣಿಯಾದ ರಾಮಚಂದ್ರನು ಅವತರಿಸಿರುವ ದಶರಥರಾಜಭವನವನ್ನು, ಯಾವ ಕವಿಯಾದರೂ ಹೇಗೆ ಬಣ್ಣಿಸಬಲ್ಲನು? ರಾಜನು ಭರತನನ್ನು ಕರೆಯಿಸಿ,—"ನೀನು ಹೋಗಿ ಕುದುರೆ, ಆನೆ ಮತ್ತು ರಥಗಳನ್ನು ಅಲಂಕರಿಸಿ ಬೇಗ ರಾಮನ ಮದುವೆಯ ದಿಬ್ಬಣದೊಂದಿಗೆ ಹೊರಡು"—ಎಂದು ಆಜ್ಞಾಪಿಸಿದನು. ಇದನ್ನು ಕೇಳಿ (ಭರತ ಶತ್ರುಘ್ನ) ರಿಬ್ಬರೂ ಆನಂದಮಗ್ನರಾದರು. ಭರತನು ಎಲ್ಲ ಸರದಾರರನ್ನೂ ಕರೆಯಿಸಿ, ದಿಬ್ಬಣದ ಏರ್ಪಾಡನ್ನು ಮಾಡುವಂತೆ ಅಪ್ಪಣೆಯನ್ನಿತ್ತನು. ಅವರು ಅದನ್ನು ಕೇಳಿ ಪ್ರಸನ್ನರಾಗಿ ತೆರಳಿದರು ಅವರು ಕುದುರೆಗಳಿಗೆ ಜೀನುಗಳನ್ನು ಹಾಕಿ ಅಲಂಕರಿಸಿದರು. ವಿವಿಧ ರಂಗಿನ ಕುದುರೆಗಳು ಅಲಂಕೃತವಾಗಿ ಸಿದ್ಧವಾದವು. ಕುದುರೆಗಳೆಲ್ಲವೂ ಸುಂದರವಾಗಿಯೂ ಚಂಚಲಶೀಲವುಳ್ಳವುಗಳಾಗಿಯೂ ಇದ್ದವು. ಜ್ವಲಿಸುತ್ತಿರುವ ಲೋಹದಮೇಲೆ ಅಡಿಗಳನ್ನಿಡುತ್ತಿರುವವೊ ಎಂಬಂತೆ ಅವುಗಳ ನಡೆಯು ವೇಗವಾಗಿದ್ದಿತು. ಮತ್ತೆ ಅವುಗಳು ಗಾಳಿಯನ್ನು ಕೂಡ ಲಕ್ಷಿಸದೆ ಹಾರಬೇಕೆಂದಪೇಕ್ಷಿಸುತ್ತಿರುವಂತೆ ಕಾಣಿಸಿದವು. ಇನ್ನು ಅಲ್ಲಿ ಎಷ್ಟು ವರ್ಣಗಳ ಕುದುರೆಗಳಿದ್ದವೆಂದು ವರ್ಣಿಸುವುದಸಾಧ್ಯವು. ಭರತನೊಂದಿಗೆ ವಯೋವೃದ್ಧರೂ ಚಲುವರೂ ಆದ ಸವಾರರು ಹೊರಟರು. ಅವರೆಲ್ಲರೂ ಚೆಂದದಿಂಲಂಕರಿಸಿಕೊಂಡು, ಕೈಯಲ್ಲಿ ಧನುರ್ಬಾಣಗಳನ್ನೂ, ಕಟಿಯಲ್ಲಿ ದೊಡ್ಡ ಖಡ್ಗಗಳನ್ನೂ ಧರಿಸಿದ್ದರು.

ದೋ ॥ ೩೩೧ ॥ ಅವರೆಲ್ಲರೂ ಚಲುವರಾಗಿಯೂ, ತೆಳುವಾಗಿಯೂ, ಸುಂದರರಾಗಿಯೂ, ಶೂರ ವೀರರಾಗಿಯೂ, ಚತುರರಾಗಿಯೂ, ಯುವಕರಾಗಿಯೂ ಇದ್ದರು. ಪ್ರತಿಯೊಬ್ಬ ಸವಾರನೊಂದಿಗೆ, ಖಡ್ಗಪ್ರಯೋಗದಲ್ಲಿ ನಿಪುಣರೆನಿಸಿದ ಕಾಲಾಳುಗಳುಳ್ಳ ಎರಡೆರಡು ದಳಗಳು ಇದ್ದವು. ರಣಧೀರರಾದ ವೀರರು ಬಾಣಗಳನ್ನು ಧರಿಸಿ, ನಗರದ ಹೊರಗೆ ಅಣಿಯಾಗಿ ನಿಂತು, ತಮ್ಮ ಕುದುರೆಗಳನ್ನು ಅನೇಕ ವಿಧವಾಗಿ ತಿರುಗಿಸುತ್ತ, ವಾದ್ಯ ಧ್ವನಿಯನ್ನು ಕೇಳಿ ಪ್ರಸನ್ನರಾದರು. ಸಾರಥಿಗಳು ಧ್ವಜ ಪತಾಕ ಮಣಿಗಳಿಂದ ರಥಗಳನ್ನಲಂಕರಿಸಿದರು. ಆ ರಥಗಳಲ್ಲಿ ಸುಂದರವಾದ ಚಾಮರಗಳನ್ನೂ ತೂಗುಗಟ್ಟಿದ್ದರು. ಮತ್ತೆ ರಥಗಳಲ್ಲಿದ್ದ ಘಂಟೆಗಳು ಶಬ್ದಮಾಡುತ್ತಿದ್ದವು. ಆ ರಥಗಳು ಸೂರ್ಯನ ರಥದ ಶೋಭೆಯನ್ನು ತಗ್ಗಿಸುವಂತಿದ್ದವು. ಅಲ್ಲಿದ್ದ ಕುದುರೆಗಳಲ್ಲಿ ಶ್ಯಾಮವರ್ಣಗಳುಳ್ಳ ಅಶ್ವಗಳನ್ನು ಸಾರಥಿಗಳು ರಥಕ್ಕೆ ಹೂಡಿದರು. ಅಶ್ವಗಳ ಅಲಂಕಾರವನ್ನು ನೋಡಿ ಮುನಿ

ಜನರ ಮನಸ್ಸು ಮೋಹಿತವಾಗುವಂತಿದ್ದಿತು. ಆ ಕುದುರೆಗಳು ಜಲದಮೇಲೂ ನೆಲದಮೇಲೂ ಏಕಪ್ರಕಾರವಾಗಿ, ಜಲದಲ್ಲಿ ತಮ್ಮ ಗೊರಸು ಕೂಡ ಮುಳುಗದಷ್ಟು ವೇಗವಾಗಿ, ಹೆಜ್ಜೆಯನ್ನಿಡುತ್ತಿದ್ದವು. ಶಸ್ತ್ರಾಸ್ತ್ರಗಳಿಂದ ಅಲಂಕೃತರಾದವರನ್ನು 'ರಥವನ್ನು ಹತ್ತಿರಿ' ಎಂದು ಸಾರಥಿಗಳು ಕರೆದರು.

ದೋ ॥ ೩೩೨ ॥ ರಥಗಳನ್ನೇರಿ ನಗರದ ಹೊರಗೆ ದಿಬ್ಬಣದವರೆಲ್ಲರು ಒಟ್ಟುಗೂಡಲಾರಂಭಿಸಿದರು. ಆಗ ಯಾರು ಯಾವ ಕಾರ್ಯಕ್ಕೆ ಹೋದರೂ ಶುಭಶಕುನಗಳೇ ಆಗುತ್ತಿದ್ದವು. ಸುಂದರವಾದ ಆನೆಗಳಮೇಲೆ ಅಂಬಾರಿಗಳನ್ನೇರಿಸಿದರು. ಅದರ ಅಲಂಕಾರವು ವರ್ಣನಾತೀತವಾದುದು. ಮನೋಹರವಾದ ಶ್ರಾವಣಮಾಸದಲ್ಲಿ ಮೇಘ ಪಂಕ್ತಿಗಳು ಚಲಿಸುವಂತೆ ಮತ್ತಗಜಗಳು ಘಂಟೆಯನ್ನು ಬಾರಿಸುತ್ತ ಹೊರಟವು. ಸುಂದರವಾದ ಪಲ್ಲಕ್ಕಿಗಳು, ವಿಮಾನಗಳು ಮತ್ತು ವರವಾಹನಗಳನ್ನೇರಿ ಶ್ರೇಷ್ಠರಾದ ಬ್ರಾಹ್ಮಣರು ಗುಂಪು ಗುಂಪಾಗಿ ಹೊರಟರು. (ಆಗ ಅವರನ್ನು ನೋಡಿದರೆ) ಸಮಗ್ರ ವೇದಗಳ ಛಂದಸ್ಸುಗಳೇ ಮೂರ್ತಿರೂಪವನ್ನು ಧರಿಸಿ ಹೊರಟಿರುವವೊ ಎಂಬಂತಿದ್ದಿತು. ವಂದಿ, ಮಾಗಧ ಸೂತರಾದಿ ಗುಣಗಾಯಕರು ತಮತಮಗೆ ಯೋಗ್ಯವಾದ ವಾಹನಗಳನ್ನೇರಿ ಹೊರಟರು. ಹಲವು ಜಾತಿಯ ಕುದುರೆಗಳು, ಒಂಟೆಗಳು ಮತ್ತು ಎತ್ತುಗಳ ಮೇಲೆ ಅಸಂಖ್ಯಾತವಾದ ವಸ್ತುಗಳನ್ನು ಹೇರಿಕೊಂಡು ಕೆಲವರು ಹೊರಟರು. ಬೋಯಿಗಳು ಕೋಟಿ ಕಂಬಳಿಗಳನ್ನು ತೆಗೆದುಕೊಂಡು ಹೊರಟರು. ಅವರ ಬಳಿಯಿದ್ದ ವಸ್ತುಗಳನ್ನೆಣಿಸುವುದು ಅಸಾಧ್ಯವು. ತಮ್ಮ ತಮ್ಮ ಸಂಗಡಿಗರೊಂದಿಗೆ ಅಣಿಯಾಗಿ ಚಿಕ್ಕ ದೊಡ್ಡವರೆಲ್ಲರು ಗುಂಪಾಗಿ ಹೊರಟರು.

ದೋ । ೩೩೩ ॥ ನಾವು ರಾಮಲಕ್ಷ್ಮಣರನ್ನೊಂದಿಗೆ ಕಣ್ತುಂಬ ನೋಡುವೆವೊ ಎಂದು ಎಲ್ಲರ ಅಂತಃಕರಣಗಳೂ ಆನಂದಪೂರ್ಣವಾಗಿಯೂ, ಶರೀರಗಳು ಪುಳಕಿತವಾಗಿಯೂ ಇವೆ. ಆನೆಗಳು ಗರ್ಜಿಸುತ್ತಲಿವೆ. ಅವುಗಳ ಕುತ್ತಿಗೆಯಲ್ಲಿ ಕಟ್ಟಿದ್ದ ಘಂಟೆಗಳ ಧ್ವನಿಯು ಹೆಚ್ಚಾಗುತ್ತಲಿದೆ. ಮತ್ತೆ ಚತುರ್ದಿಕ್ಕುಗಳಲ್ಲಿಯೂ ರಥಗಳ ಗಾಲಿಗಳು ಕಿರುಗುಟ್ಟುವ ಧ್ವನಿಯಿಂದಲೂ, ಕುದುರೆಗಳ ಹೇಷಾರವದಿಂದಲೂ, ಮೇಘಗರ್ಜನೆಯನ್ನು ನಿಂದಿಸುವ ವಾದ್ಯಧ್ವನಿಯಿಂದಲೂ ಒಬ್ಬರ ಮಾತು ಮತ್ತೊಬ್ಬರಿಗೆ ಕೇಳಿಸುತ್ತಿರಲಿಲ್ಲ. ಅತ್ತ ಜನಕರಾಜನ ಅರಮನೆಯ ಮುಂದಂತೂ ಕಲ್ಲುಗಳನ್ನು ಹಾಕಿದ್ದರೆ ಅವುಗಳು ಕೂಡ ಧೂಳಾಗಿ ಹೋಗುವಷ್ಟು ಜನಸಂದಣಿಯಿದ್ದಿತು. ಸ್ತ್ರೀಯರು ಆರತಿಯ ತಟ್ಟೆಗಳನ್ನು ಹಿಡಿದುಕೊಂಡು ಮಾಳಿಗೆಮೇಲೆ ನಿಂತು ವಿನೋದವನ್ನು ನೋಡುತ್ತ, ಆನಂದಯುಕ್ತರಾಗಿ, ಮಂಗಳಗೀತೆಯನ್ನು ಪಾಡುತ್ತಿರುವರು. ಆ ಸಮಯದಲ್ಲಿ (ದಶರಥರಾಜನ ಪ್ರಸಿದ್ಧ ಸಾರಥಿಯೆನಿಸಿದ) ಸುಮಂತನು ಎರಡು ರಥಗಳನ್ನಲಂಕರಿಸಿ, ಅವುಗಳಿಗೆ

ಸೂರ್ಯನ ಕುದುರೆಗಳನ್ನು ನಿಂದಿಸುವಂತಹ ಅಶ್ವಗಳನ್ನು ಕಟ್ಟಿದನು. ಆ ಸುಂದರವಾದೆರಡು ರಥಗಳನ್ನೂ ರಾಜನ ಬಳಿಗೆ ತಂದನು. ಅವುಗಳನ್ನು ವರ್ಣಿಸಲು ಶಾರದೆಗೆ ಕೂಡ ಆಗಲಾರದು ಒಂದು ರಥವು ರಾಜಯೋಗ್ಯವಾದ ಲಂಕಾರಗಳಿಂದಲೂ, ಮತ್ತೊಂದು ರಥವು ತೇಜಃಪುಂಜವಾದ ಅಲಂಕಾರಗಳಿಂದಲೂ ಶೋಭಿಸುತ್ತಿರುವವು.

ದೋ ॥೩೩೪॥ ದಶರಥರಾಯನು ಆ ತೇಜಃಪುಂಜವಾದ ಸುಂದರ ರಥದ ಮೇಲೆ ತನ್ನ ಗುರು ವಸಿಷ್ಠನನ್ನು ಪ್ರಸನ್ನತಾ ಪೂರ್ವಕವಾಗಿ ಕುಳ್ಳಿರಿಸಿ, ತಾನು ಮಹಾದೇವ, ಗುರು, ಪಾರ್ವತಿ ಮತ್ತು ಗಣೇಶನನ್ನು ಸ್ಮರಿಸಿ, ಮತ್ತೊಂದು ರಥವನ್ನೇರಿದನು. ದೇವತೆಗಳ ಗುರುವಾದ ಬೃಹಸ್ಪತಿಯೊಂದಿಗೆ ಇಂದ್ರನು ಶೋಭಾಯಮಾನವಾಗಿರುವಂತೆ, ವಸಿಷ್ಠ ಗುರುವಿನೊಂದಿಗೆ ದಶರಥರಾಯನು ಶೋಭಿತನಾದನು. ವೇದೋಕ್ತ ವಿಧಿಮತ್ತು ಕುಲರೀತಿಗಳಿಗನುಸಾರವಾಗಿ ಎಲ್ಲವೂ ಅಲಂಕೃತವಾಗಿದ್ದುದನ್ನು ನೋಡಿ, ದಶರಥರಾಜನು, ಮನಸ್ಸಿನಲ್ಲಿಯೆ ರಾಮಚಂದ್ರನನ್ನು ಸ್ಮರಿಸುತ್ತ, ಗುರ್ವಾಜ್ಞೆಯನ್ನು ಹೊಂದಿ ಶಂಖಧ್ವನಿಯನ್ನು ಮಾಡುತ್ತ ಹೊರಟನು. ಈ ದಿಬ್ಬಣವನ್ನು ನೋಡಿ ದೇವತೆಗಳು ಪ್ರಸನ್ನರಾದರು ಅವರು ಮಂಗಳ ಸೂಚಕವಾಗಿ ಪುಷ್ಪವೃಷ್ಟಿಗೈದರು. * ಸೇವಕರು ಬಾವುಟಗಳನ್ನು ಹಿಡಿದುಕೊಂಡು ಹರಟೆ ಹೊಡೆಯುತ್ತ ಹೋಗುತ್ತಿದ್ದರು. ಹಾಸ್ಯಕುಶಲರೂ, ಗಾನ ನಿಪುಣರೂ ಆದ ವಿದೂಷಕರು ಹಲವು ಬಗೆಯ ವಿನೋದವನ್ನು ಮಾಡುತ್ತಲಿದ್ದರು.

ದೋ ॥೩೩೫॥ ಸುಂದರರಾದ ರಾಜಕುಮಾರರು ಮೃದಂಗದ ಶಬ್ದಕ್ಕನುಸಾರವಾಗಿ, ತಾಳ ಮೇಳವಾಗುವಂತೆ ತಮ್ಮ ಕುದುರೆಗಳನ್ನು ಕುಣಿಸುತ್ತಿದ್ದರು ಚತುರರಾದ ನಟರು ಚಕಿತರಾಗಿ ಅದನ್ನು ನೋಡುತ್ತಿದ್ದರು. ಆ ದಿಬ್ಬಣದ ಸೊಬಗನ್ನು ಬಣ್ಣಿಸಲಾಗದು. ಆಗ ಮನೋಹರವೂ ಮಂಗಳಪ್ರದವೂ ಆದ ಶುಭ ಶಕುನಗಳೇ ಆಗುತ್ತಿದ್ದವು. ಎಡಭಾಗದಲ್ಲಿ ನೀಲಕಂಠ ಪಕ್ಷಿಯು ತನ್ನ ಕೊಕ್ಕಿನಿಂದ ಕಾಳನ್ನು ಆರಿಸುತ್ತ ಕುಳಿತಿರುವುದು ಬಲಭಾಗದ ಸುಂದರವಾದ ಹೊಲಗಳಲ್ಲಿ ಕಾಗೆಗಳು ಕುಳಿತಿವೆ. ಮತ್ತೆ ಎಲ್ಲರಿಗೂ ನರಿಯ ದರ್ಶನವೂ ಆಯಿತು. ಗಾಳಿಯು ಸಾನುಕೂಲವಾಗಿ ಎಂದರೆ ಎದುರುಭಾಗದಿಂದ ಮಂದವಾಗಿಯೂ ಸುಗಂಧ ಪೂರ್ಣವಾಗಿಯೂ, ಶೀತಲವಾಗಿಯೂ ಬೀಸುತ್ತಲಿದ್ದಿತು. ಸೌಭಾಗ್ಯವತಿಯರಾದ ಸ್ತ್ರೀಯರು ತುಂಬಿದ ಕೊಡಗಳನ್ನು ತಲೆಯಮೇಲಿಟ್ಟ

* ಇಲ್ಲಿ ೨ ನೆಯ ಚೌಪಾಯಿಯು ಹಿಂದಿನ ವರ್ಣನೆಯೆ ಪುನರುಕ್ತಿಯಾಗುವುದೆಂದು ಅದನ್ನು ಬಿಡಲಾಗಿದೆ.

ಕೊಂಡು, ಕಂಕುಳಲ್ಲಿ ಮಕ್ಕಳನ್ನೆತ್ತಿಕೊಂಡು ಬರುತ್ತಿದ್ದರು. ನರಿಯು ಬಾರಿ ಬಾರಿಗೂ ಕಾಣಿಸಿಕೊಳ್ಳುತ್ತಿದ್ದಿತು, ಗೋವುಗಳು ಎದುರಿಗೆ ನಿಂತು ತಮ್ಮ ಕರುಗಳಿಗೆ ಮೊಲೆಯನ್ನುಣ್ಣಿಸುತ್ತಿದ್ದವು. ದಕ್ಷಿಣಭಾಗದಿಂದ ಹರಿಣ ಮೃಗಗಳು ಗುಂಪು ಗುಂಪಾಗಿ ಬಂದವು. ಈ ಬಗೆಯಿಂದ ಎಲ್ಲೆಲ್ಲಿಯೂ ಮಂಗಳ ಶಕುನಗಳೇ ಆಗುತ್ತಿದ್ದವು. ಕ್ಷೇಮಕಾರಿಯಾದ ಹೆಣ್ಣು ಗುಬ್ಬಚ್ಚಿಯು ಆವುದೋ ವಿಶೇಷ ಕಲ್ಯಾಣಕರವಾದ ಮಾತುಗಳನ್ನು ಹೇಳುತ್ತಿರುವಂತೆ ವಿಶೇಷವಾಗಿ ಚಿಲಿಪಿಲಿಗುಟ್ಟುತಿದ್ದಿತು ಮತ್ತೆ ಎಡಭಾಗದಲ್ಲಿ ಸುಂದರವಾದೊಂದು ಮರದಮೇಲೆ ಗಂಡು ಗುಬ್ಬಿಯು ಕುಳಿತಿದ್ದಿತು. ಎದುರಿನಿಂದ ಮೊಸರಿನ ಗೂಡೆಗಳೂ, ಮೀನು ತುಂಬಿದ ಬುಟ್ಟಿಗಳೂ ಬಂದವು. ಕೈಗಳಲ್ಲಿ ಪುಸ್ತಕಗಳನ್ನು ಹಿಡಿದುಕೊಂಡು ಇಬ್ಬರು ಪಂಡಿತರಾದ ಬ್ರಾಹ್ಮಣರು ಎದುರಿಗೆ ಬಂದರು.

ದೋ ॥ ೩೩೬ ॥ ಆನಂದಪೂರ್ಣವೂ ಮಂಗಳಮಯವೂ ಮನೋವಾಂಛಿತ ಫಲಪೂರ್ಣವೂ ಆದ ಶುಭಶಕುನಗಳೆಲ್ಲ ಶುಭವನ್ನು ಸೂಚಿಸುವುದಕ್ಕಾಗಿಯೆ ಒಟ್ಟಾಗಿ ಸೇರಿರುವುವೆಂಬಂತೆ ತೋರುತ್ತಿದ್ದಿತು. ಆವನು ಸಗುಣ ಬ್ರಹ್ಮನನ್ನೆ ಸುತನಾಗಿ ಪಡೆದಿರುವನೋ, ಎಲ್ಲಿ ರಾಮಚಂದ್ರನಂತಹ ಮದುವಣಿಗನೂ ಸೀತೆಯಂತಹ ಮದುವಣಗಿತ್ತಿಯೂ, ದಶರಥಮಹಾರಾಜನೂ ಜನಕಮಹಾರಾಯನೂ ಸಂಬಂಧೀಕರೂ ಆಗಿರುವರೊ ಅಲ್ಲಿ ಶುಭಶಕುನಗಳಾಗುವುದು ಸ್ವಾಭಾವಿಕವಾಗಿದೆ. ಇಂತಹ ವಿವಾಹ ವಿಚಾರವನ್ನು ಕೇಳಿ ಶಕುನಗಳೇ ನರ್ತಿಸಲಾರಂಭಿಸಿದವು. ಮತ್ತೆ ವಿಧಾತನು ನಮ್ಮನ್ನು ಸೃಷ್ಟಿಸಿದುದಕ್ಕೆ ನಮ್ಮ ಜನ್ಮವು ಇಂದಿಗೆ ಸಾರ್ಥಕವಾಯಿತು ಎಂದುಕೊಂಡವು. ಈ ಬಗೆಯಿಂದ ದಿಬ್ಬಣವು (ಉತ್ಸಾಹದಿಂದ) ಹೊರಟಿತು. ಆನೆಗಳು ಬೃಂಹಿತಧ್ವನಿಯನ್ನು ಮಾಡಿದವು, ಕುದುರೆಗಳು ಹೇಷಾರವದಿಂದ ನಲಿದವು. ವಾದ್ಯಗಳು ಮೊಳಗಿದವು, ಭಾನುಕುಲಕೇತು (ದಶರಥನು) ಬರುತ್ತಿರುವುದನ್ನು ಕೇಳಿ ಜನಕಮಹಾರಾಯನು ನದಿಗಳಮೇಲೆ ಸೇತುವೆಗಳನ್ನು ಕಟ್ಟಿಸಿದ್ದನು. ಮಾರ್ಗ ಮಧ್ಯದಲ್ಲಿ ಅಲ್ಲಲ್ಲಿ ದೇವಲೋಕಕ್ಕೆ ಸಮಾನವಾದ ಸಂಪತ್ತಿನಿಂದ ತುಂಬಿದ್ದ ತಂಗುಮನೆಗಳನ್ನೂ ನಿರ್ಮಿಸಿದ್ದನು. ಎಲ್ಲರಿಗೂ ಅವರವರ ಮನಸ್ಸಿನ ಇಚ್ಛೆಯಂತೆ ಭೋಜನ, ಹಾಸಿಗೆ, ಹೊದಿಕೆಗಳು ದೊರೆಯುತ್ತಿದ್ದವು ನಿತ್ಯವೂ ಈ ಬಗೆಯ ನವೀನ ಸುಖಗಳನ್ನೂ ಅನುಕೂಲಗಳನ್ನೂ ನೋಡಿ ದಿಬ್ಬಣದವರೆಲ್ಲರು ತಮ್ಮ ಮನೆಗಳನ್ನು ಮರೆತರು. (ಎಂದರೆ ಅವರು ಮನೆಯಲ್ಲಿರುವುದಕ್ಕಿಂತಲೂ ಹೆಚ್ಚು ಸುಖವಾಗಿದ್ದರು.)

ದೋ ॥ ೩೩೭ ॥ ಈ ಬಗೆಯಿಂದ ಸುಸಜ್ಜಿತವಾದ ದಿಬ್ಬಣವು ಬರುತ್ತಿರುವುದನ್ನು ಕಂಡು, ಇತ್ತ (ಜನಕಪುರದವರು) ತುತ್ತೂರಿಯನ್ನೂದಿದರು. ಆನೆ, ಕುದುರೆ, ರಥ ಮತ್ತು ಕಾಲಾಳುಗಳು ಸಿದ್ಧರಾಗಿ ಅವರನ್ನು ಎದುರ್ಗೊಳ್ಳುವುದಕ್ಕೆ

ಹೊರಟರು. ಜನಕ ಮಹಾರಾಯನು (ನೀರು ತುಂಬಿದ) ಸುವರ್ಣ ಕಲಶಗಳನ್ನೂ ಹಲವು ಬಗೆಯ ಮಂಗಳದ್ರವ್ಯಗಳಿಂದ ತುಂಬಿದ ಚಿಕ್ಕಪಾತ್ರೆ (ಥಾಲಿ) ಗಳನ್ನೂ ವರ್ಣನಾತೀತವಾದ ಅಮೃತದಂತಿರುವ ಸ್ವಾದಿಷ್ಟ ಪಕ್ವಾನ್ನಗಳಿಂದ ತುಂಬಿದ ದೊಡ್ಡ ದೊಡ್ಡ ಪಾತ್ರೆಗಳನ್ನೂ ಹಲವು ಬಗೆಯ ಹಣ್ಣುಹಂಪಲುಗಳನ್ನೂ ಅನೇಕ ವಿಧವಾದ ಇತರ ಸುಗಂಧದ್ರವ್ಯಗಳನ್ನೂ ಪದಾರ್ಥಗಳನ್ನೂ ಭೇಟಿಗೋಸುಗ ಕಳುಹಿಸಿಕೊಟ್ಟನು ಮತ್ತೆ ಸೇವಕರು ಮೊಸರು, ಅವಲಕ್ಕಿ ಮತ್ತು ಬೇರೆ ಉಪಹಾರ ವಸ್ತುಗಳಿಂದ ತುಂಬಿದ ಅಡ್ಡೆಗಳನ್ನು ಹೊತ್ತು (ದಿಬ್ಬಣದವರ) ಭೇಟಿಗಾಗಿ ಹೊರಟರು. ಎದುರ್ಗೊಳ್ಳುವುದಕ್ಕೆ ಹೋದವರು ದಿಬ್ಬಣವನ್ನು ನೋಡಿದರು ಅವರ ಹೃದಯದಲ್ಲಿ ಆನಂದವು ಉಕ್ಕಿ ಅವರು ಪುಳಕಿತಗಾತ್ರರಾದರು. ಎದುರ್ಗೊಳ್ಳುವುದಕ್ಕೆ ಬಂದವರನ್ನು ನೋಡಿ ದಿಬ್ಬಣದವರೂ ಪ್ರಸನ್ನರಾಗಿ ವಾದ್ಯಗಳನ್ನು ಬಾರಿಸಿದರು.

ದೋ ॥ ೩೩೮॥ ಆಗ ಎರಡು ಕಡೆಯವರೂ ಸಮೀಪಕ್ಕೆ ಬರುವುದಕ್ಕೆ ಮುಂಚೆ ಕುದುರೆಗಳ ಕಡಿವಾಣಗಳನ್ನು ಸಡಿಲಬಿಟ್ಟು ಮಂದಗತಿಯಿಂದ ನಡೆಯಲಾರಂಭಿಸಿದರು. ಅವರಾ ಸೇರ್ಪಡೆಯು (ನೋಡುವವರಿಗೆ) ಎರಡು ಆನಂದದ ಸಮುದ್ರಗಳು ತಮ್ಮ ಮೇರೆಯನ್ನು ಬಿಟ್ಟು ಒಂದಕ್ಕೊಂದು ಕೂಡಿಕೊಳ್ಳುವುದಕ್ಕೆ ಹೊರಟಿರುವವೋ ಎಂಬಂತೆ ಕಾಣುತ್ತಿದ್ದಿತು. (ಆಗ) ಅಪ್ಸರೆಯರು ಪುಷ್ಪವೃಷ್ಟಿಗೈದು ಗೀತೆಗಳನ್ನು ಹಾಡಲಾರಂಭಿಸಿದರು. ದೇವತೆಗಳು ಪ್ರಸನ್ನರಾಗಿ ನಗಾರಿಗಳನ್ನು ಬಾರಿಸಿದರು. ಜನಕರಾಯನ ಕಡೆಯವರು ಭೇಟಿಗಾಗಿ ತಂದಿದ್ದ ವಸ್ತುಗಳನ್ನು ದಶರಥರಾಯನ ಮುಂದಿಟ್ಟು ("ಇದನ್ನು ಸ್ವೀಕರಿಸೋಣವಾಗಲಿ!" ಎಂದು) ಸ್ನೇಹಭಾವದಿಂದ ಪ್ರಾರ್ಥಿಸಿದರು. ದಶರಥಮಹಾರಾಜನು ಆ ವಸ್ತುಗಳನ್ನು ಪ್ರೇಮದಿಂದ ಸ್ವೀಕರಿಸಿ, ಯಾಚಕರಿಗೆ ಯಥೇಷ್ಟವಾಗಿ ದಾನಮಾಡಿದನು. ಜನಕನ ಕಡೆಯವರು ದಿಬ್ಬಣದವರನ್ನೆಲ್ಲ ಚೆನ್ನಾಗಿ ಉಪಚರಿಸಿ, ಸೇವಿಸಿ, ತಾವು ಮುಂದಾಗಿ, ಬಿಡಾರಕ್ಕೆ ಕರೆದುಕೊಂಡು ಬಂದರು. ಬರುವಾಗ ಅವರು ದಶರಥರಾಜನ ಕಾಲಕೆಳಗೆ ಹಾಸುತ್ತ ಹೋಗುತ್ತಿದ್ದ ಅಮೌಲ್ಯವೂ ವಿಚಿತ್ರವೂ ಆದ ಬಟ್ಟೆಯನ್ನು ನೋಡಿ, ಕುಬೇರನ ಧನಮದವು ಮರ್ದನವಾಯಿತು. ಮಹಾರಾಜನು ಇಳಿದುಕೊಳ್ಳುವುದಕ್ಕೆ ಕೊಟ್ಟಿದ್ದ ಬಿಡಾರವು ದಿಬ್ಬಣದವರೆಲ್ಲರಿಗೂ ಬೇಕಾದ ಅನುಕೂಲಗಳುಳ್ಳದಾಗಿಯೂ ವಿಶಾಲವಾಗಿಯೂ ಇದ್ದಿತು. ದಿಬ್ಬಣದವರೆಲ್ಲರೂ ನಗರದೊಳಗೆ ಪ್ರವೇಶಿಸಿದರೆಂಬ ಸುದ್ದಿಯು ಸೀತಾದೇವಿಗೆ ತಿಳಿದ ಕೂಡಲೆ, ಆಕೆಯು ತನ್ನ ಮಹಿಮೆಯನ್ನು ಪ್ರಕಟಿಸಲಾರಂಭಿಸಿದಳು. ಮನಸ್ಸಿನಲ್ಲಿಯೆ ಸ್ಮರಿಸಿ, ಕೆಲವು ಸಿದ್ಧಿಗಳನ್ನು ಕರೆದು, ರಾಯನನ್ನು ಉಪಚರಿಸುವುದಕ್ಕೆ ಕಳುಹಿಸಿದಳು.

ದೋ ॥ ೩೩೯॥ ಸಿದ್ಧಿಗಳು ಸೀತೆಯ ಆಣತಿಪಡೆದು ಸ್ವರ್ಗದಲ್ಲಿ ಲಭಿಸತಕ್ಕ ಎಲ್ಲ ಭೋಗವಿಲಾಸಗಳನ್ನೂ ಸಮಗ್ರ ಸುಖಸಂಪತ್ತುಗಳನ್ನೂ ತೆಗೆದುಕೊಂಡು ರಾಯನ ನಿವಾಸಕ್ಕೆ ಸೇರಿದವು. ಮದುವೆ ಮನೆಯವರೆಲ್ಲರು ತಾವಿರುವುದಕ್ಕೆ ದೊರೆತ ಸ್ಥಳದಲ್ಲಿ ದೇವತೆಗಳು ಭೋಗಿಸಲು ಯೋಗ್ಯವಾದ ಸುಖಗಳನ್ನು ಸುಲಭವಾಗಿ ಪಡೆದು, ಇವುಗಳನ್ನೆಲ್ಲ ಜನಕರಾಜನೇ ಸಿದ್ಧಪಡಿಸಿರುವನೆಂದರಿತು, ಅವನನ್ನು ಹೊಗಳಲಾರಂಭಿಸಿದರು. ರಾಮಚಂದ್ರನು ಸೀತೆಯ ಮಹಿಮೆಯನ್ನೂ ಅದರ ನಿಜವಾದ (ಸೀತೆಯು ಲಕ್ಷ್ಮಿಯ ಅವತಾರವೆಂಬ) ಕಾರಣವನ್ನೂ ಅರಿತು ಪ್ರಸನ್ನಚಿತ್ತನಾದನು ಪಿತನು ಬಂದನೆಂದು ಕೇಳಿದಕೂಡಲೆ ಸೋದರರಿಬ್ಬರಿಗೂ ಹೃದಯದಲ್ಲಿ ಹಿಡಿಸಲಾರದಷ್ಟು ಆನಂದವಾಯಿತು. ಪಿತನ ದರ್ಶನವಾಗಬೇಕೆಂದು ಅವರಿಗೆ ಲಾಲಸೆಯುಂಟಾಗಿದ್ದರೂ ಅವರು ಸಂಕೋಚದಿಂದ ಗುರುವಿನ ಬಳಿ ಹೇಳಲಿಲ್ಲ. (ಆದರೆ) ವಿಶ್ವಾಮಿತ್ರ ಮುನಿಯು ಅವರಾ ನಮ್ರಭಾವವನ್ನು ನೋಡಿ ಸಂತೋಷಪಟ್ಟು, ಎದೆಗಪ್ಪಿಕೊಂಡು, ರೋಮಾಂಚನವನ್ನು ಹೊಂದಿ ಕಣ್ಣುಗಳಿಂದ ಆನಂದಾಶ್ರುವನ್ನುದುರಿಸಿದನು. ಅನಂತರ ಅವರನ್ನು ಕರೆದು. ಕೊಂಡು, ಬಾಯಾರಿದವನು ಕೆರೆಯನ್ನು ನೋಡಿ ನಡೆಯುವಂತೆ, ದಶರಥರಾಯ ನಿಳಿದಿದ್ದ ಬಿಡಾರಕ್ಕೆ ವೇಗದಿಂದ ಹೊರಟನು.

ದೋ ॥೩೪೦॥ ಪುತ್ರಸಮೇತನಾಗಿ ಋಷಿಯು ಬರುತ್ತಿರುವುದನ್ನು ನೋಡಿ ದಶರಥರಾಜನು ಪ್ರಸನ್ನನಾಗಿ ಎದ್ದುನಿಂತನು. ಆಗವನು ಸುಖಸಾಗರದಲ್ಲಿ ಮುಣುಗುಹಾಕುತ್ತಿದ್ದವನಂತೆ ಕಾಣುತ್ತಿದ್ದನು ಮಹಾರಾಜನು ಬಾರಿಬಾರಿಗೂ ಮುನಿಚರಣಗಳಿಗೆರಗುತ್ತ, ಅವನ ಪಾದಧೂಳಿಯನ್ನು ಶಿರದಲ್ಲಿ ಧರಿಸುತ್ತ, ದಂಡವತ್ ಪ್ರಣಾಮ ಮಾಡಿದನು. ವಿಶ್ವಾಮಿತ್ರನು ಮಹಾರಾಜನನ್ನು ಹಿಡಿದೆತ್ತಿ ಆಲಿಂಗಿಸಿಕೊಂಡು, ಆಶೀರ್ವದಿಸಿ, ಕುಶಲಪ್ರಶ್ನೆಗಳನ್ನು ಕೇಳಿದನು. ಮತ್ತೆ ರಾಮ ಲಕ್ಷ್ಮಣರಿಬ್ಬರೂ ತನಗೆ ಪ್ರಣಾಮ ಮಾಡುತ್ತಿರುವುದನ್ನು ನೋಡಿ ಮಹಾರಾಜನು ಹೃದಯದಲ್ಲಿ ಹಿಡಿಸಲಾರದಷ್ಟು ಸುಖವನ್ನು ಹೊಂದಿ, ಪುತ್ರರನ್ನಾಲಂಗಿಸಿಕೊಂಡು, (ತಾನು ಇದುವರೆಗೂ ಅನುಭವಿಸುತ್ತಿದ್ದ ಪುತ್ರವಿಯೋಗ) ವ್ಯಥೆಯನ್ನು ಮರೆತು ಜೀವಕಳೆ ತುಂಬಿದವನಂತಾದನು. ಅನಂತರ ಸೋದರರಿಬ್ಬರೂ ವಸಿಷ್ಠನ ಅಡಿಗಳಮೇಲೆ ತಮ್ಮ ಶಿರಗಳನ್ನಿಡಲು ಅವನು ಪ್ರೇಮಭರಿತನಾಗಿ ಅವರನ್ನಾಲಂಗಿಸಿಕೊಂಡನು. ಆಗ ರಾಮ ಲಕ್ಷ್ಮಣರಿಬ್ಬರೂ ಬ್ರಾಹ್ಮಣರಿಗೆ ನಮಸ್ಕರಿಸಿ, ವಿಪುಲವಾಗಿ ಆಶೀರ್ವಾದಗಳನ್ನು ಪಡೆದರು ತಮ್ಮಂದಿರಾದ ಭರತ ಶತ್ರುಘ್ನರಿಬ್ಬರೂ ಅಣ್ಣನಿಗೆರಗಲು, ರಾಮಚಂದ್ರನು ಅವರನ್ನು ಹಿಡಿದೆತ್ತಿ, ಆಲಂಗಿಸಿಕೊಂಡನು. ಲಕ್ಷ್ಮಣನು ಸೋದರರಿಬ್ಬರನ್ನೂ ಕಂಡು ಪ್ರೇಮಭರಿತನಾದನು.

ದೋ ॥೩೪೧॥ ರಾಮಚಂದ್ರನನ್ನು ನೋಡಿ ದಿಬ್ಬಣದವರೆಲ್ಲರೂ ಸಂತೋಷಪಟ್ಟರು. ಆಗಿನ ಅವರಾ ಪ್ರೀತಿಯ ರೀತಿಯನ್ನು ವರ್ಣಿಸುವುದಸಾಧ್ಯವು. ಆಗ

ದಶರಥ ಮಹಾರಾಜನ ಹತ್ತಿರನಿಂತಿದ್ದ ನಾಲ್ವರು ಪುತ್ರರೂ ಧರ್ಮ ಅರ್ಥ, ಕಾಮ, ಮೋಕ್ಷ—ಇವುಗಳು ಮೂರ್ತಿರೂಪದಿಂದ ವಿರಾಜಿಸುತ್ತಿರುವವೊ ಎಂಬಂತೆ ಭಾಸಿಸುತ್ತಿದ್ದರು. ಜನಕ ಪುರನಿವಾಸಿಗಳೆಲ್ಲರೂ ಪುತ್ರರ ಸಮೇತ ದಶರಥರಾಯನನ್ನು ನೋಡಿ ಪ್ರಸನ್ನಚಿತ್ತರಾದರು. ದೇವತೆಗಳು ಮತ್ತೆ ಹೂಮಳೆ ಸುರಿಸಿದರು. ವಾದ್ಯಗಳು ಮತ್ತೆ ಮೊಳಗಿದವು, ಅಪ್ಸರೆಯರು ಮತ್ತೆ ಗಾನಮಾಡಿ ನರ್ತಿಸಿದರು. ಜನಕರಾಯನ ಪುರೋಹಿತನಾದ ಶತಾನಂದನು, ಬ್ರಾಹ್ಮಣರು, ಮಂತ್ರಿಗಳು, ವಂದಿ ಮಾಗಧಿ ಸೂತರಾದಿಯಾಗಿ ಎದುರ್ಗೊಳ್ಳುವುದಕ್ಕೆ ಬಂದಿದ್ದ ಮದುವೆ ಮನೆಯವರ ಸಮೇತ, ರಾಜನಿಗೆ ಸಮ್ಮಾನಗೈದು, ಅವನಪ್ಪಣೆಪಡೆದು, ಹಿಂದಿರುಗಿದನು. ಮದುವೆಗೆ ಮುಂಚಿತವಾಗಿಯೇ ದಿಬ್ಬಣವು ಶುಭಮುಹೂರ್ತದಲ್ಲಿ ನಗರವನ್ನು ಪ್ರವೇಶಿಸಿದುದರಿಂದ (ಎಲ್ಲರಿಗೂ ನೋಡುವುದಕ್ಕೆ ಅವಕಾಶವುಂಟಾಗಿ) ಜನಕ ನಗರವು ಆನಂದಮಗ್ನವಾಗಿದ್ದಿತು. ಎಲ್ಲರೂ ಬ್ರಹ್ಮಾನಂದವನ್ನು ಹೊಂದಿ, ಇನ್ನು ಹಗಲಿರುಳುಗಳು ದೀರ್ಘವಾಗಿ ಬೆಳೆಯಲಿ ಎಂದು ವಿಧಾತನನ್ನು ಪ್ರಾರ್ಥಿಸಿದರು.

ದೋ ॥೩೪೨॥ ಅಲ್ಲಲ್ಲಿ ನಗರವಾಸಿಗಳಾದ ಸ್ತ್ರೀಯರೂ ಪುರುಷರೂ ಮಾತನಾಡಿಕೊಳ್ಳುತ್ತಿದ್ದರೇನೆಂದರೆ –"ರಾಮಚಂದ್ರನ ಮತ್ತು ಸೀತೆಯ ಶೋಭೆಯೂ, (ದಶರಥ ಜನಕ) ರಾಜರಿಬ್ಬರ ಪುಣ್ಯವೂ ವರ್ಣನಾತೀತವಾಗಿರುವವು. ಜನಕರಾಜನ ಪುಣ್ಯದ ಮೂರ್ತಿಯೇ ಸೀತೆ, ದಶರಥರಾಯನ ಪುಣ್ಯವೇ ರಾಮಚಂದ್ರನ ಶರೀರವನ್ನು ಧರಿಸಿರುವುದು. ಇವರಂತೆ ಈ ಬಗೆಯಾಗಿ ಶಿವಾರಾಧನೆಯನ್ನು ಮಾಡಿದವರಾರೂ ಇಲ್ಲ. ಮತ್ತೆ ಯಾರೂ ಇಂತಹ ಫಲವನ್ನು ಪಡೆಯಲಿಲ್ಲ. ಈ ಸಮಗ್ರ ಜಗತ್ತಿನಲ್ಲಿ ಇವರಿಗೆ ಸಮಾನರಾದವರೇ ಹುಟ್ಟಲಿಲ್ಲ. ಈಗ ಹುಟ್ಟಿರುವುದಿಲ್ಲ, ಮುಂದೆಯೂ ಹುಟ್ಟಲಾರರು! ಈ ಜಗತ್ತಿನಲ್ಲಿ ಹುಟ್ಟಿ ಜನಕಪುರ ನಿವಾಸಿಗಳಾಗುವ (ಭಾಗ್ಯವನ್ನು ಪಡೆದ) ನಾವೆಲ್ಲರೂ ಪುಣ್ಯಪುಂಜರೆಂದು ಹೇಳಬೇಕು. ಸೀತಾರಾಮರ ದರ್ಶನವನ್ನು ಹೊಂದಿದ ನಮ್ಮಂತೆ ಪುಣ್ಯವಂತರಾದವರು ಮತ್ತಾರಿರುವರು! ಮತ್ತೆ ರಾಮಚಂದ್ರನ ವಿವಾಹವನ್ನು ನೋಡಿ ನಮ್ಮ ಕಣ್ಣುಗಳನ್ನು ಸಾರ್ಥಕಗೊಳಿಸುವೆವು."—(ಹೀಗೆ ಹಲವರು ಮಾತಾಡಿಕೊಳ್ಳುತ್ತಿರುವಾಗ) ಕೋಗಿಲೆಯಂತೆ ಮಧುರವಾಗಿ ಮಾತಾಡುವ ಸ್ತ್ರೀಯರು ತಂತಮ್ಮಲ್ಲಿಯೇ "ಹೇ ಸುಂದರ ನಯನೆಯರೆ! ಈ ವಿವಾಹದಿಂದ ನಮಗೆ ವಿಶೇಷ ಲಾಭವಾಗುವುದು. ನಮ್ಮ ಸೌಭಾಗ್ಯಾತಿಶಯದಿಂದ ಈ ಸೋದರರಿಬ್ಬರೂ ನಮ್ಮ ಕಣ್ಣುಗಳ ಅತಿಥಿಗಳಾಗಿರುವಂತೆ ವಿಧಾತನು ಮಾಡಿರುವನು.

ದೋ ॥೩೪೩॥ "ಜನಕರಾಯನು ಪ್ರೇಮವಿವಶನಾಗಿ ಬಾರಿಬಾರಿಗೂ ಸೀತೆಯನ್ನು (ತೌರುಮನೆ) ಕರೆಯಿಸುವನು. ಆಮೇಲೆ ಅವಳನ್ನು ಕರೆದು

ಕೊಂಡು ಹೋಗುವುದಕ್ಕಾಗಿ ಕೋಟಿ ಕಾಮದೇವರಿಗಿಂತಲೂ ಅಧಿಕ ಸುಂದರ ರಾದೀ ಸೋದರರಿಬ್ಬರು ಇಲ್ಲಿಗೆ ಬಾರಿಬಾರಿಗೂ ಬಂದು ಹೋಗಬೇಕಾಗುವುದು. (ಆಗ) ಇಲ್ಲಿ ಇವರಿಗೆ ವಿವಿಧ ಸ್ವಾಗತ-ಸತ್ಕಾರಗಳನ್ನು ಮಾಡುವರು. ಏನಮ್ಮಾ! ಇಂತಹ ಅತ್ತೆಮನೆಯೂ ಯಾರಿಗೆತಾನೆ ಪ್ರಿಯಕರವಾಗಿರದು? (ಮುಂದೆ ಇವರು) ಇಲ್ಲಿಗೆ ಬಂದಾಗಲೆಲ್ಲ ನಗರ ನಿವಾಸಿಗಳು ಇವರನ್ನು ನೋಡಿ ನೋಡಿ ಸುಖಿ ಗಳಾಗುವರು. ಹೇ ಸಖೀ! ರಾಮಲಕ್ಷ್ಮಣರು ಜೋಡಿಯಾಗಿರುವಂತೆಯೆ, ಮತ್ತಿಬ್ಬರು ಕುಮಾರರು ರಾಜನೊಟ್ಟಿಗೆ ಇರುವರು. ಅವರನ್ನು ನೋಡಿ ಬಂದವರು, ಅವರಲ್ಲಿ ಒಬ್ಬನು ಶಾಮಾಂಗನೆಂದೂ ಮತ್ತೊಬ್ಬನು ಗೌರಾಂಗ ನೆಂದೂ, ಮತ್ತೆ ಅವರಿಬ್ಬರೂ ಸರ್ವಾಂಗಸುಂದರರಾಗಿರುವರೆಂದೂ ಹೇಳುವರು" ಎಂದು ಹೇಳಿಕೊಳ್ಳುತ್ತಿದ್ದರು. (ಆಗ) ಅವರಲ್ಲೊಬ್ಬಳು "ನಾನು ಇಂದೇ ಅವರನ್ನು ನೋಡಿರುವೆನು. ಕೇಳಿ! ಬ್ರಹ್ಮನೇ ತನ್ನ ಸ್ವಂತ ಕೈಯಿಂದ ಅವರ ಮೂರ್ತಿಯನ್ನು ತಿದ್ದಿದಂತಿರುವರು. ಭರತನು ರಾಮಚಂದ್ರನಂತಿರುವನು. ಆವ ಸ್ತ್ರೀಪುರುಷರೂ ಅವರನ್ನು ಏಕಾ ಏಕಿಯಾಗಿ ಗುರುತಿಸಲಾರರು. ಲಕ್ಷ್ಮಣ ಶತ್ರುಘ್ನರಿಬ್ಬರೂ ಸಮಾನರೂಪವುಳ್ಳವರಾಗಿರುವರು. ಅವರಿಬ್ಬರ ಅಂಗಗಳೂ ನಖದಿಂದ ಶಿಖದವರೆಗೆ ಅನುಪಮವಾಗಿರುವವು," ಎಂದಳು. (ಇನ್ನೂ) ಅವರ ಮನಸ್ಸಿನಲ್ಲಿ ಎಷ್ಟೋ ಭಾವನೆಗಳಿರುವವು. ಆದರೆ ಅವುಗಳನ್ನೆಲ್ಲ ಮುಖ ದಿಂದ ವರ್ಣಿಸಲಾಗದು. ಅವರ ಉಪಮೆಯನ್ನು ಕೊಡುವುದಕ್ಕೆ ತಕ್ಕವರು ತ್ರಿಭುವನಗಳಲ್ಲಿಯೂ ಸಿಕ್ಕಲಾರರು. ತುಳಸೀದಾಸರು ಹೇಳುತ್ತಾರೆ,-ಅಂತಹ ಉಪಮೆಗಳು ದೊರೆಯುದಿದ್ದರೆ ಕವಿಗಳಾಗಲಿ, ಪಂಡಿತರಾಗಲಿ ಅವುಗಳನ್ನು ಕೊಡಲಿ! ಬಲ, ವಿನಯ, ವಿದ್ಯೆ, ಶೀಲ, ಶೋಭೆ—ಇವುಗಳ ಸಮುದ್ರವೇ ಇವರು ಎಂಬಂತಿರುವರು. ಪುರನಾರಿಯರೆಲ್ಲರೂ ಸೆರಗೊಡ್ಡಿ "ಹೇ ವಿಧಾತಾ! ಈ ನಾಲ್ವರು ಸೋದರರ ವಿವಾಹಗಳು ಇದೇ ನಗರದಲ್ಲಿ ಆಗುವಂತೆ ಅನುಗ್ರಹಿಸು, ನಾವು ಮಂಗಳ ಗೀತೆಗಳನ್ನು ಹಾಡುವೆವು," ಎಂದು ಪ್ರಾರ್ಥಿಸುತ್ತಿರುವರು.

## ಸೀತಾ ಕಲ್ಯಾಣ.

ಸೋ ॥೩೪೪॥ ಮತ್ತೆ ಸ್ತ್ರೀಯರೆಲ್ಲರು ಕಣ್ಣುಗಳಲ್ಲಿ ಕಂಬನಿದುಂಬಿ, ಪುಳಕಿತಗಾತ್ರೆಯರಾಗಿ ತಂತಮ್ಮೊಳಗೆ "ಸಖಿಯರೆ! ಮಹಾದೇವನು ನಮ್ಮ ಆಸೆ ಗಳನ್ನು ಸಫಲಗೊಳಿಸುವನು. ಏಕೆಂದರೆ ಈ ರಾಜರಿಬ್ಬರೂ ಪುಣ್ಯಪಯೋನಿಧಿ ಗಳಾಗಿರುವರು" ಎಂದು ಹೇಳಿಕೊಳ್ಳುತ್ತಿರುವರು. ಈ ಬಗೆಯಾಗಿ ಹಲವು ಕೋರಿಕೆಗಳನ್ನು ಹೊಂದಿ, ಅವರ ಹೃದಯದಲ್ಲಿ ಆನಂದವು ಉಕ್ಕೇರುತ್ತಿದ್ದಿತು. ಸೀತೆಯ ಸ್ವಯಂವರವನ್ನು ನೋಡುವುದಕ್ಕೆ ಬಂದಿದ್ದ ರಾಜರು ನಾಲ್ವರು ಸೋದರರನ್ನೂ ನೋಡಿ ಸುಖವನ್ನನುಭವಿಸುತ್ತ ರಾಮಚಂದ್ರನ ವಿಮಲವೂ

ವಿಶುದ್ಧವೂ ಆದ ಯಶಸ್ಸನ್ನು ಹೊಗಳುತ್ತ ತಂತಮ್ಮ ಮನೆಗಳಿಗೆ ತೆರಳಿದರು ಈ ರೀತಿಯಾಗಿ ಪುರಜನರೂ ಮದುವೆಮನೆಯವರೂ ಆನಂದಮಗ್ನರಾಗಿರುವಾಗ ಕೆಲವು ದಿನಗಳು ಕಳೆದವು. ಮಂಗಳಮಯವಾದ ವಿವಾಹದ ದಿನವು ಸಮೀಪಿಸಿತು. ಹೇಮಂತ ಋತುವಿನಲ್ಲಿ ಮನೋಹರವಾದ ಮಾರ್ಗಶೀರ್ಷ * ಮಾಸದಲ್ಲಿ ಶ್ರೇಷ್ಠವಾದ ತಿಥಿ, ವಾರ, ನಕ್ಷತ್ರ, ಗ್ರಹ, ಯೋಗಾದಿಗಳನ್ನು ಬ್ರಹ್ಮದೇವನೇ ನಿಶ್ಚಯಿಸಿ, ಆ ಲಗ್ನಪತ್ರಿಕೆಯನ್ನು ನಾರದಮುನಿಯ ಕೈಯಲ್ಲಿ ಕಳುಹಿಸಿಕೊಟ್ಟಿದ್ದನು. ಇತ್ತ ಜನಕರಾಜನೂ ಜೋತಿಷ್ಯರನ್ನು ವಿಚಾರಿಸಿ, ಅದೇ ಮುಹೂರ್ತವನ್ನೇ ನಿಶ್ಚಯಿಸಿದ್ದನು. ಈ ಸುದ್ದಿಯನ್ನು ಕೇಳಿದವರೆಲ್ಲರೂ ಜ್ಯೋತಿಷ್ಯರು ಪರ ವಿಧಾತರಾದರೆಂದು ಹೊಗಳಿದರು.

ದೋ ॥ ೩೪೫॥ ಶಕುನಗಳೆಲ್ಲವೂ ಅನುಕೂಲವಾಗಿರುವುದನ್ನರಿತು ಬ್ರಾಹ್ಮಣರೆಲ್ಲರು ಜನಕರಾಜನನ್ನು ಕುರಿತು ಗೋಧೂಳೀ ಸಮಯವೇ ಸಕಲ ಸುಮಂಗಳ ಪೂರ್ಣವಾಗಿರುವುದು." ಎಂದರು ಜನಕಮಹಾರಾಜನು ಪುರೋಹಿತನನ್ನು ಕುರಿತು " ಇನ್ನು ತಡವೇಕೆ?" ಎಂದು ಕೇಳಿದನು. ಆಗ ಶತಾನಂದನನು ಮಂತ್ರಿಗಳನ್ನು ಕರೆಯಿಸಿ ಸಮಗ್ರ ಮಂಗಳ ವಸ್ತುಗಳನ್ನು ತರಿಸಿದನು ಶಂಖ ಚಕ್ರ ತುತೂರಿ ಇವೇ ಮೊದಲಾದ ವಾದ್ಯಗಳು ಮೊಳಗಿದವು. ಮಂಗಳ ಕಲಶಗಳನ್ನೂ ಶುಭ ಶಕುನ ಸೂಚಕವಾದ ವಸ್ತುಗಳನ್ನೂ ಒಟ್ಟುಗೂಡಿಸಿದರು. ಸೌಭಾಗ್ಯವತಿಯರಾದ ಸ್ತ್ರೀಯರು ಸುಂದರವಾದ ಗೀತೆಗಳನ್ನು ಹಾಡಲಾರಂಭಿಸಿದರು. ಬ್ರಾಹ್ಮಣರು ಪವಿತ್ರವಾದ ವೇದಮಂತ್ರಗಳನ್ನು ಪಠಿಸಲಾರಂಭಿಸಿದರು. ಈ ಬಗೆಯಾಗಿ ಜನರೆಲ್ಲರೂ ಸೇರಿ, ವರನ ಕಡೆಯ ಬೀಗರನ್ನು ಕರೆತರಲು ತೆರಳಿದರು. ಅತ್ತ ಕೋಸಲಪತಿಯಾದ ದಶರಥಮಹಾರಾಜನ ಪರಿವಾರವನ್ನು ನೋಡಿದರೆ ಅದರ ಮುಂದೆ ದೇವೇಂದ್ರನ ವೈಭವವು ತುಚ್ಛವಾಗಿ ಕಾಣಿಸುವಂತಿರುವುದು. ಹೆಣ್ಣಿನ ಕಡೆಯ ಬೀಗರು ಬಂದು " ಸಮಯವು ಸಮೀಪಿಸಿತು. ಇನ್ನು ತಾವು ದಯೆಮಾಡಿಸಬೇಕು " ಎಂದು ಮಹಾರಾಜನನ್ನು ಪ್ರಾರ್ಥಿಸಿದರು. ಇದನ್ನು ಕೇಳಿದ ಕೂಡಲೆ ವಾದ್ಯದವರು ತುತೂರಿಯನ್ನೂದಿದರು. ಆಗ ದಶರಥರಾಯನು ಕುಲಪದ್ಧತಿಗನುಸಾರವಾಗಿ ವಸಿಷ್ಠನ ಅಪ್ಪಣೆಯನ್ನು ಪಡೆದು, ತನ್ನೊಂದಿಗೆ ಋಷಿಯನ್ನೂ ಸಜ್ಜನರನ್ನೂ ಕರೆದುಕೊಂಡು ಹೊರಟನು.

ದೋ ॥ ೩೪೬॥ ಬ್ರಹ್ಮಾದಿ ದೇವತೆಗಳು ಅಯೋಧ್ಯಾಧಿಪತಿಯಾದ ದಶರಥನ ಭಾಗ್ಯವನ್ನೂ ವೈಭವವನ್ನೂ ನೋಡಿ ತಮ್ಮ ಜನ್ಮವು ವ್ಯರ್ಥವೆಂದರಿತು ಸಹಸ್ರ ಮುಖಗಳಿಂದ ಅವನನ್ನು ಪ್ರಶಂಸಿಸಲಾರಂಭಿಸಿದರು. ದೇವತೆಗಳು

---

* ಭಗವಂತನು ಗೀತೆಯಲ್ಲಿ " ಮಾಸಾನಾಂ ಮಾರ್ಗಶೀರ್ಷೋऽಹಮ್ ॥ " ಎಂದು ಹೇಳಿ ಆ ಮಾಸದ ಶ್ರೇಷ್ಠತ್ವವನ್ನು ವ್ಯಕ್ತಪಡಿಸಿರುವನು.

ಉತ್ತಮವೂ ಮಂಗಳಮಯವೂ ಆದ ಸಮಯದಲ್ಲಿ ವಾದ್ಯಗಳನ್ನು ಬಾರಿಸಿ ಪುಷ್ಪವೃಷ್ಟಿಗೈದರು. ಶಿವ ಬ್ರಹ್ಮಾದಿ ದೇವತೆಗಳು ವಿಮಾನಗಳನ್ನಡರಿದರು. ಮತ್ತೆ ಪ್ರೇಮದಿಂದ ಪುಳಕಿತಗಾತ್ರರಾಗಿ, ಹೃದಯದಲ್ಲಿ ಉತ್ಸಾಹಭರಿತರಾಗಿ ರಾಮಚಂದ್ರನ ವಿವಾಹ ಮಹೋತ್ಸವವನ್ನು ನೋಡುವುದಕ್ಕೆ ಹೊರಟರು. ಜನಕಪುರವನ್ನು ನೋಡಿ ದೇವತೆಗಳು ಅನುರಾಗಭರಿತರಾದರು. ಅದರ ಮುಂದೆ ತಮ್ಮ ದೇವಲೋಕಗಳು ತುಚ್ಛವೆನಿಸಿದವು. ಅವರು ಅಲ್ಲಿ ಅನೇಕ ಮನೋಹರ ವಾದ ಮಂಟಪಗಳನ್ನೂ ನಾನಾ ವಿಧವಾದ ಅಲೌಕಿಕ ಅಲಂಕಾರಗಳನ್ನೂ ಮತ್ತು ರೂಪನಿಧಿಗಳೂ ಚತುರರೂ ಧರ್ಮಾತ್ಮರೂ ಸುಶೀಲರೂ ವಿವೇಕಿಗಳೂ ಆದ ನಾಗ ರಿಕ ಸ್ತ್ರೀ ಪುರುಷರನ್ನೂ ನೋಡಿ ಚಕಿತರಾದರು. ದೇವತೆಗಳೂ ಅವರ ಸ್ತ್ರೀಯರೂ ಅವರನ್ನು ನೋಡಿ, ಚಂದ್ರನುದಯಿಸಿದಕೂಡಲೆ ನಕ್ಷತ್ರಗಣಗಳ ಕಾಂತಿಯು ಮಲಿನವಾಗುವಂತೆ, ಕಳೆಗುಂದಿದವರಾದರು. ಬ್ರಹ್ಮನಿಗಂತೂ ವಿಶೇಷ ಆಶ್ಚರ್ಯ ವುಂಟಾಯಿತು. ಏಕೆಂದರೆ, ಅಲ್ಲಿ ತನ್ನಿಂದ ಸೃಷ್ಟಿಸಲ್ಪಟ್ಟ ವಸ್ತುವಾವುದೂ ಅವನಿಗೆ ಕಾಣಿಸಲಿಲ್ಲ.

ದೋ ॥೩೪೭॥ ಆಗ ಶಿವನು ದೇವತೆಗಳನ್ನು ಕುರಿತು "ನೀವು ಆಶ್ಚರ್ಯ ಮಗ್ನರಾಗಿ ಮೈಮ್ಮರೆತಿರಕೂಡದು. ಧೈರ್ಯವನ್ನು ತಳೆದು ಮನಸ್ಸಿನಲ್ಲಿ ಇದು ಶ್ರೀ ಸೀತಾರಾಮಚಂದ್ರರ ವಿವಾಹ ಮಹೋತ್ಸವವೆಂದರಿಯಿರಿ. ಜಗತ್ತಿನಲ್ಲಿ ಆರ ನಾಮಸ್ಮರಣೆಯಿಂದ ಅಮಂಗಳಗಳೆಲ್ಲ ನಾಶವಾಗುವವೋ, ಮತ್ತು (ಧರ್ಮ, ಅರ್ಥ, ಕಾಮ, ಮೋಕ್ಷ) ಚತುರ್ವಿಧ ಪುರುಷಾರ್ಥಗಳು ಕರತಲಾಮಲಕ ವಾಗುವವೋ ಆ ಸೀತಾರಾಮನೆ ಈತನು," ಎಂದು ಹೇಳಿ ದೇವತೆಗಳಿಗೆ ತಿಳುವಳಿ ಕೆಯನ್ನುಂಟುಮಾಡಿಕೊಟ್ಟು, ಆತನು (ಶಂಕರನು) ತನ್ನ ಶ್ರೇಷ್ಠವಾಹನನಾದ ನಂದೀಶ್ವರನನ್ನು ಮುಂದೆ ಬಿಟ್ಟನು. ನೋಡಿ! ದೇವತೆಗಳು ವಿವಾಹ ಮಹೋ ತ್ಸವವನ್ನು ನೋಡುತ್ತಿರುವರು!—ದಶರಥನು ಮಹಾಮೋದದಿಂದ ಪುಳಕಿತ ಗಾತ್ರನಾಗಿ ನಡೆಯುತ್ತಿದ್ದಾನೆ. ಜತೆಯಲ್ಲಿ ಬ್ರಾಹ್ಮಣರು ಮತ್ತು ಸಂತರ ಸಮೂಹಗಳು ಹೋಗುತ್ತಲಿವೆ. ಅವನ ಬಳಿಯಲ್ಲಿಯೆ ಚತುರ್ವಿಧ (ಎಂದರೆ ಸಾಯುಜ್ಯ, ಸಾಮಿಪ್ಯ, ಸಾರೂಪ್ಯ, ಸಾಲೋಕ್ಯಗಳೆಂಬ ಮೋಕ್ಷಗಳು) ನಾಲ್ಕು ಮೂರ್ತಿರೂಪಗಳನ್ನು ಧರಿಸಿರುವವೊ ಎಂಬಂತೆ ಭಾಗ್ಯಶಾಲಿಗಳಾದ ನಾಲ್ವರು ಪುತ್ರರೂ ಹೋಗುತ್ತಲಿರುವರು. ಮರಕತಮಣಿಯಂತಿರುವ ರಾಮಭರತರು ಮತ್ತು ಸುವರ್ಣದಂತಿರುವ ಲಕ್ಷ್ಮಣ ಶತ್ರುಘ್ನರ ಜೋಡಿಗಳನ್ನು ನೋಡಿ ದೇವತೆ ಗಳಿಗೆ ವಿಶೇಷ ಸಂತೋಷವುಂಟಾಯಿತು. ಮತ್ತೆ ಅವರು ರಾಮಚಂದ್ರನನ್ನು ನೋಡಿ ಮನಸ್ಸಿನಲ್ಲಿ ಪ್ರಸನ್ನರಾಗಿ, ರಾಜನನ್ನು ಪ್ರಶಂಸಿಸುತ್ತ, ಪುಷ್ಪವೃಷ್ಟಿ ಗೈದರು.

ದೋ ॥೩೨೮॥ ಉಮಾಸಮೇತನಾದ ಶಂಕರನು ನಖಶಿಖಾಂತದವರೆಗೆ ರಾಮಚಂದ್ರನ ದಿವ್ಯಸ್ವರೂಪವನ್ನು ಬಾರಿಬಾರಿಗೂ ಈಕ್ಷಿಸುತ್ತ ಪುಳಕಿತಗಾತ್ರನಾದನು; ಮತ್ತು ಅವನ ಕಣ್ಣುಗಳಲ್ಲಿ ಪ್ರೇಮಾಶ್ರುವು ತುಂಬಿತು. ರಾಮಚಂದ್ರನ ಅಂಗವು ನವಿಲಿನಕಂಠದಂತೆ ಶ್ಯಾಮವರ್ಣವಾಗಿ ಹೊಳೆಯುತ್ತಲಿದ್ದಿತು ಅವನ ವಸ್ತ್ರವು ಮಿಂಚನ್ನು ನಾಚಿಸುವಂತಿದ್ದ ಪೀತವರ್ಣವುಳ್ಳದಾಗಿದ್ದಿತು. ವಿವಿಧವಾಗಿ ಮಾಡಿಸಿದ್ದ ವಿವಾಹಾಲಂಕಾರಗಳು ಸುಂದರವಾಗಿಯೂ ಮಂಗಳಮಯವಾಗಿಯೂ ಇದ್ದವು. ಶರತ್ಕಾಲದ (ನಿರ್ಮಲ) ಚಂದ್ರನಂತೆ ಬೆಳಗುತ್ತಿರುವ ಶ್ರೀಮುಖವೂ ನವಿನವಾದ ಕಮಲಪುಷ್ಪಕ್ಕೆ ಲಜ್ಜೆಯನ್ನುಂಟು ಮಾಡುವಂತಿರುವ ನೇತ್ರಗಳೂ ಜಗತ್ತಿನಲ್ಲಿ ದರ್ಶನಕ್ಕೂ ಅಲಭ್ಯವಾದ ವರ್ಣಿಸಲಾಗದ ಅನೇಕ ಬಗೆಯ ಸೌಂದರ್ಯಗಳೂ ಅವನಲ್ಲಿದ್ದವು. ಅವನೊಂದಿಗೆ ಮನೋಹರರಾದ ಸೋದರರು ಚಂಚಲವಾದ ಕುದುರೆಗಳಮೇಲೆ ಕುಳಿತು ಅವುಗಳನ್ನು ಕುಣಿಸುತ್ತ, ಹೋಗುತ್ತಿರುವರು. ಅಹಾ! ಅವರ ಶೋಭೆಯೆಂತಹದು! ಭಟರು ಬಿರುದಾವಳಿಗಳನ್ನು ಹೇಳುತ್ತ ಹೋಗುತ್ತಲಿರುವರು. ಆವ ಅಶ್ವದಮೇಲೆ ಶ್ರೀರಾಮಚಂದ್ರನು ವಿರಾಜಮಾನನಾಗಿರುವನೋ, ಆ ಕುದುರೆಯ ನಡೆಯನ್ನು ನೋಡಿ ಗರುಡನು ನಾಚಿಕೊಂಡಿರುವನು ಒಟ್ಟಿನಲ್ಲಿ ನೋಡುವವರಿಗೆ ಕಾಮದೇವನೇ ರಾಮಚಂದ್ರನಿಗೋಸ್ಕರ ಕುದುರೆಯ ರೂಪವನ್ನು ಧರಿಸಿ ತನ್ನ ವಯಸ್ಸು, ಬಲ, ರೂಪ, ಗುಣ ಮತ್ತು ನಡೆಗಳಿಂದ ಲೋಗರನ್ನೆಲ್ಲ ಮೋಹಿತರನ್ನಾಗಿ ಮಾಡಿರುವಂತೆ ಕಾಣುವುದು. ಆ ಅಶ್ವದ ಮೇಲಿದ್ದ ಭಾರವಾದ ಜೀನು, ದೊಡ್ಡ ಮುತ್ತು, ಮಣಿಮಾಣಿಕ್ಯಗಳಿಂದ ಜಡಿತವಾಗಿ ಪ್ರಕಾಶಿಸುತ್ತಿರುವುದು. ಅದರ ಕವಿಕೆ (ಲಗಾಮು) ಚಿಕ್ಕಚಿಕ್ಕ ಗೆಜ್ಜೆಗಳಿಂದ ಶೋಭಿಸುತ್ತಿರುವುದು. ಇವುಗಳನ್ನೆಲ್ಲ ನೋಡಿ, ದೇವತೆಗಳು ಮನುಷ್ಯರು ಋಷಿಗಳು ಕೂಡ ಮೋಹಿತರಾದರು.

ದೋ ॥೩೨೯॥ ಶ್ರೀರಾಮಚಂದ್ರನ ಇಚ್ಛೆಗನುಸಾರವಾಗಿ ಕುದುರೆಯು ಹೆಜ್ಜೆಯನ್ನಿಡುತ್ತಿದೆ. ಅದರ ಖುರಪುಟವು ನಕ್ಷತ್ರಗಣದಂತೆ ಜ್ಯೋತಿರ್ಮಯವಾಗಿರುವುದು. ಮಿಂಚು ತುಂಬಿದ ಮೋಡವು ನವಿಲನ್ನು ಕುಣಿಸುವಂತೆ ಆ ಶ್ರೇಷ್ಠವರನಾದ ರಾಮಚಂದ್ರನನ್ನು ಅದು ಕುಣಿಸುತ್ತಿದೆ. ರಾಮಚಂದ್ರನು ಹತ್ತಿರುವ ಕುದುರೆಯನ್ನು ವರ್ಣಿಸಿ ಸರಸ್ವತಿಯು ಕೂಡ ಪಾರಾಗಲಾರಳು. ಶಂಕರ ಭಗವಾನನು ರಾಮರೂಪದಲ್ಲಿ ಮಗ್ನನಾಗಿರುವನು. ಆಗ ಅವನ ಹದಿನೈದು ಕಣ್ಣು* ಗಳೂ ಪ್ರಿಯವಾಗಿ ಕಾಣಿಸಿದವು. ರಮಾರಮಣನಾದ ಹರಿಯು ಕೂಡ ರಾಮಚಂದ್ರನನ್ನು ಪ್ರೇಮದಿಂದ ನೋಡಿ ಲಕ್ಷ್ಮೀಸಮೇತನಾಗಿ ಅವನೂ ಮೋಹಿತ

* ಶಿವನಿಗೆ ಪಂಚಮುಖಗಳಿರುವವು. ಒಂದೊಂದು ಮುಖದಲ್ಲಿ ಮೂರು ಕಣ್ಣುಗಳಂತೆ ಒಟ್ಟು ೧೫ ಕಣ್ಣುಗಳಿರುವವು.

ನಾದನು. ಬ್ರಹ್ಮನು ರಾಮಚಂದ್ರನ ಕಾಂತಿಯನ್ನು ಕಂಡು ಹರ್ಷಿಸಿದನು. ಆದರೆ ನನಗೆ ಕಣ್ಣುಗಳು ಎಂಟೇ ಇವೆಯೆಂದು ಅವನಿಗೆ ಪರಿತಾಪವುಂಟಾದುದು. ದೇವತೆಗಳ ಸೇನಾಪತಿಯಾದ ಕಾರ್ತಿಕೇಯಸ್ವಾಮಿಯು ಮನಸ್ಸಿನಲ್ಲಿ ವಿಶೇಷ ಉತ್ಸಾಹವನ್ನು ತಳೆದನು. ಅವನು (ಆರು ಮುಖಗಳಲ್ಲಿ ಹನ್ನೆರಡು ಕಣ್ಣು ಗಳುಳ್ಳವನಾಗಿ) ಬ್ರಹ್ಮನಿಗಿಂತಲೂ ಒಂದೂವರೆಪಾಲು ಹೆಚ್ಚು ಲಾಭವನ್ನು ಪಡೆದನು. ಚತುರನಾದ ಇಂದ್ರನು ರಾಮಚಂದ್ರನನ್ನು ನೋಡಿ ತನಗೆ ಗೌತಮ ಋಷಿಯಿತ್ತ ಶಾಪವು † ಹಿತಕರವಾಯಿತೆಂದು ಭಾವಿಸಿದನು. (ಆಗ) ಇಂದ್ರನಿಗೆ ಸಮನಾದ ಧನ್ಯರಾರೂ ಇಲ್ಲವೆಂದು ದೇವತೆಗಳೆಲ್ಲರು ಅವನನ್ನು ಹೊಗಳಿದರು. ರಾಮಚಂದ್ರನನ್ನು ನೋಡಿ ದೇವಗಣಗಳು ಮುದಿತವಾದುವು. ಇರ್ಕಡೆಗಳಲ್ಲಿದ್ದ ನೃಪಸಮಾಜವು ಆನಂದಭರಿತವಾಯಿತು. ಆಗ ವಾದ್ಯಗಳು ಮೊಳಗಲಾರಂಭಿಸಿದವು. ದೇವತೆಗಳು ಹೂಮಳೆ ಸುರಿಸುತ್ತ, ರಘುಕುಲಮಣಿಯಾದ ರಾಮಚಂದ್ರನಿಗೆ ಜಯವಾಗಲಿ ಎಂದು ಜಯಧ್ವನಿಮಾಡಿದರು. ಈ ಬಗೆಯಾಗಿ ದಿಬ್ಬಣವು ಬರುತ್ತಿರುವುದನ್ನು ತಿಳಿದು ಇತ್ತ (ಜನಕನ ಅರಮನೆಯಲ್ಲಿಯೂ) ವಾದ್ಯಗಳನ್ನು ಬಾರಿಸಲಾರಂಭಿಸಿದರು. ರಾಣಿಯು (ಜನಕಪತ್ನಿಯು) ಸುವಾಸಿನಿಯರನ್ನು ಕರೆದು ಆರತಿಗೋಸುಗ ಬೇಕಾದ ಮಂಗಳದ್ರವ್ಯಗಳನ್ನು ಸಜ್ಜುಗೊಳಿಸಿದಳು.

ದೋ "೩೫೦॥ ಅನಂತರ ಹಲವುಬಗೆಯ ಮಂಗಳಕರವಾದ ವಸ್ತುಗಳನ್ನೂ ಆರತಿ ತಟ್ಟೆಯನ್ನೂ ತೆಗೆದುಕೊಂಡು, ಪ್ರಸನ್ನಚಿತ್ತರಾದ ಸುಂದರಾಂಗಿಯರು ಗಜಗಮನದಿಂದ ಆರತಿ ಬೆಳಗುವುದಕ್ಕೆ ಹೊರಟರು ಚಂದ್ರವದನೆಯರೂ ಮೃಗಲೋಚನೆಯರೂ ಆದ ಸ್ತ್ರೀಯರ ದೇಹಕಾಂತಿಯು ರತಿದೇವಿಯ ಅಭಿಮಾನವನ್ನು ಭಂಗಪಡಿಸುವಂತಿದ್ದಿತು. ಅವರು ಸುಂದರವರ್ಣದ ವಸ್ತ್ರಗಳನ್ನೂ ಅಂಗಾಂಗಗಳಲ್ಲಿ ಹಲವು ಬಗೆಯ ಆಭರಣಗಳನ್ನೂ ಧರಿಸಿದ್ದರು. ಅವರ ಅಂಗಾಂಗಗಳು ಮಂಗಳವೇಷದಿಂದ ಶೋಭಿಸುತ್ತಿದ್ದವು ಕೋಗಿಲೆಯ ಕಂಠವನ್ನು ನಿಂದಿಸುವಂತೆ ಅವರು ಗೀತೆಗಳನ್ನು ಹಾಡುತ್ತಿದ್ದರು. ಅವರ ಕಂಕಣಕಿಂಕಣಿಪದನೂಪುರಗಳು ಝೇಂಕರಿಸುತ್ತಿದ್ದವು. ಅವರ ನಡೆಯನ್ನು ನೋಡಿ ಮತ್ತಗಜವು ಲಜ್ಜೆ ಹೊಂದಿತು. ಹಲವು ಬಗಯ ವಾದ್ಯಗಳು ಮೊಳಗುತ್ತ, ನಗರದಲ್ಲಿಯೂ ಆಕಾಶದಲ್ಲಿಯೂ ಸುಮಂಗಳಾಚರಣೆಯು ನಡೆಯುತ್ತಿರುವಾಗ, ಇಂದ್ರಾಣಿ, ಸರಸ್ವತಿ, ಲಕ್ಷ್ಮಿ, ಪಾರ್ವತಿಯರಾದಿಯಾಗಿ ಪವಿತ್ರರೂ ಚತುರರೂ ಆದ ದೇವತಾ

† ಇಂದ್ರನ ವ್ಯಭಿಚಾರಕ್ಕಾಗಿ ಅವನ ಮೈಯಲ್ಲಿ ಸಹಸ್ರಭಗಗಳಾಗಲಿ ಎಂದು ಗೌತಮಮುನಿಯು—ಶಪಿಸಿದ್ದನು. ಮತ್ತೆ ಇಂದ್ರನ ಪ್ರಾರ್ಥನೆಯನ್ನು ಮನ್ನಿಸಿ, ಆ ಭಗಗಳೆಲ್ಲ ಕಣ್ಣುಗಳಾಗಲಿ ಎಂದು ಹೇಳಿದನಂತರ ಇಂದ್ರನು ಸಹಸ್ರಾಕ್ಷನಾದನು.

ಸ್ತ್ರೀಯರು ಕಪಟದಿಂದ ಸುಂದರಸ್ತ್ರೀಯರ ವೇಷವನ್ನು ಧರಿಸಿ ರಾಣಿವಾಸದ ಸ್ತ್ರೀಯರ ಗುಂಪಿನಲ್ಲಿ ಸೇರಿಕೊಂಡರು. ಮತ್ತೆ ಮಂಗಳವಾಣಿಯಿಂದ ಅವರೂ ಮಂಗಳ ಗೀತೆಯನ್ನು ಹಾಡಲಾರಂಭಿಸಿದರು ಅಲ್ಲಿ ಎಲ್ಲರೂ ಹರ್ಷವಿವಶರಾಗಿದ್ದುದರಿಂದ ಇವರನ್ನಾರೂ ಗುರ್ತಿಸಲಿಲ್ಲ. ಆನಂದವಶರಾದಾಗ ಯಾರು ಯಾರನ್ನು ಗುರುತಿಸುವರು? ಎಲ್ಲರೂ ಪರಬ್ರಹ್ಮಸ್ವರೂಪನಾದ ವರನಿಗೆ ಆರತಿ ಬೆಳಗಲು ಹೊರಟರು. (ಅತ್ತ ನೋಡಿರಿ!) ಮಧುರವಾದ ಗಾನವಾಗುತ್ತಿದೆ! ತುತೂರಿಯ ಧ್ವನಿಯಾಗುತ್ತಲಿದೆ! ದೇವತೆಗಳು ಪುಷ್ಪವೃಷ್ಟಿಗೈಯುತ್ತಿರುವರು! ಎಲ್ಲೆಲ್ಲಿಯೂ ಹೇಗೆ ಶೋಭೆಯುಂಟಾಗಿದೆ!—ಆ ಸ್ತ್ರೀಯರೆಲ್ಲರೂ ಆನಂದಕಂದನಾದ ವರನನ್ನು ನೋಡಿ ಹರ್ಷದಿಂದ ಹಿಗ್ಗಿದರು. ಆಗ ಅಂಬುಜನಯನೆಯರ ಅಕ್ಷಿಗಳಿಂದ ಆನಂದಬಾಷ್ಪವು ಹರಿಯಿತು. ಮತ್ತೆ ಅವರ ದಿವ್ಯ ಶರೀರಗಳಲ್ಲಿ ಪುಳಕಾವಳಿಯುಂಟಾಯಿತು.

ದೋ ॥ ೩೫೧ ॥ ಶ್ರೀರಾಮಚಂದ್ರನ ಉತ್ತಮ ವೇಷವನ್ನು ನೋಡಿ ಸೀತೆಯ ಮಾತೆಗುಂಟಾದ ಸುಖವನ್ನು ಸರಸ್ವತಿಯಾಗಲಿ, ಆದಿಶೇಷನಾಗಲಿ ಸಾವಿರಾರು ಕಲ್ಪಗಳವರೆಗಾದರೂ ಹೇಳಿ ಮುಗಿಯಿಸಲಾರರು. ರಾಣಿಯರು ಮಂಗಳ ಮುಹೂರ್ತವನ್ನರಿತು, ಆನಂದಬಾಷ್ಪವನ್ನು ತಡೆದು, ಮುದಿತಮನದಿಂದ ಆರತಿಯನ್ನು ಬೆಳಗಲಾರಂಭಿಸಿದರು ಮೊದಲು ವೇದೋಕ್ತ ವಿಧಿಯಿಂದ ಗಣೇಶನ ಪೂಜೆಯೂ, ಅನಂತರ ಕುಲಪರಂಪರೆಗನುಸಾರವಾದ ಪದ್ಧತಿಯಂತೆ ಎಲ್ಲ ವ್ಯವಹಾರಗಳೂ ಜರುಗಿದವು. ಮತ್ತೆ ಪಂಚಪದಿ ಮಂಗಳಗೀತೆಗಳನ್ನು ಹಾಡಿದರು. ಮತ್ತೆ ಪಾವಡೆಗೋಸುಗ ಬಟ್ಟೆಯನ್ನು ಹಾಸಿದರು. ಸ್ತ್ರೀಯರು ಆರತಿಯನ್ನು ಬೆಳಗಿ ಅರ್ಘ್ಯ (ಕೈಕಾಲು ತೊಳೆಯುವುದಕ್ಕೆ ಜಲ) ವನ್ನು ಕೊಟ್ಟರು ಆಗ ರಾಮಚಂದ್ರನು ಮಂಟಪವನ್ನು ಪ್ರವೇಶಿಸಿದನು ದಶರಥ ಮಹಾರಾಯನು ತನ್ನ ಪರಿವಾರಸಮೇತನಾಗಿ ಮಂಟಪದಲ್ಲಿ ವಿರಾಜಿಸುತ್ತಿರುವ ವೈಭವವನ್ನು ನೋಡಿ ಇಂದ್ರನು ಕೂಡ ನಾಚಿದನು. ಬಾರಿ ಬಾರಿಗೂ ದೇವತೆಗಳು ಪುಷ್ಪವೃಷ್ಟಿ ಗೈಯುತ್ತಿರುವರು, ಮಹಿಸುರರು ಅನುಕೂಲಶಾಂತಿಪಾಠವನ್ನು ಹೇಳುತ್ತಿರುವರು. ನಗರದಲ್ಲಿಯೂ ಆಕಾಶದಲ್ಲಿಯೂ ಕೋಲಾಹಲವು ತುಂಬಿರುವುದು. ಒಬ್ಬರಮಾತು ಮತ್ತೊಬ್ಬರಿಗೆ ಕೇಳಿಸದಂತಾಗಿದೆ. ಈ ಬಗೆಯಿಂದ ರಾಮಚಂದ್ರನು ಮಂಟಪವನ್ನು ಪ್ರವೇಶಿಸಿದ ಕೂಡಲೇ ಅವನಿಗೆ ಅರ್ಘ್ಯವನಿತ್ತು ಆಸದನದಮೇಲೆ ಕುಳ್ಳಿರಿಸಿದನು. ಅನಂತರ ವರನಿಗೆ ಸ್ತ್ರೀಯರು ಆರತಿಯನ್ನು ಬೆಳಗಿ, ಎಲ್ಲರೂ ಅವನನ್ನು ಮತ್ತೆ ಮತ್ತೆ ನೋಡಿ ಸುಖಿಗಳಾಗುತ್ತಿರುವರು; ಮಣಿವಸನಭೂಷಿತರಾದ ನಾರಿಯರು ಮಂಗಳಾಚರಣೆಯನ್ನು ಪಾಡುತ್ತಿರುವರು. ಬ್ರಹ್ಮಾದಿ ಶ್ರೇಷ್ಠ ದೇವತೆಗಳು ಬ್ರಾಹ್ಮಣವೇಷವನ್ನು ಧರಿಸಿ ಉತ್ಸವವನ್ನು

ನೋಡುತ್ತ ರಘುಕುಲಕಮಲರವಿಯ ಸೌಂದರ್ಯವನ್ನು ನೋಡಿ ತಮ್ಮ ಜನ್ಮವು ಸಾರ್ಥಕವಾಯಿತೆಂದು ಹೇಳಿಕೊಳ್ಳುತ್ತಿರುವರು.

ದೋ ॥ ೩೫೭॥ ನಾಯಿಂದರೂ, ಪಂಜಿನವರೂ, ಭಟರೂ, ನಟರೂ ರಾಮಚಂದ್ರನಿಂದ ಉಡುಗೊರೆಯನ್ನು ಹೊಂದಿ ಪ್ರಸನ್ನರಾಗಿ ತಲೆದೂಗುತ್ತ ಹರಸುತ್ತಿರುವರು. ಅವರ ಮನಸ್ಸಿನಲ್ಲಿ ಹಿಡಿಯಲಾರದಷ್ಟು ಆನಂದವುಂಟಾಗಿದೆ. ವೈದಿಕ ವಿಧಿ ಮತ್ತು ಲೋಕಾಚಾರಗಳನ್ನು ನೆರವೇರಿಸಿ ಜನಕಮಹಾರಾಯನೂ ದಶರಥನೂ ವಿಶೇಷ ಪ್ರೇಮದಿಂದ (ಒಂದೆಡೆಯಲ್ಲಿ) ಸೇರಿದರು. ಆ ಸಮಯದಲ್ಲಿ ಅವರಿಬ್ಬರ ಶೋಭೆಯನ್ನು ವರ್ಣಿಸಬೇಕೆಂದು ಕವಿಗಳು ಉಪಮೆಗಳನ್ನು ಹುಡುಕಿ ಹುಡುಕಿ ಸಾಕಾಗಿ ಲಜ್ಜೆಯನ್ನು ಹೊಂದಿದರು. ಉಪಮೆಗಳು ಸಿಕ್ಕದೇ ಕೊನೆಗೆ ತಾವು ಸೋತೆವೆಂದರಿತು ಅವರು ಇವನಂತೆಯೆ ಇವನಿರುವನು ಅವನಂತೆಯೆ ಅವನಿರುವನು * ಎಂದು ನಿರೂಪಿಸಿದರು. ದೇವಗಣವು ಬೀಗ ಬೀಗರು ಸೇರಿದುದನ್ನು ನೋಡಿ ಪ್ರೇಮಭರಿತರಾಗಿ ಪುಷ್ಪವೃಷ್ಟಿಗೈದು, ಅವರ ಕೀರ್ತಿ ಗಾನವನ್ನು ಪಾಡಲಾರಂಭಿಸಿದರು. ಮತ್ತೆ ಅವರು—"ಬ್ರಹ್ಮನು ಜಗತ್ತನ್ನು ಸೃಷ್ಟಿಸಿದಂದಿನಿಂದಲೂ ನಾವು ಅನೇಕ ವಿವಾಹಗಳನ್ನೂ ಅವುಗಳ ವಿಚಾರವನ್ನೂ ನೋಡಿರುವೆವು, ಮತ್ತು ಕೇಳಿರುವೆವು. ಆದರೆ ಈ ಬಗೆಯಾಗಿ ಪರಿವಾರವೂ ನೆಂಟರೂ, ಬೀಗರೂ ಸಮಾನರಾಗಿರುವುದನ್ನು ನಾವು ನೋಡಿದುದು ಇದೇ ಮೊದಲು," ಎಂದರು ಸುಂದರವೂ ಸತ್ಯವೂ ಆದೀ ದೇವವಾಣಿಯನ್ನು ಕೇಳಿ ಇರ್ಕಡೆಗಳಲ್ಲಿಯೂ ಅವರ್ಣನೀಯವಾದ ಪ್ರೀತಿಯು ಹಬ್ಬಿತು. ಜನಕನು ಬೀಗರಿಗೆ ಪಾವಡೆ ಮತ್ತು ಅರ್ಘ್ಯಗಳನ್ನು ಕೊಟ್ಟು ಪ್ರೇಮದಿಂದವರನ್ನು ಮಂಟಪದೊಳಗೆ ಕರೆತಂದನು. ಮಂಟಪದ ವಿಚಿತ್ರರಚನಾರುಚಿರತೆಯನ್ನು ನೋಡಲು ಮುನಿಮನವೂ ಮೋಹಿತವಾಗುತ್ತಿರುವುದು. ಜ್ಞಾನಿಯಾದ ಜನಕ ಮಹಾರಾಯನು ತಾನೇ ಎಲ್ಲರಿಗೂ ಸಿಂಹಾಸನಗಳನ್ನು ತಂದಿಟ್ಟನು. ಮತ್ತು ಕುಲದೇವತೆ—ಇಷ್ಟ ದೇವತೆಗಳಿಗೆ ಸಮನಾದ ವಸಿಷ್ಠನನ್ನು ಪೂಜಿಸಿ, ಪ್ರಾರ್ಥಿಸಿ ಅವನಿಂದ ಆಶೀರ್ವಾದವನ್ನು ಪಡೆದನು. ಅನಂತರ ವಿಶ್ವಾಮಿತ್ರನ ಪೂಜೆಯನ್ನು

---

* ಈ ಬಗೆಯಾದ ಅಲಂಕಾರಕ್ಕೆ ಅನನ್ವಯಾಲಂಕಾರ ಅಥವಾ ಅನ್ಯೋನ್ಯಾಲಂಕಾರವೆಂದು ಹೇಳುವರು. ಇದರಲ್ಲಿ ಒಂದೇ ವಸ್ತುವೇ ಎರಡನೆಯ ಉಪಮೆಯಾಗುವುದು. ಉಪಮೆಗಳು ಸಿಕ್ಕದಿರುವಾಗ ಈ ಅಲಂಕಾರವನ್ನು ಪಯೋಗಿಸುವರು. ಉದಾಹರಣೆ—'ಗಗನಂ ಗಗನಾಕಾರಂ ಸಾಗರಃ ಸಾಗರೋಪಮಃ। ರಾಮರಾವಣಯೋರ್ಯುದ್ಧಂ ರಾಮರಾವಣಯೋರಿವ॥' ಎಂದರೆ ಆಕಾಶವು ಆಕಾಶದಂತಿದೆ, ಸಮುದ್ರವು ಸಮುದ್ರದಂತಿದೆ, ರಾಮ ರಾವಣರ ಯುದ್ಧವು ರಾಮ ರಾವಣರಂತಿದೆ. ಇದೇ ಅಲಂಕಾರವೆ ಈ (೨ ನೆಯ) ಚೌಪಾಯಿಯಲ್ಲಿರುವುದು.

ಮಾಡುವಾಗ ಜನಕರಾಯನಿಗುಂಟಾದ ಪರಮಪ್ರೀತಿಯರೀತಿಯನ್ನು ಬಣ್ಣಿಸಲಸಾಧ್ಯವು.

ದೋ ॥೩೫೩॥ ಮತ್ತೆ ರಾಜನು ವಾಮದೇವಾದಿ ಋಷಿಗಳನ್ನು ಪ್ರಸನ್ನ ಮನದಿಂದ ಪೂಜಿಸಿ, ಅವರು ಕುಳಿತುಕೊಳ್ಳುವುದಕ್ಕೆ ಉಚಿತಾಸನಗಳನ್ನು ಕೊಟ್ಟು ಅವರಿಂದ ಆಶೀರ್ವಾದಗಳನ್ನು ಪಡೆದನು. ಅನಂತರ ಜನಕನು ಕೋಸಲೇಶನಾದ ದಶರಥನನ್ನು ಈಶಸಮಾನನೆಂದು ಭಾವಿಸಿ ಪೂಜ್ಯಭಾವದಿಂದ ಪೂಜಿಸಿ ಪ್ರಶಂಸಿಸಿ, ಪ್ರಾರ್ಥಿಸಿ, ಅವನ ದರ್ಶನದಿಂದ ತನ್ನ ಭಾಗ್ಯವು ಹೆಚ್ಚಿತೆಂದು ಹೇಳಿಕೊಂಡನು. ಅನಂತರ ರಾಮನು ಬೀಗರನ್ನೂ ಅವರ ಪರಿವಾರವನ್ನೂ ಸಮಾನಾದರದಿಂದ ಸತ್ಕರಿಸಿ. ಉಚಿತಾಸನಗಳನ್ನು ಕೊಟ್ಟನು. ನಾನು ಏಕಮುಖದಿಂದ ಆ ಉತ್ಸಾಹದ ವರ್ಣನೆಯನ್ನು ಹೇಗೆ ಮಾಡಲಿ! ಜನಕನು ಬಂಧುಗಳನ್ನೆಲ್ಲ ದಾನ, ಮಾನ, ಶ್ರೇಷ್ಠವಚನ ಮತ್ತು ಪ್ರಾರ್ಥನೆಗಳಿಂದ ಸತ್ಕರಿಸಿದನು ಶ್ರೀರಾಮಚಂದ್ರನ ಪ್ರಭಾವವನ್ನರಿತ ಬ್ರಹ್ಮವಿಷ್ಣು ಮಹೇಶ್ವರರೂ ದಿಕ್ಪಾಲಕರೂ ಸೂರ್ಯಾದಿಗಳೂ ಕಪಟವೇಷದಿಂದ ಶ್ರೇಷ್ಠ ಬ್ರಾಹ್ಮಣ ವೇಷವನ್ನು ತಾಳಿ ಮೌನದಿಂದ ವಿನೋದವನ್ನು ನೋಡುತ್ತ ಕುಳಿತಿದ್ದರು. ಜನಕನು ಅವರನ್ನೂ ದೇವಸಮರೆಂದು ಭಾವಿಸಿ, ಪೂಜಿಸಿ, ಅವರನ್ನು ಗುರುತಿಸದೆ ಅವರಿಗೆ ಉತ್ತಮಾಸನಗಳನ್ನಿತ್ತನು. ಆ ಸಮಯದಲ್ಲಿ ಯಾರನ್ನು ಯಾರು ಗುರುತಿಸಬಲ್ಲರು? ಆ ಮದುವೆಯಲ್ಲಿ ರಾಮಚಂದ್ರನು ಮದುವಣಿಗನಾಗಿರುವುದನ್ನು ನೋಡಿ ಉಭಯ ದಿಶೆಗಳು ಆನಂದಭರಿತವಾಗಿ, ಎಲ್ಲರೂ ಮೈಮರೆತರು. ಜ್ಞಾನಿಯಾದ ರಾಮಚಂದ್ರನು ದೇವತೆಗಳನ್ನು ಗುರುತಿಸಿ ಅವರಿಗೆ ಮಾನಸಿಕ ಆಸನವನ್ನಿತ್ತು ಮಾನಸಿಕ ಪೂಜೆಗೈದನು. ಪ್ರಭುವಿನ ಶೀಲವನ್ನೂ ಸ್ವಭಾವವನ್ನೂ ನೋಡಿ ದೇವತೆಗಳು ಮನಸ್ಸಿನಲ್ಲಿ ಪ್ರಸನ್ನರಾದರು.

ದೋ ॥೩೫೪॥ ಚಕೋರವು ಚಂದ್ರನನ್ನು ಕಂಡು ನೆಟ್ಟ ದೃಷ್ಟಿಯಿಂದ ಅವನನ್ನೇ ನೋಡುತ್ತಿರುವಂತೆ ಶ್ರೀರಾಮಮುಖರೂಪವಾದ ಚಂದ್ರನ ಸೊಬಗನ್ನು ಸಭಿಕರ ನೇತ್ರರೂಪವಾದ ಚಕೋರವು ಆದರದಿಂದ ನೋಡುತ್ತ ಪ್ರೇಮಾನಂದದಲ್ಲಿ ಮಗ್ನವಾಗಿರುವುದು. ಆಗ ಸಮಯವನ್ನರಿತು ವಸಿಷ್ಠನು ಶತಾನಂದನನ್ನು ಕರೆದು "ಬೇಗ ಹೋಗಿ ಕನ್ಯೆಯನ್ನು ಕರೆದುಕೊಂಡು ಬನ್ನಿರಿ" ಎಂದು ಹೇಳಿದನು. ವಸಿಷ್ಠನ ಅಪ್ಪಣೆಯನ್ನು ಪಡೆದು ಪುರೋಹಿತನು ಕನ್ಯೆಯನ್ನು ಕರೆದುಕೊಂಡು ಬರಲು ಹೊರಟನು (ಅವನು ಒಳಗೆ ಹೋಗಿ ರಾಣಿಯರಿಗೆ ಹೇಳಿದನು) ಚತುರರಾದ ರಾಣಿಯರು ಪುರೋಹಿತನ ವಾಣಿಯನ್ನು ಕೇಳಿ, ಸಖಿಯರ ಸಮೇತ ಪ್ರಸನ್ನರಾಗಿ ಕುಲದಲ್ಲಿ ವೃದ್ಧರಾದ ಸ್ತ್ರೀಯರನ್ನೂ ಬ್ರಾಹ್ಮಣಿಯರನ್ನೂ ಕರೆದು ಮಂಗಳಗೀತೆಯನ್ನು ಹಾಡಿ ಕುಲಪದ್ಧತಿಯನ್ನು ನೆರವೇರಿಸಿದರು.

ವೇಷವನ್ನು ಮಾರ್ಪಡಿಸಿ ಬಂದಿದ್ದ ಶ್ರೇಷ್ಠರಾದ ದೇವತಾ ಸ್ತ್ರೀಯರು ಸ್ವಾಭಾವಿಕ ವಾಗಿ ಸುಂದರಿಯರೂ ತರುಣಿಯರೂ ಆಗಿದ್ದರು. ಇತರ ಸ್ತ್ರೀಯರು ಅವರೊಂದಿಗೆ ಸೇರಿ ವಿಶೇಷ ಸುಖಿಗಳಾದರು. ಅವರು ಸುರನಾರಿಯರನ್ನು ಗುರುತಿಸಲಾರ ದಿದ್ದರೂ ಅವರನ್ನು ತಮ್ಮ ಪ್ರಾಣಕ್ಕಿಂತಲೂ ಅಧಿಕವಾಗಿ ಪ್ರೀತಿಸಿದರು ಜನಕ ರಾಯನ ರಾಣಿಯರು ಅವರನ್ನು ಲಕ್ಷ್ಮೀ ಪಾರ್ವತೀ ಸರಸ್ವತಿಯರ ಸಮಾನ ರೆಂದು ಭಾವಿಸಿ ಬಾರಿಬಾರಿಗೂ ಅವರನ್ನು ಸತ್ಕರಿಸಿದರು. ಅವರು ಹಲವು ಬಗೆ ಯಿಂದ ಸೀತೆಯನ್ನಲಂಕರಿಸಿದರು. ಸಖಿಯರೂ ದಾಸಿಯರೂ ಸೇರಿ ಆಕೆಯನ್ನು ಪ್ರಸನ್ನಭಾವದಿಂದ ಮಂಟಪಕ್ಕೆ ಕರೆದುಕೊಂಡು ಹೊರಟರು. ಸ್ತ್ರೀಯರೆಲ್ಲರೂ ಹದಿನಾರು ಬಗೆಯ ಅಲಂಕಾರಗಳನ್ನು ಧರಿಸಿ, ಮತ್ತಗಜಗಾಮಿನಿಯರಾಗಿ ನಡೆ ಯುತ್ತಿರುವರು. ಅವರ ಮಧುರವಾದ ಗಾನವನ್ನು ಕೇಳಿ ಋಷಿಗಳ ಧ್ಯಾನವು ಭಂಗವಾಯಿತು. ಕೋಗಿಲೆಯೂ ಕಾಮದೇವನೂ ಲಜ್ಜಿತರಾದಂತೆ ತೋರಿತು. ಅವರ ಕಾಲುಂಗರ, ಕಾಲಂದಿಗೆ ಮತ್ತು ದಿವ್ಯ ಕಂಕಣಗಳು ತಾಳಕ್ಕನುಸಾರವಾಗಿ ಶಬ್ದಮಾಡುತ್ತಿರುವವೊ ಎಂಬಂತೆ ಭಾಸವಾಗುತ್ತಿದ್ದಿತು.

ದೋ ॥ ೩೨೫ ॥ ಸ್ವಾಭಾವಿಕವಾಗಿ ಸುಂದರಳಾದ ಸೀತೆಯು ಆ ಸ್ತ್ರೀಯರ ಮಧ್ಯದಲ್ಲಿ ಕಾಂತಿಯುಕ್ತಲಲನೆಯರ ಮಧ್ಯದಲ್ಲಿ ಬೆಳಗುತ್ತಿರುವ ಸುಂದರವಾದ ಶೋಭೆಯ ಪ್ರಭೆಯೋ ಎಂಬಂತೆ ವಿರಾಜಿಸುತ್ತಿರುವಳು. ಸೀತೆಯ ಸೌಂದರ್ಯ* ವನ್ನು ಬಣ್ಣಿಸಲಾಗದು, ಏಕೆಂದರೆ ನನ್ನ ಬುದ್ಧಿಯು ಚಿಕ್ಕದು, ಆಕೆಯ ಮನೋ ಹರತ್ವವು ಅಧಿಕವಾಗಿದೆ ಸಭೆಯಲ್ಲಿ ನೆರೆದಿದ್ದವರೆಲ್ಲರೂ ರೂಪರಾಶಿಯೂ ಪವಿತ್ರತಮಳೂ ಆದ ಸೀತೆಯು ಬರುತ್ತಿರುವುದನ್ನು ನೋಡಿ, ಮನಸ್ಸಿನಲ್ಲಿ ಅವಳಿಗೆ ಪ್ರಣಾಮ ಮಾಡಿದರು, ಅವಳನ್ನು ನೋಡಿ ರಾಮಚಂದ್ರನು ಸಫಲ ಮನೋರಥನಾದನು. ದಶರಥನು ಪುತ್ರಸಮೇತ ಹರುಷ ಹೊಂದಿದನು, ಆಗ ಅವನ ಹೃದಯದಲ್ಲುಂಟಾದ ಆನಂದವನ್ನು ಬಣ್ಣಿಸುವುದಾರಿಗೆ ಸಾಧ್ಯ? ದೇವತೆ ಗಳೂ ಪ್ರಣಾಮಮಾಡಿ ಪುಷ್ಪವೃಷ್ಟಿಗೈದರು. ಋಷಿಗಳ ಮಂಗಳಾತ್ಮಕವಾದ ಆಶೀರ್ವಾದಧ್ವನಿಯು ಘೋಷಿಸಿತು. ಅತ್ತ ಕೆಲವರು ಗಾನವನ್ನು ಹಾಡು ತ್ತಿರುವರು, ಇತ್ತ ಕೆಲವರು ವಾದ್ಯಗಳನ್ನು ಬಾರಿಸುತ್ತಿರುವರು, ಎಲ್ಲೆಲ್ಲಿಯೂ ಗದ್ದಲವೇ ಗದ್ದಲ! ಸ್ತ್ರೀಪುರುಷರೆಲ್ಲರೂ ಆನಂದ ಸಾಗರದಲ್ಲಿ ಮುಳುಗಿರುವರು. ಈ ಬಗೆಯಿಂದ ಸೀತೆಯು ಮಂಟಪಕ್ಕೆ ಬಂದಳು. ಆಗ ಋಷೀಶ್ವರರು ಶಾಂತ ಪಾಠವನ್ನು ಹೇಳುವುದಕ್ಕೆ ಪ್ರಾರಂಭಿಸಿದರು. ಕುಲ ಗುರುಗಳಿಬ್ಬರೂ (ವಸಿಷ್ಠ–

---

* ಏಕೆಂದರೆ— "ಕೃತ್ಸ್ನಂ ರಾಮಾಯಣಂ ಕಾವ್ಯಂ ಸೀತಾಯಾಶ್ಚರಿತಂ ಮಹತ್" ಎಂದರೆ ಸಂಪೂರ್ಣ ೨೪,೦೦೦ ರಾಮಾಯಣಗಳಲ್ಲಿ ಸೀತೆಯ ಚರಿತ್ರೆಯೆ ಅಧಿಕವಾಗಿರುವುದೆಂದು ಹೇಳಿರುವರು

ವಿಶ್ವಾಮಿತ್ರರು) ಆ ಸಮಯದಲ್ಲಿ ಆಗಬೇಕಾದ ವಿಧಿಯನ್ನೂ ಆಚಾರವನ್ನೂ ನೆರವೇರಿಸಿದರು. ಆಚಾರ ವಿಧಿಗಳಾದನಂತರ ಮುದಿತ ವಿಪ್ರರು ಗುರು, ಗಣೇಶ, ಗೌರ್ಯಾದಿ ಪೂಜೆಗಳನ್ನು ಮಾಡಲಾರಂಭಿಸಿದರು. ದೇವತೆಗಳೆಲ್ಲರೂ ಪ್ರಕಟರಾಗಿ ಪೂಜೆಯನ್ನು ಸ್ವೀಕರಿಸುತ್ತ ಆಶೀರ್ವಾದವನ್ನಿತ್ತು ಪ್ರಸನ್ನರಾಗುತ್ತಿರುವರು, ಋಷಿಗಳು ಮಧುಪರ್ಕಾದಿ ಮಂಗಳ ದ್ರವ್ಯಗಳನ್ನು ಕೇಳುತ್ತಿರುವರು. ಸೇವಕರು ಸುವರ್ಣ ಕಲಶಗಳಲ್ಲಿಯೂ ತಟ್ಟೆಗಳಲ್ಲಿಯೂ ಅವುಗಳನ್ನು ಸಂಗ್ರಹಿಸಿ ತಂದಿಡುತ್ತಿರುವರು, ಸೂರ್ಯ ನಾರಾಯಣನು ಕುಲಪದ್ಧತಿಯನ್ನು ವಿವರಿಸುತ್ತಿರುವನು. ಅದಕ್ಕನುಸಾರವಾಗಿ ಕಾರ್ಯಗಳೆಲ್ಲ ಆದರದಿಂದ ನಡೆಯುತ್ತಲಿರುವವು, ಈ ಬಗೆಯಾಗಿ ದೇವಪೂಜೆಯಾದನಂತರ ಸೀತೆಗೆ ದಿವ್ಯ ಸಿಂಹಾಸನವನ್ನು ಕೊಟ್ಟರು. ಸೀತೆಯೂ ರಾಮಚಂದ್ರನೂ ಒಬ್ಬರನ್ನೊಬ್ಬರು ನೋಡುತ್ತಿರುವುದು ಪ್ರೀತಿಸುತ್ತಿರುವುದು ಯಾರಿಗೂ ತಿಳಿಯಲಿಲ್ಲ, ಏಕೆಂದರೆ ಬುದ್ಧಿಗೂ ವಾಕ್ಕಿಗೂ ಅತೀತವಾದುದನ್ನು ಕವಿಯು ಹೇಗೆ ಪ್ರಕಟಿಸಬಲ್ಲನು?

ದೋ॥ ೩೨೬। ಹವನಸಮಯದಲ್ಲಿ ಅಗ್ನಿಯು ಮೂರ್ತಿಮತ್ತಾಗಿ ಪ್ರಕಟನಾಗಿ ಸಂತೋಷಾತಿಶಯದಿಂದ ಆಹುತಿಯನ್ನು ಸ್ವೀಕರಿಸಲಾರಂಭಿಸಿರುವನು, ವೇದಗಳು ಬ್ರಾಹ್ಮಣ ವೇಷವನ್ನು ಧರಿಸಿ, ಸಂಪೂರ್ಣ ವಿವಾಹವಿಧಿಯನ್ನು ವಿವರಿಸುತ್ತಿರುವವು. ಜನಕರಾಯನ ಪಟ್ಟಮಹಿಷಿಯರು ಮತ್ತು ಜಗತ್ಪ್ರಸಿದ್ಧ ಸೀತೆಯ ಮಾತೆ ಇವರನ್ನು ವರ್ಣಿಸುವುದು ಹೇಗೆ? ಏಕೆಂದರೆ ಬ್ರಹ್ಮನು ಕೀರ್ತಿ ಪುಣ್ಯ ಸುಖ ಮತ್ತು ಸೌಂದರ್ಯಗಳನ್ನು ಒಟ್ಟಾಗಿ ಸೇರಿಸಿ ಆವರನ್ನು ಸೃಷ್ಟಿಸಿದ್ದಂತೆ ಭಾಸವಾಗುತ್ತಿದ್ದಿತು. ಸಮಯವರಿತು ಮುನಿವರನು ಮಹಾರಾಣಿಯನ್ನು ಬರಬೇಕೆಂದು ಹೇಳಿದನು. ಮುನಿವಚನವನ್ನು ಕೇಳಿದಕೂಡಲೇ ಸುವಾಸಿನಿಯರು ಆಕೆಯನ್ನು ಆದರದಿಂದ ಕರೆತಂದರು. (ಅತ್ತ ನೋಡಿ!) ಸುನಯನ ಮಹಾರಾಣಿಯು ಜನಕಮಹಾರಾಜನ ಎಡಭಾಗದಲ್ಲಿ † ಗಿರಿರಾಜನೊಂದಿಗೆ ಮೈನಾದೇವಿಯು ಶೋಭಿಸುತ್ತಿರುವಂತೆ ಹೇಗ ಶೋಭಿಸುತ್ತಿರುವಳು! ಪವಿತ್ರವೂ ಸುಗಂಧಿತವೂ ಆದ ಜಲದಿಂದ ಪೂರ್ಣವಾಗಿರುವ ಸುವರ್ಣ ಕಲಶಗಳನ್ನೂ ಮಣಿಮಯವಾದ ತಟ್ಟೆಗಳನ್ನೂ ಪ್ರಸನ್ನ ಭಾವದಿಂದ ಅರಸನೂ ಅರಸಿಯೂ ತಮ್ಮ ತಮ್ಮ ಕೈಗಳಲ್ಲಿ ಹಿಡಿದುಕೊಂಡು ಶ್ರೀರಾಮಚಂದ್ರನ ಮುಂದೆ ತಂದಿಟ್ಟರು. ವಿದುಷಿಗಳು ಮಂಗಳಾಚರಣೆಯನ್ನೂ * ವೇದಮಂತ್ರಗಳನ್ನೂ ಹೇಳಲಾ

† "ಸೀಮಂತೆ ಚ ವಿವಾಹೇತು ಚತುರ್ಥ್ಯಾಂ ಸಹಭೋಜನೇ। ವ್ರತೇ ದಾನೇ ಮಖೇ ಶ್ರಾದ್ಧೇ ಪತ್ನೀತಿಷ್ಠತಿ ದಕ್ಷಿಣೇ"॥

* ಮಂಗಳಾಚರಣೆ—ಗಂಗಾ ಸಿಂಧು ಸರಸ್ವತೀಚ ಯಮುನಾ ಗೋದಾವರೀ ನರ್ಮದಾ ಕಾವೇರೀ ಸರಯೂ ಮಹೇನ್ದ್ರತನಯಾ ಚರ್ಮಣ್ವತೀ ವೇದಿಕಾ। ಕ್ಷಿಪ್ರಾ ವೇತ್ರವತೀ ಮಹಾಸುರನದೀ ಖ್ಯಾತಾ ಚ ಯಾ ಗಂಡಕೀ ಪುಣ್ಯಾಃ ಪೂರ್ಣ ಜಲಾಃ

ರಂಭಿಸಿದರು. ಅದೇ ಮುಹೂರ್ತವೆಂದರಿತು ಆಕಾಶದಿಂದ ಹೂಮಳೆಯು ಸುರಿಯಲಾರಂಭಿಸಿತು. ವರನನ್ನು ನೋಡಿ ಅರಸನೂ ಅರಸಿಯೂ ಪ್ರೇಮಭರಿತರಾಗಿ, ಅವನ ಪವಿತ್ರ ಚರಣಗಳನ್ನು ತೊಳೆಯಲಾರಂಭಿಸಿದರು. ರಾಜನೂ ರಾಜ್ಞಿಯೂ ರಾಮಚಂದ್ರನ ಚರಣಕಮಲಗಳನ್ನು ತೊಳೆಯಲಾರಂಭಿಸಿದಾಗ ಪ್ರೇಮಧಿಂದವರು ಪುಳಕಿತಗಾತ್ರರಾದರು. ನಗರದಲ್ಲಿಯೂ ಆಕಾಶದಲ್ಲಿಯೂ ವಾದ್ಯಗಳು ಮೊಳಗಿದವು, ಚತುರ್ದಿಕ್ಕುಗಳೂ ಜಯಧ್ವನಿಯಿಂದ ಗುಡುಗಿದವು. ಆವ ಚರಣಕಮಲಗಳು ಮನೋಜನ ಅರಿಯ ಉರರೂಪ ಸರಸ್ಸಿನಲ್ಲಿ (ಶಿವನ ಹೃದಯದಲ್ಲಿ) ಸದಾವಿರಾಜಿಸುತ್ತಿರುವುವೋ, ಆವ ಪುಣ್ಯಮಯ ಚರಣಸ್ಮರಣೆಯಿಂದಲೇ ಮನಸ್ಸಿನಲ್ಲಿ ಪವಿತ್ರತೆಯುಂಟಾಗಿ ಕಲಿಮಲ ದೋಷವು ನಾಶಹೊಂದುವುದೋ, ಆವ ಚರಣಸ್ಪರ್ಶಮಾತ್ರದಿಂದ ಪಾಪಮಯಿಯಾದ ಮುನಿಪತ್ನಿ (ಅಹಲ್ಯೆ)ಯು ಮುಕ್ತಳಾದಳೋ, ಆವುದರ ಮಕರಂದ† (ರಜ) ವನ್ನು ಶಿವನು ಮಸ್ತಕದಲ್ಲಿ ಧರಿಸಿರುವನೋ ಆವುದರ ಪಾವಿತ್ರ್ಯತೆಯನ್ನು ದೇವತೆಗಳು ವರ್ಣಿಸುತ್ತಿರುವರೋ, ಋಷಿಗಳೂ ಯೋಗಿಗಳೂ ಭ್ರಮರದಂತೆ ಆವುದನ್ನು ಸೇವಿಸಿ ಇಚ್ಛಿತಗತಿಯನ್ನು (ಮೋಕ್ಷವನ್ನು) ಪಡೆಯುವರೋ ಆ ಚರಣಕಮಲಗಳನ್ನು ಭಾಗ್ಯಭಾಜನನಾದ ಜನಕರಾಯನು ತೊಳೆಯುತ್ತಿರುವನು! ಕೇಳಿರಿ! ಎಲ್ಲರೂ ಜಯಘೋಷವನ್ನು ಮಾಡುತ್ತಿರುವರು! ಕುಲದ್ವಯಗಳ ಗುರುಗಳಿಬ್ಬರೂ ವರಕನ್ಯೆಯರ ಕೈ ಹಿಡಿಸಿ ಶಾಖೋಚ್ಚಾರಣೆಯನ್ನು ಮಾಡಿಸಲಾರಂಭಿಸಿದರು. ಆ ಪಾಣಿಗ್ರಹಣವನ್ನು (ಎಂದರೆ ರಾಮಚಂದ್ರನು ತನ್ನ ಕೈಯಿಂದ ಸೀತೆಯ ಕೈ ಹಿಡಿವುದನ್ನು) ನೋಡಿ ಬ್ರಹ್ಮಾದಿ ದೇವತೆಗಳೂ, ಮನುಜರೂ ಮುನಿಗಳೂ ಆನಂದ ಭರಿತರಾದರು. ಸುಖಮೂಲನಾದ ಮದುವಣಿಗನನ್ನು ನೋಡಿ ದಂಪತಿ (ರಾಜರಾಜ್ಞಿ) ಗಳಿಬ್ಬರೂ ಪುಳಕಿತಗಾತ್ರರಾದರು. ಅವರ ಹೃದಯಗಳಲ್ಲಿ ಸಂತೋಷವು ಉಕ್ಕಿತು. ನೃಪಭೂಷಣನಾದ ಜನಕನು ಲೌಕಿಕ ಮತ್ತು ವೇದೋಕ್ತ ವಿಧಿಗಳಿಂದ ಕನ್ಯಾದಾನವನ್ನು ಮಾಡಿದನು. ಗಿರೀಶನು ಗಿರಿಜೆಯನ್ನು ಮಹೇಶನಿಗೆ ಕೊಟ್ಟಂತೆ, ಸಮುದ್ರರಾಜನು ಲಕ್ಷ್ಮಿಯನ್ನು ನಾರಾಯಣನಿಗೆ ಸಮರ್ಪಿಸಿದಂತೆ, ಜನಕನು ಸೀತೆಯನ್ನು ರಾಮಚಂದ್ರನಿಗೆ ಒಪ್ಪಿಸಿದನು. ಅವನಾ ಕೀರ್ತಿಯು ವಿಶ್ವದಲ್ಲೆಲ್ಲಿಯೂ ಹಬ್ಬಿಕೊಂಡಿತು. ಇನ್ನು ವಿದೇಹರಾಯನು ವಿಜ್ಞಾಪಿಸಿಕೊಳ್ಳಬೇಕಾದ್ದೇನು! (ಮೊದಲೆ ಜನಕನಿಗೆ ವಿದೇಹಿ ಎಂದು ಹೆಸರು,

---

ಸಮುದ್ರ ಸಹಿತಾಃ ಕುರ್ವನ್ತು ಮೇಮಂಗಲಮ್ ॥೧॥ ಲಕ್ಷ್ಮೀಃ ಕೌಸ್ತುಭಪಾರಿಜಾತಕಸುರಾಧನ್ವನ್ತರಿಶ್ಚಂದ್ರಮಾ ಗಾವಃ ಕಾಮದುಘಾ ಸುರೇಶ್ವರ ಗಜೋ ರಂಭಾದಿ ದೇವಾಂಗನಾಃ ॥ ಅಶ್ವಃ ಸಪ್ತಮುಖೋ ವಿಷಂ ಹರಿಧನುಃ ಶಂಖೋಽಮೃತಂ ಚಾಮ್ಬುಧೇಃ ರತ್ನಾನೀತಿ ಚತುರ್ದಶ ಪ್ರತಿದಿನಂ ಕುರ್ವನ್ತುಮೇ ಮಂಗಲಮ್ ॥೨॥

† ಇಲ್ಲಿ ಮಕರಂದವೆಂದರೆ ಗಂಗೆಯೆಂಬ ಭಾವವಿದೆ.

ಈಗಲಂತೂ) ಮನೋಹರನಾದ ರಾಮಚಂದ್ರನು ಅವನನ್ನು ನಿಜವಾದ ವಿದೇಹಿ ಯಾಗಿ ಮಾಡಿಬಿಟ್ಟಿರುವನು! ವಿಧಿಪೂರ್ವಕ ಹವನವನ್ನು ಮಾಡಿ ಸೆರಗು ಗಂಟಿಕ್ಕಿ (ವಧೂವರರಿಬ್ಬರೂ) ಅಗ್ನಿ ಪ್ರದಕ್ಷಿಣೆಯನ್ನು ಮಾಡಲಾರಂಭಿಸಿದರು.

ದೋ ॥೩೫೭॥ ವಂದಿಜನರ ಜಯಧ್ವನಿಯನ್ನೂ (ಬ್ರಾಹ್ಮಣರ) ವೇದ ಘೋಷವನ್ನೂ ಮಂಗಳಾಚರಣೆಯ ವಾದ್ಯ ಧ್ವನಿಯನ್ನೂ ಕೇಳಿ ಚತುರರಾದ ದೇವತೆಗಳು ಹರುಷದಿಂದ ಕಲ್ಪವೃಕ್ಷದ ಪುಷ್ಪಗಳನ್ನು ಸುರಿಸಲಾರಂಭಿಸಿದರು. ಕುಮಾರನಾದ ರಾಮಚಂದ್ರನೂ ಕುವರಿಯಾದ ಸೀತೆಯೂ ಪ್ರದಕ್ಷಿಣೆಯನ್ನು ಮಾಡುವಾಗ ಪ್ರೇಕ್ಷಕರೆಲ್ಲರು ಆದರ ಪೂರ್ವಕವಾಗಿ ಅವರನ್ನು ನೋಡಿ ತಮ್ಮ ಕಣ್ಣುಗಳನ್ನು ಸಾರ್ಥಕಗೊಳಿಸುತ್ತಿರುವರು! ಆ ಮನೋಹರವಾದ ಜೋಡಿ ಯನ್ನು ಬಣ್ಣಿಸುವುದಕ್ಕಾಗುವುದಿಲ್ಲ. ಅದಕ್ಕೆ ಆವ ಉಪಮೆಯನ್ನು ಕೊಟ್ಟರೂ ಸ್ವಲ್ಪವೆ! ಸೀತಾರಾಮರ ಸುಂದರವಾದ ಪ್ರತಿಬಿಂಬಗಳು ಮಣಿಮಯವಾದ ಕಂಭಗಳಲ್ಲಿ ಹೊಳೆಯಲಾರಂಭಿಸಿದವು. ಅದನ್ನು ನೋಡಿದರೆ ರತಿಮದನರು ಹಲವು ರೂಪಗಳನ್ನು ಧರಿಸಿ ಅನುಪಮವಾದ ಸೀತಾ ರಾಮರ ವಿವಾಹಮಹೋ ತ್ಸವವನ್ನು ನೋಡುತ್ತಿರುವರೋ ಎಂಬಂತೆ ಕಾಣಿಸುತ್ತಿರುವುದು ಅವರ ಮನಸ್ಸಿನಲ್ಲಿ ದರ್ಶನಲಾಲಸೆಯುಂಟಾಗಿದ್ದರೂ ಸಂಕೋಚವನ್ನು ತಳೆದಿರುವುದ ರಿಂದ ಅವರು ಬಾರಿಬಾರಿಗೂ ಪ್ರಕಟರಾಗುತ್ತ ಅದೃಶ್ಯರಾಗುತ್ತಲಿರುವರು, (ಎಂದರೆ ಅವರು ಪ್ರದಕ್ಷಿಣೆ ಮಾಡುವಾಗ ಪ್ರಕಟವಾಗುವರು, ಸುಮ್ಮನಿರುವಾಗ ಅದೃಶ್ಯರಾಗುವರು). ಪ್ರೇಕ್ಷಕರೆಲ್ಲರೂ ಪ್ರೇಮಭರಿತರಾಗಿ ಜನಕರಾಯನಂತೆ ತಾವೂ ಮೈಮರೆತರು. ಪ್ರಮುದಿತರಾದ ಮುನಿಗಳು ಪ್ರದಕ್ಷಿಣೆಯನ್ನು ಮಾಡಿಸಿ ಉಡು ಗೊರೆಗಳನ್ನು ಕೊಡಿಸಿದರು. ಸಪ್ತಪದಿಯಲ್ಲಿ ರಾಮಚಂದ್ರನು ಸೀತೆಯ ಮಸ್ತಕದ ಮೇಲೆ ಸಿಂದೂರವನ್ನಿಟ್ಟಾಗಣ ಶೋಭೆಯನ್ನು ವರ್ಣಿಸುವುದ ಸಾಧ್ಯವು. ಆ ಸಮಯದಲ್ಲಿ ಸರ್ಪವು ಅಮೃತದ ಲೋಭದಿಂದ ಕಮಲದಲ್ಲಿ ರಕ್ತ ಪುಷ್ಪರಜವನ್ನು ತುಂಬಿಕೊಂಡು ಚಂದ್ರನನ್ನು ಅಲಂಕರಿಸುತ್ತಿರುವಂತೆ ಕಾಣುತ್ತಿದ್ದಿತು. (ಇದು ಉತ್ಪ್ರೇಕ್ಷೆಯು. ರಾಮಚಂದ್ರನ ಭುಜದಂಡವೇ ಸರ್ಪ, ಮುಂಗೈಗಳೇ ಕಮಲ, ಸಿಂದೂರವೇ ರಕ್ತರಜ, ಸೀತೆಯ ಮುಖವೇ ಚಂದ್ರ, ಆಕೆಯ ಸೌಂದರ್ಯವೇ ಅಮೃತ, ಚಂದ್ರನನ್ನು ನೋಡಿ ಕಮಲವು ಸಂಕುಚಿತವಾಗುವಂತೆ ಸಿಂದೂರವನ್ನು ಹಚ್ಚುವಾಗ ರಾಮಚಂದ್ರನ ಕೈಗಳು ಸಂಕುಚಿತವಾಗುತ್ತಿರುವವು). ಸಿಂದೂರ ವಿಧಿಯಾದನಂತರ ವಸಿಷ್ಠನು ವಧೂ ವರರನ್ನು ಏಕಾಸನದ ಮೇಲೆ ಕುಳ್ಳಿರಿಸಿದನು. ಅದನ್ನು ನೋಡಿ ದಶರಥ ಮಹಾ ರಾಯನು ಪ್ರಸನ್ನನಾದನು. ತನ್ನ ಪುಣ್ಯರೂಪವಾದ ಕಲ್ಪವೃಕ್ಷದ ನವೀನ ಫಲ ವನ್ನು ನೋಡಿ ಅವನ ಶರೀರವು ಬಾರಿಬಾರಿಗೂ ಪುಳಕಿತವಾಯಿತು. ಆ ಆನಂ

ದೋತ್ಸವವು ಭುವನದಲ್ಲೆಲ್ಲ ಹರಡಿಕೊಂಡಿತು, ಎಲ್ಲರೂ ಶ್ರೀರಾಮಚಂದ್ರನ ವಿವಾಹವಾಯಿತು ಎಂದು ಆನಂದದಿಂದುಬ್ಬಿದರು. ಆ ಆನಂದದ ವರ್ಣನೆಯನ್ನು ಮಾಡಲು ಒಂದು ನಾಲಿಗೆಯು ಸಾಕಾದೀತೆ! ಅನಂತರ ಜನಕರಾಯನು ವಸಿಷ್ಠನ ಆಜ್ಞೆಯನ್ನು ಪಡೆದು ವಿವಾಹ ಸಾಮಗ್ರಿಗಳನ್ನೆಲ್ಲ ಸಜ್ಜುಗೊಳಿಸಿಕೊಂಡು, ಮಾಂಡವಿ, ಶ್ರುತಿಕೀರ್ತಿ ಮತ್ತು ಊರ್ಮಿಳೆಯರೆಂಬ ಕನ್ನಿಕೆಯರಂ ಕರೆಯಿಸಿದನು. ಮೊದಲು ಕುಶಕೇತುವಿನ ಮಗಳೂ ಗುಣಶೀಲಸುಖಶೋಭಾಮಯಿಯೂ ಆದ ಮಾಂಡವಿಯನ್ನು ಭರತನಿಗೂ, ಸುಂದರಿಯರಲ್ಲಿ ಶ್ರೇಷ್ಠಳೆನಿಸಿದ ಜಾನಕೀಯ ತಂಗಿಯಾದ ಊರ್ಮಿಳೆಯನ್ನು ಲಕ್ಷ್ಮಣನಿಗೂ, ಸುಲೋಚನೆಯೂ ಸುಮುಖಿಯೂ ಗುಣನಿಧಿಯೂ ರೂಪಶೀಲಾಸಾಗರಳೂ ಆದ ಶ್ರುತಿಕೀರ್ತಿಯನ್ನು ಶತ್ರುಘ್ನನಿಗೂ ಕೊಟ್ಟು ವಿವಾಹ ಬಳೆಯಿಸಿದನು. ವಧುಗಳೆಲ್ಲರೂ ತಮ್ಮತಮ್ಮಗನುರೂಪನಾದ ವರನು ದೊರಕಿದುದರಿಂದ, ಸಂಕೋಚಭಾವದಿಂದ, ಮನಸ್ಸಿನಲ್ಲಿಯೇ ಹರ್ಷವಂ ತಳೆದರು. ಲೋಗರೆಲ್ಲರು ಪ್ರಸನ್ನರಾಗಿ ಅವರಾ ಸೌಂದರ್ಯವನ್ನು ಪ್ರಶಂಸಿಸಿದರು. ದೇವತೆಗಳು ಮತ್ತೆ ಪುಷ್ಪವೃಷ್ಟಿಗೈದರು. ಆಗ ಸುಂದರರಾದಾ ವರರ ಪಕ್ಕದಲ್ಲಿ ಶೋಭಿಸುತ್ತಿದ್ದ ನಾಲ್ವರು ವಧುಗಳು ಒಂದೇ ಮಂಟಪದಲ್ಲಿ ವಿರಾಜಮಾನರಾಗಿದ್ದುದನ್ನು ನೋಡಿದರೆ ಜೀವ ಮತ್ತು ಚತುರಾವಸ್ಥೆ* ಗಳು ತಂತಮ್ಮ ಸ್ವಾಮಿಯೊಂದಿಗೆ † ಶೋಭಾಯಮಾನವಾಗಿರುವಂತೆ ಕಾಣುತ್ತಿದ್ದಿತು.

ದೋ ॥ ೩೨೮ ॥ ಅಯೋಧ್ಯಾಧಿಪತಿಯಾದ ದಶರಥನು ತನ್ನ ನಾಲ್ವರು ಪುತ್ರರೂ ವಧುಗಳ ಸಮೇತವಾಗಿರುವುದನ್ನು ಕಂಡು ಸಂತೋಷಪಡುತ್ತಿರುವುದನ್ನು ನೋಡಿದರೆ ಆ ಮಹಿಪಾಲಮಣಿಗೆ ಚತುಷ್ಕ್ರಿಯೆಗಳ ‡ ಚತುಷ್ಫಲಗಳೂ ಲಭಿಸಿದಂತೆ ತೋರುತ್ತಿದ್ದಿತು. ಶ್ರೀರಾಮಚಂದ್ರನ ವಿವಾಹ ವಿಧಿಯಂತೆಯೇ ರಾಜಕುವರರ ವಿವಾಹ ವಿಧಿಯು ನೆರವೇರಿತು. ಆಗ ಕೊಟ್ಟ ಉಡುಗೊರೆಗಳಂತೂ ವರ್ಣನಾತೀತವಾಗಿರುವವು. ಸಮಗ್ರ ಮಂಟಪವು ಸುವರ್ಣ ಮತ್ತು ರತ್ನಗಳಿಂದ ತುಂಬಿಹೋಯಿತು. ಶಾಲುಗಳೂ ಅಮೌಲ್ಯವಾದ ರೇಶಿಮೆಯ

---

* ಚತುರಾವಸ್ಥೆಗಳು— ಜಾಗ್ರತ, ಸ್ವಪ್ನ, ಸುಷುಪ್ತಿ, ತುರೀಯಾ.

† ನಾಲ್ಕು ಅವಸ್ಥೆಗಳ ಪತಿಗಳು ಅನುಕ್ರಮವಾಗಿ ವಿಶ್ವ, ತೈಜಸ, ವಿರಾಗ, ಅಂತರ್ಯಾಮಿ—ಇಲ್ಲಿ ದಶರಥನೇ ಜೀವ, ಏಕೆಂದರೆ ಪುತ್ರ ಮತ್ತು ವಧುಗಳೊಂದಿಗೆ ಅವನ ಸಂಬಂಧವಿರುವುದು, ಹೃದಯವೇ ಮಂಟಪ, ನಾಲ್ವರು ಸೋದರರೇ ವಿಶ್ವಾದಿ ಪತಿಗಳು, ನಾಲ್ವರುವಧುಗಳೇ ನಾಲ್ಕು ಅವಸ್ಥಾಸ್ವರೂಪರು.

‡ ಚತುಷ್ಕ್ರಿಯೆಗಳು—ಶ್ರದ್ಧಾ, ಸೇವೆ, ತಪಸ್ಸು, ಭಕ್ತಿ. ನಾಲ್ಕು ಫಲಗಳು—ಧರ್ಮ ಅರ್ಥ ಕಾಮ ಮೋಕ್ಷಗಳು.

ವಸ್ತ್ರಗಳೂ ರಾಶಿರಾಶಿಯಾಗಿದ್ದವು. ಗಜ ರಥ ಕುದುರೆ, ದಾಸದಾಸಿಯರು, ಅಲಂಕೃತವಾದ ಕಾಮಧೇನುವಿನಂತಿದ್ದ ಗೋವುಗಳು, ಇನ್ನೂ ಹಲವು ಬಗೆಯ ವಸ್ತುಗಳು ಗಣನಾತೀತವಾಗಿದ್ದವು. ಅವುಗಳನ್ನು ನೋಡಿದವರು ಮಾತ್ರ ತಿಳಿದು ಕೊಳ್ಳಬಲ್ಲರೇ ಹೊರತು ವರ್ಣಿಸಲಾಗದು. ಅವುಗಳನ್ನು ನೋಡಿ ಲೋಕ ಪಾಲನು ಪ್ರಸನ್ನನಾದನು. ಅಯೋಧ್ಯಾಧಿಪತಿಯಾದ ದಶರಥನು ಅವುಗಳನ್ನು ಸಂತೋಷದಿಂದ ಸ್ವೀಕರಿಸಿದನು ಮತ್ತೆ ಅವುಗಳಲ್ಲಿ ಯಾಚಕರು ಬೇಡಿದುದ ನ್ನೆಲ್ಲ ಅವರಿಗೆ ದಾನಮಾಡಿ, ಉಳಿದವುಗಳನ್ನು ತನ್ನ ಬಿಡಾರಕ್ಕೆ ಕಳುಹಿಸಿದನು. ಅನಂತರ ಜನಕ ಮಹಾರಾಯನು ಮದುವೆಗೆ ಬಂದವರೆಲ್ಲರನ್ನೂ ಆದರದಿಂದಲೂ ನಮ್ರತೆಯಿಂದಲೂ ಸತ್ಕರಿಸಿ ಅವರಿಗೆ ಉಡುಗೊರೆಗಳನ್ನು ಕೊಟ್ಟು, ಮುನಿಗ ಳನ್ನೂ ಪ್ರೇಮಪೂರ್ವಕವಾಗಿ ಪೂಜಿಸಿ, ಅವರ ಅಡಿಗಳಿಗೆರಗಿ, ತಲೆಬಾಗಿಸಿ ದೇವತೆಗಳಿಗೂ ನಮಿಸಿ, ಅಂಜಲೀಬದ್ಧನಾಗಿ ಇಂತು ವಿಜ್ಞಾಪಿಸಿಕೊಂಡನು.—
"ಸುರರೂ ಸಾಧುಗಳೂ ಪ್ರೀತಿಯನ್ನಪೇಕ್ಷಿಸುವರು, ಒಂದು ಬೊಗಸೆ ನೀರಿನಿಂದ ಸಮುದ್ರಕ್ಕೆ ತೃಪ್ತಿಯಾಗುವುದೇ?" (ಎಂದರೆ ನೀನು ಸಮುದ್ರನು, ನನ್ನ ಸತ್ಕಾ ರಗಳೆಲ್ಲ ಒಂದು ಬೊಗಸೆ ನೀರಿನ ಸಮಾನವಾಗಿರುವದು. ಆದುದರಿಂದ ನೀನು ಕೇವಲ ಪ್ರೀತಿಯಿಂದಲೇ ತೃಪ್ತನಾಗಬೇಕು.) ಹೀಗೆ ಹೇಳಿ ತನ್ನ ಬಂಧುಸಮೇತ ನಾಗಿ ಕೈ ಜೋಡಿಸಿಕೊಂಡ. ಕೋಸಲರಾಯನನ್ನು ಕುರಿತು ಪ್ರೇಮದಿಂದ ಮನೋಹರವಾದ ಶೀಲಸ್ವಭಾವ ಸೂಚಕವಾದೀ ನುಡಿಗಳನ್ನು ನುಡಿದನು—
"ಹೇ ರಾಜನ್! ತಮ್ಮೊಂದಿಗೆ ಸಂಬಂಧವನ್ನು ಬೆಳೆಯಿಸಿ ನಾವೆಲ್ಲರೂ ದೊಡ್ಡವ ರೆನಿಸಿಕೊಂಡಿರುವೆವು ಈಗ ಈ ನನ್ನ ರಾಜಪರಿವಾರವೆಲ್ಲವನ್ನೂ ತಾವು ವಿನಾ ಮೂಲ್ಯವಾಗಿ ಪಡೆದ ದಾಸರೆಂದು ಗ್ರಹಿಸಬೇಕು, ಈ ದಾದಿಕೆಯರನ್ನು ತಮ್ಮ ಪರಿಚಾರಿಕೆಯರೆಂದು ಭಾವಿಸಿ ಕರುಣೆಯಿಂದವರನ್ನು ಕಾಪಾಡಬೇಕು, ನಾನು ಇಲ್ಲಿಗೆ ತಮ್ಮನ್ನು ಕರೆಯಿಸಿ ದಿಟ್ಟತನವನ್ನು ತೋರಿದೆನು, ಈ ನನ್ನ ಅಪರಾಧ ವನ್ನು ತಾವು ಕ್ಷಮಿಸಬೇಕು".—ಈ ನುಡಿಗಳನ್ನು ಕೇಳಿ ಭಾನುಕುಲಭೂಷಣನಾದ ದಶರಥಮಹಾರಾಯನು ಜನಕನನ್ನು ವಿಶೇಷವಾಗಿ ಆದರಿಸಿದನು. ಆ ಬೀಗ ರಿಬ್ಬರೂ ತಮ್ಮ ತಮ್ಮೊಳಗೆ ಮಾಡಿಕೊಳ್ಳುತ್ತಿರುವ ಬಿನ್ನಹವನ್ನು ಬಣ್ಣಿಸಲಾಗು ವುದೇ? ಅವರಿಬ್ಬರೂ ಪ್ರೇಮಪೂರ್ಣವಾಗಿರುವರು. ದಶರಥಮಹಾರಾಯನು ತನ್ನ ಬಿಡಾರದ ಕಡೆಗೆ ತೆರಳಿದನು, ಆಗ ದೇವತೆಗಳು ಪುಷ್ಪವೃಷ್ಟಿಯನ್ನು ಗೈದರು, ಆಕಾಶದಲ್ಲಿಯೂ ನಗರದಲ್ಲಿಯೂ ನಗಾರಿಗಳನ್ನು ಬಾರಿಸಿದರು, ಮತ್ತೆ ಜಯ ಧ್ವನಿಯಿಂದಲೂ ವೇದ ಘೋಷದಿಂದಲೂ ಪ್ರಜೆಗಳ ಪ್ರಸನ್ನತೆಯು ಪ್ರಕಟ ವಾಯಿತು. ಮುನಿರಾಜ (ವಸಿಷ್ಠ)ನ ಅಪ್ಪಣೆಯಂತೆ ಸಖಿಯರು ಮಂಗಳ ಗೀತೆ ಯನ್ನು ಹಾಡುತ್ತ ವಧೂವರರನ್ನು ನಾಂದೀ ಗೃಹದತ್ತ ಕರೆದುಕೊಂಡು ಹೋದರು.

ದೋ ॥೩೫॥ ಸೀತೆಯು ಬಾರಿ ಬಾರಿಗೂ ರಾಮಚಂದ್ರನನ್ನು ನೋಡುತ್ತ (ಬಹಿರಂಗದಲ್ಲಿ) ಸಂಕೋಚ ಭಾವವನ್ನು ತೋರುತ್ತಿದ್ದರೂ, ಮನಸ್ಸಿನಲ್ಲಿ ಹಿಗ್ಗುತ್ತಿರುವಳು. ಪ್ರೇಮಪಿಪಾಸೆಯಿಂದ ಅವಳ ನೇತ್ರಗಳು ಮತ್ಸ್ಯಗಳ ಮನೋಹರವಾದ ಸೌಂದರ್ಯವನ್ನು ಹರಣಮಾಡುವಂತೆ ಕಾಣುವುದು. (ಎಂದರೆ ನೀರಿಗೋಸ್ಕರ ಮೀನು ಚಂಚಲವಾಗಿ ಒದ್ದಾಡುವಂತೆ, ಸೀತೆಯ ಕಣ್ಣುಗಳು ರಾಮಚಂದ್ರನ ಪ್ರೇಮಕ್ಕೋಸ್ಕರ ಚಂಚಲವಾಗಿರುವವು). ಶ್ಯಾಮಾಂಗನು ಸ್ವಾಭಾವಿಕವಾಗಿಯೆ ಸುಂದರನಾಗಿರುವನು. ಅವನ ಶೋಭೆಯು ಕೋಟಿ ಕಾಮದೇವರಿಗೂ ಲಜ್ಜೆಯನ್ನುಂಟುಮಾಡುವಂತಿರುವುದು. ಆವ ಚರಣಕಮಲಗಳನ್ನು ಮುನಿಮನ ಮಧುಪಗಳು ಯಾವಾಗಲೂ ಮುತ್ತಿರುವವೊ ಆ (ರಾಮಚಂದ್ರನ) ಅರಗಿನ ಬಣ್ಣವನ್ನೊರೆದ ಚರಣ ಕಮಲಗಳು ಈಗ ಬಹು ಸುಂದರವಾಗಿ ಕಾಣುತ್ತಿರುವವು. (ನೋಡಿರಿ!) ಅವನು ಧರಿಸಿರುವ ಪೀತಾಂಬರವು ಬಾಲರವಿ ಮತ್ತು ಮಿಂಚುಗಳ ಕಾಂತಿಯನ್ನು ಹರಣಮಾಡುವಂತಿರುವುದು. ಅವನ ಗೆಜ್ಜೆಯ ಉಡಿದಾರವೂ ಸೊಂಟದ ಪಟ್ಟಿಯೂ ಬಹು ಮನೋಹರವಾಗಿರುವವು. ಅವನ ವಿಶಾಲವಾದ ಬಾಹುಗಳಲ್ಲಿ ಹಲವು ಬಗೆಯ ಸುಂದರವಾದ ಆಭರಣಗಳು ಶೋಭಿಸುತ್ತಿವೆ. ಪೀತವರ್ಣದ ಯಜ್ಞೋಪವೀತವು ವಿಶೇಷ ಶೋಭೆಯನ್ನು ಕೊಡುತ್ತಿರುವುದು. ಅವನ ಕೈಯುಂಗುರಗಳು ಪ್ರೇಕ್ಷಕರ ಚಿತ್ತವನ್ನು ಹರಣಮಾಡುತ್ತಿರುವವು. ವಿವಾಹಕ್ಕೋಸುಗ ಎಲ್ಲ ಅಲಂಕಾರಗಳಿಂದ ಶೋಭಿಸುತ್ತಿರುವ ಅವನ ವಕ್ಷಸ್ಥಲವು ವಿಶಾಲವಾಗಿರುವುದು ಆದರಲ್ಲಿಯೂ ಆಭರಣಗಳು ವಿರಾಜಿಸುತ್ತಿರುವವು. ಜನಿವಾರದಂತೆ (ಅವನ ಕಂಠದಲ್ಲಿ) ಪೀತಾಂಬರವು ಶೋಭಿಸುತ್ತಿದೆ. ಅದರ ಅಂಚುಗಳಿಗೆ ಮಣಿಗಳನ್ನೂ ಮುತ್ತುಗಳನ್ನೂ ಪೋಣಿಸಿರುವರು. ನೇತ್ರಗಳು ಕಮಲದಂತಿರುವವು, ಕರ್ಣಗಳಲ್ಲಿ ಕುಂಡಲಗಳು ಶೋಭಿಸುತ್ತಿವೆ ಸರ್ವಾಂಗವೂ ಸಕಲ ಸೌಂದರ್ಯನಿಧಿಯಂತಿರುವುದು. ಹುಬ್ಬುಗಳು ಸುಂದರವಾಗಿವೆ, ನಾಸಿಕವು ಮನೋಹರವಾಗಿರುವುದು. ಲಲಾಟವು ತಿಲಕಸೌಂದರ್ಯದ ನಿವಾಸ ಸ್ಥಾನವಾಗಿರುವುದು. ಮಸ್ತಕದಲ್ಲಿ ಮುತ್ತು ಮಣಿಗಳಿಂದ ಜಡಿತವಾದ ಮಂಗಳಮಯವಾದ ಮಕುಟವು ಮನೋಹರವಾಗಿ ಕಾಣುತ್ತಿರುವುದು. ಆ ಮನೋಹರವಾದ ಮಕುಟದಲ್ಲಿ ಅತ್ಯಮೂಲ್ಯವಾದ ಮಣಿಗಳನ್ನು ಸೇರಿಸಿರುವರು. ಮಂಜುಳವಾದಾ ಅಂಗವು ಚಿತ್ತವನ್ನು ಹರಣಮಾಡುತ್ತಿರುವುದು. ಪುರನಾರಿಯರೂ ಸುರಸುಂದರಿಯರೂ ವರನನ್ನು ನೋಡುತ್ತ ನೋಡುತ್ತ (ದೃಷ್ಟಿ ತಾಕದಂತೆ) ಕಡ್ಡಿಯನ್ನು ಮುರಿಯುತ್ತಿರುವರು ಮಣಿಮಯವಸನ ಭೂಷಣಗಳನ್ನು ದಾನಮಾಡುತ್ತ, ಮಂಗಳಗೀತೆಯಂ ಪಾಡುತ್ತ ಆರತಿಯನ್ನು ಬೆಳಗುತ್ತಿರುವರು. ದೇವಗಣವು ಪುಷ್ಪವನ್ನು ವರ್ಷಿಸುತ್ತಿರುವುದು, ವಂದೀ ಮಾಗಧಸೂತರು ವಿಶುದ್ಧ ಕೀರ್ತಿ ಗಾನವನ್ನು ಹೇಳುತ್ತಿರುವರು. ಸುವಾಸಿನಿಯರು ವಿಶೇಷ ಹರ್ಷದಿಂದ

ವಧೂವರರನ್ನು ನಾಂದೀಗೃಹಕ್ಕೆ ಕರೆತಂದು, ಮಂಗಳಗೀತೆಯನ್ನು ಹಾಡಿ, ಲೋಕಾಚರಣೆಯನ್ನು ಮಾಡಲಾರಂಭಿಸಿದರು. ಪಾರ್ವತೀ ದೇವಿಯು ರಾಮಚಂದ್ರನಿಗೂ ಸರಸ್ವತಿಯು ಸೀತೆಗೂ "ಲಹಕೌರಿ" ಯನ್ನು (ಎಂದರೆ ತುಪ್ಪ ಬತ್ತಾಸುಗಳನ್ನು ತಿನ್ನಿಸುವ ವಿಧಾನವನ್ನು) ಕಲಿಸಲಾರಂಭಿಸಿದರು. ರಾಣಿವಾಸದವರೆಲ್ಲರೂ ವಿನೋದ ವಿಲಾಸಗಳಲ್ಲಿ ಮಗ್ನರಾಗಿ, ತಮ್ಮ ಜೀವನವನ್ನು ಸಫಲಗೊಳಿಸುತ್ತಿರುವರು. ಸೀತೆಯು ತನ್ನ ಕೈಗಳಲ್ಲಿರುವ ಮಣಿಗಳಲ್ಲಿ ಸುರೂಪನಿಧಿಯಾದ ರಾಮಚಂದ್ರನ ಪ್ರತಿಬಿಂಬವನ್ನು ನೋಡಿ, ರಾಮಚಂದ್ರನ ದರ್ಶನ ವಿಯೋಗವಾದೀತೆಂದು, ತನ್ನ ಕೈಗಳನ್ನೂ ಭುಜಗಳನ್ನೂ ಅಲ್ಲಾಡಿಸುತ್ತಿಲ್ಲ. ಆ ಸ್ಥಳದಲ್ಲಿರುವ ವಿನೋದಪ್ರಮೋದಗಳೂ ಪ್ರೇಮವೂ ವರ್ಣನಾತೀತವಾಗಿರುವವು.—(ನೋಡಿರಿ!) ಸಖಿಯರೆಲ್ಲರೂ ವಧೂವರರನ್ನು ಜನರಿರುವೆಡೆಗೆ ಕರೆದುಕೊಂಡು ಹೋಗುತ್ತಿರುವರು!—ಆ ಸಮಯದಲ್ಲಿ ನಗರದಲ್ಲಿಯೂ ಆಕಾಶದಲ್ಲಿಯೂ ಆನಂದವು ಹರಡಿಕೊಂಡಿದ್ದಿತು. ಚತುರ್ದಿಕ್ಕುಗಳಿಂದ ಆಶೀರ್ವಾದಗಳ ಸುರಿಮಳೆಯಾಯಿತು. ಎಲ್ಲರೂ ಪ್ರಸನ್ನಚಿತ್ತರಾಗಿ "ಈ ನಾಲ್ಕು ಜೋಡಿಗಳೂ ಚಿರಂಜೀವಿಗಳಾಗಿ ಬಾಳಲಿ!" ಎಂದು ನುಡಿದರು. ದೇವತೆಗಳು ರಾಮಚಂದ್ರನ ದರ್ಶನವನ್ನು ಹೊಂದಿ ನಗಾರಿಗಳನ್ನು ಬಾರಿಸಿ ತಂತಮ್ಮ ಲೋಕದಿಂದ ಪುಷ್ಪಗಳನ್ನು ವರ್ಷಿಸಿದರು ಯೋಗಿಂದ್ರರೂ ಸಿದ್ಧರೂ ಮುನೀಶರೂ ಬಾರಿಬಾರಿಗೂ ಜಯಧ್ವನಿಗೈದರು.

ದೋ ॥೩೬೦॥ ಆಗ ನಾಲ್ವರು ಕುವರರೂ ವಧುಗಳೊಂದಿಗೆ ತಮ್ಮ ಪಿತನ ಬಳಿಗೆ ಬಂದುದನ್ನು ನೋಡಿ ಬೀಗರ ಬಿಡಾರದಲ್ಲಿ ಶೋಭೆಯೂ ಆನಂದವೂ ಹೆಚ್ಚಿ, ಜನರೆಲ್ಲರೂ ಸಂತೋಷದಿಂದ ಹಿಗ್ಗಿದರು. ಅನಂತರ ಹಲವು ಬಗೆಯ ಅಡಿಗೆಯನ್ನು ಮಾಡಿಸಿ, ಜನಕರಾಯನು ಬೀಗರನ್ನು ಕರೆಕಳುಹಿಸಿದನು. ದಶರಥರಾಯನು ತನ್ನ ಪುತ್ರರ ಸಮೇತ, (ನೆಲದಮೇಲೆ ಹಾಸಿದ್ದ) ಅತ್ಯಮೂಲ್ಯವಾದ ವಸ್ತ್ರಗಳ ಮೇಲೆ ಅಡಿಗಳನ್ನಿಡುತ್ತ ಹೊರಟನು ಜನಕರಾಯನು ಆದರದಿಂದ ಎಲ್ಲರ ಪಾದಗಳನ್ನೂ ತೊಳೆದು, ಅವರನ್ನು ಉಚಿತಾಸನಗಳಲ್ಲಿ ಕುಳ್ಳಿರಿಸಿದನು. ಆಗ ಅವನ ಶೀಲವೂ ಪ್ರೇಮವೂ ವರ್ಣನಾತೀತವಾಗಿದ್ದವು ಮತ್ತೆ ಅವನು ಯಾವಾಗಲೂ ಶಿವನ ಹೃದಯಕಮಲದಲ್ಲಡಗಿರುವ ಶ್ರೀರಾಮಚಂದ್ರನ ಚರಣಕಮಲಗಳನ್ನೂ ಲಕ್ಷ್ಮಣ ಭರತ ಶತ್ರುಘ್ನರ ಪಾದಗಳನ್ನೂ ತೊಳೆದನು. ಅನಂತರ ಅವನು ಎಲ್ಲರಿಗೂ ಬೇಕುಬೇಕಾದ ಆಸನಗಳನ್ನು ಕೊಟ್ಟು ಅಡುಗೆಯವರನ್ನು ಕರೆಯಿಸಿದನು. ಅವರು ಮಣಿಗಳಲ್ಲಿ ಕೊರೆದಿದ್ದ ಸುವರ್ಣಯುಕ್ತವಾದ ಎಲೆಗಳನ್ನು ಹಾಕಿದರು.

ದೋ ॥೩೬೧॥ ಚತುರರಾದ ಅಡುಗೆಯವರು ನಮ್ರಭಾವದಿಂದ ಸುಂದರವೂ ಸ್ವಾದನೀಯವೂ ಪವಿತ್ರವೂ ಆದ ಅನ್ನ ತೊವ್ವೆಗಳನ್ನೂ ಹಸುವಿನ ತುಪ್ಪ

ವನ್ನೂ ಕ್ಷಣಕಾಲದಲ್ಲಿ ಬಡಿಸಿಬಿಟ್ಟರು. ಎಲ್ಲರೂ ಮೊದಲು ಪಂಚಗ್ರಾಸ * ವನ್ನು ಗ್ರಹಿಸಲಾರಂಭಿಸಿದರು. ಆಗ ಬೀಗರ ಹಾಡುಗಳನ್ನು ಕೇಳಿ ಎಲ್ಲರೂ ಸಂತೋಷಪಟ್ಟರು. ಅಲ್ಲಿ ಬಡಿಸಿದ ಹಲವು ಬಗೆಯ ಪಕ್ವಾನ್ನಗಳನ್ನು ವರ್ಣಿಸಲಾರಿಂದಾದೀತು? ಚತುರರಾದ ಅಡುಗೆಯವರು ಬಡಿಸುತ್ತಿದ್ದ ವಿವಿಧ ವ್ಯಂಜನ ಪದಾರ್ಥಗಳ ಹೆಸರು ಯಾರಿಗೆ ಗೊತ್ತು? ಪಾಕಶಾಸ್ತ್ರದಲ್ಲಿ ನಾಲ್ಕು ವಿಧವಾದ (ಭಕ್ಷ್ಯ, ಭೋಜ್ಯ, ಲೇಹ್ಯ, ಚೋಷ್ಯ †) ಭೋಜನ ವಿಧಿಗಳನ್ನು ಹೇಳಿರುವರು. ಆದರೆ ಇಲ್ಲಿಯಾದರೆ ಅವುಗಳ ಸಂಖ್ಯೆಯು ಗಣನಾತೀತವಾಗಿರುವುದು ರುಚಿಕರವಾದ (ಮಧುರ, ಆಮ್ಲ, ತಿಕ್ತ, ಕಟು, ಕಷಾಯ, ಲವಣಗಳೆಂಬ) ಷಡ್ರಸಯುಕ್ತವಾದ ಹಲವು ಬಗೆಯ ವ್ಯಂಜನಗಳಿದ್ದವು. ಒಂದೊಂದು ರಸದಲ್ಲಿ ಅಗಣಿತವಾದ ವ್ಯಂಜನಗಳು ಸಿದ್ಧವಾಗಿದ್ದವು. ಭೋಜನಸಮಯದಲ್ಲಿ ಸ್ತ್ರೀಯರು ಮಧುರವಾದ ಕಂಠದಿಂದ ಬೀಗಬೀಗಿತಿಯರ ಮೇಲೆ ಹಾಡುಗಳನ್ನು ಹೇಳಲಾರಂಭಿಸಿದರು. ಸಮಯೋಚಿತವಾದ ಮಧುರಗಾನವನ್ನು ಕೇಳಿ ದಶರಥರಾಯನು ತನ್ನ ಪರಿವಾರ ಸಮೇತನಾಗಿ ನಗಲಾರಂಭಿಸಿದನು ಈ ಬಗೆಯಿಂದ ಎಲ್ಲರೂ ಭೋಜನಮಾಡಿದನಂತರ ಅವರಿಗೆ ಕೈತೊಳೆಯಲು ನೀರನ್ನು ಕೊಟ್ಟರು

ದೋ ॥ ೩೬೨–೬೩ ॥ ಜನಕರಾಯನು ದಶರಥರಾಯನಿಗೂ ಅವನ ಪರಿವಾರದವರಿಗೂ ತಾಂಬೂಲವನ್ನು ಕೊಟ್ಟು ಸತ್ಕರಿಸಿದನು. ಅನಂತರ ಸಕಲ ಭೂಪ ಶಿರೋಮಣಿಯಾದ ದಶರಥ ಮಹಾರಾಯನು ತನ್ನ ಪರಿವಾರದೊಂದಿಗೆ ಬಿಡಾರಕ್ಕೆ ತೆರಳಿದನು. ಜನಕಪುರಿಯಲ್ಲಿ ನಿತ್ಯವೂ ನವೀನ ಉತ್ಸವಗಳು ಜರುಗುತ್ತಿದ್ದವು. ಹಗಲಿರುಳುಗಳು ಸ್ಷಣಮಾತ್ರದಂತೆ ಕಳೆಯುತ್ತಿದ್ದವು ಬೆಳಿಗ್ಗೆ ದಶರಥರಾಯನು ಬಹಳ ಬೇಗ ಏಳುತ್ತಿದ್ದನು. ಯಾಚಕರು ರಾಜನಗುಣಗಾನವನ್ನು ಹಾಡುತ್ತಿದ್ದರು, ನಾಲ್ವರು ಪುತ್ರರನ್ನೂ ವಧುಗಳ ಸಮೇತ ನೋಡಿ (ದಶರಥರಾಯನಿಗುಂಟಾದ) ಆನಂದವನ್ನು ಬಣ್ಣಿಸುವದೆಂತು? (ಸ್ನಾನ ಸಂಧ್ಯಾದಿ) ಪ್ರಾತಃಕ್ರಿಯೆಗಳನ್ನು ಮುಗಿಯಿಸಿಕೊಂಡು ಅವನು ಮಹಾಪ್ರಮೋದ ಪ್ರೇಮಭರಿತನಾಗಿ ವಸಿಷ್ಠನ ಬಳಿಗೆ ತೆರಳಿದನು. ಅಲ್ಲಿ ಮುನಿಗೆ ಪ್ರಣಾಮ.ವಂಗೈದು, ಪೂಜಿಸಿ, ಕೈ ಜೋಡಿಸಿ, ಅಮೃತಪೂರ್ಣವಾದ ವಾಣಿಯಿಂದ—ಹೇ

---

* ಭೋಜನಕ್ಕೆ ಮೊದಲು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನಗಳೆಂಬ ಪಂಚಪ್ರಾಣಗಳಿಗೋಸ್ಕರ ಪಂಚಗ್ರಾಸವನ್ನು ಕೊಟ್ಟ ನಂತರ ಭೋಜನಮಾಡುವ ವಿಧಿ.

† ಭಕ್ಷ್ಯವೆಂದರೆ ಹಲ್ಲಿನಿಂದ ಅಗಿದು ತಿನ್ನುವ ಹಪ್ಪಳ, ಸಂಡಿಗೆ ಮೊದಲಾದವು. ಭೋಜ್ಯವೆಂದರೆ ಆಹಾರ ಪದಾರ್ಥಗಳಲ್ಲಿ ಮುಖ್ಯವಾದ ಅನ್ನ, ಪೂರಿ, ತೊವ್ವೆ ಮೊದಲಾದವು. ಲೇಹ್ಯವೆಂದರೆ ನಾಲಗೆಯಿಂದ ನೆಕ್ಕಿ ತಿನ್ನುವ ಚಟ್ಟಣೀ ಗೊಜ್ಜು ಮೊದಲಾದವು. ಚೋಷ್ಯವೆಂದರೆ ರಸಯುಕ್ತವಾಗಿ ಹೀರಿ ತಿನ್ನುವ ಕಬ್ಬು ಮೊದಲಾದವು.

ಮುನಿರಾಜ! ಕೇಳಿರಿ. ಇಂದು ತಮ್ಮ ಕೃಪೆಯಿಂದ ನಾನು ಪೂರ್ಣಕಾಮನಾದೆನು, ಹೇ ಗೋಸ್ವಾಮಿ (ಇಂದ್ರಿಯಗಳನ್ನು ನಿಗ್ರಹಿಸಿದವನೆ)! ಈಗ ಬ್ರಾಹ್ಮಣರೆಲ್ಲರನ್ನೂ ಕರೆಯಿಸಿ ಸರ್ವಾಲಂಕೃತ ಗೋದಾನವನ್ನು ಕೊಡಬೇಕು,—ಎಂದನು. ವಸಿಷ್ಠನು ಈ ನುಡಿಗಳನ್ನು ಕೇಳಿ ರಾಜನನ್ನು ಹೊಗಳಿ, ಋಷಿಗಳನ್ನು ಕರೆಯಿಸಿದನು. ಆಗ ವಾಮದೇವ, ದೇವರ್ಷಿ (ನಾರದ), ವಾಲ್ಮೀಕಿ, ಜಾಬಾಲಿ, ಮತ್ತು ತಪೋನಿಧಿಯಾದ ವಿಶ್ವಾಮಿತ್ರಾದಿ ಋಷಿಗಳ ಸಮೂಹವು ಬಂದಿತು. ರಾಜನು ಎಲ್ಲರಿಗೂ ಸಾಷ್ಟಾಂಗವೆರಗಿ, ಶ್ರೇಷ್ಠವಾದ ಆಸನಗಳನ್ನು ಕೊಟ್ಟು, ಎಲ್ಲರನ್ನೂ ಪೂಜಿಸಿದನು. ಅನಂತರ ಕಾಮಧೇನುವಿನಂತೆ ಶೀಲವುಳ್ಳ ನಾಲ್ಕು ಲಕ್ಷ ಧೇನುಗಳನ್ನು ತರಿಸಿದನು ಅವುಗಳಿಗೆ (ಸುವರ್ಣ ಶೃಂಗ-ರತ್ನ ಖುರಾದಿ) ಸರ್ವಾಲಂಕಾರಗಳನ್ನು ತೊಡಿಸಿ ಅವುಗಳನ್ನೆಲ್ಲ ಭೂಪಾಲನು ಭೂಸುರರಿಗೆ ಪ್ರಸನ್ನಭಾವದಿಂದ ದಾನಮಾಡಿದನು. ಅನಂತರ ನರಪತಿಯಾದ ದಶರಥನು ಬಹುವಿನಯದಿಂದ—ಇಂದು ನಾನು ಜಗತ್ತಿನಲ್ಲಿ ಜೀವಿಸಿದುದರ ಫಲವನ್ನು ಹೊಂದಿದೆನು—ಎಂದು ಬಿನ್ನೈಸಿಕೊಂಡು ಬ್ರಾಹ್ಮಣರ ಆಶೀರ್ವಾದಗಳನ್ನು ಪಡೆದು ಪ್ರಸನ್ನನಾದನು. ಅನಂತರ ರವಿಕುಲನಂದನನು ಭಿಕ್ಷುಕರನ್ನು ಕರೆಯಿಸಿ, ಅವರಿಗೆ ಅವರವರ ಇಚ್ಛಾನುಸಾರವಾಗಿ ಸುವರ್ಣ, ವಸ್ತ್ರ, ಮಣಿ, ಕುದುರೆ, ಆನೆ, ರಥಗಳನ್ನು ದಾನಮಾಡಿದನು. (ಈ ಬಗೆಯ ದಾನವಂ ಪಡೆದ) ಅವರೆಲ್ಲರು ರಾಯನ ಗುಣಗಾನವನ್ನು ಹಾಡುತ್ತ,—ಹೇ ದಿನಕರಕುಲನಾಥ! ನಿನಗೆ ಜಯವಾಗಲಿ!—ಎಂದರು ಈ ವೈಭವದಿಂದ ನೆರವೇರಿದ ಶ್ರೀರಾಮಚಂದ್ರನ ವಿವಾಹವನ್ನು ಸಹಸ್ರಮುಖನಾದ ಶೇಷನು ಕೂಡ ಸಂಪೂರ್ಣವಾಗಿ ವರ್ಣಿಸಲಾರನು!

ದೋ ॥ ೩೩೪—೩೫ ॥ ರಾಜನು ಬಾರಿಬಾರಿಗೂ ಕೌಶಿಕನ ಅಡಿಗಳಿಗೆರಗುತ್ತ—ಹೇ ಮುನಿರಾಜ! ಈ ಸುಖವೆಲ್ಲ ತಮ್ಮ ಕೃಪಾಕಟಾಕ್ಷದ ಫಲವಾಗಿರುವುದು—ಎಂದನು. ದಶರಥನು ಜನಕರಾಜನ ಸ್ನೇಹ, ಶೀಲ, ಕಾರ್ಯಕಲಾಪ ಮತ್ತು ಐಶ್ವರ್ಯಗಳನ್ನು ಹಲವು ಬಗೆಯಿಂದ ಹೊಗಳಿದನು ಅಯೋಧ್ಯಾಧಿಪತಿಯು ಪ್ರತಿದಿನವು ಬೆಳಿಗ್ಗೆ ಎದ್ದು, ಇನ್ನು ಬೀಳ್ಕೊಳ್ಳುವೆನೆಂದು ಹೇಳುವನು, ಆದರೆ ಜನಕನು ಪ್ರೇಮದಿಂದ ಅವನನ್ನು ತಡೆದಿರುವನು. ನಿತ್ಯವೂ ನೂತನವಾದ ಆನಂದವು ಹೆಚ್ಚುತ್ತಿರುವುದು, ನಗರದಲ್ಲಿ ನಿತ್ಯವೂ ನವೀನ ಉತ್ಸವಗಳು ಆಗುತ್ತಲಿವೆ. ದಶರಥನು ಹೊರಡಬೇಕೆಂದರೆ ಯಾರೂ ಒಪ್ಪರು. ಈ ಬಗೆಯಾಗಿ ಬಹುದಿನಗಳು ಕಳೆದವು. ಬೀಗರು ಸ್ನೇಹರಜ್ಜುವಿನಿಂದ ಬಂಧಿತ* ರಾಗಿರು

---

* ಬಂಧನಾನಿ ಖಲುಸನ್ತಿ ಬಹೂನಿ ಪ್ರೇಮರಜ್ಜು ದೃಢಬಂಧನಮಾಹುಃ। ದಾರುಭೇದನಿಪುಣೋಽಪಿ ಷಡಂಘ್ರಿರ್ನಿಷ್ಕ್ರಿಯೋಭವತಿ ಪಂಕಜಕೋಶೇ ॥" ಎಂದರೆ—ಪ್ರಪಂಚದಲ್ಲಿ ಬಹುವಿಧವಾದ ಬಂಧನಗಳಿವೆ, ಆದರೆ ಅವುಗಳಲ್ಲಿ ಪ್ರೇಮವೆಂಬ ಹಗ್ಗದ

ವರೊ ಎಂಬಂತೆ ತೋರಿತು. ಆಗ ಶತಾನಂದನೂ ವಿಶ್ವಾಮಿತ್ರನೂ ಜನಕನ ಬಳಿಗೆ ಹೋಗಿ, ಅವನನ್ನು ಸಮಾಧಾನಪಡಿಸಿ,"-ಹೇ ರಾಜನ್! ನೀನು ಸ್ನೇಹ ದಿಂದ ದಶರಥನನ್ನು ಬಿಡಲಾರದವನಾಗಿದ್ದರೂ ಈಗ ಅವನು ಹೋಗುವದಕ್ಕೆ ಅಪ್ಪಣೆ ಕೊಡಬೇಕು"—ಎಂದರು. ಆಗ ಜನಕನು—"ಹೇ ನಾಥ, ಒಳ್ಳೆಯದು! ಅಪ್ಪಣೆ!" ಎಂದೊಪ್ಪಿ, ಮಂತ್ರಿಗಳನ್ನು ಕರೆಯಿಸಿದನು ಅವರು ಬಂದು "ಮಹಾ ರಾಜನಿಗೆ ಜಯವಾಗಲಿ!" ಎಂದು ಹೇಳಿ ತಲೆ ಬಾಗಿಸಿ ನಿಂತರು. ಆಗ ರಾಜನು ಅವರನ್ನು ಕುರಿತು—'ಒಳಗೆ ಅಂತಃಪುರದಲ್ಲಿ ದಶರಥ ಮಹಾರಾಜರು ಬೀಳ್ಕೊಳ್ಳುವುದಕ್ಕೆ ಅಪೇಕ್ಷಿಸುತ್ತಿರುವರೆಂದು ತಿಳಿಸಿರಿ' ಎಂದು ಹೇಳಿದನು. ಈ ನುಡಿಗಳನ್ನು ಹೇಳಿದ ರಾಜನೂ, ಕೇಳಿದ ಮಂತ್ರಿಗಳೂ ಬ್ರಾಹ್ಮಣರೂ ಸಭಾಸದರೂ ಪ್ರೇಮವಿವಶರಾದರು. ಬೀಗರು ತಮ್ಮ ಊರಿಗೆ ಹಿಂದಿರುಗುವರೆಂಬ ಸುದ್ದಿ ಯನ್ನು ಕೇಳಿದಕೂಡಲೆ, ಪುರವಾಸಿಗಳು ಅದರ ನಿಜಾಂಶವನ್ನರಿತು ಸಂಧ್ಯಾ ಕಾಲದ ಕಮಲವು ಬಾಡುವಂತೆ ದುಃಖದಿಂದ ಕಂದಿದ ಮುಖವುಳ್ಳವರಾದರು ಎಲ್ಲೆಲ್ಲಿ ಬೀಗರು ಬಂದು ನಿಲ್ಲುತ್ತಿದ್ದರೊ ಅಲ್ಲಲ್ಲಿ ಹಲವು ಬಗೆಯ "ಸೀಧಾ" ಎಂದರೆ ಅಹಾರ ಸಾಮಗ್ರಿಗಳು, ಪಕ್ವಾನ್ನಗಳು, ಲಾಡು ಮೊದಲಾದ ಉಪಹಾರ ಪದಾರ್ಥ ಗಳು ಬರಲಾರಂಭಿಸಿದವು. ಜನಕರಾಯನು ಅವುಗಳನ್ನೆಲ್ಲ ಎತ್ತುಗಳ ಮೇಲೆ ಹೇರಿ ಸೇವಕರೊಂದಿಗೆ ಕಳುಹಿಸಿದನು. ಮತ್ತೆ ಹಲವು ವಿಧವಾದ ಪಕ್ವಾಹಾರ ಗಳನ್ನೂ, ಪೂರ್ಣಾಲಂಕೃತವಾದ-ಒಂದು ಲಕ್ಷ ಕುದುರೆ, ಇಪ್ಪತ್ತೈದು ಸಾವಿರ ರಥಗಳು ಮತ್ತು ಹತ್ತು ಸಾವಿರ ಮತ್ತಗಜಗಳನ್ನೂ ಕಳುಹಿಸಿದನು. ಇವು ಗಳನ್ನು ನೋಡಿ ದಿಗ್ಗಜಗಳು ಕೂಡ ಲಜ್ಜೆಯನ್ನು ಹೊಂದಿದವು. ಗಾಡಿಗಳಲ್ಲಿ ಕನಕ, ರತ್ನ, ವಸನಾದಿಗಳನ್ನೂ ಹಸು, ಎಮ್ಮೆ ಮೊದಲಾದ ವಿವಿಧ ವಸ್ತು ಗಳನ್ನೂ ಜನಕರಾಯನು ಕೊಟ್ಟು ಕಳುಹಿಸಿದನು.

ದೋ ||೩೬೬-೬೭|| ಈ ಬಗೆಯಾಗಿ ಜನಕರಾಯನು ಕೊಟ್ಟ ಉಡುಗೊ ರೆಗಳನ್ನು ವರ್ಣಿಸುವುದಾರಿಗೆ ಸಾಧ್ಯ! ಅವುಗಳನ್ನು ನೋಡಿ (ದೇವೇಂದ್ರ ಕುಬೇರಾದಿ) ಲೋಕ ಪತಿಗಳೂ ತಮ್ಮ ಲೋಕ ಸಂಪತ್ತಿಯು ಅಲ್ಪವಾದುದೆಂದು ಕೊಂಡರು. ಜನಕರಾಯನು ಈ ಬಗೆಯಾಗಿ ಎಲ್ಲ ಸಾಮಾನುಗಳನ್ನೂ ಸಜ್ಜು ಗೊಳಿಸಿ ಅಯೋಧ್ಯೆಗೆ ಕಳುಹಿಸಿದನು ಇತ್ತ ರಾಣಿಯರು ಬೀಗರ ಪ್ರಯಾಣದ ಸುದ್ದಿಯನ್ನರಿತು, ಅಲ್ಪಜಲದಲ್ಲಿ ಮೀನುಗಳು ಒದ್ದಾಡುವಂತೆ, ವ್ಯಾಕುಲ ರಾದರು. ಅವರು ಸೀತೆಯನ್ನ ಕರೆದು ಬಾರಿಬಾರಿಗೂ ಅವಳನ್ನು ತೊಡೆಯ

---

ಬಂಧನವು ದೃಢ ಬಂಧನವು. ಭ್ರಮರವು ಗಟ್ಟಿಯಾದ ಮರವನ್ನು ಕೊರೆದು ಅದರಲ್ಲಿ ಮನೆ ಮಾಡಿಕೊಳ್ಳುವುದು. ಆದರೆ ಅದೇ ಸಾಯಂಕಾಲ ಕಮಲ ಗರ್ಭದಲ್ಲಿ ಬಂಧಿತ ವಾದಾಗ ಪ್ರೇಮವಶವಾಗಿ ಅದನ್ನು ಕೊರೆಯದೇ ನಿಶ್ಚೇಷ್ಟಿತವಾಗುವುದು

ಮೇಲೆ ಕುಳ್ಳಿರಿಸಿಕೊಳ್ಳುತ್ತ, ಆಶೀರ್ವದಿಸುತ್ತ, ಶಿಕ್ಷಣವನ್ನು ಕೊಡುತ್ತ,—"ಸೀತೆ! ನೀನು ಯಾವಾಗಲೂ ನಿನ್ನ ಪತಿಗೆ ಪ್ರಿಯಳಾಗಿರು, ನಿನ್ನ ಸೌಭಾಗ್ಯವು ಸದಾ ಅಖಂಡವಾಗಿರಲಿ! ಇದುವೆ ನಮ್ಮ ಆಶೀರ್ವಾದ. ನೀನು ಯಾವಾಗಲೂ ಅತ್ತೆ ಮಾವ ಮತ್ತು ಗುರು ಹಿರಿಯರ ಸೇವೆಯನ್ನು ಮಾಡಬೇಕು ಪತಿಯು ಇಚ್ಛೆಯನ್ನರಿತು ಅವನ ಆಜ್ಞೆಯನ್ನು ಪಾಲಿಸಬೇಕು" ಎಂದು ಬೋಧಿಸಿದರು. ಚತುರರಾದ ಸಖಿಯರು ಅತಿ ಸ್ನೇಹಭರಿತರಾಗಿ ಕೋಮಲ ವಾಣಿಯಿಂದ ಅವಳಿಗೆ ಸ್ತ್ರೀಧರ್ಮವನ್ನು ಬೋಧಿಸಲಾರಂಭಿಸಿದರು. ರಾಣಿಯರೆಲ್ಲರು ವಿಶೇಷ ಆದರದಿಂದ ನಾಲ್ಕುಜನ ವಧುಗಳಿಗೂ ಚೆನ್ನಾಗಿ ಬೋಧಿಸಿ, ಬಾರಿಬಾರಿಗೂ ಅವರನ್ನು ಆಲಂಗಿಸಿಕೊಂಡರು. ಅವರ ಮಾತೆಯರು, ತಮ್ಮ ಪುತ್ರಿಯರ ಬಳಿಗೆ ಬಂದು—"ಅಯ್ಯೋ! ಬ್ರಹ್ಮನು ಸ್ತ್ರೀಯರನ್ನೇಕೆ ಸೃಷ್ಟಿಸಿದನು?" ಎನ್ನಲಾರಂಭಿಸಿದರು. ಆ ಸಮಯದಲ್ಲಿ ಸೂರ್ಯಕುಲಕೇತುವಾದ ರಾಮಚಂದ್ರನು ತನ್ನ ಭ್ರಾತೃ ಸಮೇತನಾಗಿ ಹೊರಡಲು ಅಪ್ಪಣೆಯನ್ನು ಪಡೆಯುವುದಕ್ಕಾಗಿ ಜನಕನ ಮಹಲಿಗೆ ಬಂದನು. ಸ್ವಭಾವಸುಂದರರಾದ ಸೋದರರನ್ನು ನೋಡುವುದಕ್ಕೋಸ್ಕರ ನಗರದ ಸ್ತ್ರೀ ಪುರುಷರೆಲ್ಲರು ಓಡಿಬಂದರು ಕೆಲವರು—"ಇವರು ಇಂದೇ ಹೊರಟು ಹೋಗುವರು ಜನಕನು ಪ್ರಯಾಣದ ಸಾಮಾನುಗಳನ್ನೆಲ್ಲ ಅಣಿಮಾಡಿರುವನು. ಪ್ರಿಯಮಿತ್ರರೆ! ಸುಂದರಿಯರಾದ ಸಖಿಯರೆ! ಈ ನಾಲ್ವರು ರಾಜಕುವರರ ರೂಪವನ್ನು ಕಣ್ದಣಿಯುವಂತೆ ನೋಡಿರಿ. ಆವ ಪುಣ್ಯಬಲದಿಂದ ಬ್ರಹ್ಮನು ಇವರನ್ನು ನಮ್ಮ ನೇತ್ರಗಳ ಅತಿಥಿಗಳನ್ನಾಗಿ ಮಾಡಿದನೊ ಯಾರಿಗೆ ಗೊತ್ತು? ಮರಣೋನ್ಮುಖರಾದವರಿಗೆ ಅಮೃತವು ದೊರೆತಂತೆ, ಬಹಳ ಬಾಯಾರಿದವನಿಗೆ ಕಲ್ಪವೃಕ್ಷವು ಸಿಕ್ಕಿದಂತೆ, ನರಕವಾಸಿಗಳಾದ ಪಾಪಿಗಳಿಗೆ ಹರಿಪದ(ಮೋಕ್ಷ)ವು ಲಭಿಸಿದಂತೆ ಇವರ ದರ್ಶನವು ನಮಗಾಗಿರುವುದು. ಶ್ರೀರಾಮಚಂದ್ರನ ಶೋಭೆಯನ್ನು ನೋಡಿ ಅದನ್ನು ನಿಮ್ಮ ಹೃದಯದಲ್ಲಿಯೂ ಧಾರಣಮಾಡಿರಿ. ಸರ್ಪವು ಮಣಿಯನ್ನು ಧರಿಸುವಂತೆ, ನೀವು ಸರ್ಪವಾಗಿ, ಇವರ ಮೂರ್ತಿಗಳನ್ನು ಮಣಿಗಳಂತೆ ಧರಿಸಿ, ನಿರಂತರವೂ ಅವುಗಳ ಧ್ಯಾನದಲ್ಲಿಯೆ ಮನಸ್ಸಿರಿಸಿರಿ" ಎಂದರು. ಈ ಬಗೆಯಾಗಿ ದರ್ಶಕರ ನೇತ್ರಗಳನ್ನು ಸಫಲಗೊಳಿಸುತ್ತ, ರಾಮಚಂದ್ರನು ಅಂತಃಪುರಕ್ಕೆ ಬಂದನು.

ದೋ ॥೩೬೮॥ ರೂಪಸಿಂಧುವಾದ ರಾಮಚಂದ್ರನು ಭ್ರಾತೃಸಮೇತನಾಗಿ ಬಂದುದನ್ನು ನೋಡಿ ರಾಣೀವಾಸದವರೆಲ್ಲರು ವಿಶೇಷ ಹರುಷವನ್ನು ತಳೆದರು. ಅತ್ತೆಯರು ಪ್ರಸನ್ನಚಿತ್ತದಿಂದ ಕುಮಾರರಿಗೆ (ದೃಷ್ಟಿಯ) ಇಳಿದೆಗೆದು ಆರತಿಯನ್ನು ಬೆಳಗಿದರು. ಶ್ರೀರಾಮಚಂದ್ರನ ಸೌಂದರ್ಯವನ್ನು ನೋಡಿ ರಾಣಿಯರೆಲ್ಲರು ಸ್ನೇಹಪೂರ್ಣರೂ ಪ್ರೇಮವಿವಶರೂ ಆಗಿ ಬಾರಿಬಾರಿಗೂ ಅವನ ಚರಣ

ಧ್ಯಾನಮಗ್ನರಾಗುತಿದ್ದರು. ಹೃದಯವನ್ನು ಪ್ರೀತಿಯು ಸಂಪೂರ್ಣವಾಗಿ ಆಕ್ರಮಿಸಿದ್ದುದರಿಂದ ಲಜ್ಜೆಯು ಓಡಿಹೋಯಿತು. ಆ ಸ್ವಾಭಾವಿಕ ಪ್ರೇಮ ವನ್ನು ವರ್ಣಿಸುವುದು ಹೇಗೆ? ರಾಣಿಯರು ಭ್ರಾತೃಸಮೇತನಾದ ರಘುನಾಥನಿಗೆ ಸುಗಂಧದ್ರವ್ಯಗಳನ್ನು ತೊಡೆದು, ಮೆಯ್ ತೊಳೆದು, ಪ್ರೇಮದಿಂದ, ಷಡ್ರಸಯುಕ್ತ ವಾದ ಭೋಜನವನ್ನು ಮಾಡಿಸಿದರು ಶ್ರೀರಾಮಚಂದ್ರನು ಸಮಯವರಿತು, ಸ್ನೇಹದಿಂದ ಸಂಕೋಚಶೀಲನಾಗಿ—"ಮಹಾರಾಜರು ಅಯೋಧ್ಯೆಗೆ ಪ್ರಯಾಣ ಬೆಳಸುವರಾಗಿರುವರು. ನಾವೂ ಅವರೊಂದಿಗೆ ಹೊರಡಲು ನಿಮ್ಮ ಅಪ್ಪಣೆಯನ್ನು ಪಡೆದು ಬರಬೇಕೆಂದು ಅವರು ನಮ್ಮನ್ನು ಇಲ್ಲಿಗೆ ಕಳುಹಿಸಿರುವರು. ಮಾತೆ ಯರೆ! ಮುದಿತಮನದಿಂದ ನಮಗೆ ಅಪ್ಪಣೆಯನ್ನು ಕೊಡಿರಿ. ನಮ್ಮನ್ನು ನಿಮ್ಮಮಕ್ಕಳೆಂದು ಭಾವಿಸಿ ಯಾವಾಗಲೂ ನಮ್ಮನ್ನು ಪ್ರೀತಿಸಿರಿ!" ಎಂದನು.—ಈ ವಚನಗಳನ್ನು ಕೇಳಿದಕೂಡಲೆ ರಾಣೀವಾಸದವರೆಲ್ಲರು ದುಃಖಿತರಾದರು. ಅತ್ತೆ ಯರು ಪ್ರೇಮಪಾಶದಲ್ಲಿ ಸಿಲುಕಿ, ಮೌನವನ್ನು ತಳೆದರು. ಅವರು ತಂತಮ್ಮ ಪುತ್ರಿಯರನ್ನಾಲಂಗಿಸಿಕೊಂಡು ಅವರನ್ನು ಅವರವರ ಪತಿಗಳಿಗೆ ಅರ್ಪಿಸಿ, ಈ ಬಗೆ ಯಾಗಿ ಪ್ರಾರ್ಥಿಸಿದರು.—ರಾಣಿಯು ಸೀತೆಯನ್ನು ರಾಮಚಂದ್ರನಿಗರ್ಪಿಸಿ, ವಿನಯ ದಿಂದ ಕೈಜೋಡಿಸಿ,—"ಹೇಪುತ್ರ! ನಾನು ಬಲಿಜಾತಿಯವಳು. ನೀನು ಚತು ರನೂ, ಎಲ್ಲರ ಮನೋಗತಿಯನ್ನೂ ಬಲ್ಲವನು. ನಮ್ಮ ಕುಟುಂಬದಜನರಿಗೂ, ಪುರ ಜನರಿಗೂ, ನನಗೂ, (ಜನಕ) ರಾಜರಿಗೂ ಸೀತೆಯು ಪ್ರಾಣಾಧಿಕ ಪ್ರಿಯ ಳಾಗಿರುವಳು,—ತುಳಸೀದಾಸರು ಹೇಳುತ್ತಾರೆ—ಇವಳ ಸುಶೀಲತೆಯನ್ನೂ ಸ್ನೇಹ ವನ್ನೂ ನೋಡಿ, ಇವಳನ್ನು ನಿನ್ನ ದಾಸಿಯೆಂದು ತಿಳಿಯಬೇಕು.—

ಸೋ ॥೩೩೯॥ ಹೇ ಶ್ರೀರಾಮ! ನೀನು ಪೂರ್ಣಕಾಮನು, ಜ್ಞಾನಶಿರೋ ಮಣಿಯು, ನಿನ್ನ ಪ್ರೇಮವು ಪ್ರಿಯವಾದುದು. ನೀನು ಭಕ್ತಗುಣಗ್ರಾಹಕನು, ಅಪ ರಾಧಗಳನ್ನು ಕ್ಷಮಿಸುವವನು, ದಯಾನಿಧಿಯು!"—ಎಂದು ಹೇಳಿ ರಾಮಚಂದ್ರನ ಚರಣಗಳನ್ನು ಹಿಡಿದುಕೊಂಡಳು. ಅವಳ ವಾಣಿಯು ಪ್ರೇಮಪಂಕದಲ್ಲಿ ಸಿಲುಕಿ ದುದರಿಂದ ಅವಳು ಮತ್ತೆ ಮಾತಾಡಲಾರದೇ ಹೋದಳು. ರಾಮಚಂದ್ರನು ಅತ್ತೆಯ ಪ್ರೇಮಪೂರ್ಣವಾದ ಶ್ರೇಷ್ಠ ವಚನಗಳನ್ನು ಕೇಳಿ ಬಹು ವಿಧವಾಗಿ ಅವ ಳನ್ನು ಸಮ್ಮಾನಿಸಿದನು ರಘುನಾಥನು ಕೈ ಜೋಡಿಸಿ ಪ್ರಯಾಣಕ್ಕೆ ಅಪ್ಪಣೆಯನ್ನು ಕೇಳುತ್ತ ಬಾರಿಬಾರಿಗೂ ಪ್ರಣಾಮವನ್ನು ಮಾಡಿದನು. ಅನಂತರ ಆಶೀರ್ವಾದ ವನ್ನು ಹೊಂದಿ, ತಲೆದೂಗುತ್ತ ಭ್ರಾತೃಸಮೇತನಾಗಿ ಅಲ್ಲಿಂದ ಬೀಳ್ಕೊಂಡನು. ಆ ಸಮಯದಲ್ಲಿ ರಾಣಿಯರು ರಾಮಚಂದ್ರನ ಸುಂದರವೂ ಮಧುರವೂ ಆದ ಮೂರ್ತಿಯನ್ನು ಹೃದಯದಲ್ಲಿ ಧರಿಸಿ, ಸ್ನೇಹದಿಂದ ಶಿಥಿಲರಾದರು. ಮತ್ತೆ ಧೈರ್ಯ ತಳೆದು ಕುವರಿಯರನ್ನು ಕರೆದು ಮಾತೆಯರು ಮಾತಾಡುವರು. ಹೋಗಿ ಬನ್ನಿರಿ

ಎನ್ನುವರು, ಮತ್ತೆ ಅವರೊಂದಿಗೆ ತಾವೂ ಹೊರಡುವರು. ಅವರ ಪ್ರೀತಿಯು ಮೇರೆಯನ್ನು ಮೀರಿತು. ಸಖಿಯರನ್ನು ಕಳುಹಿಸಿ, ಮತ್ತೆ ಮತ್ತೆ ಮಾತೆಯರು ಗೋವು ಎಳೆಗರುವನ್ನು ಬಾರಿಬಾರಿಗೂ ಸೇರುವಂತೆ, ಕುವರಿಯರನ್ನು ಕೂಡುವರು.

ದೋ ॥೩೭೦॥ ಅಂತಃಪುರಕ್ಕೆ ಸೇರಿದ ನರನಾರಿಯರೆಲ್ಲರು ಸಖಿಯರ ಸಮೇತ ಪ್ರೇಮವಿವಶರಾಗಿರುವರು. ನೋಡುವವರಿಗೆ ಈಗ ಜನಕಪುರದಲ್ಲಿ ಕರುಣೆ ಮತ್ತು ವಿರಹಗಳು ನೆಲೆಗೊಂಡಿವೆಯೋ ಎಂಬಂತೆ ಕಾಣುತ್ತಿದ್ದಿತು. ಸೀತೆಯಿಂದ ಸುವರ್ಣ ಪಂಜರಗಳಲ್ಲಿ ಪೋಷಿಸಲ್ಪಡುತ್ತ, ಮಾತಾಡುವುದನ್ನು ಕಲಿತಿದ್ದ ಗಿಳಿ ಮತ್ತು ಮೈನಾ ಹಕ್ಕಿಗಳು ವ್ಯಾಕುಲದಿಂದ "ಈಗ ಸೀತೆ ಎಲ್ಲಿ?" ಎಂದು ಕೇಳುತ್ತಿರುವವು? ಇದನ್ನು ಕೇಳಿ ಯಾರ ಧೈರ್ಯವು ತಾನೆ ಕುಂದದಿರುವುದು? ಪಶುಪಕ್ಷಿಗಳೇ ಹೀಗೆ ವ್ಯಾಕುಲಗೊಂಡಿರುವೆಡೆಯಲ್ಲಿ ಇನ್ನು ಮನುಷ್ಯರ ಸ್ಥಿತಿಯು ಹೇಗಿರಬಹುದು? ಅದೇ ಸಮಯದಲ್ಲಿ ಸೋದರನಾದ ಕುಶಕೇತುವಿನ ಸಮೇತ ಜನಕರಾಯನು ಅಲ್ಲಿಗೆ ಬಂದನು ಪ್ರೇಮಪೂರ್ಣನಾದ ಅವನ ಕಣ್ಣುಗಳಲ್ಲಿ ಕಂಬನಿಯು ತುಂಬಿದ್ದಿತು ಸೀತೆಯನ್ನು ನೋಡಿದ ಕೂಡಲೆ, ಪರಮ ವೈರಾಗ್ಯಶೀಲನೆನಿಸಿದ ಜನಕನ ಧೈರ್ಯವು * ಕೂಡ ಕುಂದಿದುದು. ಅವನು ಜಾನಕಿಯನ್ನು ಅಪ್ಪಿಕೊಂಡನು. ಜ್ಞಾನವು ತನ್ನ ಮಹಾಮೇರೆಯನ್ನು † ದಾಟಿದುದು ಸುಜ್ಞರಾದ ಸಚಿವರು ಅವನನ್ನು ಸಮಾಧಾನಪಡಿಸಿದರು ಆಗವನು ತನಗೆ ಮೋಹವೆಲ್ಲಿಂದ ಮುಸುಕಿತೆಂದು ವಿಚಾರಮಾಡಲಾರಂಭಿಸಿದನು ರಾಯನು ಬಾರಿಬಾರಿಗೂ ಸೀತೆಯನ್ನು ಎದೆಗಪ್ಪಿಕೊಳ್ಳುತ್ತ ಸುಂದರವಾಗಿ ಅಲಂಕರಿಸಲ್ಪಟ್ಟ ಪಲ್ಲಕ್ಕಿಯನ್ನು ತರಿಸಿದನು.

---

* ಜನಕರಾಯನು ಸಾಕ್ಷಾತ್ ಜ್ಞಾನಿ, ಧೈರ್ಯಶೀಲನು. ಹೀಗಿರುವಾಗ ಅವನು ಧೈರ್ಯಗೆಡುವುದಕ್ಕೆ ಕಾರಣವೇನು? ಎಂದರೆ ಸೀತೆಯು ಸಾಕ್ಷಾತ್ ಭಗವತಿಯು, ಅಂಥವಳೆದುರಿನಲ್ಲಿ ಜ್ಞಾನಿಯೂ ಧೈರ್ಯಗೆಡುವುದರಲ್ಲಿ ಸಂದೇಹವೇನು? ಮಾರ್ಕಂಡೇಯ ಪುರಾಣದಲ್ಲಿ—"ಜ್ಞಾನಿನಾಮಪಿ ಚೇತಾಂಸಿ ದೇವೀ ಭಗವತೀ ಹಿ ಸಾ। ಬಲಾದಾಕೃಷ್ಯ ಮೋಹಾಯ ಮಹಾಮಾಯಾ ಪ್ರಯಚ್ಛತಿ ॥೧॥ ಎಂದರೆ ಭಗವತಿಯು ಜ್ಞಾನಿಗಳ ಚಿತ್ತವನ್ನೂ ಕೂಡ ಬಲಪೂರ್ವಕವಾಗಿ ಆಕರ್ಷಿಸಿ ಮೋಹಿತವಾಗಿ ಮಾಡಿಬಿಡುವಳು ಎಂದು ಹೇಳಿರುವುದು.

† ಭಗವದ್ಗೀತೆಯಲ್ಲಿ ವೈರಾಗ್ಯದ ಮರ್ಯಾದೆಯು ಈ ರೀತಿಯಾಗಿ ವರ್ಣಿಸಲ್ಪಟ್ಟಿರುವುದು.—"ನಪ್ರಹೃಷ್ಯೇತ್ ಪ್ರಿಯಂ ಪ್ರಾಪ್ಯ ನೋದ್ವಿಜೇತ್ ಪ್ರಾಪ್ಯ ಚಾಪ್ರಿಯಮ್॥" ಅ ೫, ಶ್ಲೋ ೨೦. ಪ್ರಿಯವಸ್ತುವು ದೊರೆತಾಗ ಪ್ರಸನ್ನವಾಗದೆ, ಅಪ್ರಿಯ ವಸ್ತುವನು ಹೊಂದಿದಾಗ ಕಳೆಗುಂದದೇ ಇರುವುದು ಇತ್ಯಾದಿ.

## ದಶರಥಮಹಾರಾಜನು ಅಯೋಧ್ಯೆಗೆ ಹಿಂತಿರುಗುವುದು.

ದೋ ॥೩೭೧॥ ಪರಿವಾರ ಪ್ರಜೆಗಳೆಲ್ಲರೂ ಪ್ರೇಮವಿವಶರಾದರು. ಜನಕ ರಾಯನು ಶುಭಲಗ್ನದಲ್ಲಿ ಸಿದ್ಧಿದಾಯಕನಾದ ಗಣೇಶನನ್ನು ಸ್ಮರಿಸಿ, ಜಾನಕಿ ಯನ್ನು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿದನು. ಮತ್ತೆ ರಾಯನು ವಧುಗಳೆಲ್ಲರಿಗೂ ಸಮಾ ಧಾನವಚನಗಳನ್ನು ಹೇಳುತ್ತ ಸ್ತ್ರೀ ಧರ್ಮವನ್ನೂ ಕುಲಾಚಾರವನ್ನೂ ಬೋಧಿ ಸಿದನು. ಅನಂತರ ಬಹುಜನ ದಾಸದಾಸಿಯರನ್ನೂ ಸೀತೆಯ ವಿಶ್ವಾಸ ಪಾತ್ರರೂ ಪವಿತ್ರರೂ ಆದ ಸೇವಕರನ್ನೂ ಅವರೊಂದಿಗೆ ಕಳುಹಿಸಿದನು. ಸೀತೆಯು ಬೀಳ್ಕೊಳ್ಳು ವಾಗ ನಗರನಿವಾಸಿಗಳೆಲ್ಲರು ವ್ಯಾಕುಲಗೊಂಡರು. (ಆಗ) ಮಂಗಳಮಯವಾದ ಶುಭ ಶಕುನಗಳುಂಟಾದವು. ಜನಕಮಹಾರಾಯನು, ಬ್ರಾಹ್ಮಣರು ಮಂತ್ರಿಗಳು ಮತ್ತು ಪುರವಾಸಿಗಳ ಸಮೇತ (ಸ್ವಲ್ಪ) ದೂರ ಅವರನ್ನು ಕಳುಹಿಸುವುದಕ್ಕೆ ಹೊರಟನು. ಸಮಯವರಿತು ವಾದ್ಯಗಳನ್ನು ಬಾರಿಸಿದರು. ಬೀಗರು ರಥ, ಆನೆ, ಕುದುರೆಗಳನ್ನು ಸಿದ್ಧಪಡಿಸಿಕೊಂಡರು. ಅತ್ತ ದಶರಥಮಹಾರಾಯನು ಬ್ರಾಹ್ಮಣ ರೆಲ್ಲರನ್ನು ಕರೆಯಿಸಿ ಅವರನ್ನು ದಾನಮಾನಗಳಿಂದ ತೃಪ್ತಿಗೊಳಿಸಿ, ಅವರ ಚರಣ ರಜವನ್ನು ಶಿರದಲ್ಲಿ ಧರಿಸಿ, ಆಶೀರ್ವಾದ ಪಡೆದು ಮನಸ್ಸಿನಲ್ಲಿ ಪ್ರಸನ್ನತೆಯಂ ತಳೆದನು. ಅವನು ಗಜಾನನನನ್ನು ಸ್ಮರಿಸಿ ಪಯಣವನ್ನು ಬಳೆಯಿಸಿದ ಕೂಡಲೇ ಮಂಗಳಮಯವಾದ ಅನೇಕ ಶುಭ ಶಕುನಗಳುಂಟಾಗಲಾರಂಭಿಸಿದವು

ದೋ ॥೩೭೨॥ ದೇವತೆಗಳು ಪ್ರಸನ್ನರಾಗಿ ಪುಷ್ಪವೃಷ್ಟಿಯನ್ನು ಸುರಿಸಿದರು. ಅಪ್ಸರೆಯರು ಹಾಡಿದರು. ಅಯೋಧ್ಯಾಧಿಪತಿಯಾದ ದಶರಥನು ತುತೂರಿ ಯನ್ನೂದಿಸುತ್ತ ಅಯೋಧ್ಯೆಗೆ ಹೊರಟನು ರಾಜನು ವಿನಯದಿಂದ ಮಹಾಜನ ರನ್ನು ಕುರಿತು "ಇನ್ನು ನಿಲ್ಲಿರಿ" ಎಂದು ಪ್ರಾರ್ಥಿಸಿದನು. ಆದರದಿಂದ ಭಿಕ್ಷುಕ ರನ್ನು ಕರೆದು ಆಭರಣ, ವಸ್ತ್ರ, ಕುದುರೆ, ಆನೆ ಮೊದಲಾದುವುಗಳನ್ನು ಅವರಿಗೆ ದಾನಮಾಡಿ ಪ್ರೇಮದಿಂದ ಅವರನ್ನು ತೃಪ್ತಿಗೊಳಿಸಿ, "ನೀವೂ ಇನ್ನು ನಿಲ್ಲಿರಿ" ಎಂದು ಹಿಂದಕ್ಕೆ ಕಳುಹಿಸಿದನು. ಜನರೆಲ್ಲರೂ "ನಿಮ್ಮ ವಂಶಾಭಿವೃದ್ಧಿ ಯಾಗಲಿ" ಎಂದು ಹರಸುತ್ತ ರಾಮಚಂದ್ರ ಮೂರ್ತಿಯನ್ನು ಹೃದಯದಲ್ಲಿ ಧರಿಸಿ, ಹಿಂದಿರುಗಿದರು. ದಶರಥನು ಜನಕರಾಯನನ್ನು ಕುರಿತು "ಇನ್ನು ನೀವು ಹಿಂದಿರುಗಿರಿ" ಎಂದು ಬಾರಿಬಾರಿಗೂ ಹೇಳುತ್ತಿರುವನು. ಆದರೆ ಪ್ರೇಮ ವಶನಾದವನು ಹಿಂದಿರುಗಲಿಲ್ಲ. ಆಗ ದಶರಥನು ರಥದಿಂದಿಳಿದು ಜನಕನ ಮುಂದೆ ನಿಂತು ಶುಭವಚನಗಳಿಂದ—"ಹೇ ರಾಜನ್! ನೀವು ಬಹುದೂರ ಬಂದಿರುವಿರಿ. ಇನ್ನು ಹಿಂದಿರುಗಿರಿ" ಎಂದು ಹೇಳುವಾಗ ಅವನ ನೇತ್ರಗಳಿಂದ ಪ್ರೇಮಪ್ರವಾಹವು ಹರಿಯಲಾರಂಭಿಸಿತು. ಆಗ ಜನಕರಾಯನು ಕರಗಳನ್ನು ಜೋಡಿಸಿ,—ಹೇ ಮಹಾರಾಜ! ನಾನು ತಮ್ಮ ವಿನಯವನ್ನು ಹೇಗೆ ಬಣ್ಣಿಸಲಿ!

ತಾವು ನನಗೆ ವಿಶೇಷ ಗೌರವವನ್ನು ಕೊಟ್ಟಿರುವಿರಿ!" ಎಂದು ಸ್ನೇಹಪೂರ್ಣವಾದ ಅಮೃತ ವಚನಗಳನ್ನಾಡಿದನು.

ದೋ ॥೩೨೩-೨೫॥ ಕೋಸಲಪತಿಯಾದ ದಶರಥನು ಸಂಬಂಧಿಗಳಾದ ಸಜ್ಜನರೆಲ್ಲರನ್ನು ಸತ್ಕರಿಸಿದನು. ಅವರ ಪರಸ್ಪರ ಮಿಲನ ಸಮಯದಲ್ಲಿ ವಿನಯವೂ ಪ್ರೇಮವು ಅವರ ಹೃದಯದಿಂದ ಹೊರಸೂಸುತ್ತಿದ್ದವು ಜನಕರಾಯನು ಮುನಿಜನರಿಗೆರಗಿ ಅವರಿಂದ ಆಶೀರ್ವಾದವನ್ನು ಪಡೆದನು. ಮತ್ತೆ ಆತನು ರೂಪ ಶೀಲ ಗುಣನಿಧಿಗಳಾದ ನಾಲ್ವರು ಅಳಿಯಂದಿರ ಬಳಿಗೆ ಬಂದು ವಿಶೇಷ ಆದರದಿಂದ, ತನ್ನ ಕರಕಮಲಗಳನ್ನು ಜೋಡಿಸಿ, ಪ್ರೇಮ ಪೂರ್ವಕವಾಗಿ ಅಮೃತ ಭರಿತವಾದ ವಚನಗಳಿಂದ ನುಡಿದನೇನೆಂದರೆ—ಹೇ ರಾಮ! ನಾನು ನಿನ್ನ ಪ್ರಶಂಸೆಯನ್ನು ಹೇಗೆ ಮಾಡಬಲ್ಲೆನು? ನೀನು ಮುನಿಜನರ ಮತ್ತು ಮಹೇಶ್ವರನ ಮನೋರೂಪವಾದ ಮಾನಸಹಂಸನು! ನಿನಗೋಸುಗ ಯೋಗಿಗಳು ಕ್ರೋಧ, ಮೋಹ, ಮಮತೆ, ಮದ–ಇವುಗಳನ್ನು ತ್ಯಜಿಸಿ ಯೋಗಸಾಧನೆಯನ್ನು ಮಾಡುವರು. ನೀನು ಸರ್ವವ್ಯಾಪಿಯಾದ ಪರಬ್ರಹ್ಮನು, ಅಗೋಚರನು, ಅವಿನಾಶಿಯು, ಚಿದಾನಂದನು * ನಿರ್ಗುಣನು (ಸತ್ವ ರಜ ತಮೋ ಗುಣರಹಿತನು), (ದಯಾದಾಕ್ಷಿಣ್ಯಾದಿ) ಗುಣನಿಧಿಯು, ಮನಸ್ಸೂ ವಾಣಿಯೂ † ನಿನ್ನನ್ನು ಅರಿಯಲಾರವು, ನೈಯಾಯಿಕರ ತರ್ಕದಿಂದಲೂ ನೀನು ಅತೀತನಾಗಿರುವೆ, ಆವನ ಮಹಿಮೆಯನ್ನು ವೇದಗಳು " ನೇತಿ ನೇತಿ (ಅದಲ್ಲ! ಅದಲ್ಲ!) " ಎಂದು ಪ್ರತಿಪಾದಿಸುವವೋ ಆವನು (ಭೂತಭವಿಷ್ಯದ್ವರ್ತಮಾನ) ತ್ರಿಕಾಲಗಳಲ್ಲಿಯೂ ಏಕರೂಪದಿಂದಿರುವನೋ, ಆ ಸಮಸ್ತಸುಖಮೂಲನಾದ ಪರಮಾತ್ಮನು ನನಗೆ ಪ್ರತ್ಯಕ್ಷನಾದನು. (ಎಂದರೆ ನನಗೆ ದರ್ಶನವಿತ್ತನು) ದೈವಾನುಕೂಲವುಂಟಾದಾಗ ಜೀವಿಗಳಿಗೆ ಜಗತ್ತಿನ ಎಲ್ಲ ಲಾಭಗಳೂ ಪ್ರಾಪ್ತವಾಗುವವು. ನನ್ನನ್ನು ನಿನ್ನ ಭಕ್ತನಾಗಿ ಸ್ವೀಕರಿಸಿ ನನಗೆ ವಿಶೇಷ ಗೌರವನ್ನು ಕೊಟ್ಟಿರುವೆ. ಇದನ್ನು ಹತ್ತುಸಾವಿರ ಸರಸ್ವತಿಯರೂ ಶೇಷರೂ ಕೋಟ್ಯಂತರ ಕಲ್ಪಗಳವರೆಗೆ ಉಲ್ಲೇಖಿಸುತ್ತಿರುವರು. ಆದಾಗ್ಗೂ, ಹೇ ರಘುನಾಥ! ಕೇಳು, ನಿನ್ನ ಗುಣಗಳನ್ನು ಸಮಗ್ರವಾಗಿ ವರ್ಣಿಸುವ ಶಕ್ತಿಯು ನನ್ನ ಭಾಗ್ಯದಲ್ಲಿಲ್ಲ ಆದರೆ ನೀನು ಸುಂದರವಾದ ಅಲ್ಪ ಪ್ರೇಮದಿಂದಲೆ ತೃಪ್ತನಾಗುವೆ ಎಂಬ ಭರವಸೆಯಮೇಲೆ ನಾನು ಕೆಲವು ಮಾತುಗಳನ್ನಾಡುತ್ತಿರುವೆನು. ನನ್ನ ಮನಸ್ಸು ಮರವೆಯಲ್ಲಿಯೂ ನಿನ್ನ ಚರಣಗಳನ್ನು ಬಿಡದಿರುವಂತಾಗಲಿ ಎಂದು ನಾನು ಕೈಜೋಡಿಸಿ ಪ್ರಾರ್ಥಿಸುವೆನು."—ಸ್ನೇಹ

---

* ಇಲ್ಲಿ ಚಿತ್ ಮತ್ತು ಆನಂದ ಎಂಬೆರಡು ಪದಗಳಿರುವವು. ಚಿತ್ ಎಂದರೆ ಘಟಪಟಾದಿ ಪದಾರ್ಥಗಳನ್ನು ನೋಡಿ, ತಿಳಿದು. ಅನುಭವ ಮಾಡುವ ಜ್ಞಾನಸ್ವರೂಪ, ಆನಂದವೆಂದರೆ ಸುಖಸ್ವರೂಪ ಎಂದರೆ ದುಃಖದಿಂದ ನಷ್ಟಗೊಳ್ಳದ ಬ್ರಹ್ಮನು.

† ತೈತ್ತರೀಯೋಪನಿಷದಿ–"ಯತೋ ವಾಚೋ ನಿವರ್ತನ್ತೆ ಅಪ್ರಾಪ್ಯ ಮನಸಾಸಹ॰

ರೂಪವಾದ ಜಲದಿಂದ ಸಿಂಚಿತವಾದೀ (ಜನಕನ) ವಚನಗಳನ್ನು ಕೇಳಿ ಪೂರ್ಣ ಕಾಮನಾದ ರಾಮಚಂದ್ರನು ಸಂತುಷ್ಟನಾದನು. ಅವನು ಮಾವನನ್ನು ತನ್ನ ಪಿತ, ವಿಶ್ವಾಮಿತ್ರ ಮತ್ತು ವಶಿಷ್ಠರ ಸಮಾನನೆಂದು ಭಾವಿಸಿ, ಬಹು ವಿನಯ ದಿಂದ ಸತ್ಕರಿಸಿದನು. ಅನಂತರ ಜನಕರಾಯನು ಭರತ ಲಕ್ಷ್ಮಣ ಶತ್ರುಘ್ನ ರೊಂದಿಗೆ ಮಾತಾಡಿ ಪ್ರೇಮದಿಂದ ಅವರನ್ನು ಆಶೀರ್ವದಿಸಿದನು ಅವರು ಪರಸ್ಪರ ಪ್ರೇಮವಿವಶರಾಗಿ ಬಾರಿಬಾರಿಗೂ ತಲೆ ಬಾಗಿಸಿ ಮಾವನಿಗೆ ಪ್ರಣಾಮಗೈದರು. ರಾಮಚಂದ್ರನು ಬಾರಿಬಾರಿಗೂ ವಿಶೇಷ ವಿನಯದಿಂದ ಮಾವನನ್ನು ಪ್ರಶಂಸಿ ಸುತ್ತ, ಸೋದರರೊಂದಿಗೆ ಹೊರಟನು. ಆಗ ಜನಕನು ಹೋಗಿ ವಿಶ್ವಾಮಿತ್ರನ ಅಡಿಗಳಿಗೆರಗಿ, ಅವನ ಚರಣರಜವನ್ನು ಕಣ್ಣುಗಳಿಗೊತ್ತಿ, ಶಿರದಲ್ಲಿ ಧರಿಸಿ,—ಹೇ ಶ್ರೇಷ್ಠ ಮುನೀಶ್ವರ! ಕೇಳಿರಿ! ಇನ್ನು ತಮ್ಮ ದರ್ಶನವು ನನಗೆ ದುರ್ಲಭವಾಗ ದೆಂದು ನನಗೆ ಭರವಸೆಯುಂಟಾಗಿದೆ. ಯಾವ ಸುಖವನ್ನೂ ಕೀರ್ತಿಯನ್ನೂ ಇಂದ್ರಾದಿಲೋಕಪಾಲಕರು ಬಯಸಿ, (ಅವುಗಳನ್ನು ಹೊಂದಲಾರದೆ ಕೊನೆಗೆ) ತಮ್ಮ ಮನೋರಥಗಳನ್ನು ಸಂಕೋಚಗೊಳಿಸುವರೊ,—ಹೇ ಸ್ವಾಮಿನ್!—ಆ ಸುಖ ಮತ್ತು ಕೀರ್ತಿಗಳು ನನಗೆ ಸುಲಭಸಾಧ್ಯವಾದವು. ಏಕೆಂದರೆ ಸಿದ್ಧಿಗಳೆಲ್ಲವೂ ತಮ್ಮ ಹಿಂದೆ ಸಂಚರಿಸುವವು," ಎಂದನು.—ಈ ಬಗೆಯಾಗಿ ಪ್ರಾರ್ಥಿಸಿ ಆಶೀ ರ್ವಾದವನ್ನು ಪಡೆದು ಜನಕರಾಯನು ಹಿಂದಿರುಗಿದನು.

ದೋ ॥೩೭೬॥ ಮಾರ್ಗ ಮಧ್ಯದಲ್ಲಿ ಅಲ್ಲಲ್ಲಿ ತಂಗುತ್ತ, ಜನರಿಗೆ ಸುಖ ವನ್ನುಂಟುಮಾಡುತ್ತ, ಮದುವೆಗೆ ಹೋಗಿದ್ದವರೆಲ್ಲರೂ ಶುಭಸಮಯದಲ್ಲಿ ಅಯೋ ಧ್ಯೆಯ ಸಮೀಪಕ್ಕೆ ಬಂದು ಸೇರಿದ ಕೂಡಲೆ (ಸೇವಕರು) ತುತೂರಿಯನ್ನೂದಿ, ಡೋಲುಗಳನ್ನೂ ನಗಾರಿಗಳನ್ನೂ ಬಾರಿಸಿದರು ಶಂಖವನ್ನೂದಿದರು. ಆನೆಗಳು ಬೃಂಹಿತಧ್ವನಿಯನ್ನು ಮಾಡುತ್ತ, ಅಶ್ವಗಳು ಹೇಷಾರವವನ್ನು ಮಾಡುತ್ತ ನಲಿ ದಾಡಿದವು. ವಾದ್ಯದವರು ಮಧುರವಾದ ಸ್ವರದಿಂದ ವಾಲಗವನ್ನೂದಿದರು. ಮದುವೆ ಮನೆಯವರು ಹಿಂದಿರುಗಿ ಬಂದರೆಂಬ ಸುದ್ದಿಯನ್ನು ಕೇಳಿ ಹರುಷದಿಂದ ಜನರು ಪುಳಕಿತಗಾತ್ರರಾದರು. ಎಲ್ಲರೂ ತಂತಮ್ಮ ಸುಂದರವಾದ ಮನೆಗಳನ್ನೂ ಅಂಗಡಿಗಳನ್ನೂ ಮಾರ್ಗಗಳನ್ನೂ ಚೌಕಗಳನೂ ಪುರದ್ವಾರಗಳನ್ನೂ ಅಲಂಕರಿ ಸಿದರು. ಬೀದಿಗಳಲ್ಲಿ ಅರಗಜವನ್ನು ಚಲ್ಲಿದರು, ಅಲ್ಲಲ್ಲಿ ಸುಂದರವಾದ ಚೌಕ ಮಂಟಪಗಳನ್ನು ಕಟ್ಟಿದರು ತಳಿರುತೋರಣಗಳಿಂದಲೂ ಧ್ವಜಪತಾಕೆ ಗಳಿಂದಲೂ ಮಂಟಪಗಳಿಂದಲೂ ಅಲಂಕರಿಸಲ್ಪಟ್ಟ ಆ ಅಂಗಡಿಗಳನ್ನೂ ವರ್ಣಿಸು ವುದು ಅಸಾಧ್ಯವು ಅಲ್ಲಿ ಅಡಿಕೆ, ಬಾಳೆ, ಮಾವು, ಕದಂಬ, ಬಕುಲ, ತಮಾಲ ವೃಕ್ಷಗಳನ್ನು (ಕಡಿದು) ತಂದು ನಿಲ್ಲಿಸಿದ್ದುದನ್ನು ನೋಡಿದರೆ, ಅವು ಫಲಭಾರದಿಂದ ಪೃಥ್ವಿಯಮೇಲೆ ನಿಂತಿರುವವೊ ಎಂಬಂತೆ ಕಾಣುತ್ತಿದ್ದವು ಮತ್ತೆ ಅವುಗಳ ಸುತ್ತಲೂ ಕಾರೇಗಾರರು ಮಣಿಮಯವಾದ ಕಟ್ಟೆಗಳನ್ನು ಕಟ್ಟಿದ್ದರು.

ದೋ ॥೩೭೭-೭೯॥ ಮನೆ ಮನೆಯಲ್ಲಿಯೂ ನಾನಾವಿಧವಾದ ಮಂಗಳ ಕಲಶಗಳನ್ನಿಟ್ಟು ಅಲಂಕರಿಸಿದರು. ರಘುವರನ ರಾಜಧಾನಿಯಾದ ಅಯೋಧ್ಯೆಯನ್ನು ನೋಡಿ ಬ್ರಹ್ಮಾದಿದೇವತೆಗಳೂ ಪ್ರಶಂಸಿಸುತ್ತಿರುವರು. ಆ ಸಮಯದಲ್ಲಿ ಅರಮನೆಯ ಅಲಂಕಾರವನ್ನು ನೋಡಿ ಕಾಮದೇವನ ಮನಸ್ಸೂ ಲೋಭಪೂರ್ಣವಾಗುವಂತಿದ್ದಿತು. ಮಂಗಳಮಯವಾದ ಶಕುನಗಳು, ಸೌಂದರ್ಯ, ಋದ್ಧಿ ಸಿದ್ಧಿ ಸುಖಸಂಪದಗಳೆಲ್ಲವು ಈ ಉತ್ಸವಕ್ಕಾಗಿ ಸಹಜಸ್ವಭಾವದಿಂದ ಶರೀರಧಾರಣ ಮಾಡಿ ದಶರಥರಾಯನ ರಾಜಭವನಕ್ಕೆ ಬಂದಿರುವಂತಿದ್ದವು. ಸೀತಾರಾಮರ ಸಂದರ್ಶನ ಲಾಲಸೆಯು ಯಾರಿಗೆ ತಾನೆ ಇರಲಾರದು? ತಮ್ಮ ಸೌಂದರ್ಯದಿಂದ ರತಿಯ ಕಾಂತಿಯನ್ನು ನಿಂದಿಸುವಂತಿರುವ ಸುವಾಸಿನಿಯರು ಗುಂಪು ಗುಂಪಾಗಿ ಹೊರಟರು ಎಲ್ಲರೂ ಮಂಗಳ ವೇಷವನ್ನು ಧರಿಸಿ, ಆರತಿಯನ್ನು ಬೆಳಗುತ್ತ ಬಹುಜನ ಸರಸ್ವತಿಯರು ರೂಪವನ್ನು ಬದಲಾಯಿಸಿ ಗಾನಮಾಡುತ್ತಿರುವರೊ ಎಂಬಂತೆ ಹಾಡುತ್ತಿರುವರು. ಅರಮನೆಯಲ್ಲಿ ಇರುವ ಉತ್ಸವದ ಕೋಲಾಹಲವು ವರ್ಣನಾತೀತವಾದುದು. ಕೌಸಲ್ಯಾದಿಯಾಗಿ ರಾಮಚಂದ್ರನ ಮಾತೆಯರು ಪ್ರೇಮಪೂರ್ಣರಾಗಿ ಮೆಯ್ಮರೆತಿದ್ದರು. ಅವರು ಗಣೇಶನನ್ನೂ ಶಿವನನ್ನೂ ಪೂಜಿಸಿ ಬ್ರಾಹ್ಮಣರಿಗೆ ವಿಪುಲವಾಗಿ ದಾನಗಳನ್ನು ಕೊಟ್ಟರು. ಮತ್ತೆ ಅವರ ಮನಸ್ಸಿನಲ್ಲಿ, ದರಿದ್ರನಾದವನಿಗೆ ಚತುರ್ವಿಧ ಪುರುಷಾರ್ಥಗಳು (ಎಂದರೆ ನಾಲ್ವರು ವಧುಗಳ ರೂಪದಿಂದಿದ್ದ ಧರ್ಮ ಅರ್ಥ ಕಾಮ ಮೋಕ್ಷಗಳು) ದೊರೆತಿರುವವೊ ಎಂಬಂತೆ ಪ್ರಸನ್ನತೆಯು ಕಂಡಿತು. ಮಾತೆಯರೆಲ್ಲರು ಆಮೋದ ಪ್ರಮೋದ ವಿವಶರಾಗಿ, ಅವರು ಮುಂದಡಿಯಿಡಲಾರದಂತೆ ಅವರ ಶರೀರಗಳು ಶಿಥಿಲವಾದವು. ರಾಮದರ್ಶನಕ್ಕಾಗಿ ಅವರು ವಿಶೇಷ ಆತುರರಾಗಿ ಆರತಿಯ ಸಾಮಾನುಗಳನ್ನೆಲ್ಲ ಸಜ್ಜುಗೊಳಿಸಿದರು. ವಿವಿಧ ಅಲಂಕಾರಗಳು ಸಿದ್ಧವಾದವು, ವಾದ್ಯಗಳು ಮೊಳಗಿದವು. ಸುಮಿತ್ರಾದೇವಿಯು ಪ್ರಸನ್ನತೆಯಿಂದ ಅರಿಸಿನ, ಧೂಪ, ಮೊಸರು, ಮಾವಿನೆಲೆ, ಹೂಗಳು, ಎಲೆ ಅಡಿಕೆ, ಅರಳು, ಅಕ್ಷತೆ, ಅಂಕುರ, ಗೋರೋಚನ, ಕೋಮಲ ಮಂಜರಿ ಯುಕ್ತವಾದ ತುಳಸೀ ಮೊದಲಾದ ಮಂಗಳ ವಸ್ತುಗಳನ್ನು ಅಣಿಮಾಡಿಟ್ಟಳು. ಸುಂದರವಾದ ಸುವರ್ಣ ಕಲಶಗಳು, ಕಾಮದೇವನು ತನ್ನ ಶರೀರವನ್ನು ಸಂಕುಚೀಕರಿಸಿ ಇವುಗಳಲ್ಲಿ ತನ್ನ ವಾಸಸ್ಥಾನವನ್ನು ಮಾಡಿಕೊಂಡಿರುವನೊ ಎಂಬಂತೆ ವಿರಾಜಿಸಿದವು. ಅಲ್ಲಿರುವ ಶಕುನ ವಸ್ತುಗಳೂ ಸುಗಂಧ ವಸ್ತುಗಳೂ ಅಗಣಿತವಾಗಿವೆ. ರಾಣಿಯರೆಲ್ಲರೂ ಮಂಗಳಕರವಾದ ಅಲಂಕಾರಗಳನ್ನೂ ವಿವಿಧ ಆರತಿಗಳನ್ನೂ ಸಜ್ಜುಗೊಳಿಸಿರುವರು. ಎಲ್ಲರೂ ಮುದಿತಮನರಾಗಿ ಮಂಗಳಗೀತೆಗಳನ್ನು ಹಾಡಲಾರಂಭಿಸಿದರು. ಮಂಗಳ ದ್ರವ್ಯಗಳನ್ನು ಕನಕ ಪಾತ್ರೆಗಳಲ್ಲಿ ತುಂಬಿಕೊಂಡು ಕರಕಮಲಗಳಲ್ಲಿ ಹಿಡಿದು, ಪುಳಕಿತಗಾತ್ರೆಯರಾದ ಮಾತೆಯರು ಮುದಿತಮನರಾಗಿ ಆರತಿಯನ್ನು ಬೆಳಗಲು ಹೊರಟರು. ಆಗ

ಸೂರ್ಯನ ತಾಪದಿಂದ ತಪ್ತವಾಗಿದ್ದ ಆಕಾಶವು ಶ್ರಾವಣ ಮಾಸದ ಕಾರ್ಮೋಡಗಳಿಂದ ಕವಿದಿರುವಂತೆ ಕಪ್ಪಾದುದು. ದೇವತೆಗಳು ಕಲ್ಪತರುವಿನ ಹೂಮಾಲೆಗಳನ್ನೆಸೆದರು. ಅವುಗಳು ಚಿತ್ತಾಕರ್ಷಕವಾದ ಕಮಲ ಪಙ್ಕ್ತಿಗಳಂತೆ ಶೋಭಿಸಿದವು. ಅಲ್ಲಲ್ಲಿ ಕಟ್ಟಿದ್ದ ಮಣಿಮಯ ತೋರಣಗಳು ಇಂದ್ರ ಧನುಸ್ಸನ್ನು ಸರಿಪಡಿಸಿ ಕಟ್ಟಿದ್ದಂತೆ ಭಾಸವಾಗುತ್ತಿದ್ದಿತು. ಮದುವಣಿಗರನ್ನು ನೋಡಲು ಮಾಳಿಗೆಗಳ ಮೇಲೆ ಕುಳಿತಿದ್ದ ಸ್ತ್ರೀಯರು ಒಂದು ಬಾರಿ ತೋರಿಕೊಳ್ಳುತ್ತಲೂ ಮತ್ತೊಂದು ಬಾರಿ ಅದೃಶ್ಯರಾಗುತ್ತಲೂ ಇರುವುದನ್ನು ನೋಡಿದರೆ ಸುಂದರವೂ ಚಪಲವೂ ಆದ ಮಿಂಚುಗಳು ಮೋಡಮಧ್ಯದಲ್ಲಿ ಹೊಳೆಯುತ್ತಿರುವಂತೆ ಕಾಣುತ್ತಿದೆ! ನಗಾರಿಗಳ ಶಬ್ದವು ಮೇಘ ಗರ್ಜನೆಯಂತೆ ಮೊಳಗುತ್ತಿದೆ! ಭಿಕ್ಷುಕರ ಕೋಲಾಹಲವು, ಚಾತಕಪಕ್ಷಿಯೂ ಕಪ್ಪೆ ಮತ್ತು ನವಿಲುಗಳೂ * ಕೂಗುತ್ತಿರುವಂತೆ ಭಾಸವಾಗುತ್ತಿದೆ! ಮೇಘದಿಂದ ನಿರ್ಮಲ ಜಲವು ವರ್ಷಿಸುತ್ತಿದೆಯೋ ಎಂಬಂತೆ ದೇವತೆಗಳು ಸುಗಂಧಿತ ದ್ರವ್ಯವನ್ನು ಸುರಿಸುತ್ತಿರುವರು. ಶ್ರಾವಣ ಮಾಸದಲ್ಲಿ ಪೈರುಗಳು ಪಚ್ಚೆತೆನೆಗಳಿಂದ ಎಲ್ಲೆಲ್ಲಿಯೂ ಹಸುರಾಗಿ ಕಾಣಿಸುತ್ತಿರುವಂತೆ, ಅಯೋಧ್ಯಾನಗರದ ಸ್ತ್ರೀಪುರುಷರೆಲ್ಲರೂ ಪ್ರಸನ್ನರಾಗಿರುವರು. ಪುರಪ್ರವೇಶಕ್ಕೆ ರಾಜ ಗುರುವಾದ ವಸಿಷ್ಠನು ಸುಮುಹೂರ್ತವನ್ನು ನೋಡಿ ಅಪ್ಪಣೆಯನ್ನು ಕೊಡಲು ದಶರಥ ಮಹಾರಾಯನು ಪ್ರಸನ್ನಭಾವದಿಂದ ಪರಿವಾರ ಸಮೇತನಾಗಿ ಗಣೇಶನ ಮತ್ತು ಶಂಕರ ಪಾರ್ವತಿಯರ 'ನಾಮಸ್ಮರಣೆಯನ್ನು ಮಾಡಿದನು. ಆಗ ರಘುವಂಶ ಭೂಷಣನಾದ ರಾಮಚಂದ್ರನು ಪುರಪ್ರವೇಶ ಮಾಡಿದನು.

ದೋ ॥೩೪೦॥ ಪುರಪ್ರವೇಶಮಾಡುವಾಗ ಶುಭಶಕುನಗಳಾದವು. ದೇವತೆಗಳು ನಗಾರಿಯನ್ನು ಬಾರಿಸಿ ಪುಷ್ಪವೃಷ್ಟಿಗೈದರು. ಅಪ್ಸರೆಯರು ಮಂಗಳಗೀತೆಗಳನ್ನು ಹಾಡುತ್ತ ನರ್ತಿಸಿದರು. ವಂದಿ ಮಾಗಧ ಸೂತ ನಟರಾದಿಗಳು ತ್ರಿಲೋಕ ಪ್ರಕಾಶಕನಾದ ರಾಮಚಂದ್ರನ ಕೀರ್ತಿಗಾನವನ್ನು ಹೇಳಲಾರಂಭಿಸಿದರು. ಶುಭ ಮಂಗಳಮಯವಾದ ವೇದಘೋಷವೂ ಜಯಧ್ವನಿಯೂ ದಶದಿಕ್ಕುಗಳನ್ನು ಆಕ್ರಮಿಸಿತು. ಅನೇಕ ವಾದ್ಯಗಳು ಮೊಳಗಿದವು ಆಕಾಶದಲ್ಲಿ ದೇವತೆಗಳೂ ನಗರದಲ್ಲಿ ಪ್ರಜೆಗಳೂ ಪ್ರೇಮ ಮಗ್ನರಾದರು. ಮದುವೆ ಮನೆಯವರ ಅಲಂಕಾರವು ವರ್ಣನಾತೀತವಾಗಿರುವುದು, ಅವರ ಆನಂದವಂತೂ ಹೃದಯದಲ್ಲಿ ಹಿಡಿಸ

* ಮಳೆಗಾಲದಲ್ಲಿ ಚಾತಕ ಪಕ್ಷಿಯು ಯಾವಾಗಲೂ ಮೋಡವನ್ನೇ ನಿರೀಕ್ಷಿಸುತ್ತಿರುವಂತೆ ಭಿಕ್ಷುಕರು ಘನಶ್ಯಾಮನಾದ ರಾಮಚಂದ್ರನ ದರ್ಶನಾಭಿಲಾಷಿಗಳಾಗಿದ್ದರು ಚತುರ್ಮಾಸದಲ್ಲಿ ಎಲ್ಲೆಲ್ಲಿಯೂ ಕಪ್ಪೆಗಳ ಕೂಗೇ ಕೇಳಿಸುತ್ತಿರುವಂತೆ ಈಗ ಭಿಕ್ಷುಕರ ಜಯಧ್ವನಿಯು ಕೇಳಿಸುತ್ತಿದ್ದುದು. ನವಿಲು ಮಳೆಗಾಲದಲ್ಲಿ ಕುಣಿಯುವಂತೆ ಯಾಚಕರೂ ಈಗ ಪ್ರಸನ್ನರಾಗಿ ಭಿಕ್ಷೆಗಾಗಿ ಓಡುತ್ತಿದ್ದರು—ಅದುವೆ ಅವರ ನೃತ್ಯ.

ಲಾರದಂತಿರುವುದು ಪುರವಾಸಿಗಳು ರಾಜನಿಗೆ ಪ್ರಣಾಮಗೈದು ರಾಮಚಂದ್ರನ ದರ್ಶನದಿಂದ ಸುಖಿಗಳಾಗಿ ರತ್ನಗಳನ್ನೂ ವಸ್ತ್ರಗಳನ್ನೂ ಅವನ ಮೇಲೆ ಇಳಿ ತೆಗೆ ದೊಗೆದರು. ಆಗ ಅವರ ನೇತ್ರಗಳಲ್ಲಿ ಪ್ರೇಮಾಶ್ರುವು ತುಂಬಿ, ಅವರು ಪುಳಕಿತ ಗಾತ್ರರಾದರು. ಮುದಿತರಾದ ಪುರನಾರಿಯರು ನಾಲ್ವರು ರಾಜಕುಮಾರರಿಗೂ ಆರತಿಗಳನ್ನು ಬೆಳಗುತ್ತಿರುವಾಗ ಅವರ ವದನಾರವಿಂದವು ವಿಕಾಸಿತವಾದುದು. ಅವರು ಪಲ್ಲಕ್ಕಿಯ ಪರದೆಗಳನ್ನು ಎತ್ತಿ ನಾಲ್ವರು ವಧುಗಳನ್ನೂ ನೋಡಿ ನೋಡಿ ಸುಖಿಗಳಾದರು

ದೋ ॥೩೪೯॥ ಈ ರೀತಿಯಾಗಿ ರಾಜಕುವರರು ಎಲ್ಲರಿಗೂ ಸುಖವನ್ನುಂಟು ಮಾಡುತ್ತ ರಾಜದ್ವಾರದ ಬಳಿಗೆ ಬಂದರು. ಆಗ ಮಾತೆಯರು ವಿಶೇಷ ಹರ್ಷ ದಿಂದ ಸೋದರ ಸಮೇತನಾದ ರಾಜಕುಮಾರ (ರಾಮಚಂದ್ರ) ನಿಗೆ ಆರತಿಯನ್ನೆ ತ್ತಿದರು. ಅವರು ಬಾರಿ ಬಾರಿಗೂ ಆರತಿ ಬೆಳಗುವುದನ್ನು ನೋಡಿದರೆ ಅವರ ಪ್ರೇಮಾನುರಾಗವನ್ನಾವನು ಬಣ್ಣಿಸಿ ಪಾರಾಗಬಲ್ಲನೆಂದು ತೋರುತ್ತಿದೆ. ಅವರು ಆರತಿಯನ್ನು ಬೆಳಗಿ ಹಲವು ಬಗೆಯ ರತ್ನಗಳನ್ನೂ ಆಭರಣಗಳನ್ನೂ ವಸ್ತ್ರಗಳನ್ನೂ ಇಳಿತೆಗೆದೊಗೆಯಲಾರಂಭಿಸಿದರು. ಸೊಸೆಯರ ಸಮೇತ ನಾಲ್ವರು ಪುತ್ರರನ್ನೂ ನೋಡಿ ಮಾತೆಯರು ಪರಮಾನಂದ ಮಗ್ನರಾದರು ರಾಮಚಂದ್ರನ ಮತ್ತು ಸೀತೆಯ ಮುಖಗಳನ್ನು ನೋಡಿ ಅವರು ಪ್ರಸನ್ನರಾಗಿ, ಜಗತ್ತಿನಲ್ಲಿ ನಾವು ಇದು ವರೆಗೆ ಜೀವಿಸಿದುದು ಸಾರ್ಥಕವಾಯಿತೆಂದುಕೊಂಡರು. ಸಖಿಯರು ಸೀತೆಯ ಮುಖವನ್ನು ನೋಡಿ ತಂತಮ್ಮ ಪುಣ್ಯ ಪ್ರಶಂಸೆಯ ಗೀತೆಯನ್ನು ಹಾಡುತ್ತಿರುವರು. ಕ್ಷಣ ಕ್ಷಣದಲ್ಲಿಯೂ ದೇವತೆಗಳು ಪುಷ್ಪಗಳನ್ನು ವರ್ಷಿಸುತ್ತ ನೃತ್ಯಗೀತೆಗಳಿಂದ ತಮ್ಮ ಸೇವೆಯನ್ನು ಪ್ರಕಟಗೊಳಿಸುತ್ತಿರುವರು ಮನೋಹರವಾದ ಆ ನಾಲ್ಕು ಜೋಡಿಗಳನ್ನು ನೋಡಿ ಶಾರದಾದೇವಿಯು ಯಾವ ಉಪಮೆಯನ್ನೂ ಕೊಡಲಾ ರದೆ ಆ ರೂಪಾನುರಾಗಮಗ್ನಳಾಗಿ ನೆಟ್ಟನೋಟದಿಂದ ಅವರನ್ನೇ ನೋಡುತ್ತಿದ್ದಳು.

ದೋ ॥೩೫೦॥ ಸ್ತ್ರೀಯರೆಲ್ಲರು ಶಾಸ್ತ್ರೋಕ್ತ ವಿಧಿಗಳನ್ನೂ ಕುಲಾಚಾರ ಗಳನ್ನು ನೆರವೇರಿಸಿ, ಪಾವಡೆಗಳನ್ನು ಹಾಸುತ್ತ ಅರ್ಘ್ಯಪ್ರದಾನಮಾಡುತ್ತ ಸೊಸೆ ಯರ ಸಮೇತ ನಾಲ್ವರು ಕುವರರಿಗೂ ಆರತಿಯನ್ನು ಬೆಳಗಿ, ಅವರನ್ನು ಅರ ಮನೆಯೊಳಗೆ ಕರೆದುಕೊಂಡು ಹೋದರು. ಅಲ್ಲಿ ಸಹಜಸುಂದರವಾದ ನಾಲ್ಕು ಸಿಂಹಾಸನಗಳಿದ್ದವು. ಅವುಗಳು ಸ್ವತಃ ಕಾಮದೇವನಿಂದಲೆ ನಿರ್ಮಿಸಲ್ಪಟ್ಟಿರು ವವೊ ಎಂಬಂತೆ ವಿರಾಜಿಸುತ್ತಿದ್ದವು. ಅವುಗಳ ಮೇಲೆ ರಾಜಕುವರರನ್ನೂ ರಾಜ ಕುಮಾರಿಯರನ್ನೂ ಕುಳ್ಳಿರಿಸಿ ಅವರು ಆದರದಿಂದ ಅವರ ಪವಿತ್ರ ಚರಣಗಳನ್ನು ತೊಳೆದರು. ವೇದೋಕ್ತ ವಿಧಿಯಿಂದ ಧೂಪ ದೀಪ ನೈವೇದ್ಯಾದಿಗಳನ್ನು ಸಮ ರ್ಪಿಸಿ ಮಂಗಳನಿಧಿಸ್ವರೂಪರಾದ ವಧೂವರರನ್ನು ಸ್ತ್ರೀಯರು ಪೂಜಿಸಿ, ಅವರಿಗೆ

ಆರತಿಯನ್ನು ಬೆಳಗಿದರು. ಮತ್ತೆ ಚಾಮರಗಳನ್ನೂ ಬೀಸಣಿಕೆಗಳನ್ನು ಬೀಸಿದರು. ಮತ್ತೆ ಅನೇಕ ಬಗೆಯ ವಸ್ತುಗಳನ್ನು ದೃಷ್ಟಿದೋಷ ನಿವಾರಣೆಗಾಗಿ ಇಳಿತೆಗೆಯುತ್ತಿರುವರು. ಮಾತೆಯರೆಲ್ಲರೂ ಆನಂದ ಮಗ್ನರಾಗಿ ಶೋಭಿಸುತ್ತಿರುವರು. ಯೋಗಿಯಾದವನೊಬ್ಬನಿಗೆ ಪರಮ ತತ್ವವು ಗೋಚರವಾದಂತೆಯೂ, ಸದಾ ರೋಗಿಯಾದವನಿಗೆ ಅಮೃತವು ಲಭಿಸಿದಂತೆಯೂ, ಆಜನ್ಮದರಿದ್ರನಿಗೆ ಸ್ಪರ್ಶಮಣಿಯು ದೊರೆತಂತೆಯೂ, ಕುರುಡನಿಗೆ ಕಣ್ಣು ಸಿಕ್ಕಿರುವಂತೆಯೂ, ಮೂಕನ ಮುಖದಲ್ಲಿ ಸರಸ್ವತಿಯು ಕುಳಿತಿರುವಂತೆಯೂ, ಸಮರ ಶೂರನಿಗೆ ವಿಜಯ ಪ್ರಾಪ್ತಿಯಾದಂತೆಯೂ ಅವರಾ ಆನಂದವು ಉಕ್ಕುತ್ತಿರುವುದು.

ದೋ ॥೩೫೩–೩೫೪॥ ರಘುಕುಲಚಂದ್ರನು ಸೋದರರ ಸಮೇತ ವಿವಾಹಿತನಾಗಿ ಬಂದಾಗ ಎಲ್ಲರಿಗೂ ಉಂಟಾಗುತ್ತಿರುವ ಸುಖಕ್ಕಿಂತಲೂ ನೂರುಕೋಟಿ ಪಾಲು ಅಧಿಕವಾದ ಆನಂದವು ಮಾತೆಯರಿಗುಂಟಾಯಿತು ಮಾತೆಯರು ಲೋಕಾಚಾರಗಳನ್ನು ನೆರವೇರಿಸುತ್ತಿರುವಾಗ ವಧೂವರರು ಸಂಕೋಚಪಡುತ್ತಿರುವರು. ಶ್ರೀರಾಮಚಂದ್ರನು ಅವರಾ ಆನಂದವನ್ನೂ ವಿನೋದವನ್ನೂ ನೋಡುತ್ತ ಮನಸ್ಸಿನಲ್ಲಿಯೇ ನಗುತ್ತಿರುವನು. ಮತ್ತೆ ತಮ್ಮ ಇಚ್ಛೆಗಳನ್ನು ನೆರವೇರಿಸಿದುದಕ್ಕೋಸ್ಕರ ಅವರು ವಿಧಿಪೂರ್ವಕವಾಗಿ ದೇವತೆಗಳನ್ನೂ ಪಿತೃಗಳನ್ನೂ ಪೂಜಿಸಿ, ನಮಸ್ಕರಿಸಿ, "ಭ್ರಾತೃ ಸಮೇತನಾಗಿರುವ ರಾಮಚಂದ್ರನಿಗೆ ಕಲ್ಯಾಣ ವಾಗಲಿ" ಎಂಬ ವರವನ್ನು ಬೇಡುತ್ತಿರುವರು. ಅಗೋಚರರಾದ ದೇವತೆಗಳು ಆಶೀರ್ವಾದಗಳನ್ನೀಯುತ್ತಿರುವರು. ಮಾತೆಯರು ಸೆರಗೊಡ್ಡಿ ಪ್ರಸನ್ನಭಾವದಿಂದ ಆಶೀರ್ವಾದಗಳನ್ನು ಸ್ವೀಕರಿಸುತ್ತಿರುವರು. ಮತ್ತೆ ದಶರಥ ಮಹಾರಾಯನು ಮದುವೆಗೆ ಬಂದಿದ್ದವರೆಲ್ಲರನ್ನು ಕರೆಯಿಸಿ ಅವರಿಗೆ ವಾಹನಗಳನ್ನೂ ವಸ್ತ್ರಗಳನ್ನೂ ರತ್ನ ಭೂಷಣಾದಿಗಳನ್ನೂ ಕೊಟ್ಟನು. ಅವರು ಮಹಾರಾಜನ ಅಣತಿಯನ್ನು ಪಡೆದು ಶ್ರೀರಾಮಚಂದ್ರಮೂರ್ತಿಯನ್ನು ಹೃದಯದಲ್ಲಿ ಧಾರಣೆಮಾಡಿ, ಸಂತೋಷದಿಂದ ತಂತಮ್ಮ ಮನೆಗಳಿಗೆ ತೆರಳಿದರು. ಅನಂತರ ನಗರನಿವಾಸಿಗಳಾದ ನರನಾರಿಯರೆಲ್ಲರಿಗೂ ಮಹಾರಾಜನು ವಸ್ತ್ರಾದಿ ಭೂಷಣಗಳನ್ನು ಉಡುಗೊರೆಯಾಗಿ ಕೊಟ್ಟನು ಆಗ ಮನೆ ಮನೆಯಲ್ಲಿಯೂ ಅಭಿನಂದನಗೀತೆಗಳನ್ನು ಹಾಡಲಾರಂಭಿಸಿದರು. ಪ್ರಮುದಿತನಾದ ಮಹಾರಾಜನು ಭಿಕ್ಷುಕರು ಬೇಡುತ್ತಿದ್ದ ವಸ್ತುಗಳನ್ನೆಲ್ಲ ದಾನಮಾಡುತ್ತಿದ್ದನು. ಅನಂತರ ಸೇವಕರಿಗೂ, ವಾದ್ಯದವರಿಗೂ ವಿವಿಧ ದಾನಗಳನ್ನು ಕೊಟ್ಟು ಅವರನ್ನು ತೃಪ್ತಿಗೊಳಿಸಿದನು.

ದೋ ॥೩೫೫॥ ಜನರೆಲ್ಲರು ಪ್ರಣಾಮಗೈದು ಮಹಾರಾಜನ ಗುಣಗಣ ಗಾಥೆಯನ್ನು ಹಾಡಲಾರಂಭಿಸಿದರು. ಆಗ ಗುರು ಭೂಸುರರೊಂದಿಗೆ ಮಹಾರಾಜನು ಅರಮನೆಯನ್ನು ಪ್ರವೇಶಿಸಿದನು. ಅನಂತರ ವಸಿಷ್ಠನ ಅಪ್ಪಣೆಯಂತೆ

ಮಹಾರಾಜನು ಲೌಕಿಕಾಚಾರಗಳನ್ನೂ ವೇದೋಕ್ತ ವಿಧಿಗಳನ್ನೂ ಅತ್ಯಾದರದಿಂದ ನೆರವೇರಿಸಿದನು. ಬ್ರಾಹ್ಮಣ ಸಮೂಹವನ್ನು ನೋಡಿ ರಾಣಿಯರೆಲ್ಲರು ಇಂದು ಸುದಿನವೆಂದು ಪ್ರೇಮದಿಂದೆದ್ದು ನಿಂತರು. ಮಹಾರಾಜನು ಬ್ರಾಹ್ಮಣರೆಲ್ಲರ ಕಾಲ್ತೊಳೆದು, ಸ್ನಾನಮಾಡಿಸಿ, ಅವರನ್ನು ಚೆನ್ನಾಗಿ ಪೂಜಿಸಿ, ದಿವ್ಯ ಭೋಜನ ದಿಂದಲೂ ಆದರ ಸತ್ಕಾರದಿಂದಲೂ ದಾನ, ಪ್ರೇಮಗಳಿಂದಲೂ ಎಲ್ಲರನ್ನೂ ತೃಪ್ತಿ ಗೊಳಿಸಿದನು. ಅವರು ಸಂತುಷ್ಟರಾಗಿ ಆಶೀರ್ವಾದಗಳನ್ನೀಯುತ್ತ ತೆರಳಿದರು. ಅನಂತರ ಮಹಾರಾಜನು ಗಾಧಿಸುತನಾದ ವಿಶ್ವಾಮಿತ್ರನನ್ನು ಬಹು ವಿಧವಾಗಿ ಪೂಜಿಸಿ—"ಹೇ ನಾಥ! ನನ್ನ ಸಮಾನ ಧನ್ಯರಾರೂ ಇಲ್ಲ!" ಎಂದು ನುಡಿದು ಅವನನ್ನು ವಿಶೇಷವಾಗಿ ಪ್ರಶಂಸಿಸಿ, ರಾಣಿಯರ ಸಮೇತ ಮುನಿಯ ಚರಣ ರಜ ವನ್ನು ಶಿರದಲ್ಲಿ ಧರಿಸಿದನು. ಮತ್ತೆ ಬೇಕಾದಾಗಲೆಲ್ಲ ರಾಣೀವಾಸದವರಿಗೂ ತನಗೂ ಅವನ ದರ್ಶನವಾಗುವಂತೆ ಅನುಕೂಲವಾಗಿದ್ದ ಅರಮನೆಯ ಒಂದು ಭಾಗವನ್ನು ಮುನಿಯ ವಾಸಸ್ಥಾನವಾಗಿ ಮೀಸಲಿಡಿಸಿದನು. ಅನಂತರ ಅವನು ಮತ್ತೆ ಗುರುಪದಕಮಲಗಳನ್ನು ಪೂಜಿಸಿ ಅತ್ಯಂತ ಪ್ರೇಮ ವಚನಗಳನ್ನು ಬಿನ್ನ ಯಿಸಿಕೊಂಡನು.

### ಮಂಗಳಾಚರಣೆ.

ದೋ ॥೩೮೬–೮೭॥ ಅನಂತರ ನಾಲ್ವರು ರಾಜಕುಮಾರರೂ, ದಶರಥ ಮಹಾರಾಯನೂ ತಂತಮ್ಮ ಪತ್ನಿಯರ ಸಮೇತ ಗುರುಚರಣಗಳಿಗೆರಗಿದರು. ಮುನಿರಾಜ (ವಸಿಷ್ಠ) ನು ಅವರನ್ನು ಆಶೀರ್ವದಿಸಿದನು ಹೃದಯದಲ್ಲಿ ವಿಶೇಷ ಅನುರಾಗವನ್ನು ತುಂಬಿಕೊಂಡು ಮಹಾರಾಜನು ತನ್ನ ಪುತ್ರರನ್ನೂ ಸಂಪತ್ತನ್ನೂ ವಸಿಷ್ಠನ ಸಮ್ಮುಖದಲ್ಲಿರಿಸಿ ಪ್ರಾರ್ಥಿಸುತ್ತಿರುವಾಗ ವಸಿಷ್ಠನು ತನ್ನ ಗುರುದಕ್ಷಿಣೆ ಯನ್ನು ಸ್ವೀಕರಿಸಿ, ಪುತ್ರರನ್ನು ಹಲವು ಬಗೆಯಿಂದ ಆಶೀರ್ವದಿಸಿ, ಸೀತಾರಾಮರ ಮೂರ್ತಿಗಳನ್ನು ಹೃದಯದಲಿ ಧರಿಸಿ, ತನ್ನ ಆಶ್ರಮಕ್ಕೆ ತೆರಳಿದನು. ಅನಂತರ ಮಹಾರಾಜನು ಬ್ರಾಹ್ಮಣ ಸ್ತ್ರೀಯರನ್ನು ಕರೆಯಿಸಿ ಅವರಿಗೆ ವಸ್ತ್ರ ಗಳನ್ನೂ ಆಭರಣಗಳನ್ನೂ ದಾನಮಾಡಿದನು. ತರುವಾಯ ಅನ್ಯಸುವಾಸಿನಿ ಯರನ್ನೂ ಕರೆಸಿ ಅವರಿಗೂ ಬೇಕುಬೇಕಾದ ವಸ್ತ್ರಗಳನ್ನೂ ಆಭರಣಗಳನ್ನೂ ಕೊಟ್ಟನು. ದಕ್ಷಿಣೆಗಾಗಿ (ಬಂದಿದ್ದ) ಬ್ರಾಹ್ಮಣರೆಲ್ಲರಿಗೂ ರಾಯನು ಬೇಕು ಬೇಕಾದ ವಸ್ತ್ರಗಳನ್ನು ಕೊಟ್ಟು ತೃಪ್ತಿಗೊಳಿಸಿದನು. ರಾಜನಿಗೆ ಪೂಜ್ಯರೂ ಪ್ರಿಯರೂ ಆದ ಅತಿಥಿಗಳು ಬಹು ಆದರದಿಂದ ಸನ್ಮಾನಿಸಲ್ಪಟ್ಟರು. ದೇವತೆ ಗಳೂ ಶ್ರೀರಾಮಚಂದ್ರನ ವಿವಾಹವನ್ನು ನೋಡಿ ಹೂಮಳೆಯಿಂದ ಉತ್ಸವಕ್ಕೆ ಶೋಭೆಯನ್ನುಂಟುಮಾಡಿ ತುತೂರಿಗಳನ್ನೂದುತ್ತ ತಂತಮ್ಮ ಲೋಕಗಳಿಗೆ ತೆರಳಿ ದರು. ಅವರು ಹೋಗುಹೋಗುತ್ತ ದಾರಿಯಲ್ಲಿ ರಾಮಚಂದ್ರನ ಕೀರ್ತಿಯನ್ನು ಹೊಗಳುತ್ತಿದ್ದರು. ಅವರ ಹೃದಯದಿಂದ ಪ್ರೇಮವು ಹೊರಸೂಸುತ್ತಿದ್ದಿತು.

ನರಪತಿಯಾದ ದಶರಥನು ಸರ್ವರನ್ನೂ ಸಮಾನ ಬುದ್ಧಿಯಿಂದ ಆದರಿಸಿದುದರಿಂದ ಅವರ ಹೃದಯಗಳು ಆನಂದ ಪೂರ್ಣವಾಗಿದ್ದವು. ಕೊನೆಗೆ ಮಹಾರಾಜನು ರಾಣೀವಾಸಕ್ಕೆ ಹೋಗಿ ಅಲ್ಲಿ ಪತ್ನೀಸಮೇತರಾಗಿ ಕುಳಿತಿದ್ದ ಪುತ್ರರನ್ನು ನೋಡಿ, ವಿಶೇಷ ಹರುಷದಿಂದವರನ್ನು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಂಡು ಬಾರಿ ಬಾರಿಗೂ ಅವರನ್ನು ಆಲಂಗಿಸಿಕೊಳ್ಳುತ್ತಿದ್ದನು. ಆ ಸಮಯದಲ್ಲೇ ನೆರೆದಿದ್ದ ಜನರನ್ನು ನೋಡಿ ಅಂತಃಪುರದ ಜನರೆಲ್ಲರು ಪ್ರಸನ್ನ ಚಿತ್ತರೂ ಆನಂದ ಮಗ್ನರೂ ಆದರು. ಅವರೆದುರಿನಲ್ಲಿ ಮಹಾರಾಜನು ವಿವಾಹೋತ್ಸವವನ್ನು ವರ್ಣಿಸಿದನು. ಅದನ್ನು ಕೇಳಿ ಎಲ್ಲರಿಗೂ ಆನಂದವಾಯಿತು. ಮತ್ತೆ ಮಹಾರಾಜನು ಜನಕರಾಯನ ಗುಣ, ಶೀಲಗಳನ್ನು ಪ್ರಶಂಸಿಸಿ, ಅವನ ಮನೋಹರವಾದ ಪ್ರೀತಿ ರೀತಿ ಸಂಪದಗಳನ್ನು ಭಟರು ಹೊಗಳುವ ರೀತಿಯಲ್ಲಿ ವರ್ಣಿಸಿದನು. ಅವನ ನಡೆನುಡಿ ವಿಚಾರಗಳನ್ನು ತಿಳಿದು ರಾಜ್ಞಿಯರೆಲ್ಲರು ಸಂತೋಷಪಟ್ಟರು.

ದೋ ||೩೮೮|| ಮಹಾರಾಜನು ಪುತ್ರರ ಸಮೇತ ಸ್ನಾನಮಾಡಿ, ಬ್ರಾಹ್ಮಣರು, ಗುರುಗಳು ಮತ್ತು ಜಾತೀಯ ಜನರನ್ನು ಕರೆಯಿಸಿ ಅನೇಕ ವಿಧವಾದ ಮೃಷ್ಟಾನ್ನ ಭೋಜನವನ್ನು ಮಾಡಿಸಿದನು. ಇದರಲ್ಲಿಯೆ ಐದು ಘಳಿಗೆ ರಾತ್ರಿ ಕಳೆದುಹೋಯಿತು. ಅನಂತರ ಶ್ರೇಷ್ಠರಾದ ಸುಂದರಾಂಗಿಯರು ಬಂದು ಮಂಗಳ ಗೀತೆಗಳನ್ನು ಹಾಡಲಾರಂಭಿಸಿದರು. ಆ ರಾತ್ರಿಯು ಸುಖದ ಮೂಲಸ್ವರೂಪವಾಗಿಯೂ ಮನೋಹರವಾಗಿಯೂ ಇದ್ದಿತು. ಭೋಜನವಾದನಂತರ ಎಲ್ಲರೂ ಆಚಮನಮಾಡಿ, ತಾಂಬೂಲ ಚರ್ವಣ ಮಾಡುತ್ತ ಗಂಧ ಹೂ ಮಾಲೆಗಳಿಂದಲಂಕೃತರಾಗಿ ಕಾಂತಿಯುಕ್ತರಾದರು. ರಾಮಚಂದ್ರನನ್ನು ನೋಡಿ, ತಲೆಬಾಗಿಸಿ, ಹೊರಡಲಪ್ಪಣೆಯನ್ನು ಪಡೆದು ಎಲ್ಲರೂ ತಂತಮ್ಮ ಮನೆಗಳಿಗೆ ತೆರಳಿದರು ಆ ಸಮಯದಲ್ಲಿ ಅಧಿಕವಾಗಿದ್ದ ಪ್ರೇಮ, ಪ್ರಮೋದ, ವಿನೋದಗಳನ್ನು ನೂರಾರು ಜನ ಶಾರದೆಯರೂ, ಶೇಷರೂ, ವೇದಗಳೂ, ಬ್ರಹ್ಮರೂ, ಮಹಾದೇವರೂ, ಗಣೇಶರೂ ಕೂಡ ವರ್ಣಿಸಲಾರರು. ಇನ್ನು ನಾನು ಹೇಗೆ ವರ್ಣಿಸಬಲ್ಲೆನು? ಭೂಮಿಯಿಂದ ಹುಟ್ಟಿದ ಸರ್ಪವು ಪೃಥ್ವಿಯನ್ನು ಹೊರಬಲ್ಲದೆ?—ಮಹಾರಾಜನು ಸರ್ವರನ್ನೂ ಸಮ್ಮಾನಿಸಿ ರಾಣಿಯರನ್ನೂ ಕರೆದು,–“ಸೊಸೆಯಂದಿರಿನ್ನೂ ಬಾಲಕಿಯರಾಗಿರುವರು. ಅತ್ತೆ ಮನೆಗೆ ಬಂದ ಅವರನ್ನು ನೀವು ಹೀಗೆ ಮಾಡಿದರೆ ಅವರ ಕಣ್ಣುಗಳು ಏನಾಗಬೇಕು?

ದೋ ||೩೮೯|| “ಬಾಲಕಿಯರೂ ಆಯಾಸಗೊಂಡು ನಿದ್ರೆಯಿಲ್ಲದವರಾಗಿರುವರು. ಅವರಿಗೆ ಮಲಗುವುದಕ್ಕೆ ಹಾಸಿಗೆಗಳನ್ನು ಹಾಸಿಸಿರಿ”–ಎಂದು ನುಡಿದು ಶ್ರೀರಾಮಚಂದ್ರನ ಚರಣಗಳನ್ನು ಧ್ಯಾನಿಸುತ್ತ ತನ್ನ ವಿಶ್ರಾಂತಿ ಭವನಕ್ಕೆ ತೆರಳಿದನು. ಮನೋಹರವೂ ಸ್ವಾಭಾವಿಕವೂ ಆದ ರಾಜನ ವಚನಗಳನ್ನು ಕೇಳಿ, ರಾಣಿ

ಯರು ರತ್ನಖಚಿತವಾದ ಮಂಚಗಳ ಮೇಲೆ ಹಾಸಿಗೆಗಳನ್ನುರುಳಿಸಿದರು. ಅವು ಗಳ ಮೇಲೆ ಶ್ರೇಷ್ಠವಾದ ಹಸುವಿನ ಹಾಲಿನ ನೊರೆಯಂತಿದ್ದ ಕೋಮಲವೂ ಮನೋಹರವೂ ಬಿಳಿಯದೂ ಆದ ಬಟ್ಟೆಗಳನ್ನು ಹಾಸಿದರು. ಅಲ್ಲಿದ್ದ ಕೋಮಲ ವಾದ ದಿಂಬುಗಳಂತೂ ವರ್ಣನಾತೀತವಾಗಿದ್ದವು. ಆ ಮಣಿಮಂದಿರದಲ್ಲಿ ಎಲ್ಲಿ ನೋಡಿದರಲ್ಲಿ ಹೂವಮಾಲೆಗಳ ಪರಿಮಳವು ತುಂಬಿದ್ದಿತು. ಅಲ್ಲಿದ್ದ ರತ್ನದೀಪಗಳ ಮತ್ತು ಸುಂದರವಾದ ಚಂದ್ರಮಣಿಗಳ ಕಾಂತಿಯನ್ನು ವರ್ಣನೆಯಿಂದ ತಿಳಿಯು ವುದಸಾಧ್ಯವು, ಅದನ್ನು ನೋಡಿದವರಿಗೆ ಮಾತ್ರ ಅದು ತಿಳಿಯುವುದು. ಈ ಬಗೆ ಯಾಗಿ ಸುಂದರವಾದ ಶಯ್ಯೆಗಳನ್ನು ಸಜ್ಜುಗೊಳಿಸಿ ರಾಮಚಂದ್ರನನ್ನು ಮಂಚದ ಮೇಲೆ ಅವರು (ರಾಣಿಯರು) ಕುಳ್ಳಿರಿಸಿದರು. ರಾಮಚಂದ್ರನು ತನ್ನ ಸೋದರ ರಿಗೆ ಮಲಗಿಕೊಳ್ಳಿರೆಂದು ಹೇಳಿದ ಮೇಲೆ ಅವರು ತಂತಮ್ಮ ಶಯ್ಯೆಗಳ ಮೇಲೆ ಮಲಗಿಕೊಂಡರು. ಅನಂತರ ರಾಮಚಂದ್ರನ ಶ್ಯಾಮಸುಂದರವೂ ಕೋಮಲವೂ ಆದ ಅಂಗವನ್ನು ನೋಡುತ್ತ ನೋಡುತ್ತ, ರಾಣಿಯರೆಲ್ಲರು ಪ್ರೇಮ ಪೂರ್ಣವಾದ ವಚನಗಳಿಂದ ನುಡಿದರೇನೆಂದರೆ–' ಹೇ ಪುತ್ರ! ಮಾರ್ಗದಲ್ಲಿ ಹೋಗುತ್ತಿದ್ದಾಗ ಮಹಾ ಭಯಂಕರಳಾದ ತಾಟಕಿಯನ್ನು ನೀನು ಹೇಗೆ ಸಂಹರಿಸಿದೆ?

ದೋ ॥ ೩೫೦ ॥ " ಯುದ್ಧದಲ್ಲಿ ಯಾರನ್ನೂ ಲಕ್ಷಿಸದ ಘೋರ ರಾಕ್ಷಸರೂ ವಿಕಟ ಭಟರೂ ಆದ ಮಾರೀಚ ಸುಬಾಹುಗಳನ್ನು ಅವರ ಪರಿವಾರ ಸಮೇತ ವಾಗಿ ಹೇಗೆ ನಾಶಗೊಳಿಸಿದೆ? ಹೇ ಪುತ್ರ! ನಿನಗುಂಟಾದ ಆಯಾಸವನ್ನು ನಾನು ಸ್ವೀಕರಿಸುವೆನು (ಇದಕ್ಕಾಗಿ ಹೆಂಗಸರು ಮಕ್ಕಳ ತಲೆಯಮೇಲೆ ಕೈ ಎಳೆದು ತಮ್ಮ ತಲೆಯ ಪಕ್ಕಗಳಲ್ಲಿ ಬೆರಳು ಮುರಿದುಕೊಳ್ಳುವರು). ವಿಶ್ವಾಮಿತ್ರರ ಕೃಪೆ ಯಿಂದ ಪರಮಾತ್ಮನು ನಿಮ್ಮನ್ನು ಅನೇಕ ವಿಘ್ನಗಳಿಂದ ಪಾರುಮಾಡಿದನು. ಗುರುಕೃಪೆಯಿಂದ ಅಣ್ಣತಮ್ಮಂದಿರಿಬ್ಬರೂ ಯಜ್ಞ ರಕ್ಷೆಯನ್ನು ಮಾಡಿದಿರಿ. ಮತ್ತು ಅವರ ಪ್ರಸಾದದಿಂದ ಎಲ್ಲ ವಿದ್ಯೆಗಳನ್ನು ಕಲಿತಿರುವೆ. ನಿನ್ನ ಚರಣ ಧೂಳಿಯು ಸೋಕಿದ ಕೂಡಲೆ ಮುನಿಯ ಸ್ತ್ರೀಯು (ಅಹಲ್ಯೆಯು) ಶಾಪ ಮುಕ್ತ ಳಾದಳು. ಈ ಕೀರ್ತಿಯು ಸಮಗ್ರ ಜಗತ್ತಿನಲ್ಲಿ ಹರಡಿಕೊಂಡಿರುವುದು ಆಮೆಯ ಬೆನ್ನು ಮತ್ತು ವಜ್ರಕ್ಕಿಂತಲೂ ಕಠಿಣವಾದ ಶಿವಧನುಸ್ಸನ್ನು ನೀನು ಮಹಾ ರಾಜಸಭೆಯಲ್ಲಿ ಮುರಿದು ಬಿಟ್ಟೆ. ಅದರಿಂದ ವಿಶ್ವವಿಜಯ ಸ್ವರೂಪಳಾದ ಸೀತೆ ಯನ್ನು ಹೊಂದಿ, ನಾಲ್ವರು ಸೋದರರೂ ವಿವಾಹಿತರಾಗಿ ಮನೆಗೆ ಬಂದಿರಿ. ಈ ನಿನ್ನ ಕಾರ್ಯಗಳೆಲ್ಲವು ಮನುಷ್ಯ ಶಕ್ತಿಗೆ ಮೀರಿದುದಾಗಿವೆ. ಕೇವಲ ವಿಶ್ವಾಮಿತ್ರನ ಕೃಪೆಯಿಂದಲೆ ಹೀಗಾಗಿರಬಹುದು. ಹೇ ಪುತ್ರ! ನಿನ್ನ ಚಂದ್ರ ವದನವನ್ನು ನೋಡಿ ಜಗತ್ತಿನಲ್ಲಿ ನಮ್ಮ ಜನ್ಮವು ಸಫಲವಾಯಿತು. ನಾವು ನಿನ್ನನ್ನು ನೋಡದಿದ್ದ ದಿನಗಳನ್ನು ಬ್ರಹ್ಮನು ನಮ್ಮ ಆಯುಸ್ಸಿನಲ್ಲಿ ಸೇರಿಸದಿರಲಿ!"

ದೋ ॥೩೯೧॥ ರಾಮಚಂದ್ರನು ಕೋಮಲವೂ ಶ್ರೇಷ್ಠವೂ ಆದ ವಿನಯ ವಚನಗಳನ್ನು ಹೇಳಿ ಮಾತೆಯರೆಲ್ಲರನ್ನು ಸಂತುಷ್ಟಿಗೊಳಿಸಿದನು. ಅನಂತರ ಶಂಭು ಗುರು ವಿಪ್ರರ ಚರಣಾರವಿಂದಗಳನ್ನು ಸ್ಮರಿಸುತ್ತ ಕಣ್ಣುಗಳನ್ನು ನಿದ್ರಾ ದೇವಿಯ ವಶಕ್ಕೆ ಕೊಟ್ಟುಬಿಟ್ಟನು. ನಿದ್ರಿಸುವ ಸಮಯದಲ್ಲಿಯೂ ಅವನಾ ಶ್ರೀ ಮುಖವು ಸಂಧ್ಯಾಸಮಯದ ಕಮಲವು ಸಂಪುಟೀಕರಿಸುವಂತೆ ಮನೋಹರವಾದ ಶೋಭೆಯುಳ್ಳುದಾಗಿದ್ದಿತು. ಮನೆಮನೆಯಲ್ಲಿಯೂ ಸ್ತ್ರೀಯರು ಜಾಗರಣ ಮಾಡುತ್ತ ಪರಸ್ಪರ ಮಂಗಳಮಯವಾದ ನಿಂದಾವಚನಗಳನ್ನಾಡುತ್ತಿದ್ದರು. ಆಗ ರಾಣಿಯರು—ಹೇ ಸಖಿಯರೆ! ಆಯೋಧ್ಯಾನಗರದ ಶೋಭೆಯಿಂದ ಇಂದಿನ ರಾತ್ರಿಯು ಎಷ್ಟು ಮನೋಹರವಾಗಿರುವುದು, ನೋಡಿರಿ! ನಾಗಿನಿಯು ತನ್ನ ಮಸ್ತಕಮಣಿಯನ್ನು ಹೃದಯದಲ್ಲಿ ಮುಚ್ಚಿಡುವಂತೆ ಅತ್ತೆಯರು ತಮ್ಮ ನಾಲ್ವರು ಸೊಸೆಯರನ್ನೂ ಎದೆಗಪ್ಪಿಕೊಂಡು ನಿದ್ರಿಸಿದರು. ಪ್ರಾತಃಕಾಲವಾದ ಕೂಡಲೆ ಪವಿತ್ರವಾದ ಸಮಯದಲ್ಲಿ ಎಂದರೆ ಸುಂದರವಾದ ಕೋಳಿಗಳು ಕೂಗಲಾರಂಭಿಸಿ, ವಂದಿ ಮಾಗಧಾದಿ ಜನರು ಬಂದು ಗುಣಗಾನಮಾಡುತ್ತ, ಪುರಜನರು ಪ್ರಣಾಮ ಮಾಡುವುದಕ್ಕೆ ಬಂದಾಗ ರಾಜನು ಎಚ್ಚತ್ತನು. ನಾಲ್ವರು ಸೋದರರೂ ಹಾಸಿಗೆ ಯಿಂದೆದ್ದು ಬ್ರಾಹ್ಮಣರು, ದೇವತೆಗಳು, ಗುರು ಮತ್ತು ಮಾತಾಪಿತೃಗಳಿಗೆ ಪ್ರಣಾಮ ಗೈದು ಅವರಿಂದ ಆಶೀರ್ವಾದವನ್ನು ಪಡೆದು ಸಂತೋಷಪಟ್ಟರು. ಮಾತೆಯರು ಆದರದಿಂದ ಅವರ ಮುಖವನ್ನು ನೋಡಿದರು.' ಅನಂತರ ಮಹಾರಾಜನೊಂದಿಗೆ ಅವರು ರಾಜದ್ವಾರದ ಕಡೆಗೆ ತೆರಳಿದರು.

ದೋ ॥ ೩೯೨ ॥ ಸ್ವಾಭಾವಿಕವಾಗಿ ಶುದ್ಧರಾಗಿರುವ ನಾಲ್ವರು ಭ್ರಾತೃಗಳೂ ಶೌಚವಿಧಿಯಿಂದ ನಿವೃತ್ತರಾಗಿ ಪವಿತ್ರವಾದ ಸರಯೂ ನದಿಯಲ್ಲಿ ಸ್ನಾನಮಾಡಿ, (ಸಂಧ್ಯೋಪಾಸನೆ. ಬ್ರಹ್ಮಯಜ್ಞ, ತರ್ಪಣ, ವೇದಪಾಠ, ಅತಿಥಿ ಪೂಜಾದಿ) ಪ್ರಾತಃಕರ್ಮಗಳನ್ನು ನೆರವೇರಿಸಿಕೊಂಡು ತಂದೆಯ ಬಳಿ ಬಂದು ನಿಂತರು. ರಾಜನು ಅವರನ್ನು ನೋಡಿದ ಕೂಡಲೆ ಎದೆಗಪ್ಪಿಕೊಂಡನು. ಪಿತನ ಆಜ್ಞೆಯಂ ಪಡೆದು ಅವರು ಪ್ರಸನ್ನ ಭಾವದಿಂದ ಕುಳಿತುಕೊಂಡರು. ಶ್ರೀರಾಮಚಂದ್ರನ ದರ್ಶನವನ್ನು ಹೊಂದಿ ಸಮಗ್ರ ಸಭೆಯು ಪ್ರಸನ್ನ ಭಾವವಂ ತಳೆದುದು. ಎಲ್ಲರೂ ಆಗ ಕಣ್ಣುಗಳನ್ನು ಸಫಲಗೊಳಿಸುವ (ಎಂದರೆ ರಾಮದರ್ಶನವನ್ನು ಹೊಂದುವ) ಸರ್ವೋತ್ತಮ ಸಂಧಿಯು ಇದುವೇ ಎಂದಾಲೋಚಿಸಿದರು. ಮತ್ತೆ ವಶಿಷ್ಠ ವಿಶ್ವಾ ಮಿತ್ರ ಋಷಿಗಳು ಅಲ್ಲಿಗೆ ಬಂದರು. ರಾಜನು ಅವರನ್ನು ಶ್ರೇಷ್ಠವಾದ ಆಸನಗಳ ಮೇಲೆ ಕುಳ್ಳಿರಿಸಿದನು. ಪುತ್ರಸಮೇತನಾಗಿ ರಾಜನು, ಮುನಿಗಳನ್ನು ಪೂಜಿಸಿ, ಅವರ ಪಾದಸ್ಪರ್ಶವನ್ನು ಮಾಡಿದನು. ಗುರುಗಳಿಬ್ಬರೂ ಶ್ರೀರಾಮಚಂದ್ರನನ್ನು ನೋಡಿ ಅನುರಾಗಮಗ್ನರಾದರು. ವಸಿಷ್ಠನು ಧರ್ಮದ ಇತಿಹಾಸವನ್ನು ಹೇಳ

ಲಾರಂಭಿಸಲು ರಾಜ್ಞೀಸಮೇತನಾದ ಮಹಾರಾಜನು ಅದನ್ನು ಕೇಳಲಾರಂಭಿಸಿದನು. ಮುನಿಜನರ ಮನಸ್ಸಿಗೆ ಅಗಮ್ಯವಾದ ಎಂದರೆ ಎಲ್ಲಿ ದೊಡ್ಡ ದೊಡ್ಡ ಮುನಿಗಳ ಮನಸ್ಸು ಕೂಡ ಹೋಗಲರಿಯದೊ ಅಂತಹ ವಿಶ್ವಾಮಿತ್ರನ ತಪಸ್ಸನ್ನು ವಸಿಷ್ಠನು ವಿಧಿಪೂರ್ವಕವಾಗಿಯೂ ವಿಸ್ತಾರವಾಗಿಯೂ ವರ್ಣಿಸಿದನು. ವಾಮದೇವನು "ಈ ಮಾತುಗಳೆಲ್ಲ ನಿಜವಾದವು. ವಿಶ್ವಾಮಿತ್ರನ ಸುಂದರವಾದ ಕೀರ್ತಿಯು ತ್ರಿಲೋಕಗಳಲ್ಲಿಯೂ ಹಬ್ಬಿರುವುದು" ಎಂದು ಸಾಕ್ಷ್ಯವಚನವನ್ನು ನುಡಿದನು ಇದನ್ನು ಕೇಳಿ ಎಲ್ಲರಿಗೂ ಆನಂದವುಂಟಾದುದು. ರಾಮ ಲಕ್ಷ್ಮಣರ ಮನಸ್ಸಿನಲ್ಲಿ ಉತ್ಸಾಹವುಂಟಾದುದು.

ದೋ ॥೩೬೩॥ ಈ ಬಗೆಯಾಗಿ ಮಂಗಳಕರವಾದವೋದ ಉತ್ಸಾಹಾದಿಗಳಲ್ಲಿ ದಿನಗಳು ಕಳೆಯುತ್ತಿರುವವು. ಅಯೋಧ್ಯೆಯಲ್ಲಿ ಆನಂದವು ಉಕ್ಕೇರುತ್ತಿದ್ದಿತು, ಮತ್ತೆ ದಿನ ದಿನಕ್ಕೆ ಆನಂದವು ಅಧಿಕಾಧಿಕವಾಗಿ ಅಭಿವೃದ್ಧಿಗೊಂಡಿತು. ಒಂದು ದಿನ ಸುಮುಹೂರ್ತದಲ್ಲಿ ಮದುಮಕ್ಕಳ ಕಂಕಣ ವಿಸರ್ಜನೆಯನ್ನು ಮಾಡಿದರು. ಆ ದಿನವೂ ಮಂಗಳಾಚಾರ ಆಮೋದ ವಿನೋದಗಳು ಕಡಿಮೆಯಾಗಿರಲಿಲ್ಲ. ಈ ಬಗೆಯಾಗಿ ನಿತ್ಯವೂ ನವೀನ ಸುಖಗಳನ್ನು ನೋಡಿ ದೇವತೆಗಳೂ ತಾವು ಅಯೋಧ್ಯಾನಗರದಲ್ಲಿ ಹುಟ್ಟಬೇಕೆಂದು ಬ್ರಹ್ಮನನ್ನು ಪ್ರಾರ್ಥಿಸಲಾರಂಭಿಸಿದರು ವಿಶ್ವಾಮಿತ್ರನು ಪ್ರತಿನಿತ್ಯವೂ (ತನ್ನ ಆಶ್ರಮಕ್ಕೆ) ಹೊರಡಬೇಕಂದಪೇಕ್ಷಿಸುವನು. ಆದರೆ ರಾಮಚಂದ್ರನ ಸ್ನೇಹಾನುರಾಗ ಪಾಶದಲ್ಲಿ ಸಿಕ್ಕಿಕೊಳ್ಳುತ್ತಿದ್ದನು. ದಿನ ದಿನಕ್ಕೂ ತೇಜೋಭಿವೃದ್ಧಿಯನ್ನೈದುತ್ತಿದ್ದ ರಾಜನನ್ನು ನೋಡಿ ಮಹಾಮುನಿಯು ಅವನನ್ನು ಪ್ರಶಂಸಿಸುತ್ತಿದ್ದನು. ಮತ್ತೆ ಅವನು ಬೀಳ್ಕೊಳ್ಳುವಾಗ ದಶರಥನು ಪುತ್ರಸಮೇತನಾಗಿ ಮುನಿಯ ಎದುರಿಗೆ ನಿಂತು—"ಹೇ ನಾಥ! ಈ ಸಮಗ್ರ ಸಂಪದವೂ ರಾಜ ವೈಭವವೂ ತಮ್ಮದಾಗಿವೆ. ಸ್ತ್ರೀ ಪುತ್ರ ಸಮೇತನಾಗಿ ನಾನು ತಮ್ಮ ಸೇವಕನಾಗಿರುವೆನು. ಮಕ್ಕಳಮೇಲೆ ದಯೆಯಿಟ್ಟಿರಬೇಕು, ಆಗಾಗ್ಗೆ ನನಗೆ ಸಂದರ್ಶವನ್ನೀಯಬೇಕು"—ಎಂದು ನುಡಿದು ಅರಸಿಯರೊಂದಿಗೆ ರಾಯನು ವಿಶ್ವಾಮಿತ್ರನ ಚರಣಗಳಿಗೆರಗಿದನು. ಮತ್ತೆ ಪ್ರೇಮಭರಿತನಾದ ಅವನ ಬಾಯಿಂದ ಮಾತೇ ಹೊರಡಲಿಲ್ಲ. ವಿಪ್ರನಾದ ವಿಶ್ವಾಮಿತ್ರನು ಬಹು ವಿಧವಾಗಿ ರಾಯನನ್ನು ಆಶೀರ್ವದಿಸಿ, ತನ್ನ ಆಶ್ರಮಕ್ಕೆ ತೆರಳಿದನು. ಆಗಿನ ಪರಸ್ಪರ ಪ್ರೀತಿಯನ್ನು ಶಬ್ದಗಳಿಂದ ವರ್ಣಿಸಲಾಗದು. ರಾಮಚಂದ್ರನು ತನ್ನ ಸೋದರರ ಸಮೇತ ಪ್ರೇಮದಿಂದ ಮುನಿಯಸಂಗಡ ಸ್ವಲ್ಪದೂರ * ಹೋಗಿ ಅವನ ಆಜ್ಞೆಯನ್ನು ಪಡೆದು ಹಿಂದಿರುಗಿದನು.

---

* ವಾಲ್ಮೀಕಿ.—ಯದೀಚ್ಛೇತ್ ಪುನರಾಗನ್ತುಂ ನೈನಂ ದೂರಮನುವ್ರಜೇತ್। ಯಾರನ್ನು ಪುನಃ ಸೇರಬೇಕೆಂದಪೇಕ್ಷೆಯಿರುವುದೊ ಅವರನ್ನು ಕಳುಹಿಸುವುದಕ್ಕೆ ಹೆಚ್ಚು ದೂರ ಹೋಗಬಾರದು.

ದೋ ॥೩೯೪॥ ಗಾಧಿಕುಲಚಂದ್ರನಾದ ವಿಶ್ವಾಮಿತ್ರನು ವಿಶೇಷ ಪ್ರಸನ್ನತೆಯಿಂದ ಶ್ರೀರಾಮಚಂದ್ರನ ದಿವ್ಯ ಸ್ವರೂಪವನ್ನೂ ಮಹಾರಾಜನ ಭಕ್ತಿಯನ್ನೂ ವಿವಾಹ ಮಹೋತ್ಸವದ ಆನಂದವನ್ನೂ ಮನಸ್ಸಿನಲ್ಲಿಯೆ ಸ್ಮರಿಸುತ್ತ ಹೋದನು. ಜ್ಞಾನಿಯಾದ ವಾಮದೇವನೂ ರಘುಕುಲ ಗುರುವಾದ ವಸಿಷ್ಠನೂ ಮತ್ತೊಮ್ಮೆ ವಿಶ್ವಾಮಿತ್ರನ ಕಥೆಯನ್ನು † ಹೇಳಿದರು ಮುನಿಯ ಕೀರ್ತಿಯನ್ನು ಕೇಳಿ, ಇಂತಹ ಮುನಿಯ ಕೃಪೆಯು ನನಗೆ ಲಭಿಸಿದುದೆಂದು ಹರುಷದಿಂದ ತನ್ನ ಪುಣ್ಯ ಪ್ರಭಾವವನ್ನು ರಾಜನು ವರ್ಣಿಸಲಾರಂಭಿಸಿದನು. ಅನಂತರ ಪ್ರಜೆಗಳು ರಾಯನ ಆಣತಿಯನ್ನು ಪಡೆದು ತಂತಮ್ಮ ಮನೆಗೆ ತೆರಳಿದರು ದಶರಥರಾಯನು ಪುತ್ರರ ಸಮೇತ ಅರಮನೆಗೆ ಬಂದನು. ಆಗ ಅಯೋಧ್ಯೆಯಲ್ಲಿ ನೋಡಿದೆಡೆಯಲ್ಲೆಲ್ಲ ಜನರು ಶ್ರೀರಾಮಚಂದ್ರನ ವಿವಾಹ ಮಹೋತ್ಸವ ಗಾನವನ್ನು ಪಾಡುತ್ತಿದ್ದರು. ಪವಿತ್ರವಾದ ಅವನ ಕೀರ್ತಿಯು ತ್ರಿಭುವನಗಳನ್ನಾಕ್ರಮಿಸಿತು ಶ್ರೀರಾಮಚಂದ್ರನು ವಿವಾಹಿತನಾಗಿ ಬಂದನಂತರ ಹಲವು ವಿಧವಾದ ಆನಂದಗಳು ಅಯೋಧ್ಯೆಯಲ್ಲಿ ನೆಲೆಗೊಂಡವು. ಶ್ರೀರಾಮಚಂದ್ರನ ವಿವಾಹ ಸಮಯದಲ್ಲಾದ ಉತ್ಸವವನ್ನು, ಸರಸ್ವತಿಯೇ ಆಗಲಿ ಆದಿಶೇಷನೇ ಆಗಲಿ, ವರ್ಣಿಸಲಾರರು ಮಂಗಳನಿಧಿಯಾದ ಸೀತಾರಾಮರ ಕೀರ್ತಿಯು ಕವಿಕುಲ ಜೀವನವನ್ನು ಪಾವನಗೊಳಿಸುವುದೆಂದರಿತು ನಾನು ನನ್ನ ವಾಣಿಯನ್ನು ಪವಿತ್ರಗೊಳಿಸುವುದಕ್ಕಾಗಿ ಅದನ್ನು ಸ್ವಲ್ಪ ಮಟ್ಟಿಗೆ ವರ್ಣಿಸಿರುವೆನು.

---

† ಗಾಧಿರಾಜನ ಮಗನಾದ ವಿಶ್ವಾಮಿತ್ರನು ಕ್ಷತ್ರಿಯನು. ಭೂಪರ್ಯಟನವನ್ನು ಮಾಡುತ್ತ ಒಂದುದಿನ ಅವನು ವಸಿಷ್ಠಮುನಿಯ ಆಶ್ರಮಕ್ಕೆ ಬಂದನು . ಮುನಿಯು ಸೈನ್ಯ ಸಮೇತನಾದ ಅವನಿಗೆ ಭೋಜನವನ್ನು ಮಾಡಿಸಿದನು ಆಗ ಕಾಮಧೇನುವಿನ ಮಹಿಮೆಯನ್ನರಿತು ರಾಜನು ಅದನ್ನು ತೆಗೆದುಕೊಂಡು ಅದಕ್ಕೆ ಬದುಲಾಗಿ ಸುವರ್ಣ ದ್ರವ್ಯವನ್ನೂ ಕೋಟಿ ಧೇನುಗಳನ್ನೂ ಕೊಡಲು ಇಚ್ಛಿಸಿದನು. ಆದರೆ ವಸಿಷ್ಠನು ಒಪ್ಪಲಿಲ್ಲ. ಆಗ ಹಠದಿಂದ ಕಾಮಧೇನುವನ್ನು ಕಿತ್ತುಕೊಳ್ಳಲು, ಅದು ಬಿಡಿಸಿಕೊಂಡು ಮತ್ತೆ ವಸಿಷ್ಠನ ಬಳಿಗೆ ಹೋಗಿ ಪ್ರಾರ್ಥಿಸಿದುದು. ಆಗ ಅಸಂಖ್ಯಾತರಾದ ಯೋಧರು ಅಲ್ಲಿಯೆ ಹುಟ್ಟಿ ವಿಶ್ವಾಮಿತ್ರನ ಸೈನ್ಯವನ್ನು ನಾಶಗೊಳಿಸಿದರು ಆದರಿಂದ ವಿಶ್ವಾಮಿತ್ರನು ಲಜ್ಜೆಯನ್ನು ಹೊಂದಿ ಹಿಮಾಲಯಕ್ಕೆ ಹೋಗಿ ಅಲ್ಲಿ ೧೦೦೦ ವರ್ಷಗಳ ವರೆಗೆ ತಪಸ್ಸು ಮಾಡಿದನು. ಅಲ್ಲಿ ಶಂಕರನು ಪ್ರಸನ್ನನಾಗಿ ಅವನಿಗೆ ಧನುರ್ವೇದವನ್ನು ಸಾಂಗವಾಗಿ ಹೇಳಿಕೊಟ್ಟನು. ಅಲ್ಲಿಂದ ಬಂದು ಮತ್ತೆ ವಸಿಷ್ಠನೊಂದಿಗೆ ಯುದ್ಧಕ್ಕೆ ನಿಂತನು. ವಸಿಷ್ಠನು ತನ್ನ ಬ್ರಹ್ಮದಂಡವೊಂದರಿಂದಲೇ ವಿಶ್ವಾಮಿತ್ರನ ೪೧ ಅಸ್ತ್ರಗಳನ್ನೂ ೪೩ ಬ್ರಹ್ಮಾಸ್ತ್ರಗಳನ್ನೂ ಚೂರ್ಣೀಕರಿಸಿದನು ಆಗ ರಾಜನು—"ಧಿಗ್ ಬಲಂ ಕ್ಷತ್ರಿಯಬಲಂ ಬ್ರಹ್ಮತೇಜೋಬಲಂ ಬಲವತ್। ಅತಸ್ತತ್ಸಾಧಯಿಷ್ಯೇಽಹಂ ಯದ್ವೈ ಬ್ರಹ್ಮತ್ವ ಕಾರಣವತ್॥ ಎಂದರೆ ಕ್ಷತ್ರಿಯ ಬಲಕ್ಕೆ ಧಿಕ್ಕಾರವಿರಲಿ, ಬ್ರಹ್ಮತೇಜೋಬಲವೇ ಬಲ. ಆದುದರಿಂದ ನಾನು ಬ್ರಾಹ್ಮಣನಾಗಲೆತ್ನಿಸುವೆನು" ಎಂದು ಸಂಕಲ್ಪಿಸಿ ತದನುಸಾರವಾಗಿ ಹಲವು ಬಾರಿ ಘೋರವಾದ ತಪಸ್ಸನ್ನು ಮಾಡಿ, ಕೊನೆಗೆ ಬ್ರಹ್ಮರ್ಷಿಯಾದನು.

## ಫಲಶ್ರುತಿ.

ಮತ್ತೆ ತುಳಸೀದಾಸರು ಹೇಳುತ್ತಾರೆ, ಕೇಳಿರಿ!—"ನಾನು ನನ್ನ ವಾಣಿಯನ್ನು ಪಾವನಗೊಳಿಸುವುದಕ್ಕಾಗಿ ಶ್ರೀರಾಮಚಂದ್ರನ ಯಶಸ್ಸನ್ನು ಸ್ವಲ್ಪ ವರ್ಣಿಸಿರುವೆನು. ರಘುವೀರನ ಚರಿತ್ರೆಯು ಸಮುದ್ರದಂತೆ ಅಪಾರವಾಗಿರುವುದು. ಆವ ಕವಿಯುತಾನೆ ಅದನ್ನು ಪಾರಾಗಬಲ್ಲನು? ಯಾರು ಉಪನಯನ ವಿವಾಹಾದಿ ಉತ್ಸವ ಸಮಯಗಳಲ್ಲಿ ಇದನ್ನು ಆದರದಿಂದ ಕೇಳುವರೊ ಅಥವಾ ಹೇಳುವರೊ ಅವರು ಸೀತಾರಾಮರ ಕೃಪೆಯಿಂದ ಸದಾ ಸುಖಿಗಳಾಗಿರುವರು.

ಸೋ ॥೩೬೫॥ ಎಲ್ಲಿ ಸೀತಾಕಲ್ಯಾಣವನ್ನು ಪ್ರೇಮದಿಂದ ಗಾನಮಾಡುವರೊ ಅದನ್ನು ಕೇಳುವರೊ ಅಲ್ಲಿ ಯಾವಾಗಲೂ ಆನಂದೋತ್ಸವಗಳು ನಡೆಯುತ್ತಿರುವವು. ಏಕೆಂದರೆ ಶ್ರೀರಾಮನ ಕೀರ್ತಿಯು ಮಂಗಳಧಾಮವಾಗಿರುವುದು.

ಇಂತೆಂಬಲ್ಲಿಗೆ ಕಲಿಯುಗದ ಸಮಸ್ತ ಪಾಪವಿಧ್ವಂಸಕವಾದ ಶ್ರೀಮದ್ರಾಮ ಚರಿತ ಮಾನಸದಲ್ಲಿ "ವಿಮಲ ಸಂತೋಷ ಸಂಪಾದನವೆಂಬ' ಶ್ರೀಮದ್ಗೋಸ್ವಾಮಿ ತುಳಸೀದಾಸ ಕೃತ ಪ್ರಥಮ ಸೋಪಾನಕ್ಕೆ ಭರದ್ವಾಜ ಕುಲಸಂಜಾತ ಶ್ರೀಕೃಷ್ಣ ತನಯ ದತ್ತಾತ್ರೇಯ ಶರ್ಮನಿಂದ ವಿರಚಿತವಾದ 'ಮನೋಹರ' ವೆಂಬ ಕರ್ಣಾಟಕ ಟೀಕೆಯು ಸಮಾಪ್ತಿಗೊಂಡುದು

ಇತಿ ಶ್ರೀಮದ್ರಾಮಚರಿತಮಾನಸೇ ಸಕಲಕಲಿಕಲುಷವಿಧ್ವಂಸನೇ ವಿಮಲ ಸಂತೋಷಸಂಪಾದನೋ ನಾಮ ಪ್ರಥಮಃ ಸೋಪಾನಃ ಸಮಾಪ್ತಃ

## ಬಾಲಕಾಂಡಂ ಸಂಪೂರ್ಣಂ.

# ಶ್ರೀರಾಮಚರಿತಮಾನಸ ಗೂಢಾರ್ಥ ಕೋಶ.

ಅಗ್ನಿತ್ರಯ.—೧ ದಕ್ಷಿಣಾಗ್ನಿ, ೨ ಗಾರ್ಹಪತ್ಯ, ೩. ಆಹವನೀಯ

ಅರಿಷಡ್ವರ್ಗ—ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರ

ಅವಸ್ಥೆಗಳು —೧ ಜಾಗೃತ, ೨ ಸ್ವಪ್ನ, ೩ ಸುಷುಪ್ತಿ, ೪. ತುರೀಯ -ಇವುನಾಲ್ಕು.

ಅವಿದ್ಯಾ ಈಶ್ವರನ ಮೋಹಶಕ್ತಿ.

ಅಷ್ಟಸಿದ್ಧಿ —೧ ಅಣಿಮಾ, ೨ ಮಹಿಮಾ, ೩ ಲಘಿಮಾ, ೪. ಗರಿಮಾ, ೫. ಪ್ರಾಪ್ತಿ, ೬. ಪ್ರಾಕಾಮ್ಯ, ೭ ಈಶಿತ್ವ, ೮ ವಶಿತ್ವ.

ಆಕಾರ.—೧ ಜರಾಯುಜ, ೨ ಅಂಡಜ, ೩ ಸ್ವೇದಜ, ೪. ಉದ್ಭಿಜ-ಇವುನಾಲ್ಕು.

ಆಶ್ರಮ —ಬ್ರಹ್ಮಚರ್ಯ, ಗೃಹಸ್ಥ, ವಾನಪ್ರಸ್ಥ, ಸನ್ಯಾಸ

ಈಷಣತ್ರಯ —ಲೋಕಪ್ರಶಂಸೆ, ಧನರಾಜ್ಯಾದಿ, ಸ್ತ್ರೀಪುತ್ರ.

ಉಪವೇದಗಳು —ನಾಲ್ಕು—೧ ಋಗ್ವೇದದ ಆಯುರ್ವೇದ, ೨. ಯಜುರ್ವೇದದ ಧನುರ್ವೇದ ೩ ಸಾಮವೇದದ ಗಾಂಧರ್ವ, ೪ ಅಥರ್ವಣವೇದದ ಸ್ಥಾಪತ್ಯ

ಋತುಗಳು —೬ ಶಿಶಿರ, ವಸನ್ತ, ಗ್ರೀಷ್ಮ, ವರ್ಷಾ, ಶರದ, ಹೇಮನ್ತ.

ಕಲೆಗಳು -(೬೪ ವಿದ್ಯೆಗಳು) ಅಕ್ಷರಜ್ಞಾನ, ೨. ಲಿಖಿತ, ೩ ಗಣಿತ, ೪ ವೇದ, ೫ ಪುರಾಣ, ೬ ವ್ಯಾಕರಣ, ೭ ನೀತಿಶಾಸ್ತ್ರ, ೮ ಜ್ಯೋತಿಷ್ಯ, ೯ ಧರ್ಮಶಾಸ್ತ್ರ, ೧೦, ಯೋಗಶಾಸ್ತ್ರ, ೧೧ ಮಂತ್ರಶಾಸ್ತ್ರ, ೧೨ ಶಕುನಶಾಸ್ತ್ರ, ೧೩ ಶಿಲ್ಪಶಾಸ್ತ್ರ. ೧೪ ವೈದ್ಯಶಾಸ್ತ್ರ, ೧೫ ಸಾಮುದ್ರಿಕಶಾಸ್ತ್ರ, ೧೬ ಇತಿಹಾಸ, ೧೭. ಕಾವ್ಯ, ೧೮ ಅಲಂಕಾರ, ೧೯ ಮಧುರ ಭಾಷಣ, ೨೦ ನಾಟಕ, ೨೧ ನೃತ್ಯ, ೨೨ ಶಬ್ದಬ್ರಹ್ಮ, ೨೩ ವೀಣಾ, ೨೪ ವೇಣು, ೨೫ ಮೃದಂಗ, ೨೬. ತಾಳ, ೨೭ ಅಸ್ತ್ರ ಪರೀಕ್ಷಾ, ೨೮ ಕನಕಪರೀಕ್ಷಾ, ೨೯ ರತ್ನ ಪರೀಕ್ಷಾ, ೩೦ ಗಜ ಪರೀಕ್ಷಾ, ೩೧ ಅಶ್ವಪರೀಕ್ಷಾ, ೩೨ ಲೋಹ ಪರೀಕ್ಷಾ, ೩೩. ಭೂಮಿ ಪರೀಕ್ಷಾ, ೩೪. ಸಂಗ್ರಾಮ ಲಕ್ಷಣ, ೩೫. ಮಲ್ಲಯುದ್ಧ, ೩೬ ಆಕರ್ಷಣ, ೩೭. ಉಚ್ಚಾಟನ, ೩೮. ವಿದ್ವೇಷಣ, ೩೯. ಮದನಶಾಸ್ತ್ರ, ೪೦. ಮೋಹನ, ೪೧ ವಶೀಕರಣ, ೪೨ ರಸವಾದ ೪೩. ಗಂಧರ್ವಶಾಸ್ತ್ರ, ೪೪. ಮೃಗಭಾಷಾ ಜ್ಞಾನ, ೪೫. ಕೌತುಕವಾದ, ೪೬. ನಾಂದೀ ಪರೀಕ್ಷೆ, ೪೭ ಗಾರುಡಶಾಸ್ತ್ರ, ೪೮ ನಷ್ಟ ಪ್ರಶ್ನೆ, ೪೯ ಮುಷ್ಟಿ ಪ್ರಶ್ನೆ, ೫೦. ಆಕಾಶ ಪ್ರವೇಶ, ೫೧. ಆಕಾಶ ಗಮನ, ೫೨. ಪರಕಾಯ ಪ್ರವೇಶ, ೫೩. ಅದೃಶ್ಯ, ೫೪ ಇಂದ್ರಜಾಲ, ೫೫. ಮಹೇಂದ್ರಜಾಲ, ೫೬. ಅಗ್ನಿಸ್ತಂಭ, ೫೭. ಜಲ ಸ್ತಂಭ, ೫೮ ವಾಯುಸ್ತಂಭ, ೫೯. ದೃಷ್ಟಿಸ್ತಂಭ, ೬೦. ವಾಕ್‌ಸ್ತಂಭ,

೬೧. ಶುಕ್ಲಸ್ತಂಭ, ೬೨ ಆಕ್ಷಿಸ್ತಂಭ, ೬೩ ಖಡ್ಗಸ್ತಂಭ, ೬೪ ಅವಸ್ಥಾ ಪ್ರಯೋಗ

ಗುಣ–ಸತ್ವ, ರಜ, ತಮ

ಗುರು - ಮಾತಾ ಪಿತೃ, ಆಚಾಯರ್ಯ.

ಚತುರಂಗಬಲ - ಆನೆ, ರಥ, ಕುದುರೆ, ಕಾಲಾಳು (ಪದಾತಿ).

ಚತುರೋಪಾಯ - ಸಾಮ (ಸಮಾಧಾನಪಡಿಸುವುದು), ದಾನ (ಇನಾಮು ಲಂಚ ಕೊಡುವುದು); ಭೇದ (ಕಲಹ ಹುಟ್ಟಿಸುವುದು), ದಂಡ (ಶಿಕ್ಷಿಸುವುದು).

ಚತುರ್ಯುಗ–ಸತ್ಯಯುಗ, ತ್ರೇತಾಯುಗ, ದ್ವಾಪರ, ಕಲಿ,

ಚತುರ್ವರ್ಗ–ಧರ್ಮ, ಅರ್ಥ, ಕಾಮ, ಮೋಕ್ಷ

ಚಾತುರ್ವರ್ಣ–ಬ್ರಾಹ್ಮಣ. ಕ್ಷತ್ರಿಯ, ವೈಶ್ಯ, ಶೂದ್ರ

ತ್ರಿತಾಪ–ಆಧ್ಯಾತ್ಮಿಕ, ಆಧಿಭೌತಿಕ, ಅಧಿದೈವಿಕ

ತ್ರಿಮೂರ್ತಿಗಳು–ಬ್ರಹ್ಮ, ವಿಷ್ಣು, ಮಹೇಶ್ವರ

ತ್ರಿಕರ್ಮಗಳು–ಯಜನ, ಅಧ್ಯಯನ, ದಾನ

ತ್ರಿವಿಧ ಪ್ರಾರಬ್ಧಕರ್ಮ - ಸಂಚಿತ, ಪ್ರಾರಬ್ಧ, ಕ್ರಿಯಮಾಣ

ತ್ರಿವಿಧ ಶ್ರೋತೃಗಳು–ಮುಕ್ತ, ಮುಮುಕ್ಷು, ವಿಷಯಿ

ತ್ರಿವಿಧ ಸಮೀರ–ಶೀತಲ, ಮಂದ, ಸುಗಂಧ

ಮೂರು ಅವಸ್ಥೆ–ಬಾಲ, ಯುವಾ, ವೃದ್ಧ

ದಿಕ್ಪಾಲಕರು (೮) ಇಂದ್ರ, ಅಗ್ನಿ, ಯಮ, ನೈರುತ್ಯ, ವರುಣ, ವಾಯು, ಕುಬೇರ, ಈಶಾನ - ಅವರ ಪಟ್ಟಣಗಳು ಅಮರಾವತಿ, ತೇಜೋವತಿ, ಸಂಯಮ (ಶ್ಯಮಿನಿ) ರಕ್ಷೋವತಿ, ಶುದ್ಧವತಿ, ಗಂಧವತಿ, ಮಹೋದಯ, ಯಶೋವತಿ ;–ಅವರ ವರ್ಣಗಳು–ಶುಕ್ಲ, ರಕ್ತ, ಕೃಷ್ಣ, ಧೂಮ್ರ. ಹರಿತ, ಕಪಿಲ, ಚಿತ್ರ ಧವಳ;– ವಾಹನಗಳು–ಆನೆ, ಟಗರು, ಕೋಣ, ನರ, ಮೊಸಳೆ, ಹುಲ್ಲೆ, ಕುದುರೆ, ಎತ್ತು–ಆಯುಧಗಳು, ವಜ್ರ, ಶಕ್ತಿ, ದಂಡ, ಖಡ್ಗ, ಪಾಶ, ಅಂಕುಶ, ಗದಾ, ಶೂಲ

ದ್ವೀಪಗಳು–ಜಮ್ಬೂ, ಶಾಕ, ಕುಶ, ಕ್ರೌಂಚ, ಪುಷ್ಕರ, ಶಾಲ್ಮಲೀ, ಗೋಮೇದ.

ನರಕಾಷ್ಟಕ–ರೌರವ, ಧ್ವಾಂತ, ಶೀತ. ಉಷ್ಣ ಸಂತಾಪ, ಅಂಬುಜ, ಮಹಾಂಬುಜ, ಕಾಲಸೂತ್ರ, ಇವಲ್ಲದೆ ಮಹಾನರಕಾಷ್ಟಕಗಳೂ, ರಾಜನರಕಾಷ್ಟಕಗಳೂ, ರಾಜರಾಜನರಕಾಷ್ಟಕಗಳೂ ಇರುವವು

ನವಗುಣ (ಬ್ರಾಹ್ಮಣರದು) ಧೃತಿ, ಕ್ಷಮಾ, ದಮ, ಅಸ್ತೇಯ, ಶೌಚ, ಇನ್ದ್ರಿಯ ನಿಗ್ರಹ, ಜ್ಞಾನ, ವಿದ್ಯಾ, ಸತ್ಯ,–(ಸಾಮಾನ್ಯ) ಬುದ್ಧಿ, ಸುಖ, ದುಃಖ, ರಾಗ, ದ್ವೇಷ, ಪ್ರಯತ್ನ, ಧರ್ಮ, ಅಧರ್ಮ ಭಾವನೆ

ನವಖಂಡ — ಇಲಾವೃತ್ತ, ರಮ್ಯಕ, ಹಿರಣ್ಮಯ, ಕುರು, ಹರಿ, ಭಾರತ, ಕೇತುಮಾಲ, ಭದ್ರಾಶ್ವ, ಕಿಂಪುರುಷ

ಪಂಚತತ್ವಗಳು — ಪೃಥ್ವಿ, ಅಪ, ತೇಜ, ವಾಯು, ಆಕಾಶ; ಇವುಗಳಿಗೆ ಕ್ರಮವಾಗಿ ದೇವತೆಗಳು, ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವ — ಇವುಗಳ ವ್ಯಾಪಾರ — ಧಾರಣ, ಪಿಂಡೀಕರಣ, ಪಾಕ, ವ್ಯೂಹಕರಣ, ಅವಕಾಶ.

ಪಂಚಪ್ರಾಣ, ವಾಯುಪಂಚಕ — ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ

ಪಂಚಾಧಿಕಾರಿಗಳು — ಕರ್ಮಿ, ಮುಮುಕ್ಷು, ಅಭ್ಯಾಸಿ, ಅನುಭವಿ, ಆರೂಢ.

ಪಂಚಕೋಶಗಳು — ಅನ್ನಮಯ, ಪ್ರಾಣಮಯ, ಮನೋಮಯ, ವಿಜ್ಞಾನಮಯ, ಆನಂದಮಯ

ಪಂಚಕುಸುಮಾಸ್ತ್ರಗಳು — ಅರವಿಂದ, ಅಶೋಕ, ಚೂತ, ಮಲ್ಲಿಕಾ, ನೀಲೋತ್ಪಲ.

ಪಂಚ ಮಹಾವಾದ್ಯಗಳು — ಶೃಂಗಾರ ವಾದ್ಯವೆಂಬ ಕೊಂಬು, ತಮ್ಮಟೆಯೆಂಬ ಹಲಗೆ, ಶಂಖವೆಂಬ ಧವಳ, ಭೇರಿಯೆಂಬ ಬಾಜಾ, ಜಯಘಂಟೆಯೆಂಬ ಜಾಗಟೆ

ಪಂಚಾಂಗ — ತಿಥಿ, ವಾರ, ನಕ್ಷತ್ರ, ಯೋಗ, ಕರಣ — ತ್ವಕ್; — ಪತ್ರ, ಕುಸುಮ, ಮೂಲ, ಫಲ; — ಬಾಹು, ಜಾನು, ಶಿರ, ವಕ್ಷಸ್ಸು, ದೃಕ್ಕು ಹೀಗೆ ಮೂರುವಿಧ

ಪಂಚ ಯಜ್ಞ — ಬ್ರಹ್ಮ ಯಜ್ಞ (ಅಧ್ಯಾಪನ), ಪಿತೃಯಜ್ಞ (ತರ್ಪಣ), ದೇವಯಜ್ಞ (ಹೋಮ), ಭೂತಯಜ್ಞ (ಬಲಿ ವೈಶ್ವದೇವ), ನೃಪಯಜ್ಞ (ಅತಿಥಿಸತ್ಕಾರ)

ಪುರಾಣಗಳು — ೧೮ ಬ್ರಹ್ಮ, ಪದ್ಮ, ವಿಷ್ಣು, ಶಿವ, ಶ್ರೀಮದ್ಭಾಗವತ, ಮಾರ್ಕಂಡೇಯ, ಅಗ್ನಿ, ಭವಿಷ್ಯ, ಬ್ರಹ್ಮವೈವರ್ತ, ಲಿಂಗ, ವಾರಾಹ, ಸ್ಕಂದ, ವಾಮನ, ಕೂರ್ಮ, ಮತ್ಸ್ಯ, ಗರುಡ, ಬ್ರಹ್ಮಾಂಡ.

ಭಕ್ತರು — ಆರ್ತ, ಜಿಜ್ಞಾಸು, ಅರ್ಥಾರ್ಥಿ, ವಿಜ್ಞಾನ, ನಿವಾಸ

ಭಕ್ತಿ — ನವವಿಧ — ಶ್ರವಣ, ಕೀರ್ತನ, ಅರ್ಚನ, ವಂದನ, ಚರಣಸೇವೆ, ಸ್ಮರಣ, ಆತ್ಮನಿವೇದನ, ದಾಸತ್ವ, ಸಖ್ಯ

ಮದ. — ಜಾತಿಮದ, ಕುಲಮದ, ಯುವಾವಸ್ಥಮದ, ರೂಪಮದ, ವಿದ್ಯಾಮದ, ಜ್ಞಾನಮದ, ಧ್ಯಾನಮದ, ಧನಮದ, ರಾಜ್ಯಮದ.

ಯುಗ — ಸತ್ಯಯುಗ, ತ್ರೇತಾ, ದ್ವಾಪರ, ಕಲಿಯುಗ

ಯೋನಿ. — (೮೪ ಲಕ್ಷ) — ೯ ಲಕ್ಷ ಜಲಚರ, ೪ ಲಕ್ಷ ಮಾನುಷ, ೨೭ ಲಕ್ಷ ಸ್ಥಾವರ, ೧೧ ಲಕ್ಷ ಕೃಮಿ, ೧೦ ಲಕ್ಷ ಪಕ್ಷಿ, ೨೩ ಲಕ್ಷ ಚತುಷ್ಪಾದ

ರಾಮ — ಪರಶುರಾಮ, ಶ್ರೀರಾಮ, ಬಲರಾಮ

ಲೋಕ. — (೧೪) — ತಲ, ಅತಲ, ವಿತಲ, ಸುತಲ, ತಲಾತಲ, ರಸಾತಲ, ಪಾತಾಲ, ಭೂರ್ಲೋಕ,

ಭುವರ್ಲೋಕ, ಸ್ವರ್ಗಲೋಕ, ಮಹರ್ಲೋಕ, ಜನಲೋಕ, ತಪೋಲೋಕ
ಸತ್ಯಲೋಕ.

ವಿದ್ಯಾಚತುರ್ದಶ.—ಬ್ರಹ್ಮಜ್ಞಾನ, ರಸಾಯನ, ಶ್ರುತಿಕಥಾ, ವೈದ್ಯಕ, ಜೋತಿಷ, ವ್ಯಾಕರಣ
ಧನುರ್ವಿದ್ಯಾ, ಈಜುವುದು, ಸಂಗೀತ, ನಾಟಕ, ಅಶ್ವಾರೋಹಣ, ಕೋ
ಶಾಸ್ತ್ರ, ಚೌರ್ಯ, ಚತುರತೆ—ಮತ್ತೆ ಕೆಲವರು ಮುಂದೆ ಹೇಳುವಂತೆ ವಿವರಿ
ರುವರು ೧-೪ ಋಗ್ಯಜುಸಾಮಾಥರ್ವಣ ವೇದಗಳು; ೫-೧೦ ಛಂದಸ್ಸು
ಕಲ್ಪ ವ್ಯಾಕರಣ, ಶಿಕ್ಷೆ, ಜ್ಯೋತಿಷ, ನಿರುಕ್ತವೆಂಬ ವೇದಾಂಗಗಳು ಆರು
೧೧ ಧರ್ಮಶಾಸ್ತ್ರ, ೧೨ ಪುರಾಣ, ೧೩ ಮೀಮಾಂಸ, ೧೪ ತರ್ಕ

ವೇದ - ಋಗ್ವೇದ, ಯಜುರ್ವೇದ, ಸಾಮ, ಅಥರ್ವಣವೇದ

ವೇದಾಂಗಗಳು —(೬) ಶಿಕ್ಷಾ, ಕಲ್ಪ, ವ್ಯಾಕರಣ, ನಿರುಕ್ತ, ಛಂದ, ಜೋತಿಷ

ಷಟ್ಶಾಸ್ತ್ರ —ವೇದಾಂತ, ವೈಶೇಷಿಕ, ಭಾಟ್ಟ, ಪ್ರಭಾಕರ, ಪೂರ್ವ ಮೀಮಾಂಸ, ಉತ್ತ
ಮೀಮಾಂಸ

ಷಡ್ದರ್ಶನ ಸಾಂಖ್ಯ, ಯೋಗ, ನ್ಯಾಯ, ವೈಶೇಷಿಕ, ಮೀಮಾಂಸ, ವೇದಾಂತ.

ಷಡ್ರಸ —ಮಧುರ, ಆಮ್ಲ, ತಿಕ್ತ, ಕಟು, ಕಷಾಯ, ಲವಣ

ಸಪ್ತರ್ಷಿಗಳು.—ವಸಿಷ್ಠ- ಅತ್ರಿ, ಕಶ್ಯಪ, ವಿಶ್ವಾಮಿತ್ರ, ಭರದ್ವಾಜ, ಜಮದಗ್ನಿ, ಗೌತಮ.

ಸಪ್ತಾವರಣ.—ಜಲ, ಪವನ, ಅಗ್ನಿ, ಆಕಾಶ, ಅಹಂಕಾರ, ಮಹಾತತ್ವ, ಪ್ರಕೃತಿ.

ಅಕ್ಷೋಹಿಣಿ ಸೇನೆಯ ಪಟ್ಟಿ

| ಹೆಸರು | ರಥ | ಗಜ | ಅಶ್ವ | ಪದಾತಿ | ಒಟ್ಟು |
|---|---|---|---|---|---|
| ಪರಿಮಾಣ | ೨೧,೮೭೦ | ೨೧,೮೭೦ | ೬೫,೬೧೦ | ೧,೦೯,೩೫೦ | ೨,೧೮,೭೦೦ |

# ಶ್ರೀ ಗೋಸ್ವಾಮಿ ತುಳಸೀದಾಸ ಕೃತ ರಾಮಶಲಾಕ ಪ್ರಶ್ನ.

| | | | | | | | | | | |
|---|---|---|---|---|---|---|---|---|---|---|
| ಸು | ಪ್ರ | ಉ | ವಿ | ಹೊ | ಮು | ಗ | ವ | ಸು | ನು | ವಿ |
| ಧ | ಧಿ | ಇ | ದ | ರ | ರು | ಫ | ಸಿ | ಸಿ | ರೆಂ | ವಸ |
| ಹೈ | ಮಂ | ಲ | ನ | ಲ | ಯ | ನ | ಅಂ | ಸಜ | ಸೋ | ಗ |
| ಸು | ಕು | ಮ | ಸ | ಗ | ತ | ನ | ಈ | ಲ | ಧಾ | ವೇ |
| ನೋ | ತ್ರ | ರ | ನ | ಕು | ಜೋ | ಮ | ರಿ | ರ | ರ | ಅ |
| ಕೀ | ಹೋ | ಸಂ | ರಾ | ಯ | ಪು | ಸು | ಥ | ಸೀ | ಜೇ | ಇ |
| ಗ | ಮ | ಸಂ | ಕ | ರೇ | ಹೋ | ಸ | ಸ | ನಿ | ತ್ರಿ | ರ |
| ತ | ರ | ಸ | ಇ | ಹ | ವ | ವ | ಪ | ಚಿ | ಸ | ಯ |
| ಸ | ತ | ಮ | ಕಾ | ತಿ | ರ | ರ | ಮಾ | ಮಿ | ಮೀ | ಹ್ಮಾ |
| ತಾ | ಜಾ | ಹೂ | ಹೀಂ | ತಾ | ಜೂ | ತಾ | ರಾ | ರ | ರೀ | ಹ್ವ |
| ಕಾ | ಫ | ಕಾ | ಜಿ | ಈ | ರ | ರಾ | ಪೂ | ದ | ಲ | ಣಿ |
| ಕೋ | ಮಿ | ಗೋ | ನ | ಮ | ಜ | ಯ | ನೇ | ಮಣಿ | ಕ | ಜ |
| ಪ | ಸ | ಲ | ಹಿ | ರಾ | ಮ | ಸ | ರಿ | ಗ | ದ | ನ |
| ಷ | ಮ | ಖಿ | ಜಿ | ಮುನಿ | ತ | ಜಂ | ಸಿಂ | ಮು | ನ | ನ |
| ಕೌ | ಮಿ | ಜ | ರ | ಗ | ಧು | ಖು | ಸು | ಕಾ | ಸ | ರ |
| ಗು | ಕ | ಮ | ಅ | ಧ | ನಿ | ಮು | ಲಾ | ತಾ | ನ | ವ |
| ತೀ | ನ | ರಿ | ಭ | ನಾ | ಪು | ವ | ಅ | ಧಾ | ರ | ಲ |
| ಕಾ | ಏ | ತು | ರ | ನ | ನು | ವ | [illegible] | ಸಿ | ಹು | ಸು |
| ಹ್ಮ | ರಾ | ರ | ಸ | ಹಿ | ರ | ತ | ನ | ಮಾ | ತಾ | ಜ |
| ತಾ | ರ | ಸ್ಥಾ | ತಿ | ಲಾ | ಧೀ | ತಾ | [illegible] | ಜ | [illegible] | ಹೀ |
| ಖಾ | ಜೂ | [illegible] | ರಾ | ರೇ | * | * | * | * | * | * |

ದೋ ॥ ಶ್ರೀಗಣೇಶಕೌಂ ಮುಮರಿಕೆ, ಶಾರದಕೌ ಧರಿ ಧ್ಯಾನ ।
ಲಿಖಿತ ಪ್ರಶ್ನಕೀ ರೀತಿ ಸೋಂ, ಉತ್ತರ ಲೀಜೌ ಜಾನ ॥ ೧ ॥

ಪ್ರಶ್ನಕರ್ತನು ಮನಸ್ಸಿನಲ್ಲಿ ಶ್ರೀರಾಮಚಂದ್ರನನ್ನು ಸ್ಮರಿಸಿ ಯಾವುದಾದರೊಂದು ಮನೆಯನ್ನು ಮುಟ್ಟಬೇಕು. ಆ ಅಕ್ಷರವನ್ನು ಬೇರೆ ಕಾಗದದ ಮೇಲೆ ಬರೆದುಕೊಳ್ಳಬೇಕು. ಆ ಮೇಲೆ ಆ ಮನೆಯಿಂದ ಪ್ರತಿ ಹತ್ತನೆಯ ಅಕ್ಷರವನ್ನು ಬರೆಯುತ್ತ ಹೋಗಬೇಕು ಹೀಗೆ ಮಾಡಿದರೆ ಒಂದು ಚೌಪಾಯಿ (ಪದ್ಯ) ಆಗುವುದು. ಅದರಿಂದ ತನ್ನ ಪ್ರಶ್ನೆಯ ಫಲವನ್ನು ತಿಳಿದುಕೊಳ್ಳಬೇಕು. ಎಲ್ಲಿ ಚೌಪದಿಯು ಸರಿಯಾಗಿ ಕೂಡುವುದಿಲ್ಲವೋ ಅಲ್ಲಿ ಮೇಲಿನ ಮನೆಯ ಅಕ್ಷರವನ್ನು ಕೆಳಗಿನ ಮನೆಗೂ ಕೆಳಗಿನ ಮನೆಯ ಅಕ್ಷರವನ್ನು ಮೇಲಿನ ಮನೆಗೂ ಸೇರಿಸಿ ಚೌಪದಿಯನ್ನು ಸರಿಪಡಿಸಿಕೊಳ್ಳಬೇಕು ಎಲ್ಲಿ 'ಾ' ಎಂಬ ಚಿನ್ಹೆಯು ಬರುವುದೊ ಅದು ದೀರ್ಘದ ಚಿನ್ಹೆಯೆಂದರಿಯಬೇಕು. ಎಣಿಸುವಾಗ ಹತ್ತಕ್ಕೆ ಮೊದಲೇ ಬಂದರೆ ಅದನ್ನು ಯಾವ ಅಕ್ಷರಕ್ಕೂ ಸೇರಿಸಕೂಡದು. ಆದರೆ ಯಾವುದಾದರೂ ಹತ್ತನೆಯ ಮನೆಯ ಮುಂದೆ ಬಂದರೆ ಹಿಂದಿನ ಅಕ್ಷರವನ್ನು ದೀರ್ಘವೆಂದು ತಿಳಿಯಬೇಕು

ಉದಾಹರಣೆ –ಮೊದಲನೆಯ ಮನೆಯಲ್ಲಿ 'ಸು' ಎಂಬ ಅಕ್ಷರವು ಬಂದಿದೆ ಅಲ್ಲಿಂದ ಪ್ರತಿ ಹತ್ತನೆಯ ಮನೆಯ ಅಕ್ಷರವನ್ನು ಸೇರಿಸಿದರೆ 'ಸುನು ಸಿಯ ಸತ್ಯ ಅಶೀಸ ಹಮಾರೀ । ಪೂಜ ಹಿ ಮನ ಕಾಮನಾ ತುಹ್ಮಾರೀ ।' ಎಂಬ ಚೌಪಾಯಿಯಾಗುವುದು

## ಮೇಲಿನ ಚೌಕದಲ್ಲಿ ಹೊರಡುವ ಚೌಪಾಯಿಗಳೂ ಅವುಗಳ ಫಲವೂ

"ಸುನು ಸಿಯ ಸತ್ಯ ಅಮಾರೀ ಹಮಾರೀ । ಪೂಜಹಿ ಮನಕಾಮನಾ ತುಮ್ಹಾರಿ ॥ ೧ ॥
ಪ್ರವಿಸಿ ನಗರಕೀಜೈ ಸಬ್ ಕಾಜಾ । ಹೃದಯ ರಾಖೀ ಕೋಸಲಪುರ ರಾಜಾ ॥ ೨ ॥"

ಪ್ರಶ್ನೆಯು ಉತ್ತಮವಾಗಿದ, ಕಾರ್ಯ ಸಿದ್ಧಿಸುವುದು ॥ ೧ ॥ ಭಗವಂತನನ್ನು ಸ್ಮರಿಸಿ, ಕಾರ್ಯವನ್ನು ಪ್ರಾರಂಭಿಸು, ಸಿದ್ಧಿಸುವುದು, ಫಲವು ಶುಭವಾಗಿದೆ. ॥ ೨ ॥

ಉಘರೆ ಅಂತ ನಹೋಇ ನಿವಾಹೂ । ಕಾಲನೇಮಿ ಜಿಮಿರಾವಣರಾಹೂ ॥ ೩ ॥
ವಿಧಿವಶ ಸುಜನ ಕುಸಂಗತಿ ಪರಹೀಂ ॥ ಫಣಿಮಣಿ ಸಮನಿಜಗುಣ ಅನುಸರಹೀಂ ॥ ೪ ॥

ನೀನು ಆಲೋಚಿಸಿದ ಕಾರ್ಯವು ಅಂತ್ಯದಲ್ಲಿ ಶುಭವಾಗದು, ಫಲವು ಮಧ್ಯಮ ॥ ೩ ॥ ಅಪ್ರಾಣಿಕರ ಸಂಗವನ್ನು ಬಿಡು, ಕಾರ್ಯದಲ್ಲಿ ವಿಲಂಬವಿದೆ. ॥ ೪ ॥

ಹೋಇ ಹೈಸೋಇ ಜೋರಾಮ ರಚಿರಾಖಾ । ಕೋ ಕರಿ ತರಕ ಬಢಾವಹಿ ಶಾಖಾ ॥೫॥
ಮುದ ಮಂಗಲಮಯ ಸಂತಸಮಾಜೂ । ಜಿಮಿ ಜಗ ಜಂಗಮ ತೀರಥರಾಜೂ ॥ ೬ ॥

ನಿನ್ನ ಕಾರ್ಯವನ್ನೂ ಭಗವಂತನಿಗೊಪ್ಪಿಸು, ಕಾರ್ಯದಲ್ಲಿ ಸಂದೇಹ ॥ ೫ ॥ ಒಳ್ಳೆಯದು, ಕಾರ್ಯವಾಗುವುದು. ॥ ೬ ॥

